ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ ನಂ. ೩೧

ಪ್ರಧಾನ ಸಂಪಾದಕ:

ಕೆ. ವಿ. ಪುಟ್ಟಪ್ಪ, ಎಂ.ಎ.

# ಕಾಳಿದಾಸ

ಲೇಖಕ:

ಎಂ. ಲಕ್ಷ್ಮೀನರಸಿಂಹಯ್ಯ, ಎಂ.ಎ.




ಮೈಸೂರು:

ಮೈಸೂರು ವಿಶ್ವವಿದ್ಯಾನಿಲಯ

೧೯೫೪

ಬೆಲೆ

**ಸಾಧಾರಣ ಪ್ರತಿ ರೂ.** 2-0-0] [**ಉತ್ತಮ ಪ್ರತಿ ರೂ.** 2-8-0

ಮುದ್ರಣಕಾರರು:

**ದಿ ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್,**

ಬೆಂಗಳೂರು

# ಮುನ್ನುಡಿ

ಸಂಸ್ಕೃತ ಸಾಹಿತ್ಯದಲ್ಲಿ ಮಹೋನ್ನತಿವೆತ್ತು, ವಿಶೇಷ ಕಾಂತಿಯಿಂದ ಕಂಗೊಳಿಸುವ ಅಮರ ಕವಿಗಳೆಂದರೆ ವಾಲ್ಮೀಕಿ, ವ್ಯಾಸ ಮತ್ತು ಕಾಳಿದಾಸ. ಪೂರ್ಣವೂ ಸ್ವರಸವೂ ಆದ ಭಾರತೀಯ ಸಂಸ್ಕೃತಿಯ ಪ್ರಾಚೀನ ಪ್ರತಿನಿಧಿಗಳಿವರು. ಮರ್ತ್ಯಕ್ಕೆ ಅಮರ್ತ್ಯವನ್ನು ಪಡೆದು ಅದನ್ನು ಜೀವಂತ ಕಾವ್ಯವನ್ನಾಗಿ ಕಡೆದಿದ್ದಾನೆ, ಕವಿಋಷಿ ವಾಲ್ಮೀಕಿ. ಋಷಿಕವಿಯಾದ ವ್ಯಾಸ ತನ್ನ ಮಹಾಕಾವ್ಯದಲ್ಲಿ ಮರ್ತ್ಯ ಅಮರ್ತ್ಯಗಳೆರಡನ್ನೂ ಸಮ್ಮಿಲನಗೊಳಿಸಿದ್ದಾನೆ. ಮರ್ತ್ಯದಲ್ಲಿ ಅಮರ್ತ್ಯವನ್ನು ಸವಿದ ಪ್ರತಿಭೆ ಕಾಳಿದಾಸನದು.

ಸಾಕಾದಷ್ಟು ಸಾಧನ ಸಾಮಗ್ರಿಗಳಿಲ್ಲದೆ ಅನೇಕ ವೇಳೆ ಪ್ರಾಚೀನ ಭಾರತೀಯ ಕವಿಗಳ ಜೀವನ, ಕಾಲ ಮೊದಲಾದ ವಿಷಯಗಳನ್ನು ನಿಷ್ಕರ್ಷಿಸುವುದು ಜಟಿಲವಾಗಿದೆ. ಕಾಳಿದಾಸನ ಜೀವನ ಕಾಲಗಳ ವಿಷಯವಾಗಿಯೂ ಜಿಜ್ಞಾಸೆ ನಡೆದಿದೆ, ನಡೆಯುತ್ತಿದೆ. ಕೆಲವರು ವಿದ್ವಾಂಸರು ಅವನು ಜನ್ಮದಿಂದ ಬ್ರಾಹ್ಮಣನಾಗಿದ್ದು ಅನಾಥನಾದುದರಿಂದ ಗೊಲ್ಲರೊಡನೆ ಬೆಳೆದು ಬಂದನೆಂದೂ ಮತ್ತೆ ಕೆಲವರು ಅವನು ಹುಟ್ಟಿನಿಂದಲೆ ಕುರುಬನೆಂದೂ ಅಭಿಪ್ರಾಯಪಡುತ್ತಾರೆ. ಇಂತಹ ಸಂದರ್ಭಗಳಲ್ಲಿ ಆಧಾರಗಳು ಖಚಿತವಾಗಿ ದೊರೆಯುವವರೆಗೆ ಸ್ವಾರ್ಥಮೂಲವಾದ ಅಭಿಸಂಧಿಯಿಂದ ಹೀಗೆಯೆ ಇರಬೇಕೆಂದು ನಿರ್ಣಯಿಸುವುದು ಉಚಿತವಾಗಿ ತೋರುವುದಿಲ್ಲ. ಒಮ್ಮೊಮ್ಮೆ ಜನಜನಿತವಾದ ಕಥೆಯಲ್ಲಿ ಹೆಚ್ಚು ಸತ್ಯಾಂಶ ಪ್ರಕಟವಾಗುವುದುಂಟು. ಕುರುಬನಾದ ಮಾತ್ರಕ್ಕೆ ಕಾಳಿದಾಸ ಪ್ರತಿಭಾಶಾಲಿಯಾದ ಮಹಾಕವಿಯಾಗಲಾರನೆಂದು ಹೇಳಲಾದೀತೆ? ಭಗವಂತನ ಶಕ್ತಿ ಎಲ್ಲಿ ಬೇಕಾದರೂ ಯಾವ ರೂಪದಲ್ಲಿಯಾದರೂ ಮೈದೋರಬಹುದು. ಅಲ್ಲದೆ ಕವಿ ಕವಿಯಾಗಿರುವುದು ಅವನ ಜಾತಿಯಿಂದಲ್ಲ. ಅದನ್ನು ಕಟ್ಟಿಕೊಂಡೇನಾಗಬೇಕು ಸಹೃದಯಂಗೆ?

ಭೋಗಪ್ರಧಾನವಾದ ಶ್ರೀಮಂತ ಕಾಲದಲ್ಲಿ ಬದುಕಿ ಬಾಳಿದನು ಕವಿ ಕಾಳಿದಾಸ. ಋತುಸಂಹಾರ, ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ,

ಕುಮಾರಸಂಭವ, ಶಾಕುಂತಲ, ಮೇಘದೂತ, ರಘುವಂಶ ಇವೇ ನಮಗೆ ದೊರಕಿರುವ ಅವನ ಕೃತಿಗಳು. ಕವಿಯ ಪ್ರತಿಭೆ ಉನ್ಮೀಲನವಾಗುತ್ತಿರು ವಾಗಲೆ ಮೂಡಿ ಬಂದ ಮೊದಲ ಕೃತಿ ಋತುಸಂಹಾರ. ಪ್ರಕೃತಿಯ ಬಹುಮುಖ ಸೌಂದರ್ಯ ವಿಲಾಸಗಳು ಮಾನವೀಯತೆಯಿಂದ ಸ್ಪಂದಿಸುವ ಚಿತ್ರಮಯ ಲೋಕವನ್ನು ಋತುಸಂಹಾರದಲ್ಲಿ ಚಿತ್ರಿಸಿದ್ದಾನೆ ಕವಿ. ಈ ಕೃತಿಯಲ್ಲಿ ಕೆಲವು ಕಡೆ ಭಾವ ರಸತ್ವಕ್ಕೇರದಿರುವುದರಿಂದ ರಸಾನುಭವಕ್ಕೆ ಬದಲಾಗಿ ಭಾವೋದ್ರೇಕವಾಗುವುದುಂಟು. ಆದರೂ ಈ ಪ್ರಥಮ ಕೃತಿಯಲ್ಲಿ ಕವಿಯ ರಚನಾ ಕೌಶಲ್ಯವನ್ನೂ ಸುಮನೋಹರ ಕಲ್ಪನಾ ಮಾಧುರ್ಯವನ್ನೂ ನಾದಮಯ ಸುಲಲಿತ ಶೈಲಿಯನ್ನೂ ಕಾಣುತ್ತೇವೆ. ಮಾಲವಿಕಾಗ್ನಿಮಿತ್ರ ವಿಕ್ರಮೋರ್ವಶೀಯಗಳಲ್ಲಿ ಪ್ರಯೋಗಗಳನ್ನು ನಡೆಸಿ ಪುಷ್ಟಿಗೊಂಡ ಕವಿಪ್ರತಿಭೆ ಶಾಕುಂತಲದಲ್ಲಿ ಮುಗಿಲು ಮುಟ್ಟಿದೆ. 'ಶಾಕುಂತಲ' ಭಾರತೀಯರನ್ನು ಮಾತ್ರವಲ್ಲದೆ ಜಗತ್ತಿನ ಸಾಹಿತ್ಯಾರಾಧಕರನ್ನೂ ರಸಾವೇಶಗೊಳಿಸಿದೆ. ಮೇಘದೂತದಂತಹ ರಮಣೀಯ ಕಾವ್ಯದಲ್ಲಿ ಅತಿ ನೂತನವಾದ ವಸ್ತುವನ್ನು ಅಳವಡಿಸಿಕೊಂಡು ಶೃಂಗಾರ ಗೋಪುರವನ್ನೆ ಬೆಳ್ಮುಗಿಲ ಬಾನಿನಲ್ಲಿ ತೇಲಿಬಿಟ್ಟಿದ್ದಾನೆ ಕವಿ. ಕುಮಾರಸಂಭವ ಕಾವ್ಯದಲ್ಲಿಯೂ ರಘುವಂಶ ಮಹಾಕಾವ್ಯದಲ್ಲಿಯೂ ಕವಿಯ ಕಾವ್ಯಯೋಗ ಆತ್ಮಸಾಧನೆಯಾಗಿಯೂ ಪರಿಣಮಿಸಿರುವುದನ್ನು ಕಾಣಬಹುದು.

ಸುಮಧುರ ಕಾವ್ಯಮಧುವಿನಿಂದ ಸಹೃದಯರನ್ನು ರಸತೃಪ್ತಿಪಡಿಸುವ ವಿಶೇಷ ಶಕ್ತಿ ಕಾಳಿದಾಸನದು. ಅವನ ಕಾವ್ಯಗಳ ಕಲ್ಪನಾ ವಿಲಾಸಕ್ಕೂ ನಾದ ಮಾಧುರ್ಯಕ್ಕೂ ಮೋಹಿತರಾಗದವರು ಅಪೂರ್ವ. ತನ್ನ ಹಿತ ಮಿತ ವಚನಗಳಿಂದಲೂ ಸುಂದರ ಉಪಮೆಗಳಿಂದಲೂ ಲೋಕಪ್ರಿಯನಾಗಿದ್ದಾನೆ, ಕವಿಕುಲ ಗುರುವಾಗಿದ್ದಾನೆ. ಇಂತಹ ಕವಿ ಭಾರತೀಯ ಸಂಸ್ಕೃತಿ ಇರುವವರೆಗೆ, ಭಾರತೀಯ ಜನರಿರುವವರೆಗೆ, ಅಷ್ಟೇ ಏಕೆ, ಜಗತ್ತಿನ ಸಾಹಿತ್ಯ ಸಂಸ್ಕೃತಿಗಳಿರುವವರೆಗೆ, ಚಿರನೂತನವಾಗಿ ಬಾಳುವುದರಲ್ಲಿ ಸಂಶಯವಿಲ್ಲ.

ಇಂದು ಸಂಸ್ಕೃತದ ಶ್ರೇಷ್ಠ ಕವಿಗಳೆಲ್ಲರ ಜೀವನ, ಕಾಲ, ಕೃತಿ ಇವುಗಳ ಸಮಗ್ರ ಪರಿಚಯ ಕನ್ನಡದಲ್ಲಿ ಎಲ್ಲರಿಗೂ ದೊರಕುವಂತಾಗಿ

ಸಂಸ್ಕೃತ ಸಾಹಿತ್ಯದ ರಸಸಮಾರಾಧನೆಯಾಗಬೇಕಾಗಿದೆ. ಏಕೆಂದರೆ, ದೇಶಭಾಷೆಗಳಿಂದ ಮಾತ್ರವಲ್ಲ, ದೇಶಭಾಷೆಗಳಲ್ಲಿಯೆ ಸಂಸ್ಕೃತ ಬದುಕಿ ಬಾಳುತ್ತಿರುವುದು, ಹಿಂದೂ ಇಂದೂ ಮುಂದೂ ಎಂದೂ! ಕಾಳಿದಾಸನ ಎಲ್ಲ ಕೃತಿಗಳೂ ಕನ್ನಡಕ್ಕೆ ಈಗಾಗಲೆ ಭಾಷಾಂತರವಾಗಿವೆ. ಇಂತಹ ಸಮಯದಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿ ವಿಶ್ವವಿದ್ಯಾನಿಲಯಕ್ಕೆ ಸೇವೆ ಸಲ್ಲಿಸಿದ ಶ್ರೀ ಎಂ. ಲಕ್ಷ್ಮೀನರಸಿಂಹಯ್ಯನವರು "ಕಾಳಿದಾಸ" ಎಂಬ ಈ ಪುಸ್ತಕವನ್ನು ಸಿದ್ಧಮಾಡಿರುವುದು ಹೆಮ್ಮೆಯ ವಿಷಯ. ಇಲ್ಲಿ ಕಾಳಿದಾಸನ ಕೃತಿಯ ಕಥಾಭಾಗಗಳ ವಿಸ್ತಾರವಾದ ಪರಿಚಯಮಾಡಿಕೊಟ್ಟಿದ್ದಾರೆ. ಅದಕ್ಕೆ ಅನುರೂಪವಾದ ವಿಮರ್ಶೆಯನ್ನೂ ಒದಗಿಸಿದ್ದರೆ ಇನ್ನೂ ಲಾಭದಾಯಕವಾಗುತ್ತಿತ್ತು ಎನ್ನಿಸಬಹುದು ಪ್ರೌಢವಾಚಕ ವರ್ಗಕ್ಕೆ. ಆದರೆ ಈ ಪುಸ್ತಕ ಅಂತಹ ಕಾರ್ಯಕ್ಕೆ ಪ್ರೇರಕವಾಗಬಹುದೆಂದು ಆಶಿಸುತ್ತೇನೆ.

ಮೈಸೂರು
೨೪-೭-೧೯೫೪.

ಕೆ. ವಿ. ಪುಟ್ಟಪ್ಪ,
ಪ್ರಧಾನ ಸಂಪಾದಕ.

# ವಿಷಯಾನುಕ್ರಮಣಿಕೆ


| | | | | | ಪುಟ |
|---|---|---|---|---|---|
| 1. | ಮುನ್ನುಡಿ | .... | .... | .... | |
| 2. | ಅನುಬಂಧ | .... | .... | .... | |
| 3. | ಪೀಠಿಕೆ | .... | .... | .... | i |
| 4. | ಜೀವನಚರಿತ್ರೆ | .... | .... | .... | 1 |
| 5. | ಕಾಳಿದಾಸನ ಜನ್ಮಭೂಮಿ | | .... | .... | 15 |
| 6. | ಗ್ರಂಥಗಳು | .... | .... | .... | 33 |
| 7. | ಕಾಳಿದಾಸನ ಕಾಲ | .... | .... | .... | 42 |
| 8. | ಋತುಸಂಹಾರ | .... | .... | .... | 80 |
| 9. | ಮಾಳವಿಕಾಗ್ನಿಮಿತ್ರ | .... | .... | .... | 96 |
| 10. | ವಿಕ್ರಮೋರ್ವಶೀಯ | .... | .... | .... | 125 |
| 11. | ಕುಮಾರ ಸಂಭವ | .... | .... | .... | 154 |
| 12. | ಮೇಘಸಂದೇಶ | .... | .... | .... | 187 |
| 13. | ಶಾಕುಂತಲ | .... | .... | .... | 224 |
| 14. | ರಘುವಂಶ | .... | .... | .... | 304 |
| 15. | ಉಪಸಂಹಾರ | .... | .... | .... | 354 |

# ಅನುಬಂಧ

## ಕಾಳಿದಾಸನ ಪ್ರಶಂಸಾತ್ಮಕ ಶ್ಲೋಕಗಳು

1. ನಿರ್ಗತಾಸು ನ ವಾ ಕಸ್ಯ ಕಾಲಿದಾಸಸ್ಯ ಸೂಕ್ತಿಷು ।
ಪ್ರೀತಿರ್ಮಧುರಸಾಂದ್ರಾಸು ಮಂಜರೀಷ್ವಿವ ಜಾಯತೇ ॥
—ಬಾಣ, ಹರ್ಷಚರಿತೆಯ ಪೀಠಿಕಾಶ್ಲೋಕಗಳು. 16

2. ಸಾಕೂತಮಧುರಕೋಕಿಲವಿಲಾಸಿನೀಕಂಠಕೂಜಿತಪ್ರಾಯೇ ।
ಶಿಕ್ಷಾಸಮಯೇಽಪಿ ಮುದೇ ರತಲೀಲಾ ಕಾಳಿದಾಸೋಕ್ತಿಃ ॥
—ಗೋವರ್ಧನಾಚಾರ್ಯ—ಆರ್ಯಾಸಪ್ತಶತಿ. ಪೀಠಿಕಾ. 36

3. ಯಸ್ಯಾಶ್ಚೋರಶ್ಚಿಕುರನಿಕರಃ ಕರ್ಣಪೂರೋ ಮಯೂರೋ
ಭಾಸೋ ಹಾಸಃ ಕವಿಕುಲಗುರುಃ ಕಾಲಿದಾಸೋ ವಿಲಾಸಃ ।
ಹರ್ಷೋ ಹರ್ಷೋ ಹೃದಯವಸತಿಃ ಪಂಚಬಾಣಸ್ತು ಬಾಣಃ
ಕೇಷಾಂ ನೈಷಾ ಕಥಯ ಕವಿತಾಕಾಮಿನೀ ಕೌತುಕಾಯ ॥
—ಜಯದೇವ, ಪ್ರಸನ್ನರಾಘವ. I. 22.

4. ಭಾಸೋ ರಾಮಿಲಸೋಮಿಲೌ ವರರುಚಿಃ ಶ್ರೀ ಸಾಹಸಾಙ್ಕಃ ಕವಿಃ
ಮೇಂಠೋ ಭಾರವಿಕಾಲಿದಾಸತರಲಾಃ ಸ್ಕಂಧಸ್ಸುಬಂಧುಶ್ಚ ಯಃ ।
ದಂಡೀ ಬಾಣದಿವಾಕರೌ ಗಣಪತಿಃ ಕಾಂತಶ್ಚ ರತ್ನಾಕರಃ
ಸಿದ್ಧಾ ಯಸ್ಯ ಸರಸ್ವತೀ ಭಗವತೀ ಕೇ ತಸ್ಯ ಸರ್ವೇಽಪಿ ತೇ ॥
—ರಾಜಶೇಖರ, ಶಾರ್ಙ್ಗಧರಪದ್ಧತಿ 188.

5. ಮಾಘಶ್ಚೋರೋ ಮಯೂರೋ ಮುರರಿಪುರಪರೋ ಭಾರವಿ
ಸ್ಸಾರವಿದ್ಯಃ ।
ಶ್ರೀಹರ್ಷಃ ಕಾಳಿದಾಸಃ ಕವಿರಥ ಭವಭೂತ್ಯಾಹ್ವಯೋ
ಭೋಜರಾಜಃ ।
ಶ್ರೀ ದಂಡೀ ಡಿಂಡಿಮಾಖ್ಯಃ ಶ್ರುತಿಮುಕುಟಗುರುರ್ಭಲ್ಲಟೋ ಭಟ್ಟ
ಬಾಣಃ ।

ಖ್ಯಾತಾಶ್ಚಾನ್ಯೇ ಸುಬಂಧ್ವಾದಯ ಇಹ ಕೃತಿಭಿರ್ವಿಶ್ವಮಾಹ್ಲಾ
ದಯಂತಿ ||

—ವಿಶ್ವಗುಣಾದರ್ಶಚಂಪೂ. 549.

6. ಏಕೋಽಪಿ ಜೀಯತೇ ಹಸ್ತ ಕಾಲಿದಾಸೋ ನ ಕೇನಚಿತ್ ।
ಶೃಂಗಾರೇ ಲಲಿತೋದ್ಗಾರೇ ಕಾಳಿದಾಸತ್ರಯೀ ಕಿಮು ||

—ರಾಜಶೇಖರ, ಸೂಕ್ತಿಮುಕ್ತಾವಳಿ.

7. ಯೇನಾಯೋಜಿ ನವೇಶ್ಮಸ್ಥಿರಮರ್ಥವಿಧೌ ವಿವೇಕಿನಾ ಜಿನವೇಶ್ಮ ।
ಸವಿಜಯತಾಂ ರವಿಕೀರ್ತಿಃ ಕವಿತಾಶ್ರಿತಕಾಲಿದಾಸಭಾರವಿಕೀರ್ತಿಃ ||

— ಇಮ್ಮಡಿ ಪುಲಿಕೇಶಿಯ ಐಹೊಳೆ ಶಾಸನ.

8. ಶ್ರೀ ಕಾಲಿದಾಸಕವಿವರ್ಯಸರಸ್ವತೀಯಂ
ಕಿಂ ವರ್ಣಯಾಮ್ಯತಿತರಾಂ ರಸವಾಹಿನೀತಿ ।
ಯತ್ಕಾಲಿಕಾ ಭಗವತೀ ಶುಚಿಭಾವಯೋಗಾದ್-
ಯಸ್ಯಾಮಹೋ ಮುಹುರನುಗ್ರಹಮಾದಧಾತಿ ||

—ವಿಠೋಬಾ ಅಣ್ಣಾ ; ಸುಶ್ಲೋಕಲಾಘವ. 417·8.

9. ಕಾಲಿದಾಸಗಿರಾಂ ಸಾರಂ ಕಾಲಿದಾಸಸ್ಸರಸ್ವತೀ ।
ಚತುರ್ಮುಖೋಽಥವಾ ಸಾಕ್ಷಾದ್ವಿದುರ್ನಾನ್ಯೇ ತು ಮಾದೃಶಾಃ ||

—ಮಲ್ಲಿನಾಥ.

10. ಅನಘಾ ಗುಣಸಂಪೂರ್ಣಾ ಸಮುಚಿತವಿಚ್ಛಿತ್ತಿವೃತ್ತಿರೀತಿರಸಾ ।
ಪ್ರಸ್ನುತರಸಸಂದೋಹಾ ಸರಸ್ವತೀ ಜಯತಿ ಕಾಲಿದಾಸಸ್ಯ ||

—ಅಭಿರಾಮ.

11. ಧನ್ವಂತರಿಕ್ಷಪಣಕಾಮರಸಿಂಹಶಙ್ಕು-
ವೇತಾಲಭಟ್ಟಘಟಕರ್ಪರಕಾಲಿದಾಸಾಃ ।
ಖ್ಯಾತೋ ವರಾಹಮಿಹಿರೋ ನೃಪತೇಸ್ಸಭಾಯಾಂ
ರತ್ನಾನಿ ವೈ ವರರುಚಿರ್ನವ ವಿಕ್ರಮಸ್ಯ ||

—ಜ್ಯೋತಿರ್ವಿದಾಭರಣ.

12. ವಾಲ್ಮೀಕೇರಜನಿ ಪ್ರಕಾಶಿತಗುಣಾ ವ್ಯಾಸೇನ ಲೀಲಾವತೀ
ವೈದರ್ಭೀಕವಿತಾ ಸ್ವಯಂ ವೃತವತೀ ಶ್ರೀ ಕಾಲಿದಾಸಂ ವರಮ್ ।
ಯಾಸೂತಾಮರಸಿಂಹಮಾಘಧನಿಕಾನ್ ಸೇಯಂ ಜರಾನೀರಸಾ
ಶೂನ್ಯಾಲಂಕರಣಾ ಸ್ಖಲನ್ಮೃದುಪದಾ ಕಂ ವಾ ಜನಂ ನಾಶ್ರಿತಾ ॥

13. ಉಪಮಾ ಕಾಲಿದಾಸಸ್ಯ ಭಾರವೇರರ್ಥಗೌರವಂ ।
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ ॥

14. ಕಾವ್ಯೇಷು ನಾಟಕಂ ರಮ್ಯಂ ತತ್ರಾಪಿ ಚ ಶಕುಂತಲಾ ।
ತತ್ರಾಪಿ ಚ ಚತುರ್ಥೋಽಙ್ಕಃ ತತ್ರ ಶ್ಲೋಕಚತುಷ್ಟಯಮ್ ॥

15. ಕಾಲಿದಾಸಸ್ಯ ಸರ್ವಸ್ವಮಭಿಜ್ಞಾನಶಕುಂತಲಮ್ ।
ತತ್ರಾಪಿ ಚ ಚತುರ್ಥೋಽಙ್ಕೋ ಯತ್ರ ಯಾತಿ ಶಕುಂತಲಾ ॥

16. ಪುರಾ ಕವೀನಾಂ ಗಣನಾಪ್ರಸಙ್ಗೇ ಕನಿಷ್ಠಿಕಾಧಿಷ್ಠಿತಕಾಲಿದಾಸಾ ।
ಅದ್ಯಾಪಿ ತತ್ತುಲ್ಯಕವೇರಭಾವಾದನಾಮಿಕಾ ಸಾರ್ಥವತೀ
ಬಭೂವ ॥

—ಹರಿಹಾರಾವಳಿ.

17. ಕಾಲಿದಾಸಕವಿತಾ ನವಂ ವಯೋ ಮಾಹಿಷಂ ದಧಿ ಸಶರ್ಕರಂ ಪಯಃ ।
ಶಾರದೇಂದುರಬಲಾ ಚ ಕೋಮಲಾ ಸ್ವರ್ಗಸೌಖ್ಯಮುಪಭುಂ-
ಜತೇ ನರಾಃ ॥

18. ಕವಯಃ ಕಾಲಿದಾಸಾದ್ಯಾಃ ಕವಯೋ ವಯಮಪ್ಯಮೀ ।
ಪರ್ವತೇ ಪರಮಾಣೌ ಚ ಪದಾರ್ಥತ್ವಂ ಪ್ರತಿಷ್ಠಿತಮ್ ॥

—ಶಾರ್ಙ್ಗಧರಪದ್ಧತಿ (ಕೃಷ್ಣಭಟ್ಟ).

19. ಕವಿರಮರಃ ರವಿರಚಲಃ ಕವಿರಭಿನಂದಶ್ಚ ಕಾಲಿದಾಸಶ್ಚ ।
ಅನ್ಯೇ ಕವಯಃ ಕಪಯಶ್ಚಾಪಲಮಾತ್ರಂ ಪರಂ ದಧತಿ ॥

20. ವಯಮಪಿ ಕವಯಃ ಕವಯಃ ಕವಯೋಽಪಿ ಚ ಕಾಲಿದಾಸಾದ್ಯಾಃ ।
ದೃಷದೋ ಭವನ್ತಿ ದೃಷದಶ್ಚಿಂತಾಮಣಯೋಽಪಿ ಹಾ ದೃಷದಃ ॥

21. ವೈದರ್ಭರೀತಿಸಂದರ್ಭೇ ಕಾಲಿದಾಸಃ ಪ್ರಗಲ್ಭತೇ ॥

22. ಕಾಲಿದಾಸವಚಃ ಕುತ್ರ ವ್ಯಾಖ್ಯಾತಾರೋ ವಯಂ ಕ್ವ ಚ ।
ತದಿದಂ ಮಂದದೀಪೇನ ರಾಜವೇಶ್ಮಪ್ರಕಾಶನವ್ ॥

—ವಲ್ಲಭದೇವ.

23. ಧೀರಾಣಾಂ ಕಾವ್ಯಚರ್ಚಾಚತುರಿಮವಿಧಯೇ ವಿಕ್ರಮಾದಿತ್ಯವಾಚಾ ।
ಯಂ ಚಕ್ರೇ ಕಾಲಿದಾಸಃ ಕವಿಕುಮುದವಿಧುಃ ಸೇತುನಾಮಪ್ರಬಂಧವ್ ॥

—ಸೇತುಬಂಧದ ಮೇಲಿನ ರಾಮದಾಸವ್ಯಾಖ್ಯಾ.

24. ಲಿಪ್ತಾ ಮಧುದ್ರವೇಣಾಸನ್ ಯಸ್ಯ ನಿರ್ವಿವಶಾ ಗಿರಃ ।
ತೇನೇದಂ ವರ್ತ್ಮ ವೈದರ್ಭಂ ಕಾಲಿದಾಸೇನ ಶೋಧಿತವ್ ॥

25. ಭಾಸಮ್ಮಿ ಜಲಣಮಿತ್ತೆ ಕನ್ತಿದೇವೆ ಅ ಜಸ್ಸ ರಹುಆರೆ ।
ಸೋಬಂಧವೇ ಅ ಬಂಧಮ್ಮಿ ಹಾರಿಯಂದೆ ಅ ಆಣಂದೋ ॥

—ಗೌಡವಹೋ. 800.

ಛಾಯಾ:—ಭಾಸೆ ಜ್ವಲನಮಿತ್ರೆ ಕಂತೀದೇವೆ ಚ ಯಸ್ಯ ರಘುಕಾರೆ ।
ಸೌಬಂಧವೆ ಚ ಬಂಧೆ ಹರಿಚಂದ್ರೆ ಚ ಆನಂದಃ ॥

26. ಸುಬಂಧೌ ಭಕ್ತಿರ್ನಃ ಕ ಇಹ ರಘುಕಾರೇ ನ ರಮತೇ
ಧೃತಿರ್ದಾಕ್ಷೀಪುತ್ರೇ ಹರತಿ ಹರಚಂದ್ರೋಽಪಿ ಹೃದಯವ್ ।
ವಿರುದ್ಧೋಕ್ತಿಸ್ಸೂರೇಃ ಪ್ರಕೃತಿಮಧುರಾ ಭಾರವಿಗಿರಃ
ತಥಾಪ್ಯನ್ತರ್ಮೋದಂ ಕಮಪಿ ಭವಭೂತಿರ್ವಿತನುತೇ ॥

—ರಾಜಶೇಖರ.

27. ಸರಸ್ವತೀವ ಕರ್ಣಾಟೀ ವಿಜಯಾಂಕಾ ಜಯತ್ಯಸೌ ।
ಯಾ ವೈದರ್ಭಗಿರಾಂ ವಾಸಃ ಕಾಳಿದಾಸಾದನಂತರವ್ ॥

## ಸಂಕೇತಗಳು

Allah. Univ. St.—'Allahabad University Studies.'

A.B.O.R.I.—'Annals of the Bhandarkar Oriental Research Institute,' Poona.

Ann. Ori. Res—'Annals of Oriental Research,' Madras.

Cl. Skt. Lit.—'Classical Sanskrit Literature.'

Gesch. Ind. Lit.—'Geschichte der Indischen Litteratur,' Winternitz.

Hist. Skt. Lit.—'History of Sanskrit Literature'—Keith.

I.H.Q.—'Indian Historical Quarterly,' Calcutta.

J.A.O.S.—'Journal of the American Oriental Society.'

J.A.S.B.—'Journal of the Asiatic Society of Bengal.'

J.B.O.R.S.—'Journal of the Bihar and Orissa Research Society.'

J.O.R.M.—'Journal of Oriental Research,' Madras.

J.R.A.S.—'Journal of the Royal Asiatic Society.'

P.O.C.—'Proceedings of Oriental Conference.'

Q.J.M.S.—'Quarterly Journal of the Mythic Society,' Bangalore.

Z.D.M.G.—'Zeitschrift der Deutsche Morgenlandische Gesselschaft,' Berlin.

---

# ಕಾಳಿದಾಸನ ವಿಚಾರವನ್ನು ವ್ಯಾಸಂಗ ಮಾಡಲು ಉಪಯುಕ್ತವಾಗುವ ಮುಖ್ಯವಾದ ಗ್ರಂಥಗಳು ಮತ್ತು ಲೇಖನಗಳು.

---


1 R. Narasimhachar, Q.J.M.S. VIII.

2 Extract from Taranath's History of Buddhism, Ind. Ant. Vol. IV.

3 Ravaji Vasudeva Tullu—'Traditionary account of Kālidāsa.' Ind. Ant. Vol. VII.

4 S. C. Vidyābhu'ṣaṇa—' Funeral Place of poet Kālidāsa. P.O.C. I.

5 S. M. Nates'a Sastri—' Some South Indian literary legends, Ind. Ant. XVIII.

6 A. V. Williams Jackson—' A legend about Kālidāsa, preserved at Ujjain.' J.A.O.S. XXII.

7 K. R. Pisharoti—' Who is the hero of Meghasandēs'a. I. H. Q. Vol. XVII.

8 Rhys Davids—' Kālidāsa in Ceylon.' J.R.A.S. 1888.

9 Grierson—' Traditions about Kālidāsa.' J. A. S. B. XLVII.

10 Prof. A. R. Krishna Sastri—' Formative Influences of Kālidāsa.' Q.J.M.S. VIII.

11 ಬಲ್ಲಾಳಕವಿರಚಿತ ಭೋಜಪ್ರಬಂಧ.

12 Mm. Haraprasāda Sastri—' Kālidāsa, his home.' J.B.O.R.S. I.

13 N. G. Mazumdar—' Home of Kālidāsa ' Ind. Ant. XLVII.

14 Pandit Anand Kaul—' Birth-place of Kālidāsa,' Journal of Indian History, Vol. VII.

15 Lachmidhar Kalla—' Birth-place of Kālidāsa.'

16 G. Huth—' Die Zeit des Kālidāsa.'

17 K. C. Chattopadhyaya—' Date of Kālidāsa.' Allahabad University Studies.

18 R. N. Apte—' Age of Kālidāsa.'

19 K. G. Sankara Iyer—Q.J.M.S. VIII and IX.
20 B. D. Banerji Q.J.M.S. X.
21 Mm. Haraprasada Sastri — 'Kālidāsa, his age.' J.B.O.R.S. II.
22 S. K. Dikshit—Chandragupta II, Sāhasānka *alias* Vikramāditya and the Nine Jewels—Indian Culture Vol. IV.
23 H. B. Bhide—' Kālidāsa and the Gupta Kings' P.O.C.I.
24 Sarada Ranjan Ray—' Kālidāsa and Chandragupta II. P.O.C.I.
25 P. V. Kane—'Kālidāsa and Kamandaki ' Ind. Ant. XL.
26 R. C. Mazumdar—Some observations on Pus'yamitra and his empire I.H.Q. 1925.
27 Ram Kumar Chaube—' The Date of Kālidāsa P.O.C. IV.
28 K. B. Pathak—' Kālidāsa and the Hūṇas of the Oxus Valley. Ind. Ant. XLI.
29 J. C. Vidyāsagar—' Raghu's line of conquest along India's northern border P.O.C. VI.
30 Hoernle J.R.A.S. 1909.
31 Hara Datta Sarma—' Kaumudi-mahotsava and the date of Kālidāsa,' I.H.Q. X.
32 Man Mohan Chakravarti—'Date of Kālidāsa,' J.R.A.S. 1904.
33 B. C. Mazumdar—' The Date of Kālidāsa,' J.R.A.S. 1909.
34 F. W. Thomas—' The Root Gup' and 'Guptas' J.R.A.S. 1909.
35 P. K. Gode—' The word' Ātmabhū' and the date of Kālidāsa, A.B.O.R.I. I.
36 D. R. Bhandarkar—'Can we fix the date of Kālidāsa more accurately ? A.B.O.R.I. VIII.
37 K. G. Sankar—' The date of Kālidāsa ' I.H.Q. I.
38 Prof. K. M. Shembhavanekar—' The date of Kālidāsa,' Journal of the University of Bombay, I.

39 C. V. Vaidya—'Pandyas and the date of Kālidāsa' A.B.O.R.I. II.

40 K. G. Sankar—'Mr. Vaidya's date for Kālidāsa.' A.B.R.O.I. II.

41 R. G. Bhandarkar, Collected Works—'A peep into early Indian History,' Vol. I.

42 A. B. Gajendragadkar's edition of 'S'akuntala.'

43 R. Tagore—'S'âkuntala, its inner meaning.'

44 S. P. Pandit's Preface to Raghuvams'a.

45 M. R. Kāle's editions of Kālidāsa's plays. Introductions.

46 Sārada Ranjan Ray's edition of S'ākuntala.

47 S. K. Belvalkar—'The application of a few canons of textual and higher criticism to Kālidāsa's S'ākuntala.' Asia Major. Vol. II. · Fasc 1.

48 R. Krishnamacariar's Raghuvams'a vimars'a.

49 R. Krishnamacariar's Meghasandes'a vimars'a.

50 M. Rangacarya—'A critical appreciation of Kālidāsa's Cloud Messenger.'

51 S. K. Belvalkar—'S'ṛngāric elaboration in S'ākuntala. Art. III, P.O.C. IV.

52 S. K. Belvalkar—'The original S'akuntala.'—Asutosh Silver Jubilee Volume, Part 2, Vol. III.

53 Nandargikar's edition of Meghaduta.

54 Nandargikar's edition of Raghuvams'a.

55 N. S. Adhikari—'S'ākuntala, an allegory'. P.O.C. I.

56 B. K. Thakore—'The Text of the S'ākuntala'. P.O.C. I.

57 K B. Pathak's edition of Meghaduta.

58 Hultzch's edition of Meghaduta.

59 T. S. Kuppuswami Sastri—'Pārs'vābhyudaya'—Ind. Ant. XXXVI.

60 S. P. Bhattacarya—'Authenticity of the later cantos of Kumarasambhava,' P.O.C. IV.

61 Trivandrum Sanskrit Series edition of Kumarasambhava.

62 'The Myth of Pururavas, Urvas'i and Āyu.' J A.O.S. XX.

63 Sailendranath Dhar—'The Women of the Meghaduta.' I.H.Q. 1928.

64 Dr. C. Kunhan Raja—'Sri Rama and Raghuvams'a.' Kane Festchrift.

65 ಮಾಸ್ತಿ ವೆಂಕಟೇಶ ಐಯಂಗಾರ್—'ಹೇಮಕೂಟದ ಆಶ್ರಮದಿಂದ ಬಂದ ಮೇಲೆ'—ಪ್ರಬುದ್ಧ ಕರ್ಣಾಟಕ, XIV,

66 'ಮೇಘಸಂದೇಶ'—ವಿಮರ್ಶೆ, IV.

67 A. Sankaran—'Theories of Rasa and Dhvani.'

68 Schyuler—'Bibliography of Kālidāsa's plays.' J.A.O.S. XXII.

69 Sylvain Levi—'Le Theatre Indien.'

70 P. C. Lahiri—'Sanskrit Kāvya Literature.' The Cultural Heritage of India, Vol. III.

71 S. K. De—'Sanskrit Drama.' The Cultural Heritage of India, Vol. III.

72 A. Hillebrandt—'Kālidāsa'.

73 M. Winternitz—'Geschichte der Indischen Litteratur,' Vol. III.

74 A.B. Keith—'History of Sanskrit Literature.'

75 ,, 'Classical Sanskrit Literature.'

76 ,, 'Sanskrit Drama.'

77 Macdonell—History of Sanskrit Literature.

78 R. Tagore—'Kālidāsa, the moralist,' Modern Review, Vol. XIV.

79 M. Krishnamachariar—'Classical Sanskrit Literature.'

80 Massen Oursel—'Ancient India and her Civilization.'

81 H. B. Bhide—'Notes on Kālidāsa,' Ind. Ant. XLVII.

82 Hemendra Nath Das Gupta—'The Indian Stage.'

83 A. V. Williams Jackson—'Time-analysis of Kālidāsa's plays. J.A.O.S. XX.

84 Ryder—'Translations of Kālidāsa's works.' Everyman's Library Series.

85 Kesava Appa Padhye—Beauties from Kālidāsa.'

86 Haradatta Sarma—'Kālidāsa and Padmapurāṇa.'

87 G. N. Mazumdar— ' Kālidāsa and Music.' A.B.O.R.I. VII.

88 Rawlinson—' India.'

89 ' Cambridge History of India,' Vol. I.

90 H. H. Wilson—' Select specimens of the theatre of the Hindus.' 2 volumes.

91 P. K. Gode —' Psychological study of Kālidāsa's Upamas.' P.O.C. I.

92 Bhau Daji's Literary Remains.

93 D. R. Bhandarkar—Solecisms of S'ankarācārya and Kālidāsa'. Ind. Ant. XLI.

94 R. D. Karmarkar—Chronological order of Kālidāsa's works. P.O.C. II.

95 V. V. Dikshit—' Wit and Humour in Sanskrit Literature.' P.O.C. V.

96 J. S. Chakravarthy—' Kālidāsa, the great Indian poet. Q.J.M.S. VIII.

97 K. S. Ramaswami Sastri—' Kālidāsa, his period, personality and poetry.'

98 Hari Chand—' Kālidāsa et l'art poetique de l'Inde.'

99 S. K. De—' The treatment of love in Sanskrit Literature.'

100 V. Raghavan—'The Number of Rasas' with a foreword by Prof. M. Hiriyanna.'

101 V. Raghavan—' Valmiki and Kālidāsa.'—Rangaswami Iyengar Commemoration Volume.

102 M. T. Narasimha Iyengar—' Kālidāsa's philosophy and religion.' Ind. Ant. XXXIX.

103 Kulkarni—' Sanskrit Drama and Dramatists.'

104 ' Kālidāsa, his scientific interpretation of physical phenomena—Pathak Commemoration Volume.

105 K. Balasubrahmanya Iyer—Kālidāsa in relation to political science.' P.O.C. III.

106 V. Raghavan—'Women characters in Kālidāsa's dramas'—Ann. Orien. Research, Madras. IV.
107 A. C. Chatterjee—'Kālidāsa, his poetry and mind.'
108 Monier Williams—'Indian Wisdom.'
109 Macdonell—'India's Past.'
110 S. K. De—'Kālidāsa.' I.H.Q. XVI.
111 K. Balasubrahmanya Iyer—'Kālidāsa, his Philosophy of Love'—J.O.R.M. III.
112 C. Kunhan Raja—'Studies in Kālidāsa.'
113 Aurobindo Ghosh—'Kālidāsa.'
114 Pattabhirama Sastri—'ಕವಿತಾ ಕಾಲಿದಾಸಸ್ಯ'—Rangaswami Iyengar Commem. Volume.
115 Venkatesa Deekshita—'ಕಾಲಿದಾಸಃ ಋಷಿಕಲ್ಪಃ' Rangaswami Iyengar Commem. Volume.
116 ಪ್ರಾಚೀನ ಸಾಹಿತ್ಯ—ಗ್ರಂಥಕಾರರು ರವಿಂದ್ರನಾಥ ಟಾಗೂರರು, ಶ್ರೀ. ಟಿ. ಎಸ್. ವೆಂಕಣ್ಣಯ್ಯನವರ ಕನ್ನಡ ಭಾಷಾಂತರ.
117 ತೀ. ನಂ. ಶ್ರೀಕಂಠಯ್ಯನವರು—'ಕಾಳಿದಾಸನ ನಾಟಕಗಳಲ್ಲಿ ದುರಂತ ವಸ್ತುವಿನ್ಯಾಸ'—ಪ್ರಬುದ್ಧ ಕರ್ಣಾಟಕ, ೧೫.
118 ಎಮ್. ಎನ್. ಶ್ರೀನಿವಾಸಯ್ಯಂಗಾರ್—ಸಂಸ್ಕೃತ ಕವಿಚರಿತೆ, ಭಾಗ ೧.
119 ಮಲ್ಲಾದಿ ಸೂರ್ಯನಾರಾಯಣಶಾಸ್ತ್ರಿಗಾರು 'ಸಂಸ್ಕೃತ ವಾಙ್ಮಯ ಚರಿತಮು,' ದ್ವಿತೀಯ ಭಾಗಮು.
120 ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು—'ಸಂಸ್ಕೃತ ನಾಟಕ.'
121 S. K. De—Kālidāsa and Vikramāditya.
122 Batakrishna Ghosh—'Sākuntala and Padma purāna'—(Allah. Univ. May 1938, p. 409).
123 'Vikramāditya, President of a republic'—R. B. Pande (I.H.Q. XIX in IV-359-60)
124 'Is Kālidāsa the author of only the first eight cantos of the Raghuvams'a'—by V. Lakshminārayana, M.A. (The Poona Orientalist, Vol. VIII—Nos. 3 and 4).
125 T. J. Kedar—'Date of Kālidāsa'—(Nagpur Univ. Journal, Dec. 1939).

126 H. C. Seth—'Kharavela and Gardabhilla' (Nagpur Univ. Journal, Dec. 1942).

127 K. C. Chattopadhyaya—J.I.H. XV, pp. 93-102.

128 K. C. Chattopadhyaya—Kuppuswamy Sastri Commn. Volume, p. 17-24.

129 Journal of the Andhra Historical Research Society, Vol. XI-59, 67.

130 A. Sankaran—J.O.R.M. XII, Poetry and Rasa.

131 M. R. Rajagopaliengar—'J.O.R.M. XII, iv-303, Kālidāsa's S'ravya Kāvyas.

132 J.O.R.M. XI, p. 321 ff 'కాళిదాసీయం హాస్యం.'

133 A. K. Bhattacharya—'A comparative study of Bhāsa and Kālidāsa—Indian Culture, Vol. VI.

134 B. S. Upadhye—Education and Learning as depicted by Kālidāsa, Benares Hindu Univ. Journal, Vol.IV,

135 B. S. Upadhye—'Fine Art as depicted by Kālidāsa—Ben. Hin. Univ. Jonl., Vol. IV.

136 C. W. Gurner—'Indian Culture, Vol. IX, No. 1, 'Psychological value of the doctrine of rebirth in Kālidāsa.'




# ಪೀಠಿಕೆ

---

ವಾಲ್ಮೀಕಿ, ವ್ಯಾಸ, ಕಾಳಿದಾಸರು ಪ್ರಾಚೀನ ಭಾರತ ಸಂಸ್ಕೃತಿಯ ಸಾರ. ಉನ್ನತ ಮತ್ತು ವಿವಿಧ ಕವಿತಾಚಾತುರ್ಯದಿಂದ ತಮ್ಮ ಕಾಲದ ಜನತೆಯ ಜೀವನಸಂಸ್ಕೃತಿಗಳನ್ನು ಪ್ರತಿಬಿಂಬಿಸುವುದರಿಂದ ಈ ಕವಿಸಾರ್ವಭೌಮರು ಹೋಮರ್, ಡಾಂಟೆ, ಷೇಕ್ಸ್‌ಪಿಯರ್ ಮುಂತಾದ ವಿಶ್ವವ್ಯಕ್ತಿಗಳಿಗೆ ಸಮತೂಗುವರು. ಮಿಕ್ಕುದೆಲ್ಲ ಅಳಿದು ಹೋದರೂ ಅವರು ಮಾತ್ರವೇ ಭಾರತೀಯ ಸಂಸ್ಕೃತಿಯ ಸಂಪೂರ್ಣವಾದ ಚರಿತ್ರೆಯಾಗುವರು ಅವರ ಕಾವ್ಯಗಳು, ಒಂದು ದೃಷ್ಟಿಯಿಂದ, ಜೀವಾತ್ಮನ ಬೆಳವಣಿಗೆಯ ಮೂರು ಅವಸ್ಥೆಗಳೆನ್ನಬಹುದು; ಅಸಂಸ್ಕೃತ ಹೀನಪ್ರಕೃತಿಗಳಲ್ಲಿ ಪೈಪೋಟಿಯಿಂದ ಹೊಡೆದಾಡುತ್ತಿದ್ದು ಸಂಸ್ಕೃತ ಪೂರ್ಣಪ್ರಕೃತಿಗಳಲ್ಲಿ ಸಮವಾಗುವ ಮೂರು ಶಕ್ತಿಗಳೆಂದೂ ಭಾವಿಸಬಹುದು. ಹೀಗೆಯೇ, ಇವರ ಕಾವ್ಯಗಳು ಮುಖ್ಯವಾಗಿ ನೈತಿಕ (Moral) ಪ್ರಾಜ್ಞ ಅಥವಾ ಬೌದ್ಧಿಕ (Intellectual) ಮತ್ತು ಲೋಕಾಯತಿಕ (Material) ಎಂಬ ಆರ್ಯಸಂಸ್ಕೃತಿಯ ಮೂರು ಭಾವಗಳ ಚಿತ್ರಗಳು. ಇವು ಮೂರನ್ನೂ ನಿಗ್ರಹಿಸಿ ಪರಸ್ಪರಗೂಡಿಸಿ ಸಮಂಜಸಗೊಳಿಸುವ ನಾಲ್ಕನೆಯದಾದ ಅಧ್ಯಾತ್ಮಶಕ್ತಿಯು ಮಾತ್ರ ಜನಾಂಗವನ್ನೇ ವಶಪಡಿಸಿಕೊಂಡು ತನ್ನದೇ ಎಂದೆನ್ನಿಸುವಷ್ಟು ಪ್ರಧಾನವಾಗಿ ಯಾವ ಕಾಲದಲ್ಲೂ ಪ್ರಬಲವಾಗದಿದ್ದರೂ ಎಲ್ಲ ಯುಗಗಳಲ್ಲಿಯೂ ಕಾಣಿಸಿಕೊಳ್ಳುತ್ತಲೇ ಇತ್ತು.

ರಾಮಾಯಣವು ಉನ್ನತವಾದ ನೈತಿಕಭಾವನೆಯ ಆದರ್ಶ ಚಿತ್ರವೆಂದಮಾತ್ರಕ್ಕೆ ಕಾಳಿದಾಸನ ಕೃತಿಗಳಲ್ಲಿ ಚಿತ್ರಿತವಾಗುವ ಐಹಿಕ ಸುಖಸಂಪತ್ತಾಗಲಿ, ಮಹಾಭಾರತದ ಪ್ರಾಜ್ಞತೆಯಾಗಲಿ ಅಲ್ಲಿಲ್ಲವೆಂದು ಅಭಿಪ್ರಾಯವಲ್ಲ. ಹಾಗೆಯೇ ವ್ಯಾಸ ಕಾಳಿದಾಸರ ಕೃತಿಗಳೂ ಇತರ ಅಂಶಗಳನ್ನು ಒಳಗೊಂಡಿದ್ದರೂ ಪ್ರಧಾನವಾಗಿ ಪ್ರಾಜ್ಞ ಮತ್ತು

ಐಹಿಕಭಾವಗಳನ್ನು ಚಿತ್ರಿಸುತ್ತವೆಂದು ಹೇಳಬಹುದು. ಈ ದೃಷ್ಟಿಯಿಂದ, ಜನಾಂಗದ ಜಾಗೃತಿಯ ಮೂರ್ತಿಮತ್ತಾದ ಮೂರನೆಯ ಸ್ವರೂಪವು ಕಾಳಿದಾಸ. ವ್ಯಾಸ ವಾಲ್ಮೀಕಿಗಳು ಚಿತ್ರಿಸುವ ಸಂಸ್ಕೃತಿಗೂ ಇವನು ಚಿತ್ರಿಸಿರುವ ಸಂಸ್ಕೃತಿಗೂ ಬಹಳ ತಾರತಮ್ಯ. ಶೀಲಪ್ರಜ್ಞೆಗಳೆಂಬ ಎರಡು ಉದ್ದಾಮ ಶಕ್ತಿಗಳ ಪರಿಣಾಮವು ಸಂಪೂರ್ಣವಾಗಿ ಆವಿರ್ಭವಿಸಿ ತನ್ನ ಪರಾಕಾಷ್ಠೆಯನ್ನೂ ಪರಾಭವವನ್ನೂ ಬೌದ್ಧಮತದಲ್ಲಿ ಕಂಡಿತು. ಜನಾಂಗದ ಭಾವವು ಕಲ್ಲಿನಂತೆ ಕಠಿಣವಾಗುತ್ತಿತ್ತು. ತತ್ತ್ವಶಾಸ್ತ್ರ, ನೀತಿ ಶಾಸ್ತ್ರ ಮುಂತಾದುವೆಲ್ಲವೂ ಕ್ರಮಗೊಳ್ಳುತ್ತಿದ್ದುವು. ಈ ಯುಗದಲ್ಲೇ ದರ್ಶನಗಳು, ಧರ್ಮಶಾಸ್ತ್ರ ಮತ್ತು ವಿಜ್ಞಾನ ಶಾಸ್ತ್ರಗಳು ಪ್ರತ್ಯೇಕವಾಗಿ ರೂಪುಗೊಂಡವೆಂದು ಹೇಳಬಹುದು.

ಆದರೂ ಮತ್ತೊಂದು ಕಡೆ ಜನಾಂಗದ ನಿರ್ಮಾಣಶಕ್ತಿ ಸೌಂದರ್ಯಾಸಕ್ತಿಗಳು ಐಹಿಕವಾದ ವಿಷಯಗಳಲ್ಲಿ ತಲೆದೋರಿದವು. ಚಿತ್ರ, ಶಿಲ್ಪ, ನೃತ್ತ, ಗಾನ, ಅಭಿನಯ, ಉದ್ಯಾನ ಶೃಂಗಾರ, ಆಭರಣ ನಿರ್ಮಾಣ ಮುಂತಾದ ನಾಗರರ ಐಶ್ವರ್ಯಸೂಚಕಗಳಾದ ಕಲೆಗಳು ಉತ್ತೇಜನ ಹೊಂದಿ ಅತ್ಯುತ್ತಮವಾದ ನೈಪುಣ್ಯದ ಅಭಿವ್ಯಕ್ತಿಗೆ ಕಾರಣ ವಾದವು. ಹಿಂದೆ ಉನ್ನತವಾದ ನೈತಿಕಾದಿ ಧ್ಯೇಯಗಳಿಗಧೀನವಾಗಿ ಮಾತ್ರ ಶೋಭಿಸುತ್ತಿದ್ದ ಐಹಿಕ ಸುಖಸಂಪತ್ತುಗಳಿಗೆ ಹೆಚ್ಚಾದ ಪ್ರಾಧಾನ್ಯ ದೊರೆತು ಜನಾಂಗದ ಶಕ್ತಿ ಉತ್ಸಾಹಗಳು ಅದಕ್ಕೇ ವಿನಿಯೋಗ ವಾಗುತ್ತಿದ್ದವು. ಜೀವನದಲ್ಲಿ ನಿರತಿಶಯವಾದ ಆಸಕ್ತಿಯು ಸ್ಪಷ್ಟವಾಗಿ ಗೋಚರವಾಯಿತು. ಈ ಐಹಿಕಸುಖಾಸಕ್ತಿಯುಗದ ಪ್ರಾರಂಭದಲ್ಲೇ ಕಾಳಿದಾಸನು ಅವತರಿಸಿ ಅದರ ಭಾವಸಂಸ್ಕಾರಗಳನ್ನು ತನ್ನಲ್ಲಡಗಿಸಿ ಕೊಂಡು ಮುಂದಿನ ಕಾವ್ಯಯುಗ (Age of Classical Sanskrit Literature) ದ ಅಭಿವೃದ್ಧಿಗೆ ಸೂಚಕನಾದನು.

ಕಾಳಿದಾಸನ ಯುಗದ ಸಂಸ್ಕೃತಿಯ ಸ್ವರೂಪವನ್ನೂ ಅದರಿಂದ ಈ ಮಹಾಕವಿಯ ವ್ಯಕ್ತಿತ್ವವು ವಿಕಾಸಹೊಂದಿದ ಬಗೆಯನ್ನೂ ವಿಶದವಾಗಿ ಪರಿಶೀಲಿಸುವುದು ಅತ್ಯಾವಶ್ಯಕ. ಆದರೆ ಈ ಸಾಮಾಜಿಕ ಹಿನ್ನೆಲೆಯನ್ನು ಕುರಿತು ಅವನ ಗ್ರಂಥಗಳಿಂದಲೇ ತಿಳಿಯಬಹುದಾದ

ಕೆಲವು ಊಹೆಗಳನ್ನು ಮಾತ್ರ ಮುಂದಿಡಬಹುದೇ ಹೊರತು ಯಾವ ಅಂಶವನ್ನೂ ಸಮರ್ಪಕವಾಗಿ ನಿರ್ಧರಿಸುವಂತಿಲ್ಲ.

ಐಹಿಕಸುಖಾಸಕ್ತಿಯೇ ಈ ಕಾಲದ ಪ್ರಧಾನ ಚಿಹ್ನೆಯೆಂದು ಹಿಂದೆಯೇ ಹೇಳಿದೆ. ಆದರೆ ಆತ್ಮ, ಈಶ್ವರ, ಸ್ವರ್ಗ ಮುಂತಾದುವನ್ನು ನಿರಾಕರಿಸುವಷ್ಟು ಐಹಿಕತೆಯೂ ಚಾರ್ವಾಕದೃಷ್ಟಿಯೂ ಇರಲಿಲ್ಲ. ಆಧ್ಯಾತ್ಮಿಕ ಭಾವನೆಗಳನ್ನು ಸರ್ವಥಾ ದೂರಮಾಡಿರಲಿಲ್ಲ. ಈ ಸಂಸ್ಕೃತಿಯು ಸಮಾಜದಲ್ಲಿ ಗಣ್ಯತೆಯನ್ನು ಪಡೆದಿದ್ದ ಧನಿಕರ ಸಂಸ್ಕೃತಿ ಯೆಂದು ಹೇಳಬಹುದು. ಇಂದ್ರಿಯಸುಖಾನುಭವಕ್ಕೆ ಅವರಿಗಿದ್ದ ಅನುಕೂಲಗಳು ಮತ್ತು ಆಸಕ್ತಿ, ಇವರು ಗ್ರಾಹ್ಯವೆಂದೆಣಿಸುತ್ತಿದ್ದ ಕಲಾಚಾತುರ್ಯ, ಒಬ್ಬರಿಗೊಬ್ಬರು ತೋರಿಸುತ್ತಿದ್ದ, ಕೆಲವು ವೇಳೆ ಭಾವಶೂನ್ಯವಾಗಿದ್ದರೂ, ಆಡಂಬರದ ವರ್ತನೆ, ಲೌಕಿಕ ವ್ಯವಹಾರದಲ್ಲಿ ಚಮತ್ಕಾರ, ಕಲಾಶಾಸ್ತ್ರಗಳಲ್ಲಿ ಅಭಿರುಚಿ ಇವೆಲ್ಲವನ್ನೂ ನೋಡಿದರೆ, ಈ ಸಂಸ್ಕೃತಿಯು ಸಾಮಾನ್ಯಜನರಲ್ಲಿ ನೆಲೆಸಿದ್ದ ಭಾವಗಳನ್ನು ಪ್ರತಿಬಿಂಬಿಸದ ಶ್ರೀಮಂತರ ಸಂಸ್ಕೃತಿಯಾಗಿದ್ದಂತೆ ತೋರುತ್ತದೆ. ಆಧ್ಯಾತ್ಮಿಕತೆ ಯಿದ್ದರೂ, ಮತಾಭಿಮಾನವು ಹೃದಯದಿಂದ ಹೊರಹೊಮ್ಮುವ ಆಂತರ ಭಾವದ ಪರಿಣಾಮವಾಗಿರಲಿಲ್ಲ, ಬಹಳಮಟ್ಟಿಗೆ ಸಾಮಾಜಿಕ ಸಮುದಾಚಾರಕ್ಕೆ ಸೇರಿತ್ತು. ಉನ್ನತವಾದ ನೈತಿಕಧ್ಯೇಯಗಳಿಗೆ ಗೌರವ ವಿದ್ದರೂ ಜೂಜು, ಮದ್ಯಪಾನ ಮುಂತಾದ ವ್ಯಸನಗಳಿಗೆ ಸಿಕ್ಕಿದವರು ಸಮಾಜದಲ್ಲಿ ಅಷ್ಟಾಗಿ ಹೇಯರಾಗಿರಲಿಲ್ಲ. ಒಟ್ಟಿನಲ್ಲಿ ಪ್ರಾಚೀನ ಸಂಸ್ಕೃತಿಯ ಆಧ್ಯಾತ್ಮಿಕತೆಯು ಕಳೆಗುಂದಿತ್ತೇ ಹೊರತು ಪೂರ್ತಿ ಹಾಳಾಗಿರಲಿಲ್ಲ. ಅದರ ತೀವ್ರತೆಯು ಕಡಿಮೆಯಾಗಿದ್ದರೂ ಇದಕ್ಕೆ ವಿರುದ್ಧವಾದ ಅತ್ಯಾಚಾರವು ಬೇರೂರಿ ಸಮಾಜದ ಕ್ಷೀಣತೆಗವಕಾಶ ವಿರಲಿಲ್ಲ. ಪ್ರಾಚೀನ ಭಾರತೀಯ ಸಂಸ್ಕೃತಿಯ ಸಾರವತ್ತಾದ ಆಶ್ರಯವು ಸಾಂಕರ್ಯ ದುರ್ವೃತ್ತಗಳು ಜನಸಾಮಾನ್ಯದಲ್ಲಿ ಪ್ರಬಲವಾಗಲು ಎಡೆ ಗೊಡಲಿಲ್ಲ. ವನಗಿರಿಗಳ ಗಾಢತೆ ಗಾಂಭೀರ್ಯಗಳು, ನದಿ ಸರೋವರಗಳ ಪ್ರಸನ್ನತೆ, ಮೃಗಪಕ್ಷಿಗಳ ಸೌಂದರ್ಯ ಮತ್ತು ಆಕರ್ಷಕವಾದ ಚೇಷ್ಟೆ ಮುಂತಾದುವನ್ನು ನೋಡಿ ಆನಂದಿಸಿ ಜೀವನದ ಸೌಂದರ್ಯವನ್ನು

ಅನುಭವಿಸುವುದೇ ಆಗಿನ ಸಂಸ್ಕೃತಿಯ ಮುಖ್ಯ ಧ್ಯೇಯವಾಗಿತ್ತೆನ್ನಬಹುದು.

ಕಾಳಿದಾಸನು ತನ್ನ ಯುಗದ ಮಾದರಿ ವ್ಯಕ್ತಿಯಾಗಿ ಅದರ ಸ್ವರೂಪವನ್ನು ಸಂಪೂರ್ಣವಾಗಿ ತನ್ನ ಗ್ರಂಥಗಳಲ್ಲಿ ಪ್ರತಿಬಿಂಬಿಸುವುದರಿಂದಲೇ ಅವನನ್ನು ಈ ವಿಧವಾದ ಐಹಿಕ ಅಥವಾ ಲೋಕಾಯತ ಸಂಸ್ಕೃತಿಯ ಪ್ರತಿನಿಧಿಯೆನ್ನುವುದು ವಾಡಿಕೆಯಾಗಿದೆ. ಇತರ ಕವಿಗಳು ಬಹುಮುಖವಾದ ಈ ಸಂಸ್ಕೃತಿಯ ಒಂದೊಂದು ಅಂಶವನ್ನು ಚಿತ್ರಿಸಿದರೂ ಕಾಳಿದಾಸನ ಚಿತ್ರಗಳು ಅವುಗಳ ಸಮಷ್ಟಿರೂಪ. ಇದಕ್ಕೆ ತಕ್ಕಂತೆ, ಕಾಳಿದಾಸನಿಗೆ ಆಗ ಕ್ರಮುಗೊಳ್ಳುತ್ತಿದ್ದ ಶಾಸ್ತ್ರ ಮತ್ತು ಕಲೆಗಳ ದೃಢ ಪರಿಚಯವಿದ್ದಿರಬೇಕೆಂದೂ ಅವನು ಐಶ್ವರ್ಯವಂತನೂ ಸಮಾಜದ ಮೇಲುಮಟ್ಟದವನೂ ಆಗಿದ್ದು ತನಗನುಗುಣವಾದ ಉನ್ನತ ಪದವಿಯ ಜನರಲ್ಲೇ ಪರಿಚಯವನ್ನು ಬೆಳೆಸಿದ್ದಿರಬೇಕೆಂದೂ ಊಹಿಸಬಹುದಾಗಿದೆ. ಇವನ ಮತ, ಆಧ್ಯಾತ್ಮಿಕ ಭಾವನೆ, ನೀತಿ ಮುಂತಾದುವೆಲ್ಲ ಬಹಳ ಮಟ್ಟಿಗೆ ಅವನ ಕಾಲಕ್ಕೆ ತಕ್ಕಂತೆಯೇ ಇದ್ದಿರಬೇಕೆಂದು ಹೇಳಬಹುದಾದರೂ ನೈಜವಾದ ತತ್ತ್ವದಲ್ಲಿ ದೃಢವಿಶ್ವಾಸವೂ, ಭಕ್ತಿಯ ಆವೇಶವೂ, ಶ್ರದ್ಧೆಯೂ ಇವನಲ್ಲಿರಲಿಲ್ಲವೆಂದು ಹೇಳುವಹಾಗಿಲ್ಲ. ಅಂತೂ ಎಲ್ಲಕ್ಕೂ ಅವನ ಸೌಂದರ್ಯಾಸಕ್ತಿಯೇ ಹಿನ್ನೆಲೆಯಾಗಿತ್ತು. ಪ್ರತ್ಯಕ್ಷಗೋಚರವಾದ ವಸ್ತುಗಳ ವಿಷಯದಲ್ಲಿ ಅವುಗಳ ಆಕರ್ಷಕವಾದ ಅಂಶವು ಮಾತ್ರ ಗ್ರಾಹ್ಯವಾಗುತ್ತಿದ್ದಂತೆಯೇ ಪರೋಕ್ಷ ವಿಷಯಗಳಲ್ಲೂ ಮನೋರಂಜಕವಾದ ಅಂಶಗಳು ಮಾತ್ರ ಅವನಿಗೆ ಗೋಚರವಾಗುತ್ತಿದ್ದವು. ಕಲೆಗೆ ಬೇಕಾಗುವ ಅಂದ, ಅಚ್ಚುಕಟ್ಟು, ಲಾಲಿತ್ಯಗಳೇ ಪರೋಕ್ಷವಾದ ಅನುಭವದಲ್ಲೂ ಮುಂದಾಗುತ್ತಿದ್ದವು. ದೇವಭಕ್ತಿಯು ಕೂಡ ವನಿತೆಯು ರಮಣನಿಗಾಗಿ ಹಂಬಲಿಸುವ ರೀತಿಯದಾಗಿತ್ತೆಂದರೆ ಅತಿಶಯೋಕ್ತಿಯಾಗಲಾರದು.[1]

---

1. ಶ್ರೀ ಅರವಿಂದ ಘೋಷರ "ವಾಲ್ಮೀಕಿ, ವ್ಯಾಸ, ಕಾಳಿದಾಸ" ಎಂಬ ಲೇಖನವನ್ನು ನೋಡಿ.

# ಕಾಳಿದಾಸ

## ಜೀವನ ಚರಿತ್ರೆ

ತನ್ನ ಸಾಹಿತ್ಯವನ್ನು ಭಕ್ತಿಪೂರ್ವಕವಾಗಿ ವಿಮರ್ಶಿಸುವುದರಲ್ಲಿ ಯೂರೋಪಿನ ಯಾವ ಜನಾಂಗವೂ ಭರತಖಂಡಕ್ಕೆ ಸಮನಾಗಲಾರ ದೆಂದು ಪ್ರೊ|| ರೈಡರ್‌ರವರು ಹೇಳಿರುವಂತೆ[1] ಕಾಳಿದಾಸನ ಕಾವ್ಯ ನಾಟಕಗಳನ್ನು ಅವು ಹುಟ್ಟಿದಂದಿನಿಂದಲೇ ಭಾರತೀಯರು ಅತ್ಯಾದರ ದಿಂದ ವ್ಯಾಸಂಗಮಾಡುತ್ತಿದ್ದರೂ ಕವಿಯ ಸಾಂಸಾರಿಕ ಪರಿಸ್ಥಿತಿ, ಅಥವಾ ಆಗಿನ ಸಾಮಾಜಿಕ ವಾತಾವರಣದಿಂದ ಕವಿಗೆ ಆದ ಅನುಕೂಲ ಪ್ರತಿ ಕೂಲಗಳು ಮುಂತಾದುವನ್ನು ನಂಬುಗೆಗೆ ಯೋಗ್ಯವಾದ ರೀತಿಯಲ್ಲಿ ಬರೆದಿಟ್ಟಿಲ್ಲ. ಭಾರತೀಯರಿಗೆ ಚಾರಿತ್ರ ದೃಷ್ಟಿಯಿಲ್ಲವೆಂದು ಆಕ್ಷೇಪಿಸುತ್ತಾ ಡಾ|| ಮೆಕ್ಡಾನಲ್‌ರವರು "ತಮ್ಮ ದೇಶದ ಕವಿಸಾರ್ವಭೌಮನಾದ ಕಾಳಿದಾಸನ ವಿಷಯವನ್ನೇ ಭಾರತೀಯರು ಗಮನಿಸಿಲ್ಲ"ವೆಂದು ಹೇಳಿರು ವರು.[2] ಕಾಳಿದಾಸನ ಲೇಖನಗಳು ಇವನ ಅಂತರಾನುಭವವನ್ನು ಪ್ರತಿ ಬಿಂಬಿಸುವ ಸಂಸಾರದ ಸಜೀವಚಿತ್ರಗಳೋ, ಅಥವಾ ಸ್ವಚ್ಛಂದವಾಗಿ ವಿಹರಿಸುತ್ತಿದ್ದ ಪ್ರತಿಭಾಕಲ್ಪಿತವಾದ ಕವಿಪ್ರೌಢೋಕ್ತಿಗಳೋ ಅಥವಾ ಸಮಾಜದಲ್ಲಿ ಗೋಚರವಾಗುತ್ತಿದ್ದ ಕೆಲವು ಮಾದರಿಗಳೋ ಯಾವು ದನ್ನೂ ನಿಶ್ಚಿತವಾಗಿ ಹೇಳುವಂತಿಲ್ಲ.[3]

ಪ್ರಾಮಾಣಿಕವಾದ ಯಾವ ವಿಷಯವೂ ಗೊತ್ತಿಲ್ಲದೆ ಹೋದರೂ ಸಂಪ್ರದಾಯದಲ್ಲಿ ಕಥಾಪರಂಪರಾರೂಪವಾಗಿ ಅನೇಕ ಸಂಗತಿಗಳು

1. Translation of Kālidāsa's works (Everyman's Library) P. vii.

2. Hist. Skt. Lit. P. 10.

3. Hillebrandt: Kālidāsa—P. 7.

ತಿಳಿದುಬಂದಿರುತ್ತವೆ. ಅವುಗಳಲ್ಲಿ ಮುಖ್ಯವಾದುವನ್ನು ಮಾತ್ರ ಗಮನಿಸ ಬಹುದು. ಓನಾಮ ಪೂಜೆಯಲ್ಲೇ ಚಾಳೀಶವೆಂದಂತೆ ಈ ಕವಿಯನ್ನು ಕಾಳಿದಾಸನೆಂದು ಕರೆದು ವ್ಯವಹರಿಸುವುದು ವಾಡಿಕೆಯಾಗಿದ್ದರೂ ಆ ಹೆಸರಿನ ವಿಷಯದಲ್ಲೇ ಸ್ವಲ್ಪ ಸಂದೇಹವಿದೆ. ತ್ರಿಕಾಂಡಶೇಷದಲ್ಲಿ (II-vii-26) ರಘುಕಾರ, ಮೇಧಾರುದ್ರ,[1] ಕೋಟಿಜಿತ್, ಕಾಳಿಸಾಸ ಎಂಬ ಶಬ್ದಗಳನ್ನು ಪರ್ಯಾಯಗಳಾಗಿ ಕೊಟ್ಟಿದೆ. ಇವುಗಳಲ್ಲಿ ಯಾವುದು ಕವಿಯ ನಿಜನಾಮವೊ ಅಥವಾ ಯಾವುದೂ ಅಲ್ಲವೋ, ನಿರ್ಣಯಿಸುವು ದಕ್ಕೆ ಸಾಧ್ಯವಿಲ್ಲ.

ಡಾ|| ಭೌದಾಜಿಯವರು ರಾಜ ತರಂಗಿಣಿಯು ಕಾಳಿದಾಸನ ವಿಷಯ ದಲ್ಲಿ ಮೌನವಾಗಿರುವುದನ್ನಾಶ್ರಯಿಸಿ ಮಾತೃಗುಪ್ತ ಕಾಳಿದಾಸರಿಗೆ ಐಕ್ಯವನ್ನು ಕಲ್ಪಿಸಿರುವರು.[2] ಇವರಿಬ್ಬರೂ ಬೇರೆ ಬೇರೆ ವ್ಯಕ್ತಿಗಳೆಂದು ವ್ಯವಹಾರವಿರುವುದರಿಂದಲೂ [3] ಪ್ರತ್ಯೇಕವಾಗಿ ಒಬ್ಬೊಬ್ಬರಿಂದಲೇ ರಚಿತವಾದವೆಂದು ಅನೇಕ ಶ್ಲೋಕಗಳು ಅಲ್ಲಲ್ಲಿ ಉದ್ಧೃತವಾಗಿರುವು ದರಿಂದಲೂ ಈ ವ್ಯಕ್ತ್ಯೈಕ್ಯವು ಅಸಮಂಜಸವೆಂದು ತೋರುತ್ತದೆ.[4]

---

1. ಭಾಮಹನ ಕಾವ್ಯಾಲಂಕಾರದಲ್ಲಿ (II—40, 80) ಪ್ರಾಚೀನಾಲಂಕಾರಿ ಕನೆಂದು ಒಂದು ಕಡೆ 'ಮೇಧಾವಿ' ಎಂಬ ಶಬ್ದದಿಂದಲೂ ಇನ್ನೊಂದು ಕಡೆ 'ಮೆಧಾವಿರುದ್ರ' ನೆಂಬ ಶಬ್ದದಿಂದಲೂ ನಿರ್ದಿಷ್ಟವಾಗಿರುವವರು ಒಂದೇ ವ್ಯಕ್ತಿ ಯೋ ಅಥವಾ ಎರಡು ಬೇರೆ ವ್ಯಕ್ತಿಗಳೋ ಎಂಬುದೇ ಸಂದೇಹಾಸ್ಪದ. ಒಂದೇ ವ್ಯಕ್ತಿಯೆಂದೊಪ್ಪಿದರೂ ಅವನೂ ತ್ರಿಕಾಂಡಶೇಷದ ಮೇಧಾರುದ್ರನೂ ಒಬ್ಬನೇ ಎಂಬುದೂ ನಿಶ್ಚಿತವಲ್ಲ.

2. ಮಾತೃಗುಪ್ತ (=ತಾಯಿಯಿಂದ ರಕ್ಷಿಸಲ್ಪಟ್ಟವನು) ನೆಂಬುದು ಕಾಳಿ ದಾಸ (=ಕಾಳಿಯ ಸೇವಕ) ಎಂಬುದೂ ಪರ್ಯಾಯಗಳೆಂದು ಇವರ ಮತ. *Vide* Literary Remains.

3. ರಾಘವಭಟ್ಟನ ಶಾಕುಂತಲದ ವ್ಯಾಖ್ಯಾನವಾದ ಅರ್ಥದ್ಯೋತನಿಕೆ ಯಲ್ಲಿ 'ಸೂತ್ರಧಾರ' ಶಬ್ದದ ವ್ಯಾಖ್ಯಾನವನ್ನು ನೋಡಿ.

4. ಡಾ|| ಸಿಲ್ವೇನ್ ಲೆವಿಯವರ "Le Theatre Indien" ಪೀಠಿಕೆ, ಪುಟ 36; ಮತ್ತು ಗ್ರಂಥದಲ್ಲಿ ಪುಟ 15 ಇವುಗಳನ್ನು ನೋಡಬಹುದು.

ಕಾಳಿದಾಸನಿಗೂ ಕೌಟಿಲ್ಯನಿಗೂ ಭಾವಶೈಲಿಗಳಲ್ಲಿ ಹೆಚ್ಚು ಸಾಮ್ಯವು ಕಂಡುಬರುವುದರಿಂದ ಅವರಿಬ್ಬರೂ ಒಂದೇ ವ್ಯಕ್ತಿಯೆಂಬ ಹೆಚ್. ಎ. ಷಾರವರ ವಾದವು[1] ಸರ್ವಥಾ ಅನಾದರಣೀಯ.[2]

ಉತ್ತರರಾಮಚರಿತ್ರೆಯ ವ್ಯಾಖ್ಯಾನಕಾರನಾದ ಘನಶ್ಯಾಮನು ಕುಮಾರಸಂಭವ, ರಘುವಂಶ, ಶಾಕುಂತಲಗಳಿಂದ ಕೆಲವು ಶ್ಲೋಕಗಳನ್ನುದ್ಧರಿಸಿ ಅವುಗಳನ್ನು ಕೆಲವುಕಡೆ ಈರ್ವರ ಕೃಷ್ಣಕೃತವೆಂದೂ, ಇನ್ನೂ ಕೆಲವುಕಡೆ ಭರ್ತೃಮೇಢಕೃತವೆಂದೂ ಹೇಳಿರುವನು.[3] ಇದನ್ನು ಸಮರ್ಥಿಸುವ ಬೇರೆ ಆಧಾರವಾವುದೂ ಇಲ್ಲ.

ಆದರೆ ಈಚೆಗೆ ಅನೇಕರು ಅಭಿನವಕಾಳಿದಾಸ, ಅಕ್ಬರೀಯ ಕಾಳಿದಾಸ, ನಟನಕಾಳಿದಾಸ ಎಂದು ಮುಂತಾಗಿ[4] ಹೆಸರಿಟ್ಟುಕೊಂಡಿರುವುದನ್ನು ನೋಡಿದರೆ, ಆ ಹೆಸರು ಬರಲು ಸೂಚಿಸಿರುವ ನಿಮಿತ್ತವನ್ನು ನಂಬಲಾಗದಿದ್ದರೂ ಪ್ರಕೃತ ಕವಿಯನ್ನು ಕಾಳಿದಾಸನೆಂದು ವ್ಯವಹರಿಸುವುದೇ ಯುಕ್ತವೆಂದು ತೋರುತ್ತದೆ. ಅಭಿನವ ಮುಂತಾದ ಪೂರ್ವಪದಶೂನ್ಯವಾಗಿ ಕೇವಲ ಕಾಳಿದಾಸನೆಂಬ ಹೆಸರಿನವರೂ ಮೂವರು ಕವಿಗಳಿದ್ದರೆಂದು ರಾಜಶೇಖರನ ಕಾವ್ಯಮೀಮಾಂಸೆಯಿಂದ ಸೂಚಿತವಾಗುವುದು[5] ರಘುವಂಶಾದಿಗಳ ಕರ್ತೃವಲ್ಲದೆ ಕುಂಡಪ್ರಬಂಧಾದಿಗಳ ಲೇಖಕರಾದ ನಾಲ್ಕುಜನ ಕಾಳಿದಾಸವ್ಯಕ್ತಿಗಳು ಸಂಸ್ಕೃತ ಸಾಹಿತ್ಯಚರಿತ್ರೆಯಲ್ಲಿ ಗೋಚರವಾಗುವರು.[6] ಇವರೆಲ್ಲರೂ ಮೂಲ ವಿಗ್ರಹವಾದ ಯಾವನೋ

1. Q.J.M.S. Vols. X and XI 'Kautilya and Kālidāsa.'
2. Wintz. Gesh. III, p. 523, f.n. 3.
3. P. V. Kane's edition of Uttararāmacarita, p. 33.
4. ಪರಿಮಳ ಕಾಳಿದಾಸ, ಶಂಭು ಕಾಳಿದಾಸ, ನವೀನ ಕಾಳಿದಾಸ, ಕಲಿಯುಗ ಕಾಳಿದಾಸ, ಕೇರಳ ಕಾಳಿದಾಸ, ನೂತನ ಕಾಳಿದಾಸ, ಬಾಲ ಕಾಳಿದಾಸ. ಇವು ಮಿಕ್ಕ ಹೆಸರುಗಳು.
5. ಅನುಬಂಧ I, 6 ನ್ನು ನೋಡಿ.
6. Krishnamachariar's Hist. Cl. Skt. Lit. p. 946; ತಮ್ಮ ಗ್ರಂಥದ 121 ನೆ ಪುಟದ ಟಿಪ್ಪಣಿಯಲ್ಲಿ ಇವರು ಕಾಳಿದಾಸನಂದಿಯೆಂಬೊಬ್ಬ ಕವಿಯನ್ನೂ ನಿರ್ದೇಶಿಸಿರುವರು. Also Aufrecht Z. D. M. G. XXXIX, pp. 306—312.

ಒಬ್ಬ ಕಾಳಿದಾಸನ ಉತ್ಸವಮೂರ್ತಿಗಳಿರಬೇಕು. ಅತಿ ದೀರ್ಘಕಾಲ ದಿಂದ ಪ್ರಚಾರದಲ್ಲಿರುವುದರಿಂದಲೂ, ನಾಟಕಗಳ ಪ್ರಸ್ತಾವನೆಗಳಲ್ಲಿ ನಿಬದ್ಧವಾಗಿರುವುದರಿಂದಲೂ ಕವಿಗೆ ಕಾಳಿದಾಸನೆಂಬ ಹೆಸರೇ ಗ್ರಾಹ್ಯ. ಕಾಳಿದಾಸನೆಂಬ ಶಬ್ದದಲ್ಲಿ ಅಡಗಿರುವ ವ್ಯಾಕರಣ ವಿಶೇಷವೂ ಇದು ಒಬ್ಬ ವ್ಯಕ್ತಿಯ ಅಂಕಿತನಾಮವಾಗಿದ್ದಿರಬೇಕೆಂದುದನ್ನೆ ಸಮರ್ಥಿಸುವುದು. ಲೌಕಿಕ ಭಾಷೆಯಲ್ಲಿ ಈಕಾರಾಂತ ಸ್ತ್ರೀಲಿಂಗನಾಮಗಳು ಸಮಾಸದ ಪೂರ್ವಪದಗಳಾಗಿ 'ಸಂಜ್ಞಾ' ವಾಚಕಗಳಾದರೆ ಪ್ರಾತಿಪದಿಕಾಂತ ದಲ್ಲಿರುವ ಈಕಾರವು ವಿಕಲ್ಪವಾಗಿ ಹ್ರಸ್ವವಾಗುವುದೆಂಬ ನಿಯಮ ವಿರುವುದು.[1] ಪ್ರಕೃತ ಕವಿಯ ಹೆಸರಿನಲ್ಲಿ ಈ ವಿಕಲ್ಪವು ಆಶ್ರಿತವಾಗಿ ರುವುದನ್ನು ನೋಡಿದರೆ ಇದು ವಾಸ್ತವವಾಗಿಯೂ ಅಂಕಿತನಾಮವೇ ಇರಬಹುದೆನ್ನಿಸುವುದು.

ಕಾಳಿದಾಸನು ಕಾಳಿಕಾಪುರಿಯ ಕಾಳೀಯಶರ್ಮನೆಂಬ ಬ್ರಾಹ್ಮಣನ ಮಗನೆಂದು ಶ್ರೀ. ಆರ್. ನರಸಿಂಹಾಚಾರ್ಯರವರು ಹೇಳಿರುವರು.[3] ಇದು ಅಮರಾವತಿ ಎಂಬ ಪಟ್ಟಣದಲ್ಲಿ ಅಮರಶೇಖರರಾಯನೆಂಬ ದೊರೆ ಯಿದ್ದ ಕಥೆಗೆ ಸಮ. ಅವನು ಬ್ರಾಹ್ಮಣನಾಗಿ ಹುಟ್ಟಿ[4] ಆರು ತಿಂಗಳ ಮಗುವಾಗಿದ್ದಾಗಲೇ ಅನಾಥನಾದನು. ಒಬ್ಬ ಗೊಲ್ಲನು[5] ಈ ಅನಾಥ

---

1. ಙ್ಯಾಪೋಃಸಂಜ್ಞಾಛಂದಸೋರ್ಬಹುಲಂ. (ಪಾಣಿನಿ VI-iii-63), ಎಂಬ ಸೂತ್ರಕ್ಕನುಸಾರವಾಗಿ.

2. ಪ್ರಾಯಶಃ ಲೌಕಿಕ ಭಾಷೆಯಲ್ಲೂ ಈ ವಿಕಲ್ಪವನ್ನಾಶ್ರಯಿಸಿರುವುದು ಅಪರೂಪ. ಉದಾ _ಚಂಡೀದಾಸ, ಲಕ್ಷ್ಮೀಪತಿ—cf. also ಮಲ್ಲಿನಾಥ; ರ.ವಂ. XIV—32 "... ಕಾಳಿದಾಸ ಇತಿವತ್."

3. Q. J. M. S. VIII. P. 274.

4. ಕಾಳಿದಾಸನು ಸಾರಸ್ವತ ಬ್ರಾಹ್ಮಣನೆಂದೂ, ಅವರು ವಾದಿಸುವಂತೆ ಮಾತೃಗುಪ್ತನೂ ಇವನೂ ಒಂದೇ ವ್ಯಕ್ತಿಯೆಂದೊಪ್ಪಿದರೆ ಮೈತ್ರಾಯಣೀಯ ಶಾಖೆಯವರೆಂದೂ ಡಾ॥ ಭೌದಾಜಿಯವರು ಅಭಿಪ್ರಾಯಪಡುವರು—Literary Remains.

5. ಇನ್ನೊಂದು ಕಥಾಕ್ರಮದಲ್ಲಿ "ಕುರುಬನು".

ಕುಮಾರನನ್ನು ಸಾಕಿದನು. ಕಾಲಕ್ರಮೇಣ ತೇಜಸ್ವಿಯಾದ ತರುಣನಾದರೂ ಇವನು ವಿದ್ಯಾವಿಹೀನನಾದ ಅಸಂಸ್ಕೃತನಾಗಿದ್ದನು. ಆ ಕಾಲದಲ್ಲಿ ಕಾಶಿಯ ದೊರೆಯಾದ ಭೀಮಶುಕ್ಲನು ತನ್ನ ಮಗಳು ವಾಸಂತಿಯನ್ನು ಆಸ್ಥಾನದಲ್ಲಿ ಪ್ರಮುಖಪಂಡಿತನಾಗಿದ್ದ ವರರುಚಿಗೆ ಕೊಡಲಿಚ್ಛಿಸಿದನು. ಅವನಿಗಿಂತಲೂ ತಾನು ನಿಪುಣೆ ಎಂದು ಹೆಮ್ಮೆಪಡುತ್ತಿದ್ದ ರಾಜಕುಮಾರಿಯು ಇದಕ್ಕೆ ಒಡಂಬಡಲಿಲ್ಲ. ಅವಮಾನಿತನಾದ ವರರುಚಿಯು ರಾಜಕುಮಾರಿಯಮೇಲೆ ತನ್ನ ಸೇಡನ್ನು ತೀರಿಸಿಕೊಳ್ಳುವುದಕ್ಕೆ ಹೊಂಚು ಹಾಕುತ್ತಿದ್ದನು.[1] ಒಬ್ಬ ಗೊಲ್ಲಯುವಕನು ಮರದ ಕೊಂಬೆಯ ತುದಿಯಲ್ಲಿ ಕುಳಿತು ಕೊಂಬೆಯ ಬುಡವನ್ನು ಕತ್ತರಿಸುತ್ತಿದ್ದನು. ಹಾಗೆ ಕತ್ತರಿಸುವುದರಿಂದ ಅಪಾಯಸಂಭವಿಸುವುದೆಂಬುದನ್ನು ಊಹಿಸದ ಇವನೇ ಸರಿಯಾದ ಮಂಕನೆಂದು ನಿಶ್ಚಯಿಸಿ ಮಂತ್ರಿಯು ಅವನನ್ನು ಕೆಳಕ್ಕಿಳಿಸಿ ದೊಡ್ಡ ಪಂಡಿತನ ವೇಷವನ್ನು ಹಾಕಿಸಿ ರಾಜಾಸ್ಥಾನಕ್ಕೆ ಕರೆದುಕೊಂಡು ಹೋದನು. ಗೊಲ್ಲನು ಯಾವ ಮಾತನ್ನೂ ಆಡದೆ ದೊಡ್ಡ ಜ್ಞಾನಿಯಂತೆ ನಟಿಸಬೇಕೆಂದೂ ರಾಜಕುಮಾರಿಯು ಬಂದ ಕೂಡಲೆ "ಓಂ ಸ್ವಸ್ತಿ" ಎಂದು ಮಾತ್ರ ಹೇಳಬೇಕೆಂದೂ ಮುಂಚೆಯೇ ಏರ್ಪಾಡಾಗಿತ್ತು. ಆದರೆ ಗೊಲ್ಲನಿಗೆ ಅದು ಮರೆತುಹೋಗಿ ಅವಳು ಬಂದೊಡನೆಯೇ ಗಾಬರಿಯಿಂದ ಅವನು 'ಉಶಟರ'[2] ಎಂದು ಬಿಕ್ಕಿದನು. ಅರ್ಥವಿಲ್ಲದ ಈ ಕೂಗನ್ನೂ ವರರುಚಿಯು ಚಮತ್ಕಾರವಾಗಿ ವಿವರಿಸಿದನು. ರಾಜಕುಮಾರಿಯು ಅದರ ಸಾಮಂಜಸ್ಯವನ್ನು ಕುರಿತು ವಾದಿಸತೊಡಗಲು ತನ್ನ ಗುರುವು ಹೆಂಗಸಿನ ಪ್ರಶ್ನೆಗೆ ಪ್ರತ್ಯುತ್ತರ ಹೇಳುವುದು

---

1. ವರರುಚಿಯು ಮಂತ್ರಿಯೆಂದೂ ರಾಜಕುಮಾರಿಯು ತನ್ನನ್ನು ವರಿಸುವುದಕ್ಕಾಗಿ ಬಂದ ಅನೇಕ ರಾಜಶ್ರೇಷ್ಠರನ್ನು ತಿರಸ್ಕರಿಸಿದಳೆಂದೂ ದೊರೆಯು ಆಗ ಮಂತ್ರಿಯ ಸಲಹೆಯನ್ನು ಕೇಳಲು ಇಷ್ಟು ಕುಸುಬಿಷ್ಟೆಯಾಡುವ ಹುಡುಗಿಗೆ ಕೊನೆಗೆ ಯಾವನೋ ದಡ್ಡನು ವರನಾಗುವನೆಂದು ಸೂಚಿಸಿ, ಮಂತ್ರಿಯು ದೊರೆಯ ಅಪ್ಪಣೆಯಂತೆ ಮುಂದೆ ನಿರೂಪಿಸುವ ಸಂಚನ್ನು ನಡೆಸಿದನೆಂದೂ ಇನ್ನೊಂದು ಕಥಾಸರಣಿ.

2. L. Finot.—I. H. Q. IX, iv. pp. 829-34. Sylvain Levi—I. H. Q. X. iii. p. 566, ff

ಅನುಚಿತವೆಂದು ಭಾವಿಸಿ ಸುಮ್ಮನಿರುವನೆಂದು ವರರುಚಿಯು ಗೊಲ್ಲನ ಮೌಢ್ಯವನ್ನು ಮರೆಮಾಚಿದನು.[1] ಹೀಗೆ ರಾಜಕುಮಾರಿಯನ್ನು ಮೋಸಗೊಳಿಸಿ ಮದುವೆಯನ್ನೂ ನಡೆಸಿಬಿಟ್ಟರು. ಏಕಾಂತವಿಹಾರ ಸಮಯದಲ್ಲಿ ಯಾವುದೋ ಹಸುವಿನ ಚಿತ್ರವನ್ನು ಕಂಡೊಡನೆ ಗೊಲ್ಲನ ಹಳೆಯ ನೆನಪು ಕೆರಳಿ ಅವನು ತನ್ನ ವೃತ್ತಿಗನುಗುಣವಾದ ಕೂಗನ್ನು ಹಾಕಿದನು. ತಾನು ಮೋಸಹೋದೆನೆಂದು ತಿಳಿದ ವಾಸಂತಿಯು ಅವನನ್ನು ಕೊಲ್ಲುವುದಾಗಿ ಹೆದರಿಸಲು ಗೊಲ್ಲನು ಪಿತೂರಿಯನ್ನು ಹೊರಗೆಡಹಿ ಅವಳ ಕ್ಷಮೆಯನ್ನು ಬೇಡಿದನು. ಈ ವೇಳೆಗೆ ವರರುಚಿಯು ಆಸ್ಥಾನದಿಂದ ಮಾಯವಾಗಿದ್ದುದರಿಂದ ರಾಜಕುಮಾರಿಯ ಕೋಪವು ತನ್ನಲ್ಲೇ ಅಡಗಬೇಕಾಯಿತು. ಗಂಡನ ಮಂಕುತನವು ಹೋಗುವುದಕ್ಕೋಸ್ಕರ ತನ್ನ ಆರಾಧ್ಯದೇವತೆಯಾದ ಕಾಳಿಯನ್ನು ಸೇವಿಸೆಂದು ಅವಳು ಅವನಿಗೆ ಅಪ್ಪಣೆಯಿತ್ತಳು. ಇದರಂತೆಯೇ ಅನೇಕ ವರ್ಷಗಳು ಕಳೆದವು. ಪಾಂಡಿತ್ಯವನ್ನನುಗ್ರಹಿಸದಿದ್ದರೆ ತನ್ನ ಪ್ರಾಣವನ್ನೇ ಒಪ್ಪಿಸುವುದಾಗಿ ಗೊಲ್ಲನು ಛಲಹಿಡಿಯಲು ಕಾಳಿಯು ಪ್ರಸನ್ನಳಾಗಿ ಅವನ ನಾಲಗೆಯಮೇಲೆ ಬೀಜಾಕ್ಷರಗಳನ್ನು ಕೆತ್ತಿದಕಾರಣ ಅವನಲ್ಲಿ ಅನ್ಯಾದೃಶವಾದ ಕವಿತಾಶಕ್ತಿಯೂ ಪಾಂಡಿತ್ಯವೂ ಮೂಡಿದುವು.[2-3] ಮಂಕುತನವು ಹೋಗಿ

---

1. ಗೊಲ್ಲನೊಡನೆ ಸರಿಯಾದ ಪಾಂಡಿತ್ಯವುಳ್ಳ ಕೆಲವರು ಹೋಗಿದ್ದರೆಂದೂ ಆಸ್ಥಾನದ ಪಂಡಿತರು ಅವರನ್ನು ಪರೀಕ್ಷಿಸಿದ ಮೇಲೆ ಅವರ ಗುರುವಿನಂತೆ ನಟಿಸುತ್ತಿದ್ದ ಗೊಲ್ಲನು ಅವರಿಗಿಂತಲೂ ದೊಡ್ಡ ಪಂಡಿತನೆಂದು ನಿಶ್ಚಯಿಸಲು ಮುಂದೆ ಯಾವ ವಾಗ್ವಾದವೂ ನಡೆಯುವುದಕ್ಕವಕಾಶವಿಲ್ಲದಂತಾಯಿತೆಂದು ಇನ್ನೊಂದು ಕಥಾಸಂಪ್ರದಾಯ.

2. ಕಾಳಿಯ ಅನುಗ್ರಹವನ್ನು ಪಡೆದ ಮೂಕ ಕವಿಯು "ಮೂಕಪಂಚಶತಿ"ಯನ್ನು ಬರೆದಂತೆಯೇ ಕಾಳಿದಾಸನೂ 'ಶ್ಯಾಮಲಾದಂಡಕ'ವನ್ನು ಅಂತಹ ಸನ್ನಿವೇಶದಲ್ಲಿ ಬರೆದನೆಂದು ಹೇಳುವುದುಂಟು. Ind. Ant. XXXIX, p. 236.

3. ಗಂಡನಮುಖದಲ್ಲಿ ಬೆಳಗುತ್ತಿದ್ದ ಪ್ರಜ್ಞಾಕಾಂತಿಯನ್ನು ನೋಡಿದಕೂಡಲೆ ವಾಸಂತಿಯು "ಅಸ್ತಿ ಕಶ್ಚಿದ್ವಾಗರ್ಥಃ ?" ಎಂದು ಕೇಳಿದಳು. ಗೊಲ್ಲನು 'ಅಸ್ತ್ಯುತ್ತರಸ್ಯಾಂ ದಿಶಿ'—'ಕಶ್ಚಿತ್ಕಾಂತಾವಿರಹಗುರುಣಾ'—'ವಾಗರ್ಥಾವಿವ' ಎಂಬ ಕುಮಾರಸಂಭವ, ಮೇಘಸಂದೇಶ, ರಘುವಂಶಗಳ ಯಥಾಕ್ರಮವಾದ ಆರಂಭಶ್ಲೋಕಗಳನ್ನು ಹೇಳಿದನೆಂದು ಇನ್ನೊಂದು ಕಥಾಸರಣಿ.

ತಾನು ಮೇಧಾವಿಯಾಗುವುದಕ್ಕೆ ವಾಸಂತಿಯೇ ಕಾರಣವಾಗಿದ್ದುದರಿಂದ ಗೊಲ್ಲನು ಅವಳನ್ನು ತಾಯಿಯೆಂದೂ ಗುರುವೆಂದೂ ಭಾವಿಸಿ ಅದಕ್ಕನುಗುಣವಾಗಿ ವರ್ತಿಸತೊಡಗಿದನು. ಗಂಡನಿಗೆ ಮೇಧಾಶಕ್ತಿ ಬಂದುದಕ್ಕಾಗಿ ಸಂತೋಷವಾದರೂ ವಾಸಂತಿಗೆ ಅವನ ಈ ಭಾವನೆಯು ಸಕಾರಣವಾಗಿಯೇ ದೂಷ್ಯವಾಯಿತು. ಅವಳು ಕೋಪಗೊಂಡು ಸ್ತ್ರೀ ನಿಮಿತ್ತವಾಗಿ ನಿನಗೆ ಸಾವು ಬರಲೆಂದು ಶಪಿಸಿದಳು. ಶಾಪಾನುಗ್ರಹ ಸಾಮರ್ಥ್ಯವುಳ್ಳ ರಾಜಕುಮಾರಿಯ ಅನುಗ್ರಹವು ಫಲಿಸಿದಂತೆ ಶಾಪವೂ ಫಲಿಸಿತು. ಜಾನಕೀಹರಣದ ಲೇಖಕನಾದ ಕುಮಾರದಾಸನೆಂಬ ಕವಿಯು ಸಿಂಹಳದಲ್ಲಿ ಆಳುತ್ತಿದ್ದನು. ತನ್ನ ಕಾವ್ಯವನ್ನು ಕಾಳಿದಾಸನು ಬಹಳ ಶ್ಲಾಘಿಸಿದನೆಂದು ತಿಳಿಯಲು ದೊರೆಯು ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡನು. ಕವಿಗೂ ರಾಜಕವಿಗೂ ಪರಸ್ಪರ ಸ್ನೇಹ ಪ್ರೀತಿಗಳು ಬೆಳೆದು ಕಾಳಿದಾಸನು ಕೊಂಚಕಾಲ ಅಲ್ಲೇ ನಿಂತನು. ಅವರಿಬ್ಬರೂ ಒಬ್ಬಳೇ ಸ್ತ್ರೀಯಲ್ಲಿ ಅನುರಕ್ತರಾಗಿದ್ದರು. ದೊರೆಯು ಒಂದು ದಿನ ತನ್ನ ಪ್ರೇಯಸಿಯ ಕಿರುಮನೆಯ ಗೋಡೆಯಮೇಲೆ,

> ವನತಂಬರಾ ಮಲನೊತಲಾ ರೊನಲಾವನೀ ।
> ಮಲದೆ ದೆರಾ ಪಣಗಲವಾ ಗಿಯಸೇವನೀ ॥ [1]

ಎಂಬ ಒಗಟಿಯ ಶ್ಲೋಕವನ್ನು ಬರೆದು ಅದನ್ನು ಬಿಡಿಸಿದವರಿಗೆ ಬಹುಮಾನ ಕೊಡುವುದಾಗಿ ತಿಳಿಸಿದನು. ಇದಾದ ಸ್ವಲ್ಪ ಹೊತ್ತಿನೊಳಗೆ ಅಲ್ಲಿಗೆ ಹೋದ ಕಾಳಿದಾಸನು

> ಸಿಯತ್ ಅಂಬರಾ ಸಿಯತಂಬರಾ ಸಿಯಸೇವನೀ ।
> ಸಿಯಸಪುರಾ ನಿದಿನೊಲಬಾ ಉನ್‌ಸೇವನೀ ॥

ಎಂಬ ಉತ್ತರವನ್ನು ಕೆಳಗೆ ಕೆತ್ತಿದನು. ಮತ್ತೊಂದು ಬಾರಿ ದೊರೆಯು ಅಲ್ಲಿಗೆ ಬಂದಾಗ ಕಾಳಿದಾಸನ ಶ್ಲೋಕವು ಅವನ ಕಣ್ಣಿಗೆ ಬಿತ್ತು. ತಾನೇ

---

1. ಈ ಶ್ಲೋಕವು ಯಾವ ಭಾಷೆಯದೆಂಬ ಅಂಶದಲ್ಲಿ ಮೈಥಿಲರಿಗೂ ಬಂಗಾಳಿಗಳಿಗೂ, ಗುಜರಾತಿಗಳಿಗೂ, ಸಿಂಹಳದವರಿಗೂ ತಮ್ಮ ತಮ್ಮದೆಂದು ವಿವಾದವಿದೆ. S. C. Vidyabhūṣana—P. O. C. I.

ಬಹುಮಾನವನ್ನು ಸಂಪಾದಿಸಬೇಕೆಂಬ ದುರಾಸೆಯಿಂದ ವೇಶ್ಯೆಯು ಕವಿಯನ್ನು ಆ ವೇಳೆಗೆ ಕೊಲ್ಲಿಸಿದ್ದಳು. ಶ್ಲೋಕವು ತಾನೇ ರಚಿಸಿದುದೆಂಬ ಅವಳ ಮಾತನ್ನು ನಂಬದೆ ದೊರೆಯು ಅವಳ ಮನೆಯ ಆವರಣದಲ್ಲಿ ಹುಡುಕಿಸಲು ಹೂಳಲ್ಪಟ್ಟಿದ್ದ ಕವಿಯ ಶವವು ಸಿಕ್ಕಿತು. ಕವಿಶರೀರಕ್ಕೆ ದಹನಸಂಸ್ಕಾರವನ್ನು ನಡೆಸಿ ಶೋಕಪರವಶನಾದ ದೊರೆಯು ತಾನೂ ಚಿತಾಗ್ನಿಯಲ್ಲಿ ಶರೀರತ್ಯಾಗ ಮಾಡಿದನು.[1–2]

ಸಿಂಹಳದ ದಕ್ಷಿಣಭಾಗದ ಮಾಟರ ಪ್ರಾಂತದಲ್ಲಿ ಕಿರಿಂದೀನದಿಯು ಹಿಂದೂಸಾಗರವನ್ನು ಸೇರುವ ಪ್ರದೇಶದ ಹತ್ ಬೋಧಿವತ್ತ (ಸಪ್ತ ಬೋಧಿವಟ) ವೆಂಬ ಸ್ಥಳದಲ್ಲಿ (ಇನ್ನು ಕೆಲವರು ಅನುರಾಧಪುರವೆಂಬ ಸ್ಥಳದಲ್ಲೆನ್ನುವರು) ತೆಂಗು ಅಡಕೆ ಮರಗಳು ದಟ್ಟವಾಗಿ ಬೆಳೆದು ಬಳ್ಳಿಗಳಿಂದಲೂ ಹೂಗಿಡಗಳಿಂದಲೂ ಆವೃತವಾದ ಒಂದು ರಮ್ಯವಾದ ಪ್ರದೇಶವನ್ನು ತಿಶ್ಯಾರಾಮಾದ್ಯನೇಕ ಬೌದ್ಧಮಠಗಳ ಸನ್ಯಾಸಿಗಳೂ ಇತರರೂ ಕಾಳಿದಾಸನ ಶರೀರಸಂಸ್ಕಾರ ಮಾಡಿದ ಪ್ರದೇಶವೆಂದು ತೋರಿಸುವರು. ಪರಾಕ್ರಮಬಾಹುಚರಿತ, ಮಹಾವಂಶಾದಿ ಪ್ರಾಚೀನ ಗ್ರಂಥಗಳೂ ಈ ಕಥಾಸಂಪ್ರದಾಯವನ್ನು ಅನುಮೋದಿಸುವವು.[3]

---

1. 'ಪೆರುಕುಂಬಾಸಿರಿತ' (ಕ್ರಿ. ಶ. 16 ನೆ ಶತಮಾನ) ವೆಂಬ ಸಿಲೋನೀ ಗ್ರಂಥದ ಒಂದು ಶ್ಲೋಕದಲ್ಲಿ ಈ ಸಂಗತಿಯು ನಿರೂಪಿತವಾಗಿದೆ. cf. Nanda-raj Kar's Introduction to his edition of Jānakīharaṇa, p. iv.

2. ಇನ್ನೊಂದು ಕಥಾಸರಣಿಯಲ್ಲಿ ಕುಮಾರದಾಸನಿಗೆ ಪ್ರತಿಯಾಗಿ ಭೋಜನೂ ಹಿಂದೆ ಗಮನಿಸಿದ ಒಗಟಿಯ ಶ್ಲೋಕ ಮತ್ತು ಅದರ ಪ್ರತ್ಯುತ್ತರಗಳಿಗೆ ಬದಲಾಗಿ ಶೃಂಗಾರತಿಲಕದ "ಕುಸುಮೇ ಕುಸುಮೋತ್ಪತ್ತಿಃ ಶ್ರೂಯತೇ ನ ತು ದೃಶ್ಯತೇ । ಬಾಲೇ ತವ ಮುಖಾಂಭೋಜೇ ಕಥಮಿಂದೀವರದ್ವಯಂ" ಎಂಬ ಪೂರ್ವೋತ್ತರಾರ್ಧಗಳು ನಿರೂಪಿತವಾಗಿವೆ. Ind. Ant.—IV, p. 103. ff. Extract from Taranath's History of Buddhism also Rhys Davids, J. R. A. S.—New series. XX, p. 148 ff.

3. S. C. Vidyābhūṣaṇa—P. O. C. I. 'Funeral place of poet Kālidāsa—a query.'

ಈ ಕಥೆಗಳು ಕವಿಯು ಸದ್ವೃತ್ತನಾಗಿರಲಿಲ್ಲವೆಂದೂ ಶೃಂಗಾರ ಪ್ರಿಯನಾಗಿದ್ದನೆಂದೂ ಸೂಚಿಸುವುವು. ಇದಕ್ಕೆ ಪ್ರತಿಯಾಗಿ, ಕಾಳಿದಾಸನು ಶೃಂಗಾರಪ್ರಿಯನಾದರೂ ಸದ್ವೃತ್ತನಾಗಿದ್ದನೆಂದೂ ಹೇಳುವುದುಂಟು. ಡಾ|| ಭೌದಾಜಿಯವರು ಕಾಳಿದಾಸನ ಹೆಂಡತಿಯ ಹೆಸರು ಕಮಲೆಯೆಂದು ಹೇಳಿರುವರು.[1] ಕ್ರೀಡಾವಳೀ ಕಾವ್ಯವನ್ನು ರಚಿಸಿದ ಯೋಗಾನಂದನೆಂಬುವನು ತನ್ನನ್ನು "ಕಾಳಿದಾಸ ಪುತ್ರ" ನೆಂದು ಕರೆದುಕೊಂಡಿರುವನು.[2] ಪ್ರಸಕ್ತ ಕವಿಗೂ ಈ ಸಂಗತಿಗಳಿಗೂ ಇರುವ ಸಂಬಂಧವನ್ನು ನಿರ್ಧರಿಸಲು ಸಾಕಾದಷ್ಟು ಪ್ರಮಾಣಗಳಿಲ್ಲ.

ಕಾಳಿದಾಸನ ಕವಿತಾಚಾತುರ್ಯವನ್ನು ನಿದರ್ಶಿಸುವ ಅನೇಕ ಉಪಾಖ್ಯಾನಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ಮುಂದೆ ಸೂಚಿಸಲಾಗಿದೆ.

1. ಒಂದು ಕಾಲದಲ್ಲಿ ಕಾಳಿದಾಸ, ಭವಭೂತಿ, ದಂಡಿ ಇವರು ಮೂವರೂ ದಕ್ಷಿಣದೇಶದಲ್ಲಿರುನ ಶ್ರೀರಂಗಕ್ಷೇತ್ರಕ್ಕೆ ಯಾತ್ರಿಕರಾಗಿ ಬಂದರೆಂದೂ ಅಲ್ಲಿ ಪ್ರತಿಯೊಬ್ಬನೂ ತನ್ನ ಶೈಲಿಯನ್ನಾಶ್ರಯಿಸಿ

---

1. Bhau Daji—Literary Remains. ಶ್ರೀ ಕೆ. ಆರ್. ಪಿಷಾರೊಟಿಯವರು ಮಲೆಯಾಳಿ ಭಾಷೆಯ ವ್ಯಾಕರಣವಾದ ಲೀಲಾತಿಲಕವೆಂಬ ಸಂಸ್ಕೃತ ಗ್ರಂಥದಲ್ಲಿ ಬರುವ "ಸ್ವಸ್ರೇ ಪೂರ್ವಂ ಮಹಿತನೃಪತೇರ್ವಿಕ್ರಮಾದಿತ್ಯನಾಮ್ನಃ । ಪೊಕ್ಕಾಂ ಚಕ್ರೇ ತರುಣಜಲದಂ ಕಾಳಿದಾಸಃ ಕವೀಂದ್ರಃ ॥". ಎಂಬ ಶ್ಲೋಕಾರ್ಧದ ಆಧಾರದ ಮೇಲೆ "ಕವಿಯ ಹೆಂಡತಿಯು ಅವನ ಪೋಷಕನಾದ ವಿಕ್ರಮಾದಿತ್ಯನ ಸಹೋದರಿ. ಮೇಘಸಂದೇಶದ ನಾಯಿಕೆಯೂ ಇವಳೇ" ಎಂದು ವಾದಿಸಿರುವರು. ಕಾವ್ಯದ ಮಲೆಯಾಳಿ ವ್ಯಾಖ್ಯಾನವಾದ ವರವರ್ಣಿನಿಯೂ ಇದಕ್ಕೆ ಬೆಂಬಲ ಕೊಡುವುದು. ಇದು ಶೋತ್ರಪರಂಪರೆಯಲ್ಲಿದ್ದ ಒಂದು ಸಂಪ್ರದಾಯವನ್ನು ಒಳಗೊಂಡಿದೆ—I. H. Q. XVI. iv. p. 517.

2. Krishnamachariar, Cl. Skt Lit. p. 1042.

ದೇವರನ್ನು ಸ್ತುತಿಸಿ ಒಂದೊಂದು ಶ್ಲೋಕವನ್ನು ರಚಿಸಿದರೆಂದೂ ಹೇಳುವುದುಂಟು.

2. ಭವಭೂತಿಯು ಉತ್ತರರಾಮಚರಿತೆಯನ್ನು ಬರೆದ ಮೇಲೆ ಅದನ್ನು ಕಾಳಿದಾಸನಿಗೆ ತೋರಿಸುವುದಕ್ಕಾಗಿ ತೆಗೆದುಕೊಂಡು ಹೋದನಂತೆ. ಚತುರಂಗವಾಡುತ್ತಿದ್ದ ಕಾಳಿದಾಸನು (ತಾನು ಅದನ್ನು ಗಮನಿಸದೆ ಹೋದಂತೆ ಕಾಣಿಸಿದರೂ) ಭವಭೂತಿಯ ಕೈಯಲ್ಲಿ ಓದಿಸಿದನಂತೆ. ಕೊನೆಯಲ್ಲಿ ಅದರ 1–27ರಲ್ಲಿ 'ಏವ' ಎಂಬಲ್ಲಿ ಭವಭೂತಿಯು ಸೇರಿಸಿದ್ದ ಬಿಂದುವು ಹೆಚ್ಚೆಂದು ಹೇಳಿ ಶ್ಲೋಕವನ್ನು

ಕಿಮಪಿ ಕಿಮಪಿ ಮಂದಂ ಮಂದಮಾಸತ್ತಿಯೋಗಾ
ದವಿರಲಿತಕಪೋಲಂ ಜಲ್ಪತೋರಕ್ರಮೇ।
ಅಶಿಥಿಲಪರಿರಂಭವ್ಯಾಪೃತೈಕೈಕದೋಷ್ಣೋ—
ರವಿದಿತಗತಯಾಮಾ ರಾತ್ರಿರೇವ ವ್ಯರಂಸೀತ್ ॥

ಎಂದು ತಿದ್ದಿದನಂತೆ. 'ಸೀತಾರಾಮರು ಗಾಢಾಲಿಂಗನದಲ್ಲಿದ್ದು ಒಬ್ಬರ ಕೆನ್ನೆಯು ಇನ್ನೊಬ್ಬರ ಕೆನ್ನೆಗೆ ಅಂಟಿಕೊಂಡಂತಿದ್ದು ಮೆಲ್ಲಮೆಲ್ಲನೆ ಪಿಸುಗುಟ್ಟುತ್ತಾ 'ಹೀಗೆ' ರಾತ್ರಿಯನ್ನು ಕಳೆಯುತ್ತಿದ್ದೆವು ಎಂದು ಭವಭೂತಿಯು ಬರೆದುದಕ್ಕಿಂತ "ಹೀಗೆ ನಾವು ಸುಖಿಸುತ್ತಿರಲು ರಾತ್ರಿಯು ತಾನಾಗಿಯೇ ಕಳೆಯಿತೆಂಬ" ಸ್ವರಸವಾದ ಅರ್ಥವು ಬರುವಂತೆ ಕಾಳಿದಾಸನು ಅಲ್ಲಿ ಹೆಚ್ಚಾಗಿದ್ದ ಬಿಂದುವನ್ನು ತೆಗೆದುಹಾಕಿದನಂತೆ.[2]

---

1. Vāsudeva Ravaji Tullu. Ind. Ant. VII, 155
t.) ಇವರು ಇದನ್ನು ಮೈಸೂರಿನ ಪ್ರಸಿದ್ಧ ಸಾಹಿತಿಗಳಾಗಿದ್ದ ಪಂಡಿತ ಸಜ್ಜಯಾಚಾರ್ಯರ ಶಿಷ್ಯಪರಂಪರೆಯಲ್ಲಿ ಪ್ರಚಾರದಲ್ಲಿತ್ತೆಂದಿರುವರು.—

ಐಂದ್ರೀ ಪಾಟಲಯತ್ಯಲಕ್ತಕರುಚಾ ಮಂಕ್ಷು ತ್ವಿಷಾ ಮಂಕುರ್ಯೈಃ
ಆಶಾಂ ಮೌಲಿಕಿರೀಟರತ್ನನಿಕರೈಃ ಪಾಶಾಯುಧೀಯಾಮಪಿ।
ಪರ್ಯಂಕೇ ಪವಮಾನತೂಲಧರಿತೇ ಪಾರೇ ಕವೇರಾತ್ಮಜಂ
ಮುದ್ರಾ ಕಾಚನ ಮುಕ್ತಿದಾನಕುಶಲಾ ನಿದ್ರಾತಿ ಜಾಗರ್ತಿ ವಾ ॥

ಎಂಬುದೇ ಕಾಳಿದಾಸನಿಂದ ರಚಿತವಾದ ಶ್ಲೋಕವೆಂದು ಪ್ರತೀತಿಯಿದೆ.

2. P. V. Kane's Edn. of U. R. C. p. XII.

3. ಯಾವುದೋ ಒಂದು ಸಮಯದಲ್ಲಿ ಸರಸ್ವತಿಯು ಕಾಳಿದಾಸ ಭವಭೂತಿಗಳ ಕವಿತೆಗಳಲ್ಲಿರುವ ಗುಣತಾರತಮ್ಯವನ್ನು ಪರೀಕ್ಷಿಸುವುದಕ್ಕಾಗಿ ಎರಡನ್ನೂ ತ್ರಾಸಿನ ಎರಡು ಕಡೆಗಳಲ್ಲಿಟ್ಟಳಂತೆ. ಭವಭೂತಿಯ ಕಡೆ ತೂಕವು ಸ್ವಲ್ಪ ಕಡಿಮೆಯಾಗಿದ್ದುದನ್ನು ಕಂಡು ಸರಸ್ವತಿಯು ತಾನೇ ಕಿವಿಯಲ್ಲಿ ಧರಿಸಿದ್ದ ಕಲ್ಹಾರಮೊಗ್ಗಿನ ಮಕರಂದವನ್ನು ಆ ಕಡೆಗೆ ಸೇರಿಸಲು ಎರಡು ಪಕ್ಕಗಳೂ ಸಮವಾದವೆಂದು ಮತ್ತೊಂದು ಕಥೆ.[1]

4. ಭೋಜನದಾಶರಥಿ (ಇದು ತಮಿಳಿನ "ಚಾಪ್ಪಾಟ್ಟು ರಾಮನ್" ಎಂಬುದರ ಸಂಸ್ಕೃತ ರೂಪ) ಎಂಬ ದರಿದ್ರ ಬ್ರಾಹ್ಮಣನೊಬ್ಬನು ಕಾಳಿದಾಸನ ಸಹಾಯದಿಂದ ಭೋಜನ ಸಭೆಯಲ್ಲಿ ಹೆಚ್ಚಿನ ಬಹುಮಾನವನ್ನು ಪಡೆಯಬೇಕೆಂದು ಕವಿಯ ಬಳಿಗೆ ಬಂದನು. ರಾಜಸಮ್ಮುಖದಲ್ಲಿ ಹೇಳುವುದಕ್ಕಾಗಿ ಕವಿಯು ಅವನಿಗೆ "ತ್ರಿಪೀಡಾಪರಿಹಾರೋಸ್ತು" ಎಂಬ ಆಶೀರ್ವಾದ ವಾಕ್ಯವನ್ನು ಹೇಳಿಕೊಟ್ಟನು. ಬಹಳ ಶ್ರಮಪಟ್ಟು ಚೆನ್ನಾಗಿ ಗಟ್ಟಿಮಾಡಿಕೊಂಡಿದ್ದರೂ ತಾನು ಕ್ಲೇಶಪಡುತ್ತಿದ್ದುದರಿಂದ ರಾಜಸಮ್ಮುಖದಲ್ಲಿ ಬಾಯಿತಪ್ಪಿ "ತ್ರಿಪೀಡಾಸ್ತು ದಿನೇ ದಿನೇ" ಎಂದು ಬ್ರಾಹ್ಮಣನು ಉಚ್ಚರಿಸಿದನು. ಇದು ಅಮಂಗಳಕರವೆಂಬ ಅಳುಕು ಬರುವುದರಿಂದ ಕಾಳಿದಾಸನು ಅದರ ಅರ್ಥವನ್ನು

"ಆಸನೇ ವಿಪ್ರಪೀಡಾಸ್ತು ಸುತಪೀಡಾ ಚ ಭೋಜನೇ ।
ಶಯನೇ ದಾರಪೀಡಾಸ್ತು ತ್ರಿಪೀಡಾಸ್ತು ದಿನೇ ದಿನೇ ॥"

"ಧರ್ಮಾಸನದಲ್ಲಿ ಕುಳಿತು ರಾಜಕಾರ್ಯವನ್ನು ನಿರ್ವಹಿಸುವಾಗ ಬ್ರಾಹ್ಮಣರು ನಿನ್ನನ್ನು ಪೀಡಿಸಲಿ. (ಅಂದರೆ ವೃದ್ಧರೂ, ಸದ್ವೃತ್ತರೂ ಪಂಡಿತರೂ ಆದ ಬ್ರಾಹ್ಮಣರ ಉಪದೇಶದಂತೆ ನಡೆದುಕೊ), ಊಟಕ್ಕೆ ಕುಳಿತಾಗ ಮಕ್ಕಳು ನಿನ್ನನ್ನು ಪೀಡಿಸಲಿ (ಮಕ್ಕಳೊಡನೆ ಕುಳಿತು ಊಟಮಾಡುವ ಸುಯೋಗ ನಿನಗೆ ಲಭಿಸಲಿ.) ಮಲಗಿದಾಗ ಪತ್ನೀ

---

1. Z. D. M. G. XXXIX pp. 306—312. ಹೀಗೆ ಭವಭೂತಿ ಕಾಳಿದಾಸರು ಸಮಕಾಲೀನರೆಂದು ಭಾವಿಸುವ ಕಟ್ಟು ಕಥೆಗಳು ಇನ್ನೂ ಕೆಲವಿವೆ. Cf. Vasudeva Ravaji. Tullu—Ind. Ant. VII. p. 155 ff.

ಪೀಡೆಯಾಗಲಿ" ಎಂದು ನಿರ್ವಚನಮಾಡಿ ಪೀಡೆಗಳೂ ಮಂಗಳಕರವಾಗುವಂತೆ ಮಾಡಿದನು.

5. ಮತ್ತೊಂದು ಸಮಯದಲ್ಲಿ ಒಬ್ಬ ದಡ್ಡನಾದ ಬಡ ಬ್ರಾಹ್ಮಣನು ರಾಜಸನ್ಮಾನಕ್ಕಾಗಿ ಭೋಜನ ಆಸ್ಥಾನಕ್ಕೆ ಬಂದನು. ಅವನಿಗೆ "ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್" ಎಂಬ ವೇದವಾಕ್ಯವನ್ನು ಸ್ವರಶೂನ್ಯವಾಗಿ ಹೇಳಲು ಮಾತ್ರ ಅಭ್ಯಾಸವಿತ್ತು. ಅವನು ಅದನ್ನು ಹೇಳಿದೊಡನೆಯೇ ಇತರ ಪಂಡಿತರೆಲ್ಲರೂ ನಕ್ಕರು. ಕಾಳಿದಾಸನು ಮಾತ್ರ ಆದು ವೇದವಾಕ್ಯವಲ್ಲ ಅನುಷ್ಟುಭ್ ವೃತ್ತದ ಲೌಕಿಕ ಶ್ಲೋಕಾರ್ಧವೆಂದು ಹೇಳಿ "ಚಲಿತಶ್ಚಕಿತಶ್ಛನ್ನಸ್ತವ ಸೈನ್ಯೇ ಪ್ರಧಾವತಿ" ಎಂಬ ಉತ್ತರಾರ್ಧವನ್ನು ಜೋಡಿಸಿದನು. "ನಿನ್ನ ಸೈನ್ಯವು ಸಂಚರಿಸುತ್ತಿದ್ದಾಗ ಆದಿಶೇಷನು ಭಾರವನ್ನು ತಡೆಯಲಾರದೆ ಹೆಣಗಿದನು; ಇಂದ್ರನು ಗಾಬರಿಗೊಂಡನು; ಆಗ ಎದ್ದ ಧೂಳು ಸೂರ್ಯನನ್ನು ಕವಿದಿತು" ಎಂಬ ರಮ್ಯವಾದ ಪ್ರಶಂಸಾರೂಪವಾದ ಅರ್ಥವನ್ನು ತನ್ನ ಕುಶಾಗ್ರಬುದ್ಧಿಯಿಂದ ಹೊರಗೆಡಹಿದನು.

6. ಇನ್ನೊಂದು ಬಾರಿ ನಾಲ್ವರು 'ಪಂಡಿತಪುತ್ರ'ರು ಕಾಳಿದಾಸನ ಸಹಾಯದಿಂದ ರಾಜಪುರಸ್ಕಾರವನ್ನು ಪಡೆಯಲು ಬಂದರು. ಮೊದಲನೆಯವನಿಗೆ ಅವನ ತಂದೆಯು ನಿತ್ಯವೂ ರಾಮಾಯಣ ಪಾರಾಯಣವನ್ನು ಮಾಡುತ್ತಿದ್ದುದನ್ನು ಕೇಳಿದ ಸಂಸ್ಕಾರದಿಂದ "ಕೂಜನ್ತಂ ರಾಮ ರಾಮೇತಿ" ಎಂದು ಮಾತ್ರ ಬರುತ್ತಿದ್ದಿತು. ಪೌರಾಣಿಕನ ಮಗನಾದ ಎರಡನೆಯವನಿಗೆ ಸಂಸ್ಕಾರ ಬಲದಿಂದ "ಶ್ರೋತ್ರಿಯಾಯ ಕುಟುಂಬಿನೇ" ಎಂಬುದು ಮಾತ್ರ ಬರುತ್ತಿದ್ದಿತು. ಇದರಂತೆ ಹರಿವಂಶಪಾಠಕನ ಮಗನಾದ ಮೂರನೆಯವನು "ಉವಾಚ ವಚನಂ ಶ್ರೀಮಾನ್" ಎಂಬುವುದನ್ನು ಮಾತ್ರ ಕಲಿತಿದ್ದನು. ನಾಲ್ಕನೆಯವನಿಗೆ ನಿತ್ಯವೂ ತನ್ನ ಹಿರಿಯರು ಕರ್ಮಾಚರಣವೇಳೆಯಲ್ಲಿ ಹೇಳುತ್ತಿದ್ದ "ಪಿತೄಣಾಂ ದತ್ತ ಮಕ್ಷಯಂ" ಎಂದು ಹೇಳುವಷ್ಟು ಮಾತ್ರ ಪಾಂಡಿತ್ಯವಿತ್ತು. ಈ ನಾಲ್ವರೂ ಮಾರನೆಯ ದಿನ ತಮತಮಗೆ ಬರುತ್ತಿದ್ದ ಶ್ಲೋಕಪಾದಗಳನ್ನು ಹೇಳಿದರು. ಅವನ್ನೆಲ್ಲ ಒಟ್ಟುಗೂಡಿಸಿದಾಗ ಛಂದೋಬದ್ಧವಾದ ಶ್ಲೋಕವಾದರೂ ಸ್ವರಸವಾದ

ಅರ್ಥವಾವುದೂ ಸ್ಫುರಿಸಲಿಲ್ಲ. ಆಗ ಕಾಳಿದಾಸನು ಅದನ್ನು ಸದರ್ಥ ಬರುವಂತೆ ಮುಂದೆ ಹೇಳುವ ರೀತಿಯಲ್ಲಿ ವ್ಯಾಖ್ಯಾನ ಮಾಡಿ ಅವರಿಗೆ ಬಹುಮಾನ ಬರುವಂತೆ ಮಾಡಿದನೆಂದು ಮತ್ತೊಂದು ಕಥೆ. "ರಾಮ ರಾಮೇತಿ ಕೂಜನ್ತಂ (ನಾರದಂ) ಶ್ರೀಮಾನ್ (ಬ್ರಹ್ಮಾ) ಇದಂ ವಚನ ಮುವಾಚ - ಪಿತ್ಯಣಾಮುದ್ದಿಶೇನ ಶ್ರೋತ್ರಿಯಾಯ ಕುಟುಂಬಿನೇ ಯದ್ದತ್ತಂ ತದಕ್ಷಯಂ". ಈ ರೀತಿ ಅನ್ವಯದಿಂದ "ರಾಮನಾಮವನ್ನು ನಿರಂತರವೂ ಉಚ್ಚರಿಸುತ್ತಿದ್ದ ನಾರದರಿಗೆ ಬ್ರಹ್ಮನು 'ಪಿತೃಗಳನ್ನುದ್ದೇಶಿಸಿ ಕುಟುಂಬಿಯಾದ ಶ್ರೋತ್ರಿಯನಿಗೆ ಕೊಟ್ಟುದು ಅಕ್ಷಯವಾಗುವುದೆಂ'ದು ಹೇಳಿದನು" ಎಂಬ ಅರ್ಥವು ಹೊರಡುವುದು.

7. ಕುಂತಳೇಶ್ವರನ ಆಸ್ಥಾನಕ್ಕೆ ವಿಕ್ರಮಾದಿತ್ಯನ ರಾಯಭಾರಿಯಾಗಿ ಕಾಳಿದಾಸನು ಹೋಗಿದ್ದನಂತೆ. ಅಲ್ಲಿ ದೊರೆಯು ಕಾಳಿದಾಸನನ್ನು ಉಚಿತ ಮರ್ಯಾದೆಯಿಂದ ಗೌರವಿಸಿದರೂ ಅವನು ನೆಲದಮೇಲೆಯೇ ಕುಳಿತನು. ಕುಂತಳೇಶ್ವರನು ಅದಕ್ಕೆ ಅಸಮಾಧಾನಪಡಲು ಕಾಳಿದಾಸನು ವಿನೋದವಾಗಿ,

"ಇಹ ನಿವಸತಿ ಮೇರುಶ್ಶೇಖರಃ ಕ್ಷ್ಮಾಧರಾಣಾ—<br>
ಮಿಹ ವಿನಿಹಿತಭಾರಾಸ್ಸಾಗರಾಸ್ಸಪ್ತ ಚಾನ್ಯೇ ।<br>
ಇದಮಹಿಪತಿಭೋಗಸ್ತಂಭವಿಭ್ರಾಜಮಾನಂ<br>
ಧರಣಿತಲಮಿಹೈವ ಸ್ಥಾನಮಸ್ಮದ್ವಿಧಾನಾಮ್ ॥

"ಪರ್ವತಶ್ರೇಷ್ಠನಾದ ಮೇರುವು ಇಲ್ಲಿರುವುದು; ಏಳು ಸಮುದ್ರಗಳೂ ಇಲ್ಲೇ ತಮ್ಮ ಭಾರವನ್ನು ಇಳುಕಿರುವುವು; ಈ ಭೂಮಿಯು ಆದಿಶೇಷನ ಹೆಡೆಗಳನ್ನಾಶ್ರಯಿಸಿರುವುದು. ನಮ್ಮಂತಹವರಿಗೆ ಇದೇ ಸ್ಥಾನವು" ಎಂದು ಪ್ರತ್ಯುತ್ತರ ಕೊಟ್ಟನು. ಹೀಗೆ ಸ್ವಾಮಿಕಾರ್ಯವನ್ನು ನೆರವೇರಿಸಿ ಕಾಳಿದಾಸನು ರಾಜಧಾನಿಗೆ ಹಿಂದಿರುಗಲು ವಿಕ್ರಮಾದಿತ್ಯನು ಅವನನ್ನು ಕುಂತೇಶ್ವರನು ಏನು ಮಾಡುತ್ತಿರುವನೆಂದು ಕೇಳಿದನು. ಕಾಳಿದಾಸನು

ಅಸಕಲಹಸಿತತ್ವಾತ್ ಕ್ಷಾಲಿತಾನೀವ ಕಾಂತ್ಯಾ<br>
ಮುಕುಲಿತನಯನತ್ವಾದ್ವ್ಯಕ್ತಕರ್ಣೋತ್ಪಲಾನಿ ।

ಪಿಬತಿ ಮಧುಸುಗಂಧೀನ್ಯಾನನಾನಿ ಪ್ರಿಯಾಣಾಂ
ತ್ವಯಿ ವಿನಿಹಿತಭಾರಃ ಕುಂತಲಾನಾಮಧೀಶಃ ||

"ಕುಂತಲೇಶ್ವರನು ರಾಜಕೀಯ ಕಾರ್ಯಭಾರವನ್ನು ನಿನಗೆ ವಹಿಸಿಬಿಟ್ಟು ಮುಗುಳ್ನಗೆಯಿಂದಲೂ ಕಿವಿಗಳಲ್ಲಿ ಧರಿಸಿರುವ ನೈದಿಲೆಗಳಿಂದಲೂ ಶೋಭಿಸುತ್ತಿರುವ ತನ್ನ ಪ್ರಿಯೆಯರೊಡನೆ ವಿಹರಿಸುತ್ತಿರುವನು" ಎಂದು ಉತ್ತರವನ್ನಿತ್ತನು.

ಇಂತಹ ಇನ್ನೂ ಅನೇಕ ಉಪಾಖ್ಯಾನಗಳನ್ನು ಭೋಜಪ್ರಬಂಧ ದಿಂದ ಆರಿಸಿಕೊಳ್ಳಬಹುದು. ಆದರೆ ಅವುಗಳಾಗಲಿ ಮೇಲೆಕೊಟ್ಟಿರುವ ಈ ಕಥೆಗಳಾಗಲಿ ಪ್ರಾಮಾಣಿಕವೆಂದು ಹೇಳಲು ಆಧಾರ ಸಾಲದು. ಒಟ್ಟಿನಲ್ಲಿ ಕವಿಯ ಗ್ರಂಥಗಳ ಆಧಾರದ ಮೇಲೆ ಅವನ ವ್ಯಕ್ತಿತ್ವದ ಕೆಲವು ಸಂಗತಿಗಳನ್ನು ಊಹಿಸಬಹುದಾದರೆ ಇಷ್ಟುಮಾತ್ರ ಹೇಳಲು ಸಾಧ್ಯ. ಇವನು ಹಿಂದೂಧರ್ಮದ ಅತಿ ಸೂಕ್ಷ್ಮಾಂಶಗಳನ್ನೂ ಬಹಳ ಚೆನ್ನಾಗಿ ತಿಳಿದು ವೇದಶಾಸ್ತ್ರಾದಿಗಳ ವಿಧಿವತ್ತಾದ ಪಠನ ಪಾಠನಕ್ರಮವನ್ನು ವಿವರವಾಗಿ ಚಿತ್ರಿಸಿರುವುದರಿಂದ, ಬ್ರಾಹ್ಮಣನೇ ಆಗಿದ್ದಿರಬೇಕು. ದಾರಿದ್ರ್ಯ ಕ್ಲೇಶಗಳನ್ನು ಕುರಿತು ಎಲ್ಲೂ ಗೋಳಿಡದಿರುವುದನ್ನೂ ರಾಜಾಶ್ರಯ ವಿತ್ತೆಂಬ ಸಾಂಪ್ರದಾಯಿಕ ಕಥೆಯನ್ನೂ ಸಮನ್ವಯ ಮಾಡುವಲ್ಲಿ ಕವಿಯು ಜೀವನಕ್ಕೆ ಕ್ಲೇಶಪಟ್ಟಿರಲಾರನೆಂಬುದೂ ಸುಖಜೀವಿಯಾಗಿದ್ದನೆಂಬುದೂ ವ್ಯಕ್ತವಾಗುವುದು. ಇವನ ಮೇಘಸಂದೇಶವು ತನ್ನ ಜೀವನದ ಒಂದು ಸಂದರ್ಭವನ್ನೇ ಚಿತ್ರಿಸುವುದೆಂಬ ವಿಮರ್ಶಕರ ಅಭಿಪ್ರಾಯದ ದೃಷ್ಟಿ ಯಿಂದ ಇವನಿಗೆ ರೂಪವತಿಯೂ ಗುಣವತಿಯೂ ಆದ ಹೆಂಡತಿಯಿದ್ದಿರ ಬೇಕೆಂದು ಊಹಿಸಬಹುದು. ಭರತ ಮತ್ತು ಆಯುಃಕುಮಾರರ ವಿಶದ ವಾದ ವರ್ಣನೆಗಳೂ ಆ ಸನ್ನಿವೇಶಗಳಲ್ಲಿ ಬರುವ ಭಾವಗಳೂ ಬಹುಶಃ ಕವಿಯು ಸಂತಾನಸೌಖ್ಯವನ್ನೂ ಪಡೆದಿದ್ದಿರಬಹುದೆಂದು ಸೂಚಿಸುವುವು. ಇವನಿಗೆ ವೇದಗಳಲ್ಲಿ ಬಹಳ ಭಕ್ತಿಯಿತ್ತು. ಆದರೂ ಇವನ ಗ್ರಂಥಗಳಲ್ಲಿ ಅಸಾಧಾರಣವಾದ ವೈದಿಕತ್ವ ಚಿಹ್ನೆಯೇನೂ ಕಾಣುವುದಿಲ್ಲ. ಉಪ ನಿಷತ್ತುಗಳು, ಭಗವದ್ಗೀತೆ, ವೇದಾಂತ ಸೂತ್ರಗಳು, ಮನುಧರ್ಮಶಾಸ್ತ್ರ, ವಾಲ್ಮೀಕಿ ರಾಮಾಯಣ, ಪುರಾಣಗಳು, ಭಾಸಾದಿ ಪ್ರಾಚೀನ ಕವಿಗಳ

ಗ್ರಂಥಗಳು ಎಲ್ಲವೂ ಕಾಳಿದಾಸನಿಗೆ ಚೆನ್ನಾಗಿ ಪರಿಚಿತವಾಗಿದ್ದುವೆಂಬು ದನ್ನು ಶ್ರೀ. ಕೆ. ಎಸ್. ರಾಮಸ್ವಾಮಿಶಾಸ್ತ್ರಿಗಳವರು ವಿವರಿಸಿರುವರು.[1]

---

## ಕಾಳಿದಾಸನ ಜನ್ಮಭೂಮಿ.

ಹಿಂದೆ ನಿರೂಪಿಸಿದ ಉಪಾಖ್ಯಾನಗಳಲ್ಲಿ ಎಲ್ಲಿಯೂ ಕವಿಯ ತಾಯಿ ತಂದೆಗಳು, ಹೆಂಡತಿ ಮಕ್ಕಳು, ಮನೆ ಮಠ, ಮುಂತಾದ ವಿಷಯಗಳನ್ನು ನಿಶ್ಚಯಿಸುವುದಕ್ಕೆ ಬೇಕಾಗುವ ಆಧಾರಭೂತವಾದ ಸಂಗತಿಗಳು ಸಿಕ್ಕು ವುದಿಲ್ಲ. ಆದರೂ ಅವನ ಗ್ರಂಥಗಳಲ್ಲಡಗಿರುವ ಆಯಾಪ್ರದೇಶಗಳ ಪ್ರಕೃತಿ ವರ್ಣನೆಗಳಿಂದಲೂ ಅಲ್ಲಲ್ಲಿ ಬೆಳೆಯುವ ಫಲಸಸ್ಯಾದಿಗಳಿಂದಲೂ ಊಹಿಸ ಬಹುದಾದ ಕವಿಯ ಆಸಕ್ತಿಯನ್ನು ಮಾತ್ರವೋ ಅಥವಾ ಉಪಾಖ್ಯಾನ ಗಳಲ್ಲಿ ಬರುವ ವಿವರಗಳನ್ನು ಬಿಟ್ಟು ಹೆಗ್ಗುರುತುಗಳನ್ನು ಮಾತ್ರವೋ ಅಥವಾ ಸಂದರ್ಭಾನುಸಾರವಾಗಿ ಇವೆರಡನ್ನೂ ಕೂಡ ಆಶ್ರಯಿಸಿ ಕವಿಯ ಜನ್ಮಭೂಮಿಯನ್ನು ನಿರ್ಣಯಿಸುವುದಕ್ಕೆ ವಿಮರ್ಶಕರು ಪ್ರಯತ್ನ ಪಟ್ಟಿರುವರು. ಗ್ರಂಥಗಳಲ್ಲಿ ಸ್ಪಷ್ಟವಾದ ಯಾವ ಚಿಹ್ನೆಯೂ ಸಿಕ್ಕದಿರುವು ದರಿಂದಲೂ ಕವಿಯು ತನ್ನ ವಿಶ್ವವಿಶಾಲವಾದ ಪ್ರೀತಿಯಿಂದ ಯಾವ ಪ್ರದೇಶದಲ್ಲೂ ಹೆಚ್ಚು ಆಸಕ್ತಿಯನ್ನು ತೋರಿಸದಿರುವುದರಿಂದಲೂ ಈ ಕ್ರಮವು ಅಷ್ಟು ಫಲಕಾರಿಯೆನ್ನುವಂತಿಲ್ಲ. ಹಾಗೂ ಅವರ ಯುಕ್ತಿ ಚಾತುರ್ಯವನ್ನು ಮಾತ್ರ ಗಮನಿಸಬೇಕಾಗಿದೆ.

ಮೇಲೆ ಹೇಳಿರುವಂತೆ ಕಾಳಿದಾಸವಿಷಯಕವಾದ ಉಪಾಖ್ಯಾನ ಗಳಲ್ಲಿ ಬರುವ ಹೆಗ್ಗುರುತುಗಳನ್ನಾಶ್ರಯಿಸಿ ಪ್ರತಿಪಾದಿಸಲ್ಪಟ್ಟಿರುವ ಮತ ಗಳಲ್ಲಿ ಎರಡು ಮಾತ್ರ ಮುಖ್ಯವಾದುವು.

---

1. K. S. Ramaswami Sastri.—Kālidāsa, his period, personality and poetry, pp. 18—29. Also Prof. A. R. Krishnasastri, Q.J.M.S. IX pp. 59—62.

1. ಭೋಜಪ್ರಬಂಧದ ಉಪಾಖ್ಯಾನಗಳ ಆಧಾರದ ಮೇಲೆ, ಕಾಳಿದಾಸನು ಧಾರಾನಗರದ ಭೋಜರಾಜನ ಆಸ್ಥಾನಕವಿಯಾಗಿದ್ದನೆಂದೂ, ಧಾರಾನಗರವೇ ಇವನ ಜನ್ಮಭೂಮಿಯೆಂದೂ ಹೇಳುವುದುಂಟು ಆದರೆ ಕ್ರಿ. ಶ. 11ನೆ ಶತಮಾನದ ಪರಮಾರ ಸಂತತಿಯ ಭೋಜನ ಆಶ್ರಯದಲ್ಲಿ ಕಾಳಿದಾಸನಿದ್ದನೆಂಬುದು ಸರ್ವಥಾ ಅಸಂಭಾವಿತ. ಭೋಜನ ಆಸ್ಥಾನದಲ್ಲಿ ಪ್ರಮುಖನಾಗಿದ್ದ ಪದ್ಮಗುಪ್ತನೆಂಬ ಕವಿಗೆ ಪರಿಮಳಕಾಳಿದಾಸನೆಂಬ ಹೆಸರಿದ್ದುದು ಈ ಭ್ರಾಂತಿಗೆ ಮೂಲವೆನ್ನಬಹುದು [1] ಆದರೆ ಕಾಳಿದಾಸನ ಸಮಕಾಲಿಕನಾದ ಭೋಜನೆಂಬ ಒಬ್ಬ ದೊರೆಯಿದ್ದಿರಬೇಕೆಂಬುದು ರಘುವಂಶದ (VII, 29) ಶ್ಲೋಕದಿಂದ ಸೂಚಿತವಾಗುವುದು.[2] ಕಾಳಿದಾಸನು ಇವನ ಆಶ್ರಯದಲ್ಲಿದ್ದನೆಂದು ಸಮರ್ಥಿಸುವ ಸಾಂಪ್ರದಾಯಿಕ ಕಥೆಗಳಾವುವೂ ಸಿಕ್ಕಿಲ್ಲ. ಇದನ್ನೊಪ್ಪಿದರೂ ಧಾರಾನಗರವೇ ಕವಿಯ ಜನ್ಮಭೂಮಿಯೆಂಬುದು ಸಿದ್ಧವಾಗುವುದಿಲ್ಲ. ಕವಿಯು ತನ್ನ ಗ್ರಂಥಗಳಲ್ಲೆಲ್ಲೂ ಆ ಪಟ್ಟಣದ ಹೆಸರನ್ನೇ ಎತ್ತಿಲ್ಲ. ಜನ್ಮಭೂಮಿಯೆಂದರೆ ಯಾರಿಗಾದರೂ ಹೆಚ್ಚು ಮಮತೆಯಿರುವುದು ಸ್ವಾಭಾವಿಕವಾದ್ದರಿಂದ ಕಥಾವಸ್ತುವಿನಲ್ಲಿ ಅವಕಾಶ ಸಿಕ್ಕಿದಾಗ (ಅಥವಾ ಅವಕಾಶವನ್ನು ಕಲ್ಪಿಸಿಕೊಂಡಾದರೂ) ಹೆಚ್ಚು ಆಸಕ್ತಿ ಉತ್ಸಾಹಗಳಿಂದ ಅದನ್ನು ವರ್ಣಿಸುವುದು ವಾಡಿಕೆ. ಧಾರಾನಗರಕ್ಕೂ ಈ ಒರೆಗಲ್ಲಿಗೂ ಬಹಳ ದೂರ.

2. (a) ಕಾಳಿದಾಸನಿಗೂ ವಿಕ್ರಮಾದಿತ್ಯನಿಗೂ ಪೋಷ್ಯಪೋಷಕ ಭಾವವನ್ನು ಕಲ್ಪಿಸುವುದೂ ಹಿಂದಿನಿಂದ ವಾಡಿಕೆಯಲ್ಲಿದೆ. ಕ್ರಿ. ಶ. 14ನೆ ಶತಮಾನದ ಜ್ಯೋತಿರ್ವಿದಾಭರಣದ

---

1. ಭೋಜಪ್ರಬಂಧದ ಉಪಾಖ್ಯಾನಗಳೆಲ್ಲ ಈ ಕವಿಯ ವಿಷಯವಾಗಿಯೇ ಇರಬೇಕೆನ್ನುವುದು ಸ್ಪಷ್ಟವಾಗಿದೆ. ಪ್ರಕೃತ ಕವಿಯ ಜೀವನಚರಿತ್ರೆಗೆ ಈ ಉಪಾಖ್ಯಾನಗಳು ಸಹಾಯಕವಾದ ಸಂಗತಿಗಳನ್ನು ಒದಗಿಸುವುದಿಲ್ಲವೆಂಬುದೂ ದೃಢಪಡುತ್ತದೆ.

2. Hillebrandt—Kālidāsa. p. 10.

ಧನ್ವಂತರಿಃ ಕ್ಷಪಣಕಾಮರಸಿಂಹಶಂಕು–
ವೇತಾಲಭಟ್ಟಘಟಕರ್ಪರಕಾಲಿದಾಸಾಃ ।
ಖ್ಯಾತೋ ವರಾಹಮಿಹಿರೋ ನೃಪತೇಸ್ಸಭಾಯಾಂ
ರತ್ನಾನಿ ವೈ ವರರುಚಿರ್ನವ ವಿಕ್ರಮಸ್ಯ ॥

ಎಂಬ ಶ್ಲೋಕವೂ ಅಭಿನಂದನ ರಾಮಚರಿತೆಯಲ್ಲಿ ಬರುವ "ಖ್ಯಾತಿಂ ಕಾಮಪಿ ಕಾಳಿದಾಸಕವಯೋ ನೀತಾಃ ಶಕಾರಾತಿನಾ"[1] ಎಂಬ ಶ್ಲೋಕವೂ ಈ ಸಂಪ್ರದಾಯವನ್ನು ಪೋಷಿಸುವುವು. 'ವಿಕ್ರಮಚರಿತೆ'ಯ ಒಂದು ಪಾಠವನ್ನು ಕಾಳಿದಾಸನೇ ರಚಿಸಿದನೆಂದೂ ಹೇಳುವುದುಂಟು. ಆದರೆ ಪೋಷಕನಾದ ದೊರೆಯು ಯಾವ ವಿಕ್ರಮಾದಿತ್ಯನೆಂಬ ವಿಚಾರದಲ್ಲಿ ಬಹಳ ವಿವಾದವಿದೆ. ಅದನ್ನೆಲ್ಲ ಕಾಳಿದಾಸನ ಕಾಲವನ್ನು ಕುರಿತ ಅಧ್ಯಾಯದಲ್ಲಿ ವಿವರಿಸಲಾಗುವುದು. ಪ್ರಕೃತ ಕವಿಯು ಮಾಳವಿಕಾಗ್ನಿಮಿತ್ರವೂ, ವಿಕ್ರಮೋರ್ವಶೀಯವೂ ವಿದರ್ಭಾಧಿಪತಿಯನ್ನೂ ಕುಂತಲ ದೇಶದಲ್ಲಿ ಗೋದಾವರೀತೀರದಲ್ಲಿ ಆ ರಾಜ್ಯದ ರಾಜಧಾನಿಯಾದ ಪ್ರತಿಷ್ಠಾನದಲ್ಲಿದ್ದ ವಿಕ್ರಮನೆಂಬ ದೊರೆಯನ್ನೂ ಉಲ್ಲೇಖಿಸುತ್ತವೆಂದು ಹೇಳಿ, ಕಾಳಿದಾಸನು ಇವೆರಡರಲ್ಲಿ ಯಾವ ಆಸ್ಥಾನಕ್ಕೆ ಸೇರಿದವನೆಂದರೂ ಆಂಧ್ರ ದೇಶೀಯನೇ ಆಗಿದ್ದಿರಬೇಕೆಂದು ಮತ್ತೆ ಕೆಲವರ ಅಭಿಪ್ರಾಯ.[2] ವಿಕ್ರಮಾದಿತ್ಯನ ವಿಚಾರವಾಗಿ ಚರಿತ್ರ ಸಂಶೋಧಕರ ಅಭಿಪ್ರಾಯವನ್ನೂ ಇಲ್ಲಿ ಗಮನಿಸಬಹುದು. "ಸುಮಾರು ಕ್ರಿ. ಪೂ. 90 ರ ವೇಳೆಗೆ ಉಜ್ಜಯಿನಿಯ ನೆರೆಹೊರೆಯಲ್ಲಿ ಉತ್ತರಕ್ಕೆ ಯವನರೂ ಪೂರ್ವಕ್ಕೆ ಶುಂಗರೂ ದಕ್ಷಿಣಕ್ಕೆ ಪ್ರತಿಷ್ಠಾನದ ಆಂಧ್ರರೂ ಪ್ರಬಲರಾಗಿದ್ದರು. ಉಜ್ಜಯಿನಿಯು ಬಹುಶಃ ಆಂಧ್ರರ ರಾಜ್ಯಕ್ಕೆ ಸೇರಿತ್ತು. ಕೆಲವು ವರ್ಷಗಳ ಮೇಲೆ (ಸುಮಾರು ಕ್ರಿ. ಪೂ. 75) ಶಕರು ಸಿಂಧೂ ನದಿಯ ಪ್ರಾಂತವನ್ನು ವಶಪಡಿಸಿಕೊಂಡಿದ್ದರು. ಉಜ್ಜಯಿನಿಯ ದೊರೆಯಾದ

---

1. Krishnamachariar.—Cl. Skt. Lit. p. 112

2. P. Govindacharya Swamin.—"Kālidāsa belongs to Andhradesa" p. 26, Summaries of papers—VIII, All India Oriental Conference.

ಗರ್ದಭಿಲ್ಲನು ಕ್ರೂರಿಯೂ ಪ್ರಜಾಹಿಂಸಕನೂ ಆಗಿದ್ದುದರಿಂದ ಇವನ ಕಿರುಕುಳವನ್ನು ತಪ್ಪಿಸಿಕೊಳ್ಳಲು ಪ್ರಜೆಗಳು ಶಕರ ಸಹಾಯವನ್ನು ಕೋರಿರಬೇಕು. ಈ ಕಾರಣಗಳಿಂದ ಶಕರ ಕೈವಶವಾದ ರಾಜ್ಯವನ್ನೇ ಗರ್ದಭಿಲ್ಲನ ಮಗನಾದ ವಿಕ್ರಮಾದಿತ್ಯನು ಶಕರನ್ನು ಸೋಲಿಸಿ ಸಂಪಾದಿಸಿ ಕೊಂಡಿರಬೇಕು."[1] ಕವಿಯು ತನ್ನ ನಾಟಕದಲ್ಲಿ ಉಲ್ಲೇಖಿಸಿರುವ ದೊರೆಯು ಇವನೇ ಆದಲ್ಲಿ, ಕಾಳಿದಾಸನು ಆಂಧ್ರದೇಶೀಯನೆಂಬ ವಾದಕ್ಕೆ ಇತಿಹಾಸದಿಂದ ತಕ್ಕಮಟ್ಟಿನ ಬೆಂಬಲವು ದೊರಕುವುದು.

2. (b) ವಿದರ್ಭಾಧಿಪತಿಯನ್ನು ಉಲ್ಲೇಖಿಸುವುದನ್ನಾಶ್ರಯಿಸಿ ವಿದರ್ಭವೇ ಕಾಳಿದಾಸನ ಜನ್ಮಭೂಮಿಯೆಂದು ಕೆಲವರು ವಾದಿಸುವರು.[2] ಪ್ರಸಾದ ಗುಣಕ್ಕೆ ಉದಾಹರಣೆಯಾಗಿ ದಂಡಿಯು ಕಾಳಿದಾಸನ "ಲಕ್ಷ್ಮ ಲಕ್ಷ್ಮೀಂ ತನೋತಿ" ಎಂಬುದನ್ನು ಕೊಟ್ಟಿರುವನು, ಮತ್ತು ವೈದರ್ಭೀ ಗೌಡೀಯಾ ಮುಂತಾದ ಹೆಸರುಗಳು ಆಯಾ ಮಾರ್ಗಾನುಸಾರಿಗಳಾದ ಕವಿಗಳ ದೇಶಕ್ಕನುಸಾರವಾಗಿ ಬಂದವೆಂದು ಹೇಳಿರುವನು.[3] ವಾಮನನೂ ಕೂಡ ಇದನ್ನೇ ಪರಿಪೋಷಿಸಿ "ಗಾಹನ್ತಾಂ ಮಹಿಷಾಃ":—ಇತ್ಯಾದಿ ಶಾಕುಂತಲ ಶ್ಲೋಕವನ್ನು ಉದಾಹರಿಸಿರುವನು. ಇದರಿಂದ ದಂಡಿ ವಾಮನರಿಬ್ಬರೂ ಕಾಳಿದಾಸನು ವಿದರ್ಭದೇಶದವನೆಂದು ಭಾವಿಸಿದ್ದರೆಂದು ಇವರ ಅಭಿಪ್ರಾಯ.[4]

---

1. Cambridge History of India Vol. I, p. 532-3; K. C. Chattopadhyāya. Allah. Univ. St. Vol. II.

2. ಪಂಡಿತ ಲಕ್ಷ್ಮೀಧರ್ ಕಲ್ಲರವರು ಈ ವಾದವು ಮ|| ಮ|| ಹರನಾರಾಯಣ ವಿದ್ಯಾಸಾಗರರವರಿಂದ ಸೂಚಿತವಾಯಿತೆಂದು ಹೇಳಿರುವರು.

The birth place of Kālidāsa, p. 59, also N. G. Mazumdar. Ind. Ant. XLVII, p. 264

3. ಕಾವ್ಯಾದರ್ಶನ ಮೊದಲನೆಯ ಪರಿಚ್ಛೇದ. 44, 46, 54, 60 ಮತ್ತು 80 ನೇ ಶ್ಲೋಕಗಳು. ಕಾವ್ಯಾದರ್ಶದ ಹೃದಯಂಗಮಾ ವ್ಯಾಖ್ಯಾನವೂ ಇದನ್ನೇ ಅನುಮೋದಿಸುವುದು.

4. "ವೈದರ್ಭೀರೀತಿ ಸಂದರ್ಭೇ" (ಅನುಬಂಧ I) 'ಲಿಪ್ತಾ ಮಧುದ್ರವೇಣಾಸನ್,'—'ವಾಲ್ಮೀಕೇರಜನಿ'—ಎಂಬ ಸಾಂಪ್ರದಾಯಿಕ ಶ್ಲೋಕಗಳೂ ಈ ವಾದಕ್ಕೆ ಉಪೋದ್ಬಲಕ.

ವೈದರ್ಭೀ ರೀತಿಯಲ್ಲೇ ಕಾವ್ಯಗಳನ್ನು ರಚಿಸಿರುವ ಅಶ್ವಘೋಷ ಬಿಲ್ಹಣಾದಿಗಳು ಇತರ ದೇಶೀಯರೆಂದು ಗೊತ್ತಾಗಿರುವುದರಿಂದ ಆ ಮಾರ್ಗವನ್ನನುಸರಿಸಿ ಕಾವ್ಯವನ್ನು ಬರೆದ ಮಾತ್ರಕ್ಕೆ ಆ ದೇಶದನಾಗಿರ ಬೇಕೆಂಬುದು ಯುಕ್ತಿ ವಿರುದ್ಧ.

3. ಕಾಳಿದಾಸನ ವರ್ಷವು ಆಷಾಢದಿಂದ ಮೊದಲಾಗುತ್ತದೆ ಯೆಂದೂ (ಮೇ. ಸಂ. I–2) ಬಂಗಾಳದ ಕಾಲಮಾನ ರೀತಿಯಲ್ಲೂ ಈಚೆಗೆ ಕೊಂಚಕಾಲದವರೆಗೂ ಆಷಾಢವೆ ವರ್ಷದ ಮೊದಲನೆಯ ತಿಂಗಳಾಗಿತ್ತೆಂದೂ ಪ್ರತಿಪಾದಿಸಿ ಅದರ ಆಧಾರದ ಮೇಲೆ ಬಂಗಾಳವೇ ಕಾಳಿದಾಸನ ಜನ್ಮಭೂಮಿಯೆಂದು ಕೆಲವರು ವಾದಿಸುವರು. ಜ್ಯೋತಿ ರ್ವಿದಾಭರಣದ ಲೇಖಕ (ಕಾಳಿದಾಸ) ನು ಇತರ ಪ್ರದೇಶಗಳಲ್ಲಿ ತನ್ನ ಕಾವ್ಯಗಳನ್ನು ಬರೆದನಂತರ ಉಜ್ಜಯಿನಿಯಲ್ಲಿ ಅದನ್ನು ಬರೆದನೆಂದು ಹೇಳಿಕೊಂಡಿರುವುದರಿಂದ ಅವನು ಬಂಗಾಳದಿಂದ ಉಜ್ಜಯಿನಿಗೆ ಹೋಗಿರಬೇಕೆಂದು ಊಹಿಸಲಾಗಿದೆ. ಇದಲ್ಲದೆ, ಕಾಳಿದಾಸನೆಂಬ ಹೆಸರು ಈಗಲೂ ಬಂಗಾಳದಲ್ಲಿರುವಷ್ಟು ಭರತಖಂಡದ ಇನ್ನಾವ ಪ್ರಾಂತ ದಲ್ಲೂ ಪ್ರಚಾರದಲ್ಲಿಲ್ಲವೆಂಬುದೂ ಕಾಳಿದಾಸನ ಸಂಸ್ಕೃತಕ್ಕೂ ಬಂಗಾಳಿ ಭಾಷೆಗೂ ಹೆಚ್ಚಿನ ಸಾಮ್ಯವಿದೆಯೆಂಬುದೂ [1] ಈ ವಾದಕ್ಕೆ ಅಡಿಗಲ್ಲುಗಳು.

ಆದರೂ, ಈ ವಾದವು ಆದರಣೀಯವಲ್ಲ. ಆಷಾಢಾದಿಯಾಗಿ ಕಾವ್ಯವನ್ನು ಪ್ರಾರಂಭಿಸಿರುವುದಕ್ಕೆ ಮಲ್ಲಿನಾಥನು ತೃಪ್ತಿಕರವಾದ ಉಪ ಪತ್ತಿಯನ್ನು ಹೇಳಿರುವನು. ಕವಿಯು ಋತುಸಂಹಾರವನ್ನು ಜ್ಯೇಷ್ಠ ಮಾಸದಿಂದ ಪ್ರಾರಂಭಿಸಿದ ಮಾತ್ರಕ್ಕೆ ಅದೇ ಕವಿಯ ವರ್ಷಾರಂಭವೆನ್ನ ಬಹುದೆ? ಇದೂ ಅಲ್ಲದೆ ಕಾಳಿದಾಸನು ಬಂಗಾಳಕ್ಕೆ ಬಂದಾಗ ಸರ ಸ್ವತಿಯು ತಾನೇ ಅವನನ್ನೆದುರುಗೊಳ್ಳಲು ಹೋದಳೆಂದು ಬಂಗಾಳದ ಪಂಡಿತರಲ್ಲಿ ಪ್ರಚಾರದಲ್ಲಿರುವ ಸಾಂಪ್ರದಾಯಿಕ ಕಥೆಯೇ ಅದು ಕಾಳಿ

---

1. ಪ್ರಬಾಸೀ.— ; ಸಂಸ್ಕೃತ ಭಾರತಿ. ; J. S. Chakravarti, Q. J. M. S. VIII p. 264; Lachmidhar Kalla—The birth place of Kālidāsa. p. 4, note 12.

ದಾಸನ ಜನ್ಮಭೂಮಿಯೆಂಬುದನ್ನು ಖಂಡಿಸುವುದು. ಈ ವಾದವನ್ನು ಸಮರ್ಥಿಸಲು ಪ್ರಯುಕ್ತವಾಗಿರುವ ಇತರ ಯುಕ್ತಿಗಳು ಖಂಡನೆಗೂ ಅನರ್ಹ.[1]

4. ಯಾವುದೊಂದು ಪ್ರದೇಶವನ್ನೂ ಕಾಳಿದಾಸನ ಅತಿಶಯವಾದ ಪ್ರೀತಿಗೆ ಪಾತ್ರವೆನ್ನುವುದು ಅಸಾಧ್ಯವೆಂದೊಪ್ಪಿದರೂ ಅವನ ಗ್ರಂಥಗಳಲ್ಲೆಲ್ಲ ಮಾಳವದೇಶದ ವರ್ಣನೆಗೆ ಪ್ರಾಧಾನ್ಯವಿದೆಯೆಂದು ಪ್ರತಿಪಾದಿಸಿ ಆದರಿಂದ ಆ ದೇಶದಲ್ಲಿರುವ ದಶಪುರವೇ ಕವಿಯ ಜನ್ಮಭೂಮಿಯೆಂದು ಮ|| ಮ|| ಹರಪ್ರಸಾದಶಾಸ್ತ್ರಿಗಳು ವಾದಿಸುವರು. ಇವರ ಯುಕ್ತಿಗಳನ್ನು ಈ ರೀತಿ ಸಂಗ್ರಹಿಸಬಹುದು. ಋತುಸಂಹಾರದಲ್ಲಿ ಎರಡು ಕಡೆ ವಿಂಧ್ಯಪರ್ವತದ ನಿರ್ದೇಶ, ಮಾಳವಿಕಾಗ್ನಿಮಿತ್ರದ ವಿದಿಶಾನಗರವರ್ಣನೆ, ಮೇಘದೂತದಲ್ಲಿ ಬರುವ ಈ ಪ್ರದೇಶದ ವರ್ಣನೆ, ರಾಮಗಿರಿಯಿಂದ ಕೈಲಾಸಕ್ಕೆ ಹೋಗುವ ಮಾರ್ಗದಲ್ಲಿಲ್ಲದಿದ್ದರೂ ಉಜ್ಜಯಿನಿಗೆ ಕವಿಯು ಮೇಘದೂತನನ್ನು ಕರೆದುಕೊಂಡು ಹೋಗುವುದು.— ಇದೆಲ್ಲವೂ ಆ ಪ್ರದೇಶದ ವಿಷಯದಲ್ಲಿ ಕವಿಗೆ ಇದ್ದ ಮಮತೆಯನ್ನು ಸೂಚಿಸುವುದು. ಸಾಮಾನ್ಯಜನರಿಗೆ ಗೋಚರವೇ ಆಗದ ವೇತ್ರವತಿ, ನಿರ್ವಿಂಧ್ಯಾ, ಸಿಂಧು (ಕಾಳೀಸಿಂಧ್), ಸಿಪ್ರಾ, ಗಂಧವತೀ, ಗಂಭೀರಾ ಮೊದಲಾದ ಸಣ್ಣ ನದಿಗಳೂ ಕಾಳಿದಾಸನ ವರ್ಣನೆಗೆ ವಿಷಯವಾಗಿವೆ. ರಘುವಂಶದಲ್ಲಿ ಅವಂತಿಯನ್ನು ದೊಡ್ಡ ದೇಶವೆಂದೂ ಏಳಿಗೆಗೆ ಬರುತ್ತಿರುವ ರಾಜ್ಯವೆಂದೂ ವರ್ಣಿಸಿರುವನು. ಕೆಲವರ ಅಭಿಪ್ರಾಯದಲ್ಲಿ ಶಾಕುಂತಲದ ಕಣ್ವಾಶ್ರಮವೂ ಈ ಪ್ರಾಂತಕ್ಕೇ ಸೇರುವುದು. ಈ ಪ್ರದೇಶವನ್ನು ಕವಿಯು ಬಹಳ ವಿವರವಾಗಿ ಸನ್ನಿವೇಶಗಳನ್ನು ಅಲ್ಲಲ್ಲಿರುವಂತೆಯೇ ವರ್ಣಿಸಿ ಅತಿ ಸೂಕ್ಷ್ಮವಾದ ವಿವರಗಳನ್ನೂ ಬಿಡದಿರುವುದನ್ನು ನೋಡಿದರೆ ಅವನು ದೀರ್ಘಕಾಲ ಮಾಲವದಲ್ಲಿದ್ದಿರ

---

1. ಉದಾಹರಣೆಗೆ—ಬಂಗಾಳದಲ್ಲಿ ಹೇರಳವಾಗಿ ಬೆಳೆಯುವ ಹುಣಿಸೆಹಣ್ಣನ್ನು ನಿರ್ದೇಶಿಸಿರುವುದರಿಂದ ಕವಿಯು ಬಂಗಾಳಿಯೆಂದು ವಾದಿಸುತ್ತಾರೆ. ಬಂಗಾಳಿಗಳು ಕೇಸರಿಯನ್ನು ತಮ್ಮ ಗ್ರಂಥಗಳಲ್ಲಿ ನಿರ್ದೇಶಿಸಿದರೆ ಕಾಶ್ಮೀರಿಗಳಾಗುವರೆ?—Cf. K. C. Chattopadhyāya, Allah. Univ. No. II, p. 116 foot-note.

ಬೇಕೆಂದೂ ಆದ್ದರಿಂದಲೇ ಅದಕ್ಕೆ ಸ್ವದೇಶೋಚಿತವಾದ ಪ್ರೀತಿ ಉತ್ಸಾಹಗಳನ್ನು ನೀಡಿರುವನೆಂದೂ ವ್ಯಕ್ತವಾಗುತ್ತದೆ. ಕಾಳಿದಾಸನು ಬಾಲಕವಿಯಾಗಿದ್ದಾಗ ಯಾವ ನಿರ್ಬಂಧಕ್ಕೂ ಒಳಗಾಗದೆ ಬರೆದ ಋತುಸಂಹಾರವೂ ಇದನ್ನೇ ಸಮರ್ಥಿಸುವುದು. ಆ ಪ್ರದೇಶದ ಶಾಸನಗಳಿಂದ ತಿಳಿದು ಬರುವಂತೆ ಋತುವರ್ಣನೆಯು ಅಲ್ಲಿನ ಕವಿಗಳ ಸಂಪ್ರದಾಯವಾಗಿತ್ತೆಂದೂ, ತನ್ನ ದೇಶದ ಕವಿಗಳ ಮೇಲ್ಪಂಕ್ತಿಯನ್ನನುಸರಿಸಿಯೇ ಕಾಳಿದಾಸನು ಋತುಸಂಹಾರವನ್ನು ರಚಿಸಿರಬೇಕೆಂದೂ ಊಹಿಸಬಹುದು. ಇದಲ್ಲದೆ ಅಲ್ಲಿ ವರ್ಣಿತವಾಗಿರುವ ಗ್ರೀಷ್ಮ ಋತುವಿನ ಕಾಡುಗಿಚ್ಚು, ಮಳೆಗಾಲದ ನದಿಗಳು, ಹಾವುಗಳೆಂದು ಭ್ರಮಿಸಬಹುದಾದ ಸಣ್ಣ ಹೊಳೆಗಳು, ಬೆಳೆ, ಹಣ್ಣು, ಹೂ, ಧಾನ್ಯ ಎಲ್ಲವೂ ಮಾಳವ ದೇಶವನ್ನೇ, ಅದರಲ್ಲೂ ದಶಪುರದ ಸಮೀಪದ ಪಶ್ಚಿಮ ಮಾಳವವನ್ನೇ, ಜ್ಞಾಪಕಕ್ಕೆ ತರುವುವು. ಈ ವಾದಸರಣಿಯನ್ನೇ ಮುಂದುವರಿಸಿದರೆ ಆ ದೇಶದಲ್ಲೂ ಇಂತಹ ಪ್ರದೇಶವೇ ಕವಿಯ ವಾಸಸ್ಥಾನವಾಗಿತ್ತೆಂದೂ ನಿರ್ಯಯಿಸಬಹುದು. ಉಜ್ಜಯಿನಿಯಿಂದ ಮುಂದಿರುವ ಮಾಲವ ದೇಶದ ವರ್ಣನೆಯು ಇದಕ್ಕೆ ಹಿಂದಿನ ಪ್ರದೇಶಗಳ ವರ್ಣನೆಗಿಂತ ಹೆಚ್ಚು ಸೂಕ್ಷ್ಮವೂ ವಿವರವೂ ಆಗಿರುವುದು. ಗಂಭೀರಾ ನದಿಯ ಪ್ರವಾಹವು ಸ್ಕಂದ ದೇವಾಲಯ (ಈಗಲೂ, ಖಂಡೇರಾಯ ಅಥವಾ ಸ್ಕಂದರಾಜ) ವಿರುವ ಗುಡ್ಡದಲ್ಲಿ ಮುಗಿಯುವುದು. ಇದರ ಪಶ್ಚಿಮಕ್ಕೆ ಚಂಬಲ್ ನದಿಯನ್ನು ದಾಟಿ ದಶಪುರಕ್ಕೆ ಮೇಘದೂತನು ಪ್ರಯಾಣಮಾಡುವನು. ಇಲ್ಲಿ ನೇರವಾದ ದಾರಿಯನ್ನು ಬಿಟ್ಟು ಹೋಗಲು, ಹಿಂದೆ ಉಜ್ಜಯಿನಿಗೆ ಬರುವ ಸಂದರ್ಭದಲ್ಲೂ ಆಮ್ರಕೂಟಕ್ಕೆ ಬರುವ ಸಂದರ್ಭದಲ್ಲೂ ಹೇಳಿದಂತೆ, ಗ್ರಾಹ್ಯವಾದ ಯುಕ್ತಿಯನ್ನು ಕವಿಯು ನಿರ್ದೇಶಿಸದಿರುವುದು ಬಹುಶಃ ಅದು ತನ್ನ ಜನ್ಮಭೂಮಿಯಾದ್ದರಿಂದಲೇ ಎಂದು ತೋರುತ್ತದೆ. ಸಮೀಪದಲ್ಲೇ ರಾಜಕೀಯ ದೃಷ್ಟಿಯಿಂದ ಪ್ರಸಿದ್ಧವಾದ ಇತರ ಸ್ಥಳಗಳಿದ್ದರೂ ಕಾಳಿದಾಸನು ಮೇಘವನ್ನು ಅಲ್ಲಿಗೆಲ್ಲಿಗೂ ಕರೆದುಕೊಂಡು ಹೋಗಿಲ್ಲ. ಮೇಘಸಂದೇಶದಲ್ಲಿ "ಪರಿಚಿತ ಭ್ರೂಲತಾ ವಿಭ್ರಮಾಣಾಂ" ಎಂದು ದಶಪುರ ಸ್ತ್ರೀಯರನ್ನು ವರ್ಣಿಸಿರುವುದು ಆ ಪ್ರದೇಶದ ವಿಷಯದಲ್ಲಿ

ವೆಂದು ಕಾಳಿದಾಸನು ಪ್ರತಿಪಾದಿಸಿ ಹಿಮಾಲಯದ ಸೊಬಗನ್ನು ಕೊಂಡಾಡುತ್ತಾನೆ.

(b) ಶಾಕುಂತಲದ ಏಳನೆ ಅಂಕದ ಕಥೆಯು ಮಾರೀಚಾಶ್ರಮದಲ್ಲೂ ತಪೋವನದಲ್ಲೂ ನಡೆಯುವುದು. ಇದು ಮಹಾಭಾರತದ ಕಥಾಸರಣಿಯಲ್ಲಿ ಕಾಳಿದಾಸನು ಮಾಡಿರುವ ವ್ಯತ್ಯಾಸ. ಈ ಪ್ರದೇಶವು ಕಾಶ್ಮೀರದಲ್ಲೇ ಇರುವುದೆಂದು ನಿಶ್ಚಯಿಸಬಹುದು. ಇದರಿಂದ ಕವಿಯ ಕಾಶ್ಮೀರಾಭಿಮಾನವು ವ್ಯಕ್ತವಾಗುವುದು. ಇಲ್ಲಿಯೂ ಮೂರು ಅಂಶಗಳನ್ನು ಗಮನಿಸಬೇಕು.

(i) ಇಂದ್ರಲೋಕದಿಂದ ಹಿಂದಿರುಗುತ್ತಿದ್ದ ದುಷ್ಯಂತನಿಗೆ ಈ ಪ್ರದೇಶದ ಪರಿಚಯವನ್ನು ಮಾಡಿಸುತ್ತ ಕವಿಯು ಅದರ ವಿಷಯವಾಗಿ "ಸ್ವರ್ಗಾದಧಿಕತರಂ ನಿರ್ವೃತಿಸ್ಥಾನಂ । ಅಮೃತಹ್ರದಮಿವಾವ ಗಾಢೋಸ್ಮಿ" ಎಂದೆನ್ನಿಸುವನು. ಕಾಶ್ಮೀರವು ಹಿಂದೆ ಒಂದು ಸರೋವರ (ಸತೀಸರ್) ವಾಗಿತ್ತೆಂದು ಅಲ್ಲಿ ಪ್ರಚಾರದಲ್ಲಿರುವ ಕಥೆಯು ಅದನ್ನು ಹ್ರದವೆನ್ನುವುದಕ್ಕೆ ಸಮರ್ಪಕವಾಗುವುದು.

(ii) ಕಾಳಿದಾಸನ ಸ್ವದೇಶಾಭಿಮಾನವು ಈ ಪ್ರಾಂತದ ಸೌಂದರ್ಯವನ್ನು ಅವನು ಸಾವಕಾಶವಾಗಿಯೂ ವಿವರವಾಗಿಯೂ ವರ್ಣಿಸುವುದಕ್ಕೆ ಕಾರಣ. ಕಶ್ಯಪಾಶ್ರಮದ ವರ್ಣನೆಯು ಎಲ್ಲಕ್ಕಿಂತ ಚೆನ್ನಾಗಿದೆ. ಸಾಂಪ್ರದಾಯಿಕ ಕಥೆಗಳು ಕಶ್ಯಪನನ್ನು ಕಾಶ್ಮೀರಸ್ಥಾಪಕನೆಂದು ಹೇಳುತ್ತವೆ. ಅವನು 'ಸುರಾಸುರಗುರು,' ಕಾಶ್ಮೀರಿಗಳು ಜೀವನದಲ್ಲಿ ಮೇಲಿನ ಗುರಿಯುಳ್ಳವರೆಂದೂ ಕವಿಯು ಹೆಮ್ಮೆಯಿಂದ ಹೇಳಿರುವನು.

(iii) ಗಂಡನು ತ್ಯಜಿಸಿದಮೇಲೆ ಶಕುಂತಲೆಯನ್ನು ಕಾಳಿದಾಸನು (ಪಿತೃವಾತ್ಸಲ್ಯದಿಂದಲೋ ಎಂಬಂತೆ) ದಾಕ್ಷಾಯಣಿಯ ಆಶ್ರಮದಲ್ಲಿರಿಸುವನು. ಪರಿತಪ್ತನಾದ ದುಷ್ಯಂತನನ್ನೂ ಕವಿಯು ಅಲ್ಲಿಗೇ ಕರೆದೊಯ್ಯುವನು. ಇದೆಲ್ಲವೂ ಕಾಶ್ಮೀರವು ಕವಿಯ ಜನ್ಮಭೂಮಿಯೆಂದೊಪ್ಪಿದರೆ ಮಾತ್ರ ಉಪಪನ್ನವಾಗುವುದು.

2. ಎರಡನೆಯದಾಗಿ, ವರ್ಣನೆಗಳ ಬಾಹುಳ್ಯ ಮಾತ್ರವಲ್ಲದೆ ವೈಶದ್ಯವೂ ಕೂಡ ಕಾಶ್ಮೀರ ದೇಶದ ವಿಷಯದಲ್ಲಿ ಕವಿಗಿರುವ ಅಭಿ

ಆಶ್ರಯಿಸಿ ಅವನು ಪಶ್ಚಿಮ ಮಾಳವಕ್ಕೆ ಸೇರಿದ ದಶಪುರದಲ್ಲಿ ಹುಟ್ಟಿದನೆಂದು ವಾದಿಸಿದರು. ಈಚೆಗೆ ಪಂಡಿತ ಲಕ್ಷ್ಮೀಧರಕಲ್ಲರವರು ಇದನ್ನೂ ಖಂಡಿಸಿ ಇತರ ಯುಕ್ತಿಗಳಿಂದ ಡಾ|| ಭೌದಾಜಿಯವರ ವಾದವನ್ನೇ ಪುನರುಜ್ಜೀವಿಸಿರುವರು. ಇವರ ಯುಕ್ತಿಗಳನ್ನು ವಿಶದವಾಗಿ ನಿರೂಪಿಸುವುದು ಆವಶ್ಯಕ.

1. ಮೊಟ್ಟಮೊದಲು, ಕಾಳಿದಾಸನ ಗ್ರಂಥಗಳಲ್ಲಿ, ಮಾಳವ ದೇಶದ ವರ್ಣನೆಗಿಂತಲೂ, ಹಿಮವತ್ಪರ್ವತದ, ಅದರಲ್ಲೂ ಕಾಶ್ಮೀರದ ಉತ್ತರ ಭಾಗದ (ಇನ್ನೂ ವಿಶೇಷವಾಗಿ ಸಿಂಧ್ ಕಣಿವೆಯ) ವರ್ಣನೆಗೆ ಹೆಚ್ಚು ಪ್ರಾಧಾನ್ಯವಿರುವುದೆಂದು ಪ್ರತಿಪಾದಿಸಿ ಆ ಪ್ರದೇಶದ ವಿಷಯದಲ್ಲಿ ಕವಿಗೆ ಹೆಚ್ಚು ಸ್ವದೇಶಾಭಿಮಾನವಿತ್ತೆಂದು ಇವರು ತೋರಿಸಿರುತ್ತಾರೆ.

ಕಾಳಿದಾಸಕೃತವೆಂದು ಅಂಗೀಕೃತವಾಗಿರುವ ಏಳು ಗ್ರಂಥಗಳಲ್ಲೂ ಹಿಮಾಲಯದ ವರ್ಣನೆಯು ಪ್ರಮುಖವಾಗಿದೆ. ಕುಮಾರಸಂಭವ ಪೂರ್ತಿ, ಮೇಘಸಂದೇಶದ ಅರ್ಧ ಭಾಗ, ವಿಕ್ರಮೋರ್ವಶೀಯದ ಎರಡು (1 ಮತ್ತು 4) ಅಂಕಗಳು, ಶಾಕುಂತಲದ ಏಳನೆಯ ಅಂಕ, ರಘುವಂಶದ 1, 2, 4ನೆ ಸರ್ಗಗಳ ಕೆಲವು ಭಾಗಗಳು, ಇವುಗಳೆಲ್ಲ ಹಿಮವದ್ವರ್ಣನೆಯಿಂದ ತುಂಬಿವೆ. ಈ ರೀತಿ ಅನೇಕ ಸನ್ನಿವೇಶಗಳಲ್ಲಿ ಸ್ವಲ್ಪ ಮಿತಿಮೀರಿದುದೆನ್ನುವಷ್ಟು ವಿವರವಾಗಿರುವ ಇಂತಹ ವರ್ಣನೆಗಳು ಕವಿಗೆ ಆ ಪ್ರದೇಶದ ವಿಷಯದಲ್ಲಿರುವ ಹೆಚ್ಚು ಅಭಿಮಾನವನ್ನು ಸೂಚಿಸುತ್ತವೆ. ಇದಲ್ಲದೆ, ಇವನ ಗ್ರಂಥಗಳಲ್ಲಿರುವ ಅನೇಕ ವಾಕ್ಯಗಳೂ, ಸನ್ನಿವೇಶಗಳೂ, ಹಿಮಾಲಯದ ಮೇಲಿನ ಪ್ರೀತಿಯನ್ನೂ ಕಾಶ್ಮೀರದ ಮೇಲಿನ ಸ್ವದೇಶಾಭಿಮಾನವನ್ನೂ ಸೂಚಿಸುತ್ತವೆ. ಕೆಲವನ್ನು ಮಾತ್ರ ಇಲ್ಲಿ ಗಮನಿಸಬಹುದು.

(a) "ಹಿಮಂ ನ ಸೌಭಾಗ್ಯವಿಲೋಪಿ ಜಾತಂ" (ಕು. ಸಂ. I, 3). ನೀಲಮತ ಪುರಾಣದಲ್ಲಿ ಕಾಶ್ಮೀರಿಗಳು ಚಳಿಗೆ ಹೆದರಿ ಆರು ತಿಂಗಳು ತಮ್ಮ ದೇಶವನ್ನು ಬಿಟ್ಟು ಬೇರೆ ಕಡೆಗಳಲ್ಲಿರುತ್ತಿದ್ದರೆಂದು ಹೇಳಿದೆ. ಉದ್ಧೃತವಾಗಿರುವ ಶ್ಲೋಕ ಪಾದದಿಂದ ಈ ದೋಷವೂ ಪ್ರಬಲವಲ್ಲ

ವೆಂದು ಕಾಳಿದಾಸನು ಪ್ರತಿಪಾದಿಸಿ ಹಿಮಾಲಯದ ಸೊಬಗನ್ನು ಕೊಂಡಾಡುತ್ತಾನೆ.

(b) ಶಾಕುಂತಲದ ಏಳನೆ ಅಂಕದ ಕಥೆಯು ಮಾರೀಚಾಶ್ರಮ ದಲ್ಲೂ ತಪೋವನದಲ್ಲೂ ನಡೆಯುವುದು. ಇದು ಮಹಾಭಾರತದ ಕಥಾ ಸರಣಿಯಲ್ಲಿ ಕಾಳಿದಾಸನು ಮಾಡಿರುವ ವ್ಯತ್ಯಾಸ. ಈ ಪ್ರದೇಶವು ಕಾಶ್ಮೀರದಲ್ಲೇ ಇರುವುದೆಂದು ನಿಶ್ಚಯಿಸಬಹುದು. ಇದರಿಂದ ಕವಿಯ ಕಾಶ್ಮೀರಾಭಿಮಾನವು ವ್ಯಕ್ತವಾಗುವುದು. ಇಲ್ಲಿಯೂ ಮೂರು ಅಂಶ ಗಳನ್ನು ಗಮನಿಸಬೇಕು.

(i) ಇಂದ್ರಲೋಕದಿಂದ ಹಿಂದಿರುಗುತ್ತಿದ್ದ ದುಷ್ಯಂತನಿಗೆ ಈ ಪ್ರದೇಶದ ಪರಿಚಯವನ್ನು ಮಾಡಿಸುತ್ತ ಕವಿಯು ಅದರ ವಿಷಯವಾಗಿ "ಸ್ವರ್ಗಾದಧಿಕತರಂ ನಿರ್ವೃತಿಸ್ಥಾನಂ । ಅಮೃತಹ್ರದಮಿವಾವ ಗಾಢೋಸ್ಮಿ" ಎಂದೆನ್ನಿಸುವನು. ಕಾಶ್ಮೀರವು ಹಿಂದೆ ಒಂದು ಸರೋವರ (ಸತೀಸರ್) ವಾಗಿತ್ತೆಂದು ಅಲ್ಲಿ ಪ್ರಚಾರದಲ್ಲಿರುವ ಕಥೆಯು ಅದನ್ನು ಹ್ರದವೆನ್ನುವುದಕ್ಕೆ ಸಮರ್ಪಕವಾಗುವುದು.

(ii) ಕಾಳಿದಾಸನ ಸ್ವದೇಶಾಭಿಮಾನವು ಈ ಪ್ರಾಂತದ ಸೌಂದರ್ಯ ವನ್ನು ಅವನು ಸಾವಕಾಶವಾಗಿಯೂ ವಿವರವಾಗಿಯೂ ವರ್ಣಿಸುವುದಕ್ಕೆ ಕಾರಣ. ಕಶ್ಯಪಾಶ್ರಮದ ವರ್ಣನೆಯು ಎಲ್ಲಕ್ಕಿಂತ ಚೆನ್ನಾಗಿದೆ. ಸಾಂಪ್ರದಾಯಿಕ ಕಥೆಗಳು ಕಶ್ಯಪನನ್ನು ಕಾಶ್ಮೀರಸ್ಥಾಪಕನೆಂದು ಹೇಳುತ್ತವೆ. ಅವನು 'ಸುರಾಸುರಗುರು,' ಕಾಶ್ಮೀರಿಗಳು ಜೀವನದಲ್ಲಿ ಮೇಲಿನ ಗುರಿಯುಳ್ಳವರೆಂದೂ ಕವಿಯು ಹೆಮ್ಮೆಯಿಂದ ಹೇಳಿರುವನು.

(iii) ಗಂಡನು ತ್ಯಜಿಸಿದಮೇಲೆ ಶಕುಂತಲೆಯನ್ನು ಕಾಳಿದಾಸನು (ಪಿತೃವಾತ್ಸಲ್ಯದಿಂದಲೋ ಎಂಬಂತೆ) ದಾಕ್ಷಾಯಣಿಯ ಆಶ್ರಮ ದಲ್ಲಿರಿಸುವನು. ಪರಿತಪ್ತನಾದ ದುಷ್ಯಂತನನ್ನೂ ಕವಿಯು ಅಲ್ಲಿಗೇ ಕರೆದೊಯ್ಯುವನು. ಇದೆಲ್ಲವೂ ಕಾಶ್ಮೀರವು ಕವಿಯ ಜನ್ಮಭೂಮಿ ಯೆಂದೊಪ್ಪಿದರೆ ಮಾತ್ರ ಉಪಪನ್ನವಾಗುವುದು.

2. ಎರಡನೆಯದಾಗಿ, ವರ್ಣನೆಗಳ ಬಾಹುಳ್ಯ ಮಾತ್ರವಲ್ಲದೆ ವೈಶದ್ಯವೂ ಕೂಡ ಕಾಶ್ಮೀರ ದೇಶದ ವಿಷಯದಲ್ಲಿ ಕವಿಗಿರುವ ಅಭಿ

ಮಾನವನ್ನೂ ಆತ್ಮೀಯತೆಯನ್ನೂ ಸೂಚಿಸುತ್ತದೆ. ಅರಿವಿಲ್ಲದೆಯೇ ಅಲ್ಲಿನ ಸಣ್ಣ ಸಣ್ಣ ಪ್ರದೇಶಗಳನ್ನೂ ಕೂಡ ಕವಿಯು ಸೂಚಿಸಿರುವನು. ಗ್ರಂಥದಲ್ಲಿ ನಿರ್ದಿಷ್ಟವಾಗಿರುವ ಈ ಪ್ರದೇಶಗಳ ವರ್ಣನೆಗಳನ್ನು ನೋಡಿ ಕಾಶ್ಮೀರ ದೇಶದಲ್ಲಿ ಆಯಾ ಪ್ರದೇಶಗಳೊಡನೆ ಹೋಲಿಸಿದರೆ ಕಾಳಿ ದಾಸನು ವರ್ಣಿಸಿರುವ ಪ್ರದೇಶಗಳು ಅಲ್ಲಿನವೇ ಎಂದು ಸಿದ್ಧವಾಗುವುದು. ಉದಾಹರಣೆಗಾಗಿ, ಕುಮಾರಸಂಭವದಲ್ಲಿ ಸಿರ್ದಿಷ್ಟವಾಗಿರುವ " ಹಿಮಾದ್ರಿ ಪ್ರಸ್ಥ (I. 54), ಭೂರ್ಜಪತ್ರ (I. 55), ದೇವದಾರು ವೃಕ್ಷ ನಂದಿ (IV. 41), ಭೂತಪತಿ (III. 43) ಇವುಗಳನ್ನು ಒಟ್ಟುಗೂಡಿಸಿ, 'ಹರ ಮುಕುಟ ಶಿಖರ', 'ಭೂತೇಶ್ವರ ತೀರ್ಥ', 'ನಂದಿ ಕ್ಷೇತ್ರ' ಮುಂತಾದುವನ್ನೊಳಗೊಂಡ ಕಾಶ್ಮೀರ ಪ್ರದೇಶದೊಡನೆ ಹೋಲಿಸಿದರೆ ಎರಡೂ ಒಂದೇ ಎಂದು ವ್ಯಕ್ತವಾಗುವುದು. ಕಾಶ್ಮೀರದಲ್ಲೇ ಭೂರ್ಜ ಪತ್ರ, ದೇವದಾರು ವೃಕ್ಷಗಳಿರುವ ಇತರ ಪ್ರದೇಶಗಳಿದ್ದರೂ ಭೂತಪತಿ ಎಂದು ನಿರ್ದೇಶವಿರುವುದರಿಂದ ಈಚೆಗೆ 'ಭೂತೇಶ್' ಎಂದು ಪ್ರಸಿದ್ಧ ವಾಗಿರುವ ಪ್ರದೇಶಕ್ಕೇ ಅದು ಅನ್ವಯಿಸುವುದು.[1] ರಘುವಂಶದಲ್ಲಿ ವರ್ಣಿತವಾಗಿರುವ ವಸಿಷ್ಠಾಶ್ರಮವು ರಾಜತರಂಗಿಣಿಯಲ್ಲಿ ನಿರ್ದಿಷ್ಟವಾದ ಆ ಹೆಸರಿನ ಪ್ರದೇಶಕ್ಕಿಂತ ಬೇರೆಯಲ್ಲ. ಅದಕ್ಕೆ ಜೋಡಿಸಿರುವ ಗಂಗಾ ಪ್ರವಾಹವು ಭೂತೇಶಕ್ಕೆ ಎರಡು ಮೈಲಿಗಳ ಕೆಳಗಿರುವ 'ವಾಂಗತ್' ಎಂಬುದೇ ವಸಿಷ್ಠಾಶ್ರಮವೆಂದು ಗುರುತಿಸಲು ಅನುಕೂಲಿಸುತ್ತದೆ. ಕಸ್ತೂರಿ ಮೃಗ, ಸರೋವರ ಮುಂತಾದುವುಗಳ ವಿವರವಾದ ವರ್ಣನೆಯು ಅದೆಲ್ಲವನ್ನೂ ನೋಡಿದವರಿಗೇ ಸಾಧ್ಯವೆಂದೆನ್ನಿಸುವುದು. ಈ ಪ್ರದೇಶಗಳಿಗೆಲ್ಲಾ ಕಾಶ್ಮೀರಿ ಜನಸಾಮಾನ್ಯದಲ್ಲೇ ಒಂದು ಬಗೆಯ ಪ್ರಾಶಸ್ತ್ಯವಿರುವುದರಿಂದ ಅವುಗಳನ್ನು ವರ್ಣಿಸಿರುವ ಕವಿಯೂ ಕಾಶ್ಮೀರಿಯೇ ಆಗಿರಬೇಕು. ಅಲ್ಲದೆ, ಭರತಖಂಡದ ಇತರ ಪ್ರದೇಶ

---

1. ರಘುವಂಶ (II. 46)ರಲ್ಲಿ 'ಭೂತೇಶ್ವರ ಪಾರ್ಶ್ವವರ್ತೀ' ಎಂದು ಈಚೆಗೆ ಪ್ರಸಿದ್ಧವಾಗಿರುವ ಹೆಸರನ್ನೂ ಸೂಚಿಸುವ ನಿರ್ದೇಶವಿದೆ. ನೀಲಮತ ಪುರಾಣ (ಶ್ಲೋ. 1231, 1308-9, 324), ರಾಜತರಂಗಿಣಿ (Vol. I. p. 827: Vol. II. p. 407) ಗಳೂ ಇದನ್ನು ಪುಷ್ಟೀಕರಿಸುವುವು.

ಗಳನ್ನು ವರ್ಣಿಸುವಾಗಲೂ ಕವಿಯ ಮನಸ್ಸು ಕಾಶ್ಮೀರದ ಕಡೆಗೇ ತಿರುಗಿ ಅಲ್ಲಿನ ವಿಷಯಗಳೇ ಉಪಮೆಗಳಾಗಿ ಗೋಚರವಾಗುವುವು. ಉದಾಹರಣೆ; ರೂಪಕ ರಮ್ಯತೆಯನ್ನು ಸಂಪಾದಿಸುವುದಕ್ಕಾಗಿ ಕಾಳಿದಾಸನು ಕಾಶ್ಮೀರದ ಕೆಲವು ಸನ್ನಿವೇಶಗಳನ್ನು ಗಂಗಾ ನದೀ ಪ್ರಾಂತದ ಮೈದಾನಗಳಿಗೆ ವರ್ಗಮಾಡಿರುತ್ತಾನೆ. 'ಮಾಲಿನಿ' ಯೆಂಬುದು ಕಾಶ್ಮೀರದಲ್ಲಿರುವ ಅದೇ ಹೆಸರಿನ ನದಿ. ಅದು ಗಂಗಾ ನದಿಯ ಹೆಸರಲ್ಲ. ಕಾಶ್ಮೀರ ಸ್ಥಾಪಕರಾದ ಕಶ್ಯಪರ ಶಿಷ್ಯರು ಕಣ್ವರು. ಅವರ ಆಶ್ರಮವು ಅಲ್ಲಿಂದ ಮೈದಾನಕ್ಕೆ ವರ್ಗವಾಗಿದೆ. ಕವಿಯ ಸರಯೂ ವರ್ಣನೆಯು ಕಾಶ್ಮೀರದ ಬ್ರಹ್ಮಸರಸ್ಸನ್ನು ಪ್ರತಿಬಿಂಬಿಸುವುದು.

ಶಕ್ರಾವತಾರ, ಶಚೀತೀರ್ಥಗಳು[1] ಕಾಶ್ಮೀರದಲ್ಲಿ ಪ್ರಸಿದ್ಧವಾದ ಯಾತ್ರಾಸ್ಥಳಗಳು (ನೀಲಮತ ಪುರಾಣ ಶ್ಲೋ. 1166, 1169).

ನಾಗರೆಂಬ ದಿವ್ಯಮಾನುಷ ಜಾತಿಯ ಜನರ ಹೆಸರುಗಳು ಕಾಶ್ಮೀರದ ಅನೇಕ ಕಥೆಗಳಲ್ಲಿವೆ. ಇವರು ಮನುಷ್ಯ ರೂಪನ್ನು ತಾಳಿ ಅವರೊಡನೆ ಮದುವೆ ಮೂಲಕ ಸಂಬಂಧವನ್ನು ಬೆಳೆಸಿದರೆಂದೂ ರಘುವಂಶದ 16ನೆ ಸರ್ಗದಲ್ಲಿ ನಿರೂಪಿತವಾಗಿದೆ. (ಕುಮುದನಾಗ ನೀ. ಪು. ಶ್ಲೋ. 1089.)

ರಘುವಂಶದ ನಿಕುಂಭೋಪಾಖ್ಯಾನ (II. 35).—ಕಾಶ್ಮೀರದ ಸಾಂಪ್ರದಾಯಿಕ ಕಥೆಗಳಲ್ಲಿ ಪ್ರಸಿದ್ಧನಾದ ನಿಕುಂಭನು ಶಕ್ತನೂ ಸದ್ವೃತ್ತನೂ ಆಗಿರುವನು. ರಘುವಂಶದಲ್ಲಿ ನಿಕುಂಭನ ಸ್ನೇಹಿತನಾದ ಕುಂಭೋದರನನ್ನು ಹೀಗೆಯೇ ವರ್ಣಿಸಿದೆ.

ದಿಲೀಪನನ್ನು ಅಯೋಧ್ಯೆಯಿಂದ ವಸಿಷ್ಠಾಶ್ರಮವಿರುವ ಕಾಶ್ಮೀರಕ್ಕೆ ಕವಿಯು ಕರೆದುಕೊಂಡು ಹೋಗುವನು. ವಸಿಷ್ಠಾಶ್ರಮವು ಅಲ್ಲಿರುವುದು ಕಾಶ್ಮೀರದ ಕಥಾ ಸಂಪ್ರದಾಯದಲ್ಲಿ ಮಾತ್ರ ಪ್ರಸಿದ್ಧ.

ಪಾರ್ವತೀ ಪರಮೇಶ್ವರರೂ ಉರ್ವಶೀಪುರೂರವರೂ, ವಿಹಾರಕ್ಕಾಗಿ ಆನಂದ ನಿಲಯವಾದ ಗಂಧಮಾದನ[2]ಕ್ಕೆ ತೆರಳುವುದು ಕಾಶ್ಮೀರಕಥಾ

---

1. ಶಾಕುಂತಲ. VI ಅಂಕ. ಪ್ರವೇಶಕ; V ಅಂಕ. ಶ್ಲೋ. 21 ಆದಮೇಲೆ.
2. ಸನಾಮ ಸಂಭೋಗಃ ಯಸ್ಮಾದೃಶೇಷು ಪ್ರದೇಶೇಷು—ವಿಕ್ರ. IV. ಪ್ರವೇಶಕ.

ಸಂಪ್ರದಾಯದಲ್ಲಿ ಮಾತ್ರ ಪ್ರಸಿದ್ಧ. (ಜಯರಥನ ಹರಚರಿತ ಚಿಂತಾಮಣಿ. IX. 147. ನೋಡಿ.)

ಕಾಳಿದಾಸನ ಗ್ರಂಥಗಳಲ್ಲಿ ಸಿಕ್ಕುವ ಹಲವಾರು ಪ್ರದೇಶಗಳ ವರ್ಣನೆಗಳನ್ನು ಸಂಶೋಧಿಸಿ ಅವು ಕಾಶ್ಮೀರದ ಪ್ರದೇಶಗಳನ್ನೇ ಸೂಚಿಸುವುವೆಂದು ಹೇಳಲಾಗಿದೆ. ಇದರಿಂದಲೂ ಕವಿಗೆ ಕಾಶ್ಮೀರ ದೇಶದ ವಿಷಯದಲ್ಲಿದ್ದ ವಿಶದವೂ ಮತ್ತು ಸೂಕ್ಷ್ಮವೂ ಆದ ಜ್ಞಾನವು ವ್ಯಕ್ತಪಡುವುದು.

1. ಕುಮಾರಸಂಭವದ ಹಿಮವದ್ವರ್ಣನೆಯೂ (I. 1-17) ಶಾಕುಂತಲದ ಹೇಮಕೂಟ ಕಶ್ಯಪಾಶ್ರಮಗಳ ವರ್ಣನೆಯೂ ಕನಕ ವಾಹಿನಿಯ ಮೂಲವಾಗಿದ್ದು ಅತಿ ನೀಲವಾಗಿರುವ ಹರಮುಕುಟದ ಎತ್ತರವಾದ ಪ್ರದೇಶಗಳನ್ನೇ ಸೂಚಿಸುವುವು.[1]

2. ಸೂರ್ಯೋಪಸ್ಥಾನವನ್ನು ನಡೆಸಿದ ಪ್ರದೇಶವು ಕಶ್ಯಪರು ಸ್ಥಾಪಿಸಿದ ಕಶ್ಯಪಸ್ವಾಮಿ ಮಾರ್ತಾಂಡವೆಂಬ ಕಾಶ್ಮೀರದ ಪ್ರಸಿದ್ಧವಾದ ಕ್ಷೇತ್ರ.[2] ಕುಬೇರ ಭವನವು ಅಲಕಾಪುರಿಯಲ್ಲ. ಕಾಶ್ಮೀರದಲ್ಲಿ ಕುಬೇರನ ಹೆಸರಿಟ್ಟು ಪ್ರಸಿದ್ಧವಾಗಿರುವ ಪುಣ್ಯಕ್ಷೇತ್ರಗಳಲ್ಲಿ ಯಾವುದೋ ಒಂದಾಗಿರಬೇಕು. (ನೀ. ಪು. ಶ್ಲೋ. 1198) ಹಿರಣ್ಯಪುರವೆಂಬುದು ಪುರಾಣಗಳಲ್ಲಿ ಮಾತ್ರ ಪ್ರಸಿದ್ಧವಾಗಿ ವಾಸ್ತವವಾಗಿ ಇಲ್ಲದಿರುವ ಸ್ಥಳವಲ್ಲ. ಕಾಶ್ಮೀರದ ಚರಿತ್ರೆಯಲ್ಲಿ ರಾಜಧಾನಿಯಾಗಿದ್ದ ಹಿರಣ್ಯಪುರವೇ (ಈಗಿನ ರಾನ್ಯಿಲ್) ಆದು. ಇತಿಹಾಸ ಪ್ರಸಿದ್ಧವಾದ ಹಿನಣ್ಯಪುರದಲ್ಲೂ ಪೌರರ ಹೆಂಡತಿಯರನ್ನು ಕದ್ದೊಯ್ಯುತ್ತಿದ್ದ ಜನರನ್ನು ನಿರ್ದೇಶಿಸಿರುವುದು ಇದನ್ನು ಪುಷ್ಟೀಕರಿಸುವುದು.

ಸೋಮತೀರ್ಥ, ಶಚೀತೀರ್ಥ (ಶಾಕುಂತಲ V), ಅಪ್ಸರಸ್ ತೀರ್ಥ (ವಿಕ್ರ. IV), ಸಪ್ತರ್ಷಿತೀರ್ಥ (ಕು. ಸಂ. I. 16), ಬ್ರಹ್ಮಸರಸ್ (ರ. ವಂ. XIII. 60), ಕುಮುದನಾಗ (ರ. ವಂ. XVI. 76),

1. ವಿಕ್ರಮೋರ್ವಶೀಯದ ಹೇಮಕೂಟ ವರ್ಣನೆಯೂ ಇದನ್ನು ಸಮರ್ಥಿಸುವುದು.

2. ನೀಲಮತ ಪುರಾಣದಲ್ಲಿ ಈ ಕಥೆಯು ವಿಸ್ತೃತವಾಗಿದೆ.

ಗೌರೀಶಂಕರ (ಕು. ಸಂ. V. 20-21) ಇವೆಲ್ಲವೂ ಕಾಶ್ಮೀರದಲ್ಲಿ ಪ್ರಸಿದ್ಧ ವಾಗಿರುವ ಪುಣ್ಯಕ್ಷೇತ್ರಗಳು. ಸಿಂಧುವೆಂಬುದು ಈಚೆಗೆ ಪ್ರಸಿದ್ಧ ವಾಗಿರುವ ಸಿಂಧು ನದಿಯಲ್ಲ; ಮಲ್ಲಿನಾಥನು ವ್ಯಾಖ್ಯಾನ ಮಾಡುವಂತೆ ಅದು ಕೃಷ್ಣಗಂಗಾ ಎಂಬ ನದಿ. ಕೃಷ್ಣಗಂಗೆಗೆ ಸಿಂಧುವೆಂಬ ಹೆಸರು ನೀಲಮತಪುರಾಣ, ರಾಜತರಂಗಿಣಿಗಳನ್ನು ಬಲ್ಲ ಕಾಶ್ಮೀರಿಗಳಿಗೆ ಮಾತ್ರ ಗೊತ್ತಿರುವುದು. ಅದರ ತೀರದಲ್ಲಿ ಕುಂಕುಮ ಕೇಸರವು ಬೆಳೆಯುತ್ತಿತ್ತೆಂದು ಹೇಳಿರುವುದು ವಾಸ್ತವವೆಂದು ತಿಳಿದುಬಂದಿದೆ. ಉತ್ತರಮೇಘ (4) ದಲ್ಲಿ ನಿರ್ದಿಷ್ಟವಾಗಿರುವ ಹೊನ್ನುಮರಳು (ಕನಕ ಸಿಕತಾ) ಕೃಷ್ಣಗಂಗಾ ತೀರಕ್ಕೆ ಅನ್ವಯಿಸುವುದು. ರಘುವಂಶ (IV. 73) ದಲ್ಲಿ ಆ ನದಿಯ ತೀರದಲ್ಲಿ ಭೂರ್ಜ ವೃಕ್ಷಗಳೂ, ಕಸ್ತೂರಿ ಮೃಗಗಳೂ ಇದ್ದುವೆಂದು ವರ್ಣಿಸಿರುವುದನ್ನು ನೋಡಿದರೆ ಅದು ಕೃಷ್ಣಗಂಗೆಯಲ್ಲದೆ ಬೇರಾವುದೂ ಆಗಿರಲಾರದೆಂದು ತೋರುತ್ತದೆ. ಹೀಗೆ ಕಾಶ್ಮೀರಿಗಳಲ್ಲಿ ಮಾತ್ರ ಪ್ರಚಾರದಲ್ಲಿರುವ ಒಂದೇ ನದಿಯ ಮೂರು ಹೆಸರುಗಳನ್ನೂ ತಿಳಿದಿರುವ ಕವಿಯು ಕಾಶ್ಮೀರಿಯೇ ಆಗಿರಬೇಕು.

ಕಾಶ್ಮೀರದಲ್ಲಿ ಮಾತ್ರ ಪ್ರಸಿದ್ಧವಾಗಿರುವ ಪದ್ಧತಿಗಳನ್ನು ಕವಿಯು ನಿರ್ದೇಶಿಸಿರುವುದೂ ಅವನು ಕಾಶ್ಮೀರಿಯೆಂಬುದನ್ನು ಸಮರ್ಥಿಸುವುದು.

1. ಲಾಜಹೋಮವಾದ ಮೇಲೆ ವಧುವು ಹೊಗೆಯ ವಾಸನೆ ಯನ್ನು ತೆಗೆದುಕೊಳ್ಳುವ ಕಾಶ್ಮೀರದ ಸಂಪ್ರದಾಯವನ್ನು ಕವಿಯು ತನ್ನ ರಘುವಂಶ (VII. 27), ಕುಮಾರಸಂಭವ (VII. 82) ಗಳಲ್ಲಿ ನಿರ್ದೇಶಿಸಿರುವನು.[1]

2. ಇಂದುಮತಿಯ ಸ್ವಯಂವರದಲ್ಲಿ ವಧುವು ತಾನೇ ಮಾಲಿಕೆ ಯನ್ನು ಅರ್ಪಿಸುವುದಿಲ್ಲ. ದಾಸಿಯು ಆ ಕೆಲಸವನ್ನು ಮಾಡುವಳು. ವಧುವಲ್ಲದೆ ಬೇರೆ ಯಾರೂ ಮಾಲೆಯನ್ನು ಅರ್ಪಿಸುವುದು ಯುಕ್ತವಲ್ಲ ವಾದರೂ ಅತ್ತೆಯೋ ಅಥವಾ ಬೇರೆ ಯಾವಳಾದರೂ ಸುಮಂಗಲಿಯೋ

---

1. ಕಾಶ್ಮೀರೀ ವ್ಯಾಖ್ಯಾನಕಾರನಾದ ವಲ್ಲಭನು 'ಅಂಜಲಿನಾ ವಧೂರ್ಧೂಮಾನಿ ಜಿಘ್ರತೀತಿ ಲೋಕಾಚಾರಃ' ಎಂದು ಹೇಳಿರುವನು.

ಅದನ್ನು ಕಟ್ಟಬೇಕೆಂಬ ಕಾಶ್ಮೀರದ ಮಂಗಳ ಮಾಲಾವಿಧಿಯನ್ನನುಸರಿಸಿರುವ ಕವಿಯು ಕಾಶ್ಮೀರಿಯೇ ಆಗಿರಬೇಕೆಂಬುದು ಸ್ಪಷ್ಟವಾಗಿದೆ.

3. ಕುಮಾರಸಂಭವ (VII. 88), ರಘುವಂಶ (VII.28) ಗಳಲ್ಲಿ ವಿವಾಹ ಹೋಮವಾದ ಮೇಲೆ 'ಆರ್ದ್ರಾಕ್ಷತಾರೋಪಣ'ಕ್ಕಾಗಿ ದಂಪತಿಗಳು ಅಲಂಕೃತವಾದ ವೇದಿಕೆಗೆ ಹೋದರೆಂದು ವರ್ಣಿಸಿದೆ. ಕಾಶ್ಮೀರದಲ್ಲಿ ಈಗಲೂ ವಧೂವರರನ್ನು 'ವೇಗು' (ವೇದಿಕಾ ಶಬ್ದದ ರೂಪಾಂತರ) ವಿಗೆ ಕರೆದುಕೊಂಡು ಹೋಗುವ ವಾಡಿಕೆಯಿದೆ.

4. ಉತ್ಸವ ಕಾಲಗಳಲ್ಲಿ ಸ್ತ್ರೀಯರ ನಾಟಕಾಭಿನಯ, ಸಂಗೀತ ನೈಪುಣ್ಯ ಪ್ರದರ್ಶನ, ಸಂಸ್ಕೃತ ಪ್ರಾಕೃತೋಭಯಾತ್ಮಕವಾದ ಪದ್ಯಗಳ ಪಠನ, ಗಂಡಸರು ಹೂಗಳಿಂದ ಬಟ್ಟಿ ಇಳಿಸಿದ ಮದ್ಯವನ್ನು ಕುಡಿಯುವುದು, ಇವನ್ನು ಕಾಳಿದಾಸನು ಸೂಚಿಸಿರುವನು. (ಕು. ಸಂ. VII-90.) ; (ಉ. ಮೇ. ಸಂ. 5). ಈ ವರ್ಣನೆಯು ಬಿಲ್ಹಣನ ವಿಕ್ರಮಾಂಕದೇವ ಚರಿತ್ರದಲ್ಲೂ, ನೀಲಮತ ಪುರಾಣದಲ್ಲೂ ಕಂಡುಬರುವ ಕಾಶ್ಮೀರ ಸಂಪ್ರದಾಯಕ್ಕೆ ಅನುಗುಣವಾಗಿರುವುದು.

5. ಶಾಕುಂತಲದ ಆರನೆಯ ಅಂಕದಲ್ಲಿ ಬೆಸ್ತನನ್ನು ಭಟರು ಪೀಡಿಸುವಾಗಿ ಅವನ ವೃತ್ತಿಯನ್ನು ಹೀಯಾಳಿಸುವರು. ಇದು ಕಾಶ್ಮೀರದಲ್ಲಿ ಪ್ರಚಾರದಲ್ಲಿರುವ 'ಈಶ್ವರ ಪ್ರತ್ಯಭಿಜ್ಞಾ ವಿಮರ್ಶಿನಿ' ಯಲ್ಲಿ ನೋಡಬಹುದಾದ ಸಂಪ್ರದಾಯ ಪ್ರಾಶಸ್ತ್ಯಕ್ಕನುಗುಣವಾಗಿರುವುದು. ಇತರ ಪ್ರಾಣಿ ಹಿಂಸಕ ವೃತ್ತಿಗಳೆಲ್ಲವನ್ನೂ ಬಿಟ್ಟು ಧೀವರ ವೃತ್ತಿಯನ್ನು ಮಾತ್ರ ದೂಷ್ಯವೆಂದು ಆ ಜಾತಿಯವರನ್ನೆಲ್ಲ ಒಟ್ಟಿಗೆ ಬಹಿಷ್ಕಾರ ಮಾಡಿದ್ದು ಕಾಶ್ಮೀರದಲ್ಲಿ ಮಾತ್ರ. ಕವಿಕಲ್ಪಿತವಾದ ಈ ಕಥಾಂಶವು ಶಕ್ರಾವತಾರ, ಶಚೀತೀರ್ಥಗಳೆಂಬ ಕಾಶ್ಮೀರ ಪ್ರದೇಶಗಳ ಹೆಸರಿನ ಜೊತೆಯಲ್ಲಿ ಹೆಣೆದುಕೊಂಡು ಕವಿಯು ಕಾಶ್ಮೀರಿಯೆಂಬುದನ್ನು ದೃಢಪಡಿಸುವುದು.

6. ಕಾಶ್ಮೀರದಲ್ಲಿ ಮಾತ್ರ ಸಿಕ್ಕುವ ಕೇಸರಿಯ ಬೆಳೆ, ಉಪಯೋಗ ಮತ್ತು ಅದನ್ನು ಹದ ಮಾಡುವ ಕ್ರಮ ಮುಂತಾದ ವಿಷಯಗಳನ್ನು ಕಣ್ಣಾರೆ ಕಂಡವನಂತೆ ವಿವರಿಸಿರುವುದರಿಂದಲೂ (ಋ. ಸಂ. 1. 6 ;

VI, 4; IV, 12; ರ. ವಂ. IV. 67.) ಕವಿಯು ಕಾಶ್ಮೀರದವನೇ ಆಗಿದ್ದಿರಬೇಕು.

7. ಹೀಗೆಯೇ ಬತ್ತದ ಬೆಳೆಯ ವರ್ಣನೆಯೂ ಅದರ ಕಲವು ಮುಂತಾದ ಜಾತಿಗಳ ಪರಿಚಯವೂ ಕೇಸರಿಯನ್ನು ಬೆಳೆಯುವ ಪ್ರದೇಶ ದೊಡನೆ ಕೂಡಿಕೊಂಡರೆ ಕಾಶ್ಮೀರದ ಕಡೆಗೇ ವಿಮರ್ಶಕರ ದೃಷ್ಟಿಯನ್ನೆಳೆಯುವುದು. ಕಾಶ್ಮೀರದಲ್ಲಿ ಈಗಲೂ ಬತ್ತವನ್ನು ಶಾಲಿಯೆಂದೇ ಕರೆಯುವರು. ಕಾಳಿದಾಸನೂ ಎಲ್ಲ ಸಂದರ್ಭಗಳಲ್ಲಿಯೂ ಅದನ್ನು ಆ ಹೆಸರಿನಿಂದಲೇ ವ್ಯವಹರಿಸಿ ಹೇಮಂತಋತುವಿನಲ್ಲಿ ಗಂಡಸರು ಹೆಂಗಸರೆಲ್ಲರೂ ಸೇರಿ ಬತ್ತದ ಗದ್ದೆಗಳಲ್ಲಿ ಹಾಡುವುದನ್ನು ಕಿವಿಯಾರೆ ಕೇಳಿದವನಂತೆ ವರ್ಣಿಸಿರುವನು.

ಇದಲ್ಲದೆ, ಕಾಳಿದಾಸನ ಮತವೂ ಕೂಡ ಅವನು ಕಾಶ್ಮೀರಿಯೆಂಬುದನ್ನೇ ದೃಢಪಡಿಸುವುದು. ಇವನು ಶೈವನೆಂಬುದು ನಿರ್ವಿವಾದ. ಆದರೆ ಇವನಿಗೆ ಇತರ ದೇವತೆಗಳಲ್ಲಿ ದ್ವೇಷವಿಲ್ಲ. ಇಂತಹ ಶೈವಾದ್ವೈತವು ಶಂಕರಾಚಾರ್ಯರಿಗೆ ಹಿಂದೆ ಕಾಶ್ಮೀರದಲ್ಲಿ ಮಾತ್ರ ನೆಲಸಿತ್ತು. ಇದು ಸರ್ವದರ್ಶನ ಸಂಗ್ರಹದಲ್ಲಿ ಪ್ರತಿಪಾದಿತವಾಗಿರುವ ಪ್ರತ್ಯಭಿಜ್ಞಾವಾದವನ್ನೇ ಅನುಸರಿಸುವುದು. ದುಷ್ಯಂತ ಶಕುಂತಲೆಯರ ಪರಸ್ಪರ ಪ್ರೇಮವನ್ನಾಶ್ರಯಿಸಿರುವ ಶಾಕುಂತಲವು ಕಾಶ್ಮೀರದ ಪ್ರತ್ಯಭಿಜ್ಞಾ ವಾದದ ಮುಖ್ಯ ತತ್ವಗಳನ್ನು ನಿರೂಪಿಸುವ ಬೋಧಕ ಗ್ರಂಥ (Allegory) ವೆಂದೂ ಭಾವಿಸಬಹುದು. ಅಭಿಜ್ಞಾನ ಶಬ್ದವನ್ನೇ ಪ್ರಯೋಗಿಸಿ ಕವಿಯು ತನ್ನ ಆಶಯವನ್ನು ಹೊರಗೆಡಹಿರುವುದೂ ಗಮನಾರ್ಹವಾಗಿದೆ. ಇವನ ಹೆಸರಿನಲ್ಲೇ ಅಡಗಿರುವ 'ದಾಸ' ಶಬ್ದಕ್ಕೆ ಅನುಯಾಯಿಗಳು ಪರತತ್ವದಲ್ಲಿ ದಾಸ ಭಾವನೆಯಿಂದ ವರ್ತಿಸಬೇಕೆಂದು ಬೋಧಿಸುವ ಪ್ರತ್ಯಭಿಜ್ಞಾ ಸಿದ್ಧಾಂತವೇ ನಿಮಿತ್ತವಾಗಿರಬೇಕು. ಈ ಕಾರಣಗಳಿಂದ ಕವಿಯು ಕಾಶ್ಮೀರಿಯೇ ಆಗಿರಬೇಕು.

ಕಡೆಯದಾಗಿ, ಮೇಘದೂತದ ಆಧಾರದ ಮೇಲೂ ಕಾಳಿದಾಸನು ಕಾಶ್ಮೀರಿಯೆಂದೇ ನಿರ್ಣಯಿಸಬಹುದೆಂದು ಪ್ರತಿಪಾದಿಸಿ, ಶ್ರೀ ಲಕ್ಷ್ಮೀಧರರವರು ಈ ವಿಷಯದಲ್ಲಿ ಕೊಟ್ಟಿರುವ ವಾದವನ್ನು ಈ ರೀತಿ ಸಂಗ್ರಹಿಸ

ಬಹುದು.— ಮೇಘದೂತದಲ್ಲಿ ಕವಿಯು ತನ್ನ ವಿಪ್ರಲಂಭವನ್ನೇ ಚಿತ್ರಿಸಿ ಕಾವ್ಯದ ಸೌಂದರ್ಯವನ್ನು ಹೆಚ್ಚಿಸುವುದಕ್ಕಾಗಿ ಒಬ್ಬ ಯಕ್ಷನಿಗೆ ಅದನ್ನನ್ವಯಿಸಿರುವನೆಂಧು ವಲ್ಲಭನೆಂಬ ಕಾಶ್ಮೀರೀ ವ್ಯಾಖ್ಯಾನಕಾರನು ಅಭಿಪ್ರಾಯಪಡುವನು. ಕಾವ್ಯದಲ್ಲಿ ತುಳುಕುವ ಭಾವೌತ್ಸುಕ್ಯವೂ ಇದನ್ನು ಸಮರ್ಥಿಸುವುದು. ಯಕ್ಷನೆಂಬ ಅತಿಮಾನುಷ ವ್ಯಕ್ತಿಯನ್ನು ಮುಂದಿಟ್ಟುಕೊಂಡಿರುವುದರಿಂದ ಕಾವ್ಯವು ಸಂಪೂರ್ಣವಾಗಿ ಬಾಹ್ಯ ವಾಗಲೀ ಅಥವಾ ಕೇವಲ ಆದರ್ಶ ಚಿತ್ರವಾಗಲೀ ಆಗದೆ ಮನೋರಂಜಕ ವಾಗಿರುವುದು. ಇಷ್ಟು ಹೆಚ್ಚು ಶ್ರದ್ಧೆಯಿಂದ ಚಿತ್ರಿತವಾಗಿರುವುದು ಕಾಳಿ ದಾಸನ ಜನ್ಮಭೂಮಿಯಲ್ಲದೆ ಬೇರೆ ಯಾವುದೂ ಆಗಲಾರದು.

ಯಕ್ಷನೆಂಬ ವ್ಯಕ್ತಿಯನ್ನು ಜನಸಾಮಾನ್ಯದಂತೆ (ಎಲ್ಲರಲ್ಲೊಬ್ಬ ನಂತೆ) ಭಾವಿಸಿ ಅವನಿಗೆ ಉತ್ತರ ದೇಶದಲ್ಲಿ ಜನ್ಮಭೂಮಿಯನ್ನು ಕಲ್ಪಿಸುವುದು ಕಾಶ್ಮೀರಿ ಲೇಖಕರಿಗೆ ಮಾತ್ರ ಸಹಜ. ಇತರ ಭಾರತೀ ಯರು ಯಕ್ಷರನ್ನು ದೇವ ಮನುಷ್ಯ ರಾಶಿಗಳಿಗೆ ಮಧ್ಯಸ್ಥವಾದ ಬೇರೆ ಪಂಗಡಕ್ಕೆ ಸೇರಿಸುವರು. ಅವರು ಕಾಶ್ಮೀರ ವಾಸಿಗಳೆಂದು ಹೇಳಲು ಅಲ್ಲಿ ಈಗಲೂ ಯಕ್ಷ ಗ್ರಾಮವೆಂದು ಪ್ರಸಿದ್ಧವಾಗಿರುವ ಅನೇಕ ಪಟ್ಟಣಗಳೇ ಆಧಾರ. ಕಾಶ್ಮೀರಿಗಳು ಈಗಲೂ ಯಕ್ಷರನ್ನೂ ಅವ ರೊಡೆಯನಾದ ಕುಬೇರನನ್ನೂ ಆರಾಧಿಸುವರು. ಯಕ್ಷನೆಂಬುದು ಈಗಲೂ ಅನೇಕ ಕಾಶ್ಮೀರಿ ಕುಟುಂಬಗಳ ಹೆಸರಿಗಂಟಿಕೊಂಡಿದೆ. ಕಾಳಿದಾಸನ ವಂಶಕ್ಕೂ ಯಕ್ಷನೆಂಬ ಹೆಸರಿದ್ದಿರಬೇಕು. ಯಕ್ಷರ ಕಥೆಗಳು ಈ ಹೊತ್ತಿಗೂ ಕಾಶ್ಮೀರದ ತೊಟ್ಟಲಿನ ಮಕ್ಕಳಿಗೂ ಗೊತ್ತಿವೆ. ಕಾಶ್ಮೀರಿಯಾದ ಯಕ್ಷನನ್ನು ನಾಯಕನನ್ನಾಗಿ ಆರಿಸಿಕೊಳ್ಳುವುದು ಆ ದೇಶದವನಲ್ಲದ ಕವಿಯಲ್ಲಿ ಅಸಂಭಾವಿತ.

ಮೇಘಕ್ಕೆ ಯಕ್ಷನು ಉಪದೇಶಿಸುವ ಮಾರ್ಗವೂ ಇದನ್ನು ಬಲ ಪಡಿಸುವುದು. ಕಾವ್ಯದಲ್ಲಿ ನಿರ್ದಿಷ್ಟವಾದ ಕೈಲಾಸವು ಪುರಾಣ ಪ್ರಸಿದ್ಧ ವಾದ ಕೈಲಾಸವಲ್ಲ; ಕಾಶ್ಮೀರದಲ್ಲಿ ಕೈಲಾಸವೆಂದು ಪ್ರಸಿದ್ಧವಾಗಿರುವ ಹರಮುಕುಟವೆಂಬುದು. ಕಾಶ್ಮೀರಕ್ಕೆ ಹೋಗುವುದಕ್ಕಾಗಿ ಸಾಮಾನ್ಯವಾದ

ಪಂಜಾಬ್ ಮಾರ್ಗವನ್ನು ಬಿಟ್ಟು ಕವಿಯು ಕನಖಲದ ದಾರಿಯಲ್ಲಿ ಮೇಘವನ್ನು ಕಳುಹಿಸುವನು. ಪಂಜಾಬ್ ಮಾರ್ಗದಲ್ಲಿ ಎತ್ತರವಾದ ಪರ್ವತ ಶ್ರೇಣಿಗಳಿರುವುದರಿಂದ ಅವನ್ನು ದಾಟಿಹೋಗುವುದು ಮೇಘಕ್ಕೆ ಶ್ರಮಸಾಧ್ಯ. ಇದೂ ಅಲ್ಲದೆ ಕವಿಯು ಸೂಚಿಸಿರುವ ಮಾರ್ಗವು ಅದಕ್ಕಿಂತಲೂ ಹತ್ತಿರ. ಇದು ಆ ಪ್ರಾಂತದ ಭೂಗೋಳವನ್ನು ವಿಶದವಾಗಿ ತಿಳಿಯದವರಿಗೆ ಅಸಾಧ್ಯ. ಮತ್ತು ಕಾಶಿಯಿಂದ ಹರಮುಕುಟಕ್ಕೆ ಹೋಗಲು ಶಿವನು ಇದೇ ದಾರಿಯನ್ನು[1] ಹಿಡಿದನೆಂದು ನೀಲಮತ ಪುರಾಣದಲ್ಲಿ ವರ್ಣಿಸಲಾಗಿದೆ. ನೀಲಮತಪುರಾಣದಲ್ಲಿ ಶಿವನು ನಂದಿಗೆ ಉಪದೇಶಿಸಿರುವಂತೆ, ಕಾವ್ಯದಲ್ಲಿ ಯಕ್ಷನು ಮೇಘಕ್ಕೂ ಮಾನಸ ಸರೋವರದಲ್ಲಿ ಸ್ನಾನಮಾಡಿ ಪುಣ್ಯವನ್ನು ಗಳಿಸೆಂದು ಉಪದೇಶಿಸಿರುವನು.

ಹರಮುಕುಟದ ಬುಡದಲ್ಲೇ ಅಲಕಾಪುರಿಯಿರುವುದು. ಕಾಮನ ಬಿಲ್ಲಿನಂತಿರುವ ತೋರಣಗಳಿಂದಲಂಕೃತವಾದ ಉಪ್ಪರಿಗೆಗಳು ಕಾಶ್ಮೀರದ ಹಳೆಯ ವಾಸ್ತು ಶಿಲ್ಪದ ಚಿಹ್ನೆಗಳು. ಇದೆಲ್ಲವನ್ನೂ ಕಾಳಿದಾಸನು ತಾನೇ ನೋಡಿದ್ದು ವರ್ಣಿಸಿರಬೇಕು. ಯಕ್ಷನ ಜನ್ಮಭೂಮಿಯು ಅಲಕೆಯೆಂದು ಹೇಳಿ ಕವಿಯು ಯಕ್ಷ ವೇಷದಲ್ಲಿ ತನ್ನ ಜನ್ಮಭೂಮಿಯನ್ನು ವರ್ಣಿಸಿರುವಂತೆ ತೋರುತ್ತದೆ. ಯಕ್ಷನ ಮನೆಯ ವಿಶೇಷ ಲಕ್ಷಣವೆಂದು ಹೇಳಿರುವ ಅಂದವಾದ ಸೋಪಾನಗಳುಳ್ಳ ಕೊಳವು ಬಿಲ್ಹಣನು ವರ್ಣಿಸಿರುವ ಆ ದೇಶದ ವಾಪಿಗಳನ್ನು ನೆನಪಿಗೆ ತರುವುದು.

ಮೇಲೆ ವಿವರಿಸಿರುವ ಲಕ್ಷಣಗಳೆಲ್ಲವೂ ಹಿಂದೆ ಕಾಶ್ಮೀರದ ಚರಿತ್ರೆಯಲ್ಲಿ ಪ್ರಸಿದ್ಧವಾಗಿದ್ದ ಮಯಗ್ರಾಮ (ಈಗಿನ ಮಣಿಗಾಂ)ಕ್ಕೆ ಸಂಪೂರ್ಣವಾಗಿ ಅನ್ವಯಿಸುತ್ತವೆ. ರಾಜತರಂಗಿಣಿಯಲ್ಲಿರುವ ಮಣಿಗಾಂ ವರ್ಣನೆಯೂ ಇದನ್ನು ಬಲಪಡಿಸುವುದು. ಹಿಂದೆ ಕಾಶ್ಮೀರದ ರಾಜಧಾನಿಯಾಗಿದ್ದ ಹಿರಣ್ಯಪುರದ ಸಮೀಪದಲ್ಲೇ ಇರುವ ಈ ಮಣಿಗಾಂ ಪಟ್ಟಣವೇ ಕವಿಯ ಜನ್ಮಭೂಮಿಯಾಗಿದ್ದಿರಬೇಕೆಂದು ಪ್ರೊ. ಲಕ್ಷ್ಮೀಧರರವರ ನಿರ್ಣಯ.

---

1. ಬ್ರಹ್ಮಾವರ್ತ, ಕುರುಕ್ಷೇತ್ರ, ಗಂಗಾದ್ವಾರ, ವಿಷ್ಣುಪಾದ, ಹಂಸದ್ವಾರ, ಮಾನಸಸರೋವರ.

ಪಂಡಿತ ಆನಂದ ಕೌಲ್‌ರವರು ಈ ವಾದವನ್ನು ಸಮರ್ಥಿಸುವ ಯುಕ್ತಿಯೊಂದನ್ನು ಕೊಟ್ಟಿರುವರು. ಕಾಶ್ಮೀರಿ ಭಾಷೆಯಲ್ಲಿ "ಕಾಳಿದಾಸಸ್ ಛಹ್ ಪಸನಿ ವಿಸಿಹ್ ವುನಾನ್" ಎಂಬ ನಾಣ್ಣುಡಿಯಿರುವುದು. ಕಾಳಿದಾಸನು ತನ್ನ ವಿಷಯದಲ್ಲೇ ಹಳ್ಳಕ್ಕೆ ಬಿದ್ದಿರುವನೆಂದು ಇದರ ತಾತ್ಪರ್ಯ. ಮೇಧಾವಿಯಾಗಿದ್ದರೂ ಯಾವುದೋ ಸಂದರ್ಭದಲ್ಲಿ ಕಾಳಿದಾಸನು ನಡೆಸಿದ ಅಚಾತುರ್ಯನಿಮಿತ್ತವಾಗಿ ಹೊರಟ ಈ ನಾಣ್ಣುಡಿಯು ಇಂದಿಗೂ ಕಾಶ್ಮೀರದಲ್ಲಿ ಆ ದೇಶಭಾಷೆಯಲ್ಲೇ ಪ್ರಚಾರದಲ್ಲಿರುವುದು ಕಾಳಿದಾಸನು ಕಾಶ್ಮೀರಿಯೆಂಬುದನ್ನು ಸಮರ್ಥಿಸುವುದು.[1]

ಕವಿಯ ಗ್ರಂಥಗಳಲ್ಲಿ ಸಿಕ್ಕುವ ಆಧಾರಗಳಿಂದಲೇ ಅವನ ಜನ್ಮಭೂಮಿಯನ್ನು ಖಚಿತವಾಗಿ ನಿರ್ಣಯಿಸಲು ಸಾಧ್ಯವೆಂಬುದನ್ನು ಸಾಮಾನ್ಯವಾಗಿ ಒಪ್ಪಬಹುದಾದರೆ ಈ ವಾದವೇ ಗ್ರಾಹ್ಯತಮವೆಂದು ಸೂಚಿಸಲು ಅಡ್ಡಿಯಿಲ್ಲ. ಆದರೆ, ಬಹಳ ಯುಕ್ತಿಯಿಂದ ಪ್ರತಿಪಾದಿತವಾಗಿದ್ದರೂ ಇದನ್ನು ಸಿದ್ಧಾಂತವೆಂದು ಪರಿಗ್ರಹಿಸಿ ಈ ಸಮಸ್ಯೆಯನ್ನು ನಿರ್ಣಯಿಸಲು ಸಾಧ್ಯವಿಲ್ಲವೆಂದೂ ಕೆಲವರು ಅಭಿಪ್ರಾಯಪಡುತ್ತಾರೆ.[2]

---

## ಗ್ರಂಥಗಳು

---

ಕಾಳಿದಾಸ ವಿರಚಿತವೆಂದು ನಿರ್ದಿಷ್ಟವಾಗಿರುವ ಗ್ರಂಥಗಳನ್ನೆಲ್ಲ ಪರಿಶೀಲಿಸಿದರೆ ಅವುಗಳಲ್ಲಿ ಗುಣ ಶೈಲಿ ತಾರತಮ್ಯಗಳು ವಿಶೇಷವಾಗಿ ಕಂಡುಬರುವುದರಿಂದಲೂ ಅವೆಲ್ಲವನ್ನೂ ಒಬ್ಬನೇ ಬರೆಯುವುದು ಅಸಂಭಾವಿತವಾದುದರಿಂದಲೂ ಪ್ರಕೃತ ಕವಿಯು ರಚಿಸಿದ ಗ್ರಂಥಗಳಾವುವೆಂಬುದೂ ಇವನನ್ನು ಕುರಿತ ಇತರ ಸಂಗತಿಗಳಂತೆ ದೊಡ್ಡ ಸಮಸ್ಯೆಯಾಗಿದೆ.

---

1. J. I. H. Vol. VII. pp. 345—8.
2. V. G. Paranjape, A. B. O. R. I. VIII, iii p. 326.

ಕಾಳಿದಾಸನೆಂದೇ ಹೆಸರುಳ್ಳ ಅನೇಕ ಲೇಖಕರಿದ್ದುದನ್ನು ಹಿಂದೆಯೇ ಗಮನಿಸಿದ್ದರಿಂದ ಕಾಳಿದಾಸಕೃತವೆಂಬ ಗ್ರಂಥಗಳನ್ನು ಅಂತರ ಮತ್ತು ಬಾಹ್ಯ ಪ್ರಮಾಣಗಳ ಆಧಾರದ ಮೇಲೆ ಈ ಅನೇಕ ವ್ಯಕ್ತಿಗಳಿಗೆ ಅವುಗಳ ಯೋಗ್ಯತಾನುಸಾರವಾಗಿ ಹಂಚಬೇಕಾಗಿದೆ. ಇದಕ್ಕೆ ವಿದ್ವತ್ಪರಂಪರೆಯಲ್ಲಿ ಅನುಸ್ಯೂತವಾಗಿ ಬಂದಿರುವ ಪಠನ ಪಾಠನಕ್ರಮವು ಮುಖ್ಯವಾಗಿ ಸಹಕಾರಿ. ಇದು ಕವಿಗಳ ಹೆಸರುಗಳನ್ನೂ ಅವರು ಬರೆದ ಶ್ಲೋಕಗಳನ್ನೂ ಉದ್ಧರಿಸುವ ಸುಭಾಷಿತ ಗ್ರಂಥಗಳಲ್ಲೂ, ಅವರ ಗುಣ ಅಥವಾ ದೋಷಗಳನ್ನು ಪ್ರತಿಪಾದಿಸುವ ಅಲಂಕಾರ ಗ್ರಂಥಗಳಲ್ಲೂ ಅಡಗಿದೆಯೆನ್ನಬಹುದು. ಆದರೆ ಹೆಚ್ಚು ವಿಸ್ತೃತವಾದ ನಮ್ಮ ದೇಶದಲ್ಲಿ, ಈ ಸಂಪ್ರದಾಯವೂ ಕೆಲವು ವೇಳೆ ಪ್ರಾಂತ ಭೇದದಿಂದ ಭಿನ್ನವಾಗಿರುವುದರಿಂದ ಕರ್ತೃತ್ವದ ಸಮಸ್ಯೆಯು ಇನ್ನೂ ಕಠಿಣವಾಗುವುದು.

ಅಂತು, ಕಾಳಿದಾಸಬಹುತ್ವವನ್ನಾಶ್ರಯಿಸಿ ಅವನದೆಂದು ಗೊತ್ತಾಗಿರುವ ಗ್ರಂಥಗಳನ್ನು ಈ ವ್ಯಕ್ತಿಗಳಿಗೆ ಹಂಚುವ ಅನೇಕ ಪ್ರಯತ್ನಗಳು ನಡೆದಿವೆ.

1. ದೇವೇಂದ್ರ[1], ರಾಜಶೇಖರ[2] ಮತ್ತು ಇವರಿಗಿಂತ ಈಚಿನವನಾದ ಅಭಿನಂದನ ಆಧಾರದ ಮೇಲೆ ಕಾಳಿದಾಸಬಹುತ್ವವನ್ನಾಶ್ರಯಿಸಿ ಕಾಳಿದಾಸ ರಚಿತವೆಂಬ ಗ್ರಂಥಗಳನ್ನು ಹೀಗೆ ಹಂಚಲಾಗಿದೆ.[3]

(a) ಕಾಳಿದಾಸ—ಅಡ್ಡ ಹೆಸರು ಮಾತೃಗುಪ್ತ. ಕ್ರಿ.ಪೂ. ಆರನೆಯ ಶತಮಾನದ ಉಜ್ಜಯಿನಿಯ ಹರ್ಷ ವಿಕ್ರಮಾದಿತ್ಯನ ಆಸ್ಥಾನಕ್ಕೆ ಸೇರಿದವನು. ಇವನು ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲಗಳೆಂಬ ನಾಟಕಗಳನ್ನೂ ಸೇತುಬಂಧವೆಂಬ ಮಹಾಕಾವ್ಯವನ್ನೂ ಬರೆದನು.[4]

---

1. ಕವಿಕಲ್ಪಲತೆಯನ್ನು ಬರೆದವನು. 2. ಸೂಕ್ತಿಮುಕ್ತಾವಳಿಯ ಲೇಖಕ.

3. Cf. ಹೈಡಿಂಬವೈದಗ್ಧ್ಯದ ಪೀಠಿಕೆ. ಶ್ರೀಮಾನ್ ಟಿ. ಎಸ್. ನಾರಾಯಣ ಶಾಸ್ತ್ರಿಗಳು.

4. ಕಾಲವನ್ನು ಕುರಿತ ಅಧ್ಯಾಯವನ್ನು ನೋಡಿ. ಪುಟ 42.

(b) ಕಾಳಿದಾಸ— ಅಡ್ಡಹೆಸರು ಮೇಧಾರುದ್ರ. — ಇವನು ಕ್ರಿ. ಪೂ. 56 ರಲ್ಲಿ ಮಾಲವದ ದೊರೆಯಾಗಿದ್ದು ಹೊಸ ಶಕೆಯನ್ನು ಸ್ಥಾಪಿಸಿದ ವಿಕ್ರಮಾರ್ಕನ ಆಸ್ಥಾನಕವಿ; ಕುಮಾರಸಂಭವ, ರಘುವಂಶ, ಮೇಘಸಂದೇಶ ಇವುಗಳನ್ನೂ ಜ್ಯೋತಿರ್ವಿದಾಭರಣವನ್ನೂ ಬರೆದವನು.

(c) ಕಾಳಿದಾಸ—ಅಡ್ಡಹೆಸರು ಕೋಟಿಜಿತ್. ಈತನೇ ಋತುಸಂಹಾರ, ಶೃಂಗಾರಶತಕ, ಶ್ಯಾಮಲಾದಂಡಕ, ನವರತ್ನಮಾಲಾ, ಮುಂತಾದ ಅನೇಕ ಸಣ್ಣ ಕಾವ್ಯಗಳನ್ನೂ ಶ್ರುತಬೋಧವೆಂಬ ಛಂದೋಗ್ರಂಥವನ್ನೂ ಬರೆದವನು.

2. ಸಂಸ್ಕೃತಕವಿಚರಿತಕಾರರು ರಾಜಶೇಖರನ ಆಧಾರದ ಮೇಲೆ ಮೂವರು ಕಾಳಿದಾಸರನ್ನೊಪ್ಪಿದರೂ ಮೇಲೆ ನಿರೂಪಿಸಿದ ಗ್ರಂಥ ವಿಭಾಗವನ್ನು ಸ್ವಲ್ಪ ವ್ಯತ್ಯಾಸಪಡಿಸಿರುವರು.

(a) ಮಗಧದೇಶದ ಕಾಳಿದಾಸ—ಮಾಲವಿಕಾಗ್ನಿಮಿತ್ರದ ಭರತವಾಕ್ಯ ಹಾಗೂ ಭಿಟಾಪದಕಗಳ ಆಧಾರದ ಮೇಲೆ ಕ್ರಿ. ಪೂ ಎರಡನೆಯ ಶತಮಾನದವನಾಗುವ ಇವನೇ ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲಗಳನ್ನು ಬರೆದವನು.

(b) ಕಲಿ ಸಂವತ್ಸರದ 3068 ಅಥವಾ ಕ್ರಿ. ಪೂ. 34ರಲ್ಲಿದ್ದ ಕಾಳಿದಾಸನೊಬ್ಬನು[1] ಕುಮಾರಸಂಭವ, ರಘುವಂಶ, ಮೇಘಸಂದೇಶ ಮತ್ತು ಜ್ಯೋತಿರ್ವಿದಾಭರಣಗಳನ್ನು ಬರೆದನು.

(c) ಮೂರನೆಯವನೇ ಮೂಕಶಂಕರರ (ಕ್ರಿ. ಶ. 397-436 ಶಿಷ್ಯನಾದ ಕಾಳಿದಾಸನೆಂಬುವನು ಇವನಿಗೇ ಕೋಟಿಜಿತ್ ಎಂಬ ನಾಮಾಂತರವೂ ಇದ್ದಂತೆ ತೋರುವುದು. ಋತುಸಂಹಾರ, ಶೃಂಗಾರ ತಿಲಕ, ಶ್ರುತಬೋಧ, ರಥಾಂಗದೂತ, ಕವಿಕಂಠಪಾಶ, ರಾಕ್ಷಸಕಾವ್ಯ

---

1. ಜ್ಯೋತಿರ್ವಿದಾಭರಣದ "ಕಾವ್ಯತ್ರಯಂ ಸುಮತಿಕೃತ್" ಎಂಬ ಶ್ಲೋಕವೂ ಮತ್ತು ಅದರ ಶೇಷಾಧ್ಯಾಯದ "ವರ್ಷೇ ಸಿಂಧುರ ದರ್ಶನಾಂಬರ ಗುಣೈರ್ಯಾತೇ ಕಲೌಸಮ್ಮಿತೇ, ಮಾಸೇ ಮಾಘ (ಧ?)ವ ಸಂಜ್ಞಿತೇತ್ರವಿಹಿತೋ ಗ್ರಂಥಕ್ರಿಯೋಪಕ್ರಮಃ" ಎಂಬುದೂ ಇದಕ್ಕೆ ಆಧಾರಗಳು.

(20 ಶ್ಲೋಕಗಳುಳ್ಳ) ಪುಷ್ಪಬಾಣವಿಲಾಸ ಮುಂತಾದ ಸಣ್ಣ ಗ್ರಂಥಗಳೂ, ಘಟಸ್ತವ, ಸಕಲಜನನೀಸ್ತೋತ್ರ, ಮಾತೃಕಾಪುಷ್ಪಮಾಲಾಸ್ತವ, ನವರತ್ನಮಾಲಾ, ಅಂಬಾಷ್ಟಕ ಮುಂತಾದ ಸ್ತೋತ್ರಗಳೂ ಇವನಿಂದ ರಚಿತವಾದುವು[1].

ಶ್ರೀ ಎಸ್. ಪಿ. ಪಂಡಿತ್‌ರವರು "ರಘುವಂಶದ ಕರ್ತೃವೂ, ಕುಮಾರಸಂಭವ, ಮೇಘಸಂದೇಶ ಮತ್ತು ನಾಟಕಗಳ ಕರ್ತೃವೂ ಒಬ್ಬನೇ?" ಎಂಬ ಶಿರೋನಾಮೆಯಲ್ಲಿ[2] ಡಾ|| ವೆಬರ್‌ರವರ ವಾದವನ್ನು[3] ಖಂಡಿಸುತ್ತಾ ಅರ್ಥಾತ್ ಮೇಲ್ಕಂಡ ವಾದಗಳನ್ನು ಖಂಡಿಸಿರುವರು. ಕುಮಾರಸಂಭವ, ರಘುವಂಶ, ಮೇಘ ಸಂದೇಶ, ಶಾಕುಂತಲ, ವಿಕ್ರಮೋರ್ವಶೀಯ, ಇವೆಲ್ಲವೂ ಏಕಕರ್ತೃಕವೆಂಬ ವಾದಕ್ಕೆ ಇವರು ಕೊಟ್ಟಿರುವ ಯುಕ್ತಿಗಳನ್ನು ಸಂಗ್ರಹವಾಗಿ ಪರಿಶೀಲಿಸಬಹುದು.

1. ಪ್ರಚಾರದಲ್ಲಿರುವ ಸಂಪ್ರದಾಯವು ಒಬ್ಬನೇ ಕವಿಯು ಕಾವ್ಯ ನಾಟಕಗಳ ನಿರ್ಮಾತೃವೆಂದೆನ್ನಿಸುವುದು. ದಿನಕರ, ಚಾರಿತ್ರವರ್ಧನರೆಂಬ ವ್ಯಾಖ್ಯಾನಕಾರರಿಬ್ಬರೂ ರಘುವಂಶ ಕುಮಾರಸಂಭವಗಳು ಏಕಕರ್ತೃಕವೆಂದಿರುವರು.[4] ಮಲ್ಲಿನಾಥನೂ 'ಕಾಳಿದಾಸೀಯ ಕಾವ್ಯತ್ರಯವನ್ನು ವ್ಯಾಖ್ಯಾನಮಾಡುವೆವು' ಎಂದು ಪ್ರತಿಜ್ಞೆ ಮಾಡಿರುವನು.

2. ಮೂರು ಕಾವ್ಯಗಳಲ್ಲೂ ಒಂದೇ ವಿಧವಾದ ಪದಲಾಲಿತ್ಯ, ಚುರುಕಾದ ಪ್ರತಿಭಾಶಕ್ತಿ, ಉಪಮೆಗಳ ಬಾಹುಳ್ಯ, ಹಿಮಾಲಯ, ವಿಂಧ್ಯ, ಗಂಗಾದಿ ಪ್ರದೇಶಗಳನ್ನು ವರ್ಣಿಸುವುದರಲ್ಲಾಸಕ್ತಿ, ಗ್ರಾಮ ಮತ್ತು ಆಶ್ರಮ ವಾಸಿಗಳನ್ನು ಉತ್ಕರ್ಷಿಸುವಿಕೆ, ರಾಜಸ್ಥಾನದ ಪರಿಚಯ—ಇವುಗಳು ಪಾಠಕರ ಕಣ್ಣುಮುಂದೆ ಸ್ಪಷ್ಟವಾಗಿ ಮೆರೆಯುವುವು. ನಾಟಕಗಳಿಗೂ ಕಾವ್ಯಗಳಿಗೂ (ಅವು ಬೇರೆ ಬೇರೆ ಜಾತಿಯವಾದುದರಿಂದ)

---

1. ಸಂಸ್ಕೃತಕವಿಚರಿತೆ. ಪ್ರಥಮ ಸಂಪುಟ. ಪು. 69-105 ಮತ್ತು 89-96.

2.

3.

4. ರಘುವಂಶ VII. 15 ಕ್ಕೆ ಇವರ ವ್ಯಾಖ್ಯಾನವನ್ನು ನೋಡಬಹುದು.

ಇಂತಹ ಸಾಮ್ಯವು ಹೆಚ್ಚಾಗಿಲ್ಲದಿದ್ದರೂ ಅವಕಾಶವಿರುವ ಕಡೆ ಸ್ಪಷ್ಟವಾಗಿಯೂ ಸನ್ನಿಹಿತವಾಗಿಯೂ ಇರುವುದು.

3. ಪುನರುಕ್ತಿ ಮತ್ತು ಸಾಮ್ಯವಿರುವ ಭಾಗಗಳನ್ನು ಈ ರೀತಿ ಗುರ್ತಿಸಬಹುದು.

| ರಘುವಂಶ | ಕುಮಾರ ಸಂಭವ |
|---|---|
| VII. 13-25 (ವಿವಾಹವರ್ಣನೆ) | VII. 65-88 |
| VIII. 46-70 (ಅಜವಿಲಾಪ) | IV. 20-42 (ರತಿ ವಿಲಾಪ) |
| IX. 24-47 (ವಸಂತವರ್ಣನೆ) | III. 25-39 |
| XV. 29 ff. (ಮಧುರಾವರ್ಣನೆ) | V. -37 (ಓಷಧಿ ಪ್ರಸ್ಥದ ವರ್ಣನೆ) |
| X. (ವಿಷ್ಣುಸ್ತೋತ್ರ) | II. (ಬ್ರಹ್ಮಸ್ತುತಿ) |

4. ಎರಡು ಕಾವ್ಯಗಳಲ್ಲೂ ಕಾಳಿದಾಸನು ಒಂದೊಂದು ವಿಷಯಕ್ಕೆ ಗೊತ್ತಾಗಿ ಒಂದೊಂದು ವೃತ್ತವನ್ನು ಪ್ರಯೋಗಿಸಿರುವನು.

| | | | |
|---|---|---|---|
| ಸ್ತೋತ್ರಗಳು | ಅನುಷ್ಟುಭ್ | ರ. ವಂ. X.; | ಕು.ಸಂ. II. |
| ಮದುವೆ | ಉಪಜಾತಿ | ರ. ವಂ. VII; | ಕು.ಸಂ. VII. |
| ಗೋಳಾಟ | ವಿಯೋಗಿನೀ | ರ. ವಂ. VIII; | ಕು.ಸಂ. IV. |
| ಸುರತ | ರಥೋದ್ಧತಾ | ರ. ವಂ. XIX; | ಕು.ಸಂ. VIII |

ಹೀಗೆಯೇ ಮೇಘಸಂದೇಶ ಮತ್ತು ನಾಟಕಗಳನ್ನು ಪರಸ್ಪರ ಹೋಲಿಸಿದರೂ ಇಂತಹ ಸಾಮ್ಯಗಳು ಕಂಡುಬರುವುವು.[1]

---

1. ಇದಲ್ಲದೆ, ಶಿವಭಕ್ತಿಯ ನಿರೂಪಣೆಯಲ್ಲೂ (ರಘುವಂಶದ ಮೊದಲನೆಯ ಶ್ಲೋಕ, ನಾಟಕಗಳ ನಾಂದೀ ಶ್ಲೋಕಗಳು, ಮೇಘ ಸಂದೇಶ (I. 37-40) ಬೇಟೆಯ ವರ್ಣನೆಯಲ್ಲೂ (ಶಾಕುಂ. II-5 ರಘುವಂಶ IX. 49) ಸಾಮ್ಯವೂ ಸಂವಾದವೂ ಕಂಡುಬರುತ್ತದೆ. ಶಿರೀಷ, ನವಮಾಲಿಕಾ, ಪಾಟಲ ಕುಸುಮಗಳು ರಘುವಂಶ, ಕುಮಾರಸಂಭವ, ಮತ್ತು ನಾಟಕಗಳಲ್ಲೂ ಕವಿಗೆ ಅಭಿಮತವಾಗಿವೆ. ವಿದ್ವಾಂಸರನ್ನು ತೃಪ್ತಿಪಡಿಸುವುದರಲ್ಲಾಸೆಯು ಶಾ. I.2. ವಿಕ್ರ. I-2. ರಘು. I-25 ಈ ಸ್ಥಳಗಳಲ್ಲಿ ಒಂದೇ ರೀತಿಯಲ್ಲಿ ವ್ಯಕ್ತವಾಗುತ್ತದೆ. ಮತ್ತು "ಮನೋ ಹಿ ಜನ್ಮಾಂತರ ಸಂಗತಿಜ್ಞಂ" (ರ. ವಂ. VII-15) ಎಂಬುದು 'ರಮ್ಯಾಣಿ ವೀಕ್ಷ್ಯ' ಎಂಬ ಶಾಕುಂತಲ ಶ್ಲೋಕದಲ್ಲಿ ಪುನರುಕ್ತವಾಗಿದೆ.

ಈ ಕಾರಣಗಳಿಂದ ಕುಮಾರಸಂಭವ, ರಘುವಂಶ, ಮೇಘಸಂದೇಶ, ಶಾಕುಂತಲ, ವಿಕ್ರಮೋರ್ವಶೀಯ—ಎಲ್ಲವೂ ಏಕಕರ್ತೃಕವೆಂದು ಸಮರ್ಪಕವಾಗಿ ಸಿದ್ಧಾಂತಿಸಲಾಗಿದೆ.[1]

ಕಾಳಿದಾಸನ ಪ್ರತಿಭೆಯು ಬೆಳೆದುಕೊಂಡು ಹೋದ ಕ್ರಮವನ್ನು ನಿರ್ಧರಿಸಲು ಅವನ ಗ್ರಂಥಗಳು ಉತ್ಪನ್ನವಾದ ಕ್ರಮವು ಸಹಕಾರಿ. ಆದರೆ ಇದಕ್ಕೂ ತೃಪ್ತಿಕರವಾದ ಬಾಹ್ಯ ಪ್ರಮಾಣಗಳಿಲ್ಲದಿರುವುದರಿಂದ ಗ್ರಂಥಗಳ ಆಂತರ ಪ್ರಮಾಣವನ್ನೇ ಆಶ್ರಯಿಸಬೇಕಾಗಿದೆ. ಈ ಮಾರ್ಗವನ್ನನುಸರಿಸಿ ನಡೆಸಿರುವ ಪ್ರಯತ್ನಗಳೂ ವಿವಿಧವಾಗಿವುದರಿಂದ ಸರ್ವಸಮ್ಮತವಾದ ಸಿದ್ಧಾಂತವಾವುದೂ ಗೋಚರವಾಗಿಲ್ಲ.[2]

1. ಡಾ|| ಹೂಟ್‌ರವರು ವೃತ್ತಗಳ ಆಧಾರದ ಮೇಲೆ ಗ್ರಂಥಗಳ ಉತ್ಪತ್ತಿ ಕ್ರಮವನ್ನು ನಿರ್ಧರಿಸುವಂತೆ ಒಂದು ಕೋಷ್ಟಕವನ್ನು ಕೊಟ್ಟು, ರಘುವಂಶ, ಮೇಘಸಂದೇಶ, ಮಾಲವಿಕಾಗ್ನಿಮಿತ್ರ, ಶಾಕುಂತಲ, ಕುಮಾರಸಂಭವ, ಕಡೆಯಲ್ಲಿ ವಿಕ್ರಮೋರ್ವಶೀಯ ಎಂದು ಅವುಗಳ ಉತ್ಪತ್ತಿ ಕ್ರಮವನ್ನು ಸೂಚಿಸಿರುವರು. ಡಾ|| ಹಿಲ್ಲೆಬ್ರಾಂಟ್‌ರವರು[3] ಈ ಮತವು ಅಗ್ರಾಹ್ಯವೆಂದೂ ಡಾ|| ಕೀತ್‌ರವರು[4] ಈ ಕ್ರಮವೇ ತಪ್ಪೆಂದೂ ಖಂಡಿಸಿರುವರು.

ಶ್ರೀ ಆರ್. ಡಿ. ಕರ್ಮಾರ್ಕರ್‌ರವರು ಮೊದಲು ಕಾವ್ಯಗಳ ಆಮೇಲೆ ನಾಟಕಗಳ ಉತ್ಪತ್ತಿ ಕ್ರಮಗಳನ್ನು ಪ್ರತ್ಯೇಕವಾಗಿ ವಿಮರ್ಶಿಸಿ ಕೊನೆಗೆ ಒಟ್ಟು ಗ್ರಂಥಗಳ ಉತ್ಪತ್ತಿಕ್ರಮವನ್ನು ಈ ರೀತಿ ನಿರ್ಧರಿಸಿರುವರು.[5]

---

1. ಮಾಲವಿಕಾಗ್ನಿಮಿತ್ರದ ಕರ್ತೃತ್ವವನ್ನು ಕುರಿತ ಸಂದೇಹವನ್ನು ಅದನ್ನು ಕುರಿತ ಅಧ್ಯಾಯದಲ್ಲೂ ಋತುಸಂಹಾರವು ಕಾಳಿದಾಸ ಕೃತವೆಂಬುದನ್ನು ತದ್ವಿಷಯಕವಾದ ಬೇರೊಂದು ಅಧ್ಯಾಯದಲ್ಲೂ ಚರ್ಚಿಸಲಾಗಿದೆ.

2. S. K. De. I. H. Q. XVI ii. part I, p. 309; Keith Hist. Skt. Lit. p. 96; Hillebrandt-Kalidasa p. 28.

3. 'Kalidasa' p. 28.

4. Skt. Dr. p. 167—"The points relied upon by Huth are of minimal importance."

5. P.O.C. II p. 239 ff.

ಋತುಸಂಹಾರ, ಕುಮಾರಸಂಭವ, ಮಾಲವಿಕಾಗ್ನಿಮಿತ್ರ, ಮೇಘಸಂದೇಶ, ವಿಕ್ರಮೋರ್ವಶೀಯ, ರಘುವಂಶ, ಶಾಕುಂತಲ.

ಶ್ರೀ ಕೆ. ಜಿ. ಶಂಕರ್‌ರವರು ಮತ್ತೊಂದು ಕ್ರಮವನ್ನು ಸೂಚಿಸುವರು[1] ಋತುಸಂಹಾರ (ಕವಿತಾ ಮಾರ್ಗದಲ್ಲಿ ಮೊದಮೊದಲು ಪ್ರವರ್ತಿಸುವ ಬಾಲಕವಿಗಳಿಗನುಗುಣವಾದ ವರ್ಣನಾತ್ಮಕ ಕಾವ್ಯ), ಕುಮಾರಸಂಭವ (ಮೇಲೆ ಸೂಚಿಸಿದ ಸಂಸ್ಕಾರವೇ ಇಲ್ಲಿಯೂ ಮುಂದುವರಿದಿದೆ), ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಮೇಘಸಂದೇಶ, ಶಾಕುಂತಲ, ರಘುವಂಶ—

ಋತುಸಂಹಾರ, ರಘುವಂಶಗಳನ್ನು ಬಿಟ್ಟು ಉಳಿದ ಕಾವ್ಯನಾಟಕಗಳಲ್ಲಿ ಚಿತ್ರಿತವಾಗಿರುವ ದಾಂಪತ್ಯಜೀವನದ ಧ್ಯೇಯವನ್ನು ಗಮನಿಸಿದರೆ ಅನೇಕ ಸಂಗತಿಗಳು ಹೊರಬೀಳುವುವು.—ಮಾಲವಿಕಾಗ್ನಿಮಿತ್ರದ ನಾಯಕ ನಾಯಿಕೆಯರಲ್ಲಿ ಕೆಲವು ನ್ಯೂನತೆಗಳಿವೆ. ಇವರ ವರ್ತನೆಯು ಕಾಮುಕ ಕಾಮುಕಿಯರ ವರ್ತನೆಗಿಂತ ಮೇಲೇರುವುದಿಲ್ಲ. ಆದ್ದರಿಂದ ಇದು ಲೋಕಾನುಭವದ ಪೆಟ್ಟು ತಿನ್ನದಿದ್ದ ತಾರುಣ್ಯದ ಕೃತಿಯೆನ್ನಬಹುದು. ಕುಮಾರ ಸಂಭವದಲ್ಲಿ ಶ್ರೀ ರವೀಂದ್ರನಾಥ ಟಾಗೂರರವರು ಸೂಚಿಸಿರುವಂತೆ ಶಾಸ್ತ್ರಲೋಕಾಚಾರಗಳನ್ನು ಮೀರದ ಶುದ್ಧಪ್ರೇಮವು ಗೋಚರವಾಗುವುದು. ಇಂತಹ ಅನುಭವವು ಸ್ವಲ್ಪ ಮಟ್ಟಿಗಾದರೂ ಪರಿಣತ ವಯಸ್ಕನಿಗೇ ಸಾಧ್ಯ. ಮೇಘಸಂದೇಶದಲ್ಲಿ ದಂಪತಿಗಳು ಪರಸ್ಪರ ಗಾಢಾನುರಕ್ತರು. ಏಕಪತ್ನೀವ್ರತ, ಪಾತಿವ್ರತ್ಯಗಳನ್ನು ಮೀರದವರು. ವಿಕ್ರಮೋರ್ವಶೀಯದಲ್ಲಿ ಇಂತಹ ಉದಾತ್ತಭಾವನೆಗೆ ಅವಕಾಶವಿಲ್ಲ. ಅಲ್ಲಿಯೂ ನಾಯಕ ನಾಯಿಕೆಯರ ಪ್ರೇಮವು ಗಾಢವೇನೋ ಹೌದು. ಒಂದು ರೀತಿಯಲ್ಲಿ ದೃಢವೆಂದರೂ ಎನ್ನಬಹುದು. ಇದರಲ್ಲಿ ಒಬ್ಬ ವೇಶ್ಯೆಯು—ದೇವ ವೇಶ್ಯೆಯಿರಬಹುದು — ನಾಯಿಕೆ. ಅವಳು ಹೆತ್ತ ಮಗನನ್ನು ಹುಟ್ಟಿದ ಕೂಡಲೇ ಬಿಟ್ಟುಬಿಡುವಳು. ಇವಳ ಪ್ರೇಮದ ಗಾಢತೆಗೆ ಸ್ವಾರ್ಥತೆಯ ಕಳಂಕವಿದೆ. ಇವಾವುದೂ ಮೇಘಸಂದೇಶದ ನಾಯಕ ನಾಯಿಕೆಯರಲ್ಲಿ ಕಾಣಿಸುವುದಿಲ್ಲ. ಇವರು

1. Q.J.M.S. IX p. 54 ff.

ಶಾಕುಂತಲದ ನಾಯಕನಾಯಿಕೆಯರಂತೆ ವಿರಹಾಗ್ನಿಯ ತಾಪವನ್ನು ಸಹಿಸಿ ದೇವಭಕ್ತಿ ರೂಪವಾದ ತಪಸ್ಸಿನಿಂದ ಪರಸ್ಪರ ಸಮಾಗಮಕ್ಕೆ ಅರ್ಹತೆಯನ್ನು ಪಡೆಯುವರು. ಆದುದರಿಂದ ಮೇಘಸಂದೇಶವು ವಿಕ್ರಮೋರ್ವಶೀಯಕ್ಕಿಂತ ಈಚಿನದೆನ್ನಬೇಕು. ಈ ವಾದಸರಣಿಯಿಂದಲೇ ಶಾಕುಂತಲಕ್ಕೆ ಸಲ್ಲಬೇಕಾದ ಸ್ಥಾನವು ವ್ಯಕ್ತವಾಗುವುದು. ರಘುವಂಶ, ಶಾಕುಂತಲಗಳಲ್ಲಿ ಶಾಂತಿ ಉದಾತ್ತತೆಗಳು ಹೆಚ್ಚಾಗಿ ಕಾಣಬರುವುವು. ಶಾಕುಂತಲದ ಭರತವಾಕ್ಯದಲ್ಲಿ ಕವಿಯು ಪುನರ್ಜನ್ಮವಿಚ್ಛೇದವನ್ನೆಳಸಿದರೂ ಆದನ್ನು ಕೊನೆಯ ಕೃತಿಯೆನ್ನುವುದಕ್ಕಿಂತ ಮೂರು ನಾಲ್ಕು ರಾಜರು ಸನ್ಯಾಸವನ್ನು ಸ್ವೀಕರಿಸಿದರೆಂದು ಹೇಳಿ ಅದರ ನಿಯಮಗಳನ್ನು ವಿಶದಗೊಳಿಸುವ ರಘುವಂಶವೇ ಕೊನೆಯದೆನ್ನುವುದು ಹೆಚ್ಚು ಸಮಂಜಸವೆಂದು ತೋರುವುದು. ಆದುದರಿಂದ ಋತುಸಂಹಾರ, ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಕುಮಾರಸಂಭವ, ಮೇಘಸಂದೇಶ, ಶಾಕುಂತಲ, ರಘುವಂಶ ಎಂಬ ಉತ್ಪತ್ತಿ ಕ್ರಮವೇ ಹೆಚ್ಚು ಸಂಭಾವಿತ.

---

1. ಈ ಗ್ರಂಥಗಳ ಪೌರ್ವಾಪರ್ಯವನ್ನು ಕುರಿತ ಅಭಿಪ್ರಾಯಗಳಲ್ಲಿ ಮುಖ್ಯವಾದುವನ್ನು ಗಮನಿಸಬಹುದು.

(a) Mālavikāgnimitra—not an early work. (Gesh. Ind. Lit. III, p. 226; S. K. De.—I. H. Q. XVI. ii. Part I, p. 403.)

(b) Mālavikāgnimitra—'a presumably youthful production of Kālidāsa'. (S. K. De.—Cultural Heritage of India. III, p. 660.)

(c) Vikramorvasiya—'the last of Kālidāsa's dramas.' (Sylvain Levi—Le Theatre Indien. p. 181; Ryder—Everyman's Library edition of Kalidasa's Translations. p. 115.)

(d) Vikramorvasiya—'an immature production.' (S. K. De. Cultural Heritage of India. III. p. 661.)

(e) Kumārasambhava—'Kālidāsa wrote it as a novice'—(K. G. Shankar. Q. J. M. S. VIII, p. 281.)

# ಅನುಬಂಧ

ಕಾಳಿದಾಸ ಕೃತವೆಂಬ ಪ್ರವಾದಕ್ಕೊಳಪಟ್ಟು ವಾಸ್ತವವಾಗಿ ಅವನಿಂದ ರಚಿತವಲ್ಲದ ಗ್ರಂಥಗಳು—

(1) ಜಾನಕೀಹರಣ, (2) ನಲೋದಯ, (3) ರಾಕ್ಷಸಕಾವ್ಯ (ಬುದ್ಧಿ ವಿನೋದ ಅಥವಾ ವಿದ್ವದ್ವಿನೋದ (ಕಾವ್ಯ), (4) ರಾವಣವಧ (ಸೇತು ಬಂಧ), (5) ಘಟಕರ್ಪರ, (6) ದುರ್ಘಟಕಾವ್ಯ, (7) ಪುಷ್ಪಬಾಣವಿಲಾಸ, (8) ಮಹಾಪದ್ಯಷಟ್ಕ, (9) ಬೃಂದಾವನ ಕಾವ್ಯ, (10) ಶೃಂಗಾರ ತಿಲಕ, (11) ಶೃಂಗಾರ ರಸಾಷ್ಟಕ, (12) ಶೃಂಗಾರ ಸಾರಕಾವ್ಯ, (13) ಪ್ರಶ್ನೋತ್ತರ ಮಾಲಾ, (14) ನವರತ್ನಮಾಲಾ, (15) ಮಂಗಲಾಷ್ಟಕ, (16) ಶಾಮಲಾದಂಡಕ, (17) ಸರಸ್ವತೀ ಸ್ತೋತ್ರ, (18) ಅಂಬಾಸ್ತವ, (19) ಕಲ್ಯಾಣಸ್ತವ, (20) ಕಾಳೀ ಸ್ತೋತ್ರ, (21), (22) ಗಂಗಾಷ್ಟಕಗಳು, (23) ಚಂಡಿಕಾದಂಡಕಸ್ತೋತ್ರ, (24) ಚರ್ಚಾಸ್ತವ, (25) ಮಕರಂದಸ್ತವ, (26) ಲಕ್ಷ್ಮೀಸ್ತವ, (27) ಲಘುಸ್ತವ, (28) ಕುಂತೇಶ್ವರದೌತ್ಯ (ನಾಟಕ ?), (29) ಹಾಸ್ಯಾರ್ಣವ, (30) ಕಾಳಿದಾಸ ಪ್ರಹಸನ (ಲಂಬೋದರ ಪ್ರಹಸನ), (31) ಕಾವ್ಯ ನಾಟಕಾಲಂಕಾರಾಃ, (32) ವೃತ್ತಹಾರಾವಳಿ, (33) ಶ್ರುತಬೋಧ, (34) ರತ್ನಕೋಶ, (35) ಜ್ಯೋತಿರ್ವಿದಾಭರಣ, (36) ಶುದ್ಧಿ ಚಂದ್ರಿಕಾ, (37) ವೈದ್ಯಮನೋರಮಾ—ಇವುಗಳ ಲೇಖಕರು ತಮ್ಮ ನ್ಯೂನತೆಗಳನ್ನು ಮನಗಂಡು ತಮ್ಮ ಹೆಸರೇ ಗ್ರಂಥಗಳಲ್ಲಿ ಬಂದರೆ ಪ್ರಚಾರವು ಸಿಕ್ಕಲಾರದೆಂದು ಹೆದರಿ ಶಾಶ್ವತ ಕೀರ್ತಿಯನ್ನು ಪಡೆದಿದ್ದ ಕಾಳಿದಾಸನ ಹೆಸರನ್ನೇ ಜೋಡಿಸಿರುವರೆಂದು ವಿಮರ್ಶಕರ ಅಭಿಪ್ರಾಯ.

---

(f) Kumārasambhava—unquestionably one of Kālidāsa's mature productions. (P. C. Lahiri. Cultural Heritage of India. III. p. 627.)

(g) ' Raghuvaṃsa prior to Kumarasambhava'—expression of modesty in the opening verses—(Ryder, op. cit.)

# ಕಾಳಿದಾಸನ ಕಾಲ

ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿ ಗ್ರಂಥಗಳಿಗೂ ಲೇಖಕರಿಗೂ ಗೊತ್ತು ಮಾಡುವ ಕಾಲಗಳು ಮುಂದೆ ಕಿತ್ತು ಎಸೆಯುವುದಕ್ಕಾಗಿ ತತ್ಕಾಲದಲ್ಲಿ ನೆಟ್ಟ ಗುಂಡುಸೂಜಿಗಳಂತೆ ಎಂದು ವಿಟ್ನಿಯವರು ಹೇಳಿರುವರು.[1] ಕಾಲ ನಿರ್ಣಯಕ್ಕೆ ಬೇಕಾಗುವ ಸಂಶಯ ವಿಪರ್ಯಯ ಗ್ರಸ್ತವಲ್ಲದ ಪ್ರಮಾಣಗಳು ದುರ್ಲಭ. ಕಾಳಿದಾಸನ ಕಾಲವನ್ನು ಕುರಿತು ಅತಿ ದೀರ್ಘಕಾಲ ( ಸುಮಾರು ಒಂದು ಶತಮಾನ ) ದಿಂದ ಶೋಧನೆಗಳು ನಡೆದಿದ್ದರೂ ವಿಮರ್ಶಕರ ಅಭಿಪ್ರಾಯಗಳು ಭಿನ್ನ , ಅನೇಕ ವೇಳೆ ಪರಸ್ಪರ ವಿರುದ್ಧವಾದ್ದರಿಂದಲೂ, ಅವುಗಳನ್ನು ಪ್ರತಿಪಾದಿಸುವ ಭಾಷಾಶೈಲಿಗಳು ಸ್ಪಷ್ಟವಲ್ಲದಿರುವುದರಿಂದಲೂ, ಮತಗಳನ್ನು ಸ್ಥೂಲವಾಗಿ ವಿವರಿಸುವುದೂ ಅಸಾಧ್ಯ.[2] ಜೊತೆಗೆ ಅನೇಕ ವೇಳೆ ಅತಿ ಪ್ರಾಚೀನತೆಯನ್ನು ಸಂಪಾದಿಸಿದಷ್ಟೂ ಕವಿಗೂ ಅವನ ಗ್ರಂಥಗಳಿಗೂ ಹೆಚ್ಚಿನ ಪ್ರಾಶಸ್ತ್ಯ ಬರುವುದೆಂಬ ಭಾವನೆಯನ್ನು ಕೆಲವರು ವ್ಯಕ್ತಗೊಳಿಸಿರುವುದೂ, ಪಾಶ್ಚಾತ್ಯ ವಿದ್ವಾಂಸರಲ್ಲಿ ಕೆಲವರು ಗ್ರಂಥಗಳ ಅರ್ವಾಚೀನತೆಯನ್ನು ಸಾಧಿಸುವುದರಿಂದ ಅವುಗಳಿಗೂ ಅವನ್ನು ಬರೆದ ಕವಿಗೂ ಇರುವ ಉತ್ಕರ್ಷವನ್ನು ಕಡಿಮೆ ಮಾಡಲೆಳಸುವುದೂ ಗೋಚರವಾಗುವುವು. ಅಲ್ಲದೆ ಒಬ್ಬರೇ ಮೊದಲು ಒಂದು ಮತವನ್ನು ಸಮರ್ಥಿಸಿ ಕೊನೆಗೆ ತಾವೇ ಅದಕ್ಕೆ ವಿರುದ್ಧವಾದ ಮತವನ್ನು ಅವಲಂಬಿಸಿರುವುದೂ ಉಂಟು[3]. ಕ್ರಿ. ಪೂ. ಎಂಟನೆಯ ಶತಮಾನದಿಂದ ಕ್ರಿ. ಶ. ಹನ್ನೊಂದನೆಯ

---

(h) 'Later Cantos of Kumārasambhava also genuine—though they lack the poetic qualities of the earlier ones.' ( Ryder op. cit. )

1. Sanskrit Grammar-Introduction.
2. Max Muller.—" India, what can it teach us ? " p. 30. f.n.
3. ಕೆ. ಬಿ. ಪಾಠಕ್ (Ind. Ant. XI p. 265) ರವರು ಮೊದಲು ಕ್ರಿ. ಶ. 6ನೆಯ ಶತಮಾನ ವಾದವನ್ನೊಪ್ಪಿ ನಂತರ, (ಮೇಘ ಸಂದೇಶದ ಪೀಠಿಕೆಯಲ್ಲಿ)

ಶತಮಾನದವರೆಗಿನ ದೀರ್ಘವಾದ ಅವಧಿಯಲ್ಲಿ ಕವಿಯ ಕಾಲವನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ನಿರ್ಣಯಿಸಿರುವುದೇ ಸಮಸ್ಯೆಯ ಕಾಠಿಣ್ಯವನ್ನು ಚೆನ್ನಾಗಿ ವ್ಯಕ್ತಪಡಿಸುವುದು. ಇಷ್ಟುಮಟ್ಟಿನ ವಿಪ್ರತಿಪತ್ತಿಯಿದ್ದರೂ, ಆಯಾ ಮತದ ಪ್ರಾಬಲ್ಯ ದೌರ್ಬಲ್ಯಗಳನ್ನು ಸೂಕ್ಷ್ಮಮತಿಗಳಾದ ಪಾಠಕರು ನಿರ್ಣಯಿಸಿಕೊಳ್ಳಲು ಸಾಧ್ಯವೆಂದು ಮುಖ್ಯವಾದ ಮತಗಳನ್ನೂ ಅವುಗಳನ್ನು ಕುರಿತು ಹುಟ್ಟಿರುವ ಟೀಕೆಗಳನ್ನೂ ಸಂಗ್ರಹಿಸಿ ನಿರೂಪಿಸಲಾಗಿದೆ.

ಕಾಲ ನಿರ್ಣಯಕ್ಕೆ ಬೇಕಾಗುವ ನಿರ್ದುಷ್ಟವಾದ ಆಧಾರಗಳಿಲ್ಲದಿರುವಾಗ ಅದರ ಮೇಲ್ಮಟ್ಟ ಕೆಳಮಟ್ಟಗಳನ್ನು ಸ್ಥೂಲವಾಗಿ ನಿರ್ಧರಿಸಿ ಆ ಅವಧಿಯನ್ನೇ ಕವಿಯ ಜೀವಿತ ಕಾಲವನ್ನಾಗಿ ಗೊತ್ತುಮಾಡುವುದು ವಾಡಿಕೆಯಾಗಿದೆ. ಪ್ರಮಾಣಗಳು ಹೆಚ್ಚು ಹೆಚ್ಚಾಗಿ ಸಿಕ್ಕಿದಷ್ಟೂ ಈ ಮೇಲ್ಮಟ್ಟ ಕೆಳಮಟ್ಟಗಳ ಅವಧಿಯಲ್ಲಿ ಇನ್ನೂ ಖಚಿತವಾಗಿ ಕಾಲವನ್ನು ನಿರ್ಣಯಿಸುವುದಕ್ಕೆ ಸಾಧ್ಯ. ಈ ಮಾರ್ಗವನ್ನನುಸರಿಸಿ ಕಾಳಿದಾಸನ ಕಾಲದ ಮೇಲ್ಪಟ್ಟ ಕೆಳಮಟ್ಟಗಳನ್ನು ನಿರ್ಧರಿಸುವುದು ಆವಶ್ಯಕ. ಕೆಳಮಟ್ಟವನ್ನು ನಿರ್ಧರಿಸಲು ಕೆಲವು ಬಾಹ್ಯ ಪ್ರಮಾಣಗಳು ಸ್ವಲ್ಪ ಮಟ್ಟಿಗೆ ಸಹಕಾರಿಗಳಾಗುವುವು.

ಕ್ರಿ. ಶ. 9ನೆಯ ಶತಮಾನದ ರಾಜಶೇಖರನು ತನ್ನ 'ಸೂಕ್ತಿಮುಕ್ತಾವಳಿ'ಯ 'ಏಕೋಽಪಿ ಜೀಯತೆ ಹನ್ತ'[1] ಎಂಬ ಶ್ಲೋಕದಲ್ಲಿ ಕಾಳಿದಾಸನನ್ನು ಸ್ತುತಿಸಿರುವನು. ಕ್ರಿ. ಶ. ಎಂಟನೆಯ ಶತಮಾನದ ಕುಮಾರಿಲ ಭಟ್ಟರು.

---

ಕ್ರಿ.ಶ. 5ನೆಯ ಶತಮಾನದ ಸ್ಕಾಂದಗುಪ್ತನ ಸಮಕಾಲವಾದವನ್ನವಲಂಬಿಸಿದ್ದಾರೆ. ಕೆ. ಜಿ. ಶಂಕರ್‌ರವರು ಮೊದಲು (Q. J. M. S. VIII, ಪು. 278-92; IX, ಪು. 17-56) ಕಾಳಿದಾಸನು ಗುಪ್ತರ ಸಮಕಾಲಿಕನೆಂದು ವಾದಿಸಿ, ನಂತರ (I. H. Q. I, p. 309-316; A.B.O.R.I. II p. 189-91) ಕ್ರಿ. ಪೂ. 56 ರ ಶಕಾರಿ ವಿಕ್ರಮಾದಿತ್ಯನ ಸಮಕಾಲೀನನೆಂದು ತಮ್ಮ ಆಶಯವನ್ನು ವ್ಯತ್ಯಸ್ತ ಮಾಡಿಕೊಂಡಿರುವರು. ಹೀಗೆಯೇ ಆರ್. ಜಿ. ಬಂಡಾರಕರ್‌ರವರೂ.

1. ಅನುಬಂಧ I ನೋಡಿ.

'ಏವಂಚ ವಿದ್ವದ್ವಚನಾದ್ವಿನಿರ್ಗತಂ ಪ್ರಸಿದ್ಧ ರೂಪಂಕವಿಭಿರ್ನಿ
ರೂಪಿತಮ್ ।
ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣ
ಪ್ರವೃತ್ತಯಃ ॥'[1]

ಎಂಬಲ್ಲಿ ಕಾಳಿದಾಸನ ಶ್ಲೋಕಾರ್ಧವನ್ನು[2] ಜೋಡಿಸಿಕೊಂಡಿರುವುದು ಸ್ಪಷ್ಟವಾಗಿದೆ. ತಮ್ಮದಾದ ಪೂರ್ವಾರ್ಧದಲ್ಲಿ ಪ್ರಯೋಗಿಸಿರುವ ಕವಿಭಿಃ ಎಂಬ ಬಹುವಚನ ರೂಪದಿಂದ ಕವಿಯಲ್ಲಿ ತಮಗಿದ್ದ ಗೌರವವನ್ನು ಅವರು ಸೂಚಿಸಿರುವರು. ಅದೇ ಶತಮಾನದ ವಾಕ್ಪತಿರಾಜನು.

ಭಾಸಮ್ಮಿ ಜಲಣಮಿತ್ತೇ ಕಂತಿದೇವೇ ಅ ಜಸ್ಸರಹುಆರೇ ।
ಸೋಬಂಧವೇ ಅಬಂಧಮ್ಮಿ ಹಾರಿಯಂದೇ ಅ ಆಣಂದೋ ॥'[3]

ಎಂಬ ಶ್ಲೋಕದಲ್ಲಿ ರಘುಕಾರನೆಂಬ ಹೆಸರಿನಿಂದ ಕಾಳಿದಾಸನನ್ನು ಉಲ್ಲೇಖಿಸಿರುವನು. ಸುಮಾರು ಇದೇ ಕಾಲಕ್ಕೆ ಸೇರಿದ ವಾಮನನೂ ತನ್ನ ಕಾವ್ಯಾಲಂಕಾರ ಸೂತ್ರ[4]ದಲ್ಲಿ ಕುಮಾರಸಂಭವದ (I-35.) ಆಸ ಶಬ್ದದ ಪ್ರಯೋಗವನ್ನು ಕುರಿತು ಚರ್ಚಿಸಿರುವನು. 'ಗಾಹನ್ತಾಂ ಮಹಿಷಾಃ' ಎಂಬ ಶಾಕುಂತಲ (II-6) ಶ್ಲೋಕವನ್ನು ಉದಾಹರಿಸಿರುವನು.[5] ವಾಮನನಿಗಿಂತ ಪ್ರಾಚೀನನಾದ ದಂಡಿಯೂ 'ಲಕ್ಷ್ಮ ಲಕ್ಷ್ಮೀಂ ತನೋತೀತಿ ಪ್ರತೀತಿ ಸುಭಗಂ ವಚಃ'[6] ಎಂಬಲ್ಲಿ ಶಾಕುಂತಲದ (I-20) ಭಾಗವನ್ನು ಅಡಗಿಸಿರುವುದು ವ್ಯಕ್ತವಾಗಿರುವುದು. ಭರತಮುನಿಯನ್ನು ಬಿಟ್ಟರೆ ಆಲಂಕಾರಿಕರಲ್ಲಿ ಪ್ರಾಚೀನತಮನಾದ ಭಾಮಹನು

---

1. ತನ್ತ್ರವಾರ್ತಿಕ—ಕಾಶೀ ಸಂಸ್ಕೃತ ಗ್ರಂಥಮಾಲೆ ಪುಟ 133.
2. ಶಾಕುಂತಲ I-22.
3. ಗೌಡವಹೋ—B. S. S. ಶ್ಲೋ. 800.
4. ವಾಮನ-ಕಾವ್ಯಾಲಂಕಾರಸೂತ್ರ V-ii-27.
5. ,, I-ii-11.
6. ಕಾವ್ಯಾದರ್ಶ I-45.

'ಅಯುಕ್ತಿಮದ್ಯಥಾ ದೂತಾಃ ಜಲಭೃನ್ಮಾರುತೇಂದವಃ ।
ತಥಾ ಭ್ರಮರಹಾರೀತಚಕ್ರವಾಕಶುಕಾದಯಃ ॥' [1]

ಎಂಬಲ್ಲಿ ಮೇಘ ಚಂದ್ರಾದ್ಯ ಚೇತನ ವಸ್ತುಗಳನ್ನು ಸಂದೇಶಹಾರಿಗಳನ್ನಾಗಿ ಕವಿಗಳು ಉಪಯೋಗಿಸಿಕೊಂಡಿರುವುದನ್ನು ಆಕ್ಷೇಪಿಸಿ ಸಂದೇಶವನ್ನು ಕಳುಹಿಸುವವರು ಕಾಮುಕರೋ, ಉನ್ಮತ್ತರೋ ಆಗಿದ್ದ ಪಕ್ಷದಲ್ಲಿ ಇದು ದೋಷವಲ್ಲವೆಂದು ಮುಂದಿನ ಶ್ಲೋಕದಲ್ಲಿ ಹೇಳಿರುವನು.[2] ಕಾಳಿದಾಸನ ಮೇಘಸಂದೇಶವನ್ನೇ ಲಕ್ಷ್ಯದಲ್ಲಿಟ್ಟು ಅವನ ಮಹಾಕವಿತ್ವಕ್ಕೆ ಮರ್ಯಾದೆಯನ್ನು ಕೊಡಬೇಕೆಂಬ ಅಭಿಪ್ರಾಯದಿಂದಲೇ ಅವನು ಈ ರೀತಿ ನಿಯಮವನ್ನೂ ಅದಕ್ಕೆ ಅಪವಾದವನ್ನೂ ರಚಿಸಿದನೆಂದು ವಿಮರ್ಶಕರ ಅಭಿಪ್ರಾಯ. ಇದರಂತೆಯೇ ಮೇಲ್ಕಂಡ ಶತಮಾನಗಳಿಗೆ ಸೇರಿದ ನೃಪತುಂಗ, ಶಾಕಟಾಯನ, ಜಿನಸೇನ ಮುಂತಾದ ಜೈನರೂ ತಮಗೆ ಕಾಳಿದಾಸನ ಗ್ರಂಥಗಳ ಪರಿಚಯವಿತ್ತೆಂದು ವ್ಯಕ್ತಗೊಳಿಸಿರುವರು. ಕ್ರಿ. ಶ. ಏಳನೆಯ ಶತಮಾನದವನಾದ ಬಾಣನು ಹರ್ಷಚರಿತೆಯ ಪೀಠಿಕಾಶ್ಲೋಕಗಳಲ್ಲಿ (ನಿರ್ಗತಾಸು.... 16) ಕಾಳಿದಾಸನ ಕವಿತಾ ಮಾಧುರ್ಯ[3]ವನ್ನು ಪ್ರಶಂಸಿಸಿರುವನು. ಕ್ರಿ. ಶ. 634ರ ಐಹೊಳೆ ಮಿಗುತಿಯ ಶಾಸನದ ಲೇಖಕನಾದ ರವಿಕೀರ್ತಿಯು ಕವಿತೆಯಲ್ಲಿ ತಾನು ಕಾಳಿದಾಸ ಭಾರವಿಗಳನ್ನು ಆಶ್ರಯಿಸಿರುವುದಾಗಿ ಹೇಳಿಕೊಂಡಿರುವನು. ಕಾಳಿದಾಸನ ಹೆಸರು ಸ್ಪಷ್ಟವಾಗಿ ನಿರ್ದಿಷ್ಟವಾಗಿರುವ ಬಾಹ್ಯ ಪ್ರಮಾಣಗಳಲ್ಲೆಲ್ಲಾ ಇದೇ ಪ್ರಾಚೀನತಮವಾದುದು. ಈ ಶಾಸನವು ಸಿಕ್ಕಿದಂದಿನಿಂದಲೂ ಕಾಳಿದಾಸನ ಕಾಲದ ಕೆಳಮಟ್ಟದ ವಿಷಯದಲ್ಲಿ ವಿಮರ್ಶಕರಿಗಿದ್ದ ಭಿನ್ನಾಭಿಪ್ರಾಯಗಳು ಒಟ್ಟಿನಲ್ಲಿ ಕೊನೆಗಂಡುವು. ಮತ್ತು ಬಲ್ಲಾಳ ವಿರಚಿತವಾದ ಭೋಜಪ್ರಬಂಧವನ್ನಾಶ್ರಯಿಸಿ ಕಾಳಿದಾಸನು ಕ್ರಿ. ಶ. ಹನ್ನೊಂದನೆಯ ಶತಮಾನದ ಆ ದೊರೆಯ ಸಮಕಾಲಿಕನೆಂಬ ಬೆಂಟ್ಲಿಯವರ ವಾದವು[4] ನಿರಾಧಾರವಾಯಿತು.

---

1. ಕಾವ್ಯಾಲಂಕಾರ I-42.
2. ಕಾವ್ಯಾಲಂಕಾರ I-43.
3. ಅನುಬಂಧ I ನ್ನು ನೋಡಿ.
4. Krishnamachariar—Cl. Skt. Lit. p. 110.

ಮೇಲ್ಮಟ್ಟವೇ ಇನ್ನೂ ಬಿಚ್ಚಿಲ್ಲದ ದೊಡ್ಡ ಗಂಟು. ಇದು ನಿಶ್ಚಿತ ವಾಗದಿರುವುದೇ ಕವಿಯ ಕಾಲದ ವಿಷಯದಲ್ಲಿ ಇಷ್ಟು ಭಿನ್ನಾಭಿಪ್ರಾಯ ಗಳುಂಟಾಗುವುದಕ್ಕೆ ಕಾರಣವೆನ್ನಬಹುದು. ಪ್ರಕೃತ, ಈ ವಾದಗಳನ್ನು ಮೂರು ಭಾಗಗಳಾಗಿ ವಿಂಗಡಿಸಿ ಅವುಗಳ ಮೂಲಪುರುಷರನ್ನೂ ಅನುಯಾಯಿಗಳನ್ನೂ ಪಟ್ಟಿ ಮಾಡಿ, ಇವರು ಕಾಳಿದಾಸನಿಗೆ ಗೊತ್ತು ಮಾಡುವ ಕಾಲವನ್ನು ತಿಳಿದುಕೊಳ್ಳಬಹುದು.

## I. ಕಾಳಿದಾಸನ ಕಾಲವು ಕ್ರಿ. ಶ. 6ನೆಯ ಶತಮಾನವೆನ್ನುವ ವಾದ

ಕ್ರಿ. ಶ. ಏಳನೆಯ ಶತಮಾನದ ಐಹೊಳೆ ಶಾಸನವನ್ನೇ ಕಾಳಿದಾಸನ ಮೊದಲನೆಯ ಕೀರ್ತಿ ಧ್ವಜವೆಂದು ಭಾವಿಸಿ ಅದಕ್ಕಿಂತ ಹಿಂದಿನ ಅವನ ಗ್ರಂಥಗಳು ಪ್ರಚಾರಕ್ಕೆ ಬರಲು ಒಂದು ಶತಮಾನವಾದರೂ ಬೇಕೆಂದು ಅಂದಾಜು ಮಾಡಿ, ಕವಿಯು ಆರನೆಯ ಶತಮಾನದವನಾಗಿರಬೇಕೆಂದು ಅನೇಕರು ಅಭಿಪ್ರಾಯಪಡುತ್ತಾರೆ. ಇವರ ಪೈಕಿ ಮುಖ್ಯವಾದವರು—

1) ಹೊ ಅರ್ನ್ಲೆ.
2) ಹರಪ್ರಸಾದ ಶಾಸ್ತ್ರಿಗಳು.
3) ಡಿ. ಆರ್. ಭಂಡಾರಕರ್.[1]
4) ಡಾ|| ಭೌದಾಜಿ.
5) ಕರ್ನ್, ಮ್ಯಾಕ್ಸ್‌ಮುಲ್ಲರ್, ಸಿಲ್ವೆನ್ ಲೆವಿ, ಮುಂತಾದವರು.

## II. ಕ್ರಿ. ಶ. 5ನೆಯ ಶತಮಾನವೆನ್ನುವ ವಾದ.

ಈ ವಾದದ ಮುಖ್ಯ ಅನುಯಾಯಿಗಳು—

1) ಪ್ರೊ. ಪಾಠಕ್.
2) ಕರ್ನಲ್ ವಿಲ್ಫರ್ಡ್ ಮತ್ತು ವಿಲ್ಸನ್.
3) ಡಾ|| ಗ್ರಿಯರ್‌ಸನ್.
4) ಬಿ. ಸಿ. ಮಜುಂದಾರ್.

---

1. ಇವರಿಗೂ ಶ್ರೀ ಶಾಸ್ತ್ರಿಗಳಿಗೂ ಕೆಲವು ಸಣ್ಣ ಅಂಶಗಳಲ್ಲಿ ಮಾತ್ರ ಭಿನ್ನಾಭಿಪ್ರಾಯಗಳಿವೆ. A. B. O. R. I. VIII -ii pp. 200-204.

5) ಮನೋಮೋಹನ್ ಚಕ್ರವರ್ತಿ.
6) ಪ್ರೊ. ಭಿಡೆ ಮುಂತಾದವರು.

## III. ಇತರ ವಾದಗಳು.

1. ಮೆಕ್ಡಾನೆಲ್, ಕೀತ್, ವ್ಯಾಸನ್ ಔರ್‌ಸೆಲ್, ಡಾ|| ದೇ, ಮುಂತಾದ ಈಚಿನ ಭಾರತೀಯ ಮತ್ತು ವಿದೇಶೀಯ ಪಂಡಿತರ ಅಭಿಪ್ರಾಯ—ಕ್ರಿ. ಶ. 4 ನೆಯ ಶತಮಾನದ ಕೊನೆ ಮತ್ತು ಐದನೆಯ ಶತಮಾನದ ಆದಿಭಾಗ. ಅಂದರೆ ಸುಮಾರು 380-412. ಡಾ|| ಯಾಕೊಬಿಯುವರ ಸೂಚನೆಗಳು ಈ ವಾದಕ್ಕೆ ಪೋಷಕವಾಗುತ್ತವೆ.

2. ಶ್ರೀ ದಶರಥಶರ್ಮರವರ ವಾದ—(ಕ್ರಿ. ಶ. ನಾಲ್ಕನೆಯ ಶತಮಾನಕ್ಕಿಂತ ಬಹಳ ಹಿಂದಿನವನು.)

3. ಪ್ರೊ. ಲಾಸನ್—(ಕ್ರಿ. ಶ. ಮೂರನೆಯ ಶತಮಾನ) ವಾದ.

4. ಪ್ರೊ. ಮಾನಿಯರ್ ವಿಲಿಯಂಸ್—(ಮೂರನೆಯ ಶತಮಾನ) ವಾದ.

5. ಡಾ|| ಕುನ್ಹನ್ ರಾಜ—(ಕ್ರಿ. ಪೂ. 184-72)ರ ವಾದ.

6. ಫೌಷ್‌ರವರ ವಾದ (ಕ್ರಿ. ಪೂ. 8 ನೆಯ ಶತಮಾನ).

7. ಟಿ. ಎಸ್. ನಾರಾಯಣ ಶಾಸ್ತ್ರಿಗಳವರ ವಾದ (ಕ್ರಿ. ಪೂ. ಐದನೆಯ ಶತಮಾನ).

1. ಹೊ ಅರ್ನ್ಲೆಯವರ ವಾದವನ್ನು ಈ ರೀತಿ ಸಂಗ್ರಹಿಸಬಹುದು. ಐಹೊಳೆ ಶಾಸನದಲ್ಲೂ ಬಾಣನ ಹರ್ಷಚರಿತೆಯಲ್ಲೂ ಬಹಳ ಉತ್ತಮ ಕವಿಯೆಂದು ವರ್ಣಿತನಾದ ಕಾಳಿದಾಸನ ಕೀರ್ತಿಯು ವಿಸ್ತೃತವಾಗುವುದಕ್ಕೆ ಗ್ರಂಥಗಳ ಪ್ರಚಾರವು ವಿರಳವಾಗಿದ್ದ ಆ ಕಾಲದಲ್ಲಿ ಒಂದು ಶತಮಾನಕ್ಕೆ ಕಡಿಮೆಯಿಲ್ಲದೆ ಬೇಕಾಗುತ್ತಿತ್ತೆಂದು ಊಹಿಸಬಹುದು. ಸಂಪ್ರದಾಯವು ಶಕಾರಿ ವಿಕ್ರಮಾದಿತ್ಯನಿಗೂ ಮಾಲವ ಶಕೆಗೂ ಗಂಟು ಹಾಕುವುದು. ಕ್ರಿ. ಶ. 6 ನೆಯ ಶತಮಾನದಲ್ಲಿ ಪ್ರಸಿದ್ಧನಾಗಿದ್ದ

ಮನೋಧರ್ಮನೇ ಈ ವಿಕ್ರಮಾದಿತ್ಯನೆಂದು[1] ಕಾಳಿದಾಸನು ಇವನ ಆಶ್ರಿತನಾಗಿದ್ದಿರಬೇಕೆಂದೂ ತೋರುತ್ತದೆ.* ಕ್ರಿ. ಶ. 532ರ ಮಂದೇಶ್ವರದ ಶಾಸನವೂ ಇದನ್ನೇ ಸಮರ್ಥಿಸುವುದು. ರಘುವಂಶದಲ್ಲಿ ನಿರೂಪಿತವಾಗಿರುವ ಹೂಣ ವಿಜಯವು ಚಾರಿತ್ರ ಸಂಗತಿಯೆಂದೇ ಹೇಳಬಹುದು. ಗುಪ್ತಚಕ್ರಾಧಿಪತ್ಯವನ್ನು ನಾಶಪಡಿಸಲು ಪ್ರಯತ್ನಪಟ್ಟ ಹೂಣರನ್ನು ಮಾಲವದ ದೊರೆಗಳು ಸೋಲಿಸಿ ಮುಂದೆ ನುಗ್ಗದಂತೆ ತಡೆದುದು ಆ ಕಾಲದಲ್ಲೇ ಎಂದು ಗೊತ್ತಾಗಿದೆ. ರಘುವಂಶದ ನಾಲ್ಕನೆಯ ಸರ್ಗದಲ್ಲಿ ಅನೇಕ ಸಣ್ಣ ಸಣ್ಣ ರಾಜ್ಯಗಳನ್ನು ಪರಿಗಣಿಸಿರುವುದು ಯಶೋಧರ್ಮನ ಕಾಲಾನಂತರದಲ್ಲೂ ಕವಿಯು ಬದುಕಿದ್ದ ಸಂಗತಿಯನ್ನು ಸೂಚಿಸುವುದು.[2] ಹೋ. ಅರ್ನ್ಲೆಯವರ ಈ ವಾದ[3]ಕ್ಕೆ ಇನ್ನೂ ಕೆಲವು ಪೋಷಕ ಯುಕ್ತಿಗಳನ್ನು ಮ|| ಮ|| ಹರಪ್ರಸಾದ ಶಾಸ್ತ್ರಿಗಳು ಕೊಟ್ಟಿರುವರು.[4] ಅವುಗಳಲ್ಲಿ ಮುಖ್ಯವಾದುವನ್ನು ಮಾತ್ರ ಗಮನಿಸಬಹುದು—

1. ಅವಂತಿ ರಾಜನ ವಿಷಯದಲ್ಲಿ ಕವಿಯು ಹೆಚ್ಚು ಪ್ರೀತಿಗೌರವಗಳನ್ನು ತೋರಿಸಿರುವುದರಿಂದ (ರ. ವಂ. VI-32) ಆ ದೊರೆಯು ಕವಿಯ ಸಮಕಾಲಿಕ ಮಾತ್ರನಲ್ಲದೆ ಅವನಿಗೆ ಚೆನ್ನಾಗಿ ಪರಿಚಿತನೂ

---

1. ರಾಜತರಂಗಿಣಿಯಲ್ಲಿ ನಿರ್ದಿಷ್ಟವಾಗಿರುವ ಕಾಶ್ಮೀರದ ಹರ್ಷ ವಿಕ್ರಮಾದಿತ್ಯನೂ ಯಶೋಧರ್ಮನೂ ಒಂದೇ ವ್ಯಕ್ತಿಯೆಂದು ಇವರ ಮತ.

* ಶ್ರೀ ಬಿ. ಸಿ. ಮಜುಂದಾರ್‌ರವರು ಕಾಳಿದಾಸನು ಯಶೋಧರ್ಮನ ಸಮಕಾಲಿಕನಾಗಿದ್ದರೂ ಅವನ ಆಸ್ಥಾನ ಕವಿಯಾಗಿ ಆಶ್ರಿತನಾಗಿದ್ದಿರಲಾರನೆಂದು ಭಾವಿಸಿರುವರು.

2. ಕ್ರಿ. ಶ. 472ರ ಮಂದೇಶ್ವರದ ಶಾಸನದಲ್ಲಿ ಬರುವ ಋತು ವರ್ಣನೆಗೂ ಕಾಳಿದಾಸದ ಋತು ಸಂಹಾರ, ಮೇಘ ಸಂದೇಶಗಳ ಕೆಲವು ಭಾಗಗಳಿಗೂ ಇರುವ ಸಾಮ್ಯವು ಕಾಳಿದಾಸನ ಪ್ರಾಚೀನತೆಯನ್ನು ಸೂಚಿಸುವುದಿಲ್ಲ. ಇಂತಹ ವರ್ಣನೆಗಳು ಕವಿಸಮಯ ಮಾತ್ರವೆನ್ನಬಹುದಾದ್ದರಿಂದ ಯಾರೂ ಯಾರನ್ನೂ ಅನುಕರಿಸದಿರಬಹುದು.

3. R. Hoernle—J. R. A. S. 1909. pp. 89-144.

4. J. B. O. R. S. II Kalidasa his age pp. 31-44.

ಆಗಿದ್ದಿರಬೇಕು. ಇವನು ಹೂಣರನ್ನು ಜಯಿಸಿ ತನ್ನ ಕೀರ್ತಿಪ್ರತಾಪ ಗಳನ್ನು ಎರಡು ಶಾಸನಗಳಲ್ಲೂ ಕೆತ್ತಿಸಿದ ಯಶೋಧರ್ಮನಾಗಿರಬಹು ದೆಂಬ ಭಾವನೆ ಬರುತ್ತದೆ.

2. ಉತ್ಸವಸಂಕೇತರೆಂದು (ರ. ವಂ. IV-78) ನಿರ್ದಿಷ್ಟ ರಾಗಿರುವ ಟಿಬೆಟ್ ದೇಶದ ಜನರು ಚರಿತ್ರೆಯಲ್ಲಿ 6 ನೆಯ ಶತಮಾನದಲ್ಲಿ ಮೊಟ್ಟಮೊದಲು ಗೋಚರವಾಗುವರು. ಅವರನ್ನು ಉಲ್ಲೇಖಿಸುವ ಕಾವ್ಯವೂ ಅದೇ ಕಾಲಕ್ಕೆ ಸೇರಬೇಕು.

3. 5ನೆಯ ಶತಮಾನದ ಕೊನೆಗೆ ಪ್ರಬಲ ಪ್ರಚಾರದಲ್ಲಿದ್ದ ಬೌದ್ಧ ಪಂಗಡಗಳಿಗೆ ಅಕ್ಷೋಭ್ಯನೆಂಬುವನು ಆಚಾರ್ಯನಾಗಿದ್ದನಂತೆ. ರಘುವು ಅಕ್ಷೋಭ್ಯನನ್ನು ಅಲ್ಲಿ ಸ್ಥಾಪಿಸಿದನೆಂದು ರಘುವಂಶ (IV-80) ದಲ್ಲಿ ಹೇಳಿದೆ.

4. 6ನೆಯ ಶತಮಾನದ ಮಧ್ಯಭಾಗದಲ್ಲಿ ಏಳ್ಗೆಯಲ್ಲಿದ್ದ ಪ್ರಬಲ ರಾಜ್ಯವಾದ ಕಾಮರೂಪ[1]ದ ವಿಚಾರವೂ ಇದೇ ಸಂದರ್ಭದಲ್ಲಿ (ರ. ವಂ. IV) ಬರುತ್ತದೆ.

5. ಸ್ವಯಂವರ ಸರ್ಗದಲ್ಲಿ (VI-22) ಅಗ್ರಸ್ಥಾನ ದೊರೆತಿರುವ ಮಗಧರಾಜನು ಗುಪ್ತ ಸಂತತಿಯ ದೊರೆಯಾಗಿರಬೇಕು. ಇವನ ಶೌರ್ಯಾದಿಗಳನ್ನು ವರ್ಣಿಸದೆ ಯಾಗದಲ್ಲಿ ಆಸಕ್ತಿಯನ್ನು ಮಾತ್ರ ನಿರೂಪಿಸಿರುವುದು ಹೆಸರಿಗೆ ಮಾತ್ರ ದೊರೆಗಳಾಗಿದ್ದ ಕೊನೆಯ ಕಾಲದ ರಾಜರ ಪರಿಸ್ಥಿತಿಯನ್ನು ನೆನಪಿಗೆ ತರುತ್ತದೆ.

6. ಕುಮಾರಸಂಭವದಲ್ಲಿ (IV-6) ಕಾಳಿದಾಸನು ಕೆರೆಯ ಕಟ್ಟೆಯು ಕಿತ್ತುಹೋದ ಸಮಯದಲ್ಲಿ ಕ್ಷೀಣಾವಸ್ಥೆಯಲ್ಲಿರುವ ತಾವರೆ ಬಳ್ಳಿಯನ್ನು ವರ್ಣಿಸಿರುವನು. ಕೆರೆಗೆ ಕಟ್ಟೆಯನ್ನು ಕಟ್ಟಬೇಕಾದುದು ಪ್ರಸ್ಥಭೂಮಿಯಲ್ಲಿ ಮಾತ್ರ. ಗಿರ್ನಾರಿನಲ್ಲಿ ಇಂತಹ ಕೆರೆಯೊಂದನ್ನು ಕ್ರಿ. ಶ. 475 ರಲ್ಲಿ ಗುಪ್ತರ ಅಧಿಕಾರಿಯೊಬ್ಬನು ಸರಿಪಡಿಸಿದನೆಂದು ನಿಶ್ಚಿತ ವಾಗಿದೆ. ಆಗತಾನೆ ನಡೆದಿದ್ದ ಈ ಸಂಗತಿಯನ್ನು ಗಮನಿಸಿ ಕಾಳಿದಾಸನು ಈ ಉಪಮೆಯನ್ನು ಪ್ರಯೋಗಿಸಿರುವನು.

---

1. ಪಂಚಸರ ಶಾಸನದಿಂದ ಈ ವಿಷಯವು ತಿಳಿದುಬರುತ್ತದೆ.

7. ಯಶೋಧರ್ಮನ ಕಾಲದಲ್ಲೇ ಸುಗಮವಾದ ಹಿಮಾಲಯ ಪ್ರದೇಶಗಳಲ್ಲಿ ಸಂಚರಿಸಿ ಆನಂದಪಟ್ಟ ಮೇಲೆಯೇ, ಕಾಳಿದಾಸನು ಅವುಗಳನ್ನು ವಿಶದವಾಗಿಯೂ ಪ್ರೀತಿಯಿಂದಲೂ ವರ್ಣಿಸಿರಬೇಕು.

8. ಮಧುರವು ಗುಪ್ತ ಚಕ್ರಾಧಿಪತ್ಯದ ಮಧ್ಯದಲ್ಲಿದ್ದ ಒಂದು ಪ್ರಾಚೀನ ಪಟ್ಟಣ. ಕಾಳಿದಾಸನು ಅಲ್ಲಿ ಸ್ಥಾಪಿತವಾಗಿದ್ದ ರಾಜ್ಯವೊಂದನ್ನು ಉಲ್ಲೇಖಿಸಿರುವನು. ಈ ರಾಜ್ಯವು ಗುಪ್ತ ಚಕ್ರಾಧಿಪತ್ಯವು ಹಾಳಾದಮೇಲೆ, ಫಕ್ಕನೆಂಬ ಕದಂಬ ರಾಜನಿಂದ ಸ್ಥಾಪಿತವಾಗಿರಬೇಕು.

9. ಋತುಸಂಹಾರಕ್ಕೂ ಮಂದೇಶ್ವರ ಶಾಸನಗಳಿಗೂ ಇರುವ ವರ್ಣನಾಸಾಮ್ಯವು ಕವಿಯು ಕ್ರಿ. ಶ. 404 ರಿಂದ 533ರ ಅವಧಿಯಲ್ಲಿದ್ದನೆಂದು ಮಾತ್ರ ಸಮರ್ಥಿಸುವುದು.

10. ದಕ್ಷಿಣ ಇಂಡಿಯದಲ್ಲಿ ಪಾಂಡ್ಯರ ರಾಜಧಾನಿಯು ಮಧುರೆಯೂ ಚೋಳರ ರಾಜಧಾನಿಯು ಉರಗಪುರವೂ ಆಗಿದ್ದುವು. ಆದರೆ ಕಾಳಿದಾಸನು ಉರಗಪುರವನ್ನು ಪಾಂಡ್ಯರ ವಶದಲ್ಲಿದ್ದಂತೆ (ರ. ವಂ. VI-59-60) ವರ್ಣಿಸಿ ಚೋಳರ ಹೆಸರನ್ನಾಗಲಿ, ಕ್ರಿ. ಶ. 575ರ ವೇಳೆಗೆ ಚೋಳ, ಚೇರ, ಪಾಂಡ್ಯ ರಾಜ್ಯಗಳನ್ನು ವಶಪಡಿಸಿಕೊಂಡಿದ್ದ ಪಲ್ಲವರ ಹೆಸರನ್ನಾಗಲಿ ಎತ್ತಿಲ್ಲ. ಆದುದರಿಂದ ಅವನು ಕ್ರಿ. ಶ. 575 ಕ್ಕೆ ಮೊದಲೇ ಇದ್ದಿರಬೇಕು.

11. ರಘುವಂಶದ 16ನೆಯ ಸರ್ಗದಲ್ಲಿ ಕುಶನು ಅಯೋಧ್ಯೆಯನ್ನು ಪುನರುಜ್ಜೀವಿಸಿದನೆಂದು ವರ್ಣಿತವಾಗಿದೆ. ತಮ್ಮ ಅಭಿವೃದ್ಧಿ ಸಮಯದಲ್ಲಿ ಗುಪ್ತರು ಮೂರು ರಾಜಧಾನಿಗಳನ್ನು ಇಟ್ಟುಕೊಂಡಿದ್ದರೆಂದೂ ಅವುಗಳಲ್ಲಿ ಅಯೋಧ್ಯೆಯೂ ಒಂದಾಗಿತ್ತೆಂದೂ ಗೊತ್ತಾಗಿದೆ.

12. ಅಶೋಕನ ಕಾಲದಿಂದ ಕ್ರಿ. ಶ. ಮೂರನೆಯ ಶತಮಾನದವರೆಗೆ ಬಳಕೆಯಲ್ಲಿದ್ದ ಬ್ರಾಹ್ಮೀ ಲಿಪಿಯನ್ನು ವಿದ್ಯಾಧರಲಿಪಿಯೆಂದು ಕರೆದಿರುವುದು ಅವನು ಆ ಕಾಲದವನಲ್ಲವೆಂಬುದನ್ನು ಸೂಚಿಸುವುದು. ತನ್ನ ಕಾಲದ ವೇಳೆಗೆ ಈ ಪ್ರಾಚೀನವಾದ ಹೆಸರು ಅಳಿದಿದ್ದುದರಿಂದ ಅವನು ಅದಕ್ಕೆ ವಿದ್ಯಾಧರಲಿಪಿಯೆಂಬ ಬೇರೆ ಹೆಸರನ್ನು ಇಟ್ಟಿರಬೇಕು. ರಾಮಗಿರಿ

ಯನ್ನು ಯಕ್ಷನಿಗೆ ಪ್ರವಾಸಕ್ಷೇತ್ರವಾಗಿ ಕಲ್ಪಿಸಿರುವ ಕವಿಗೆ ಅದರ ಗುಹೆಗಳಲ್ಲಿ ಆ ಲಿಪಿಯಲ್ಲಿ ಕೆತ್ತಿರುವ ಶಾಸನಗಳು ಪರಿಚಿತವಾಗಿರಬೇಕು.

## ಡಾ|| ಭೌದಾಜಿಯವರ ವಾದ

ಹಿಂದೆ ವಿಶದಗೊಳಿಸಿದಂತೆ[1] ಡಾ|| ಭೌದಾಜಿಯುವರು ಮಾತೃಗುಪ್ತನೂ ಕಾಳಿದಾಸನೂ ಒಂದೇ ವ್ಯಕ್ತಿಯೆಂದು ನಿರ್ಧರಿಸಿಕೊಂಡು ರಾಜತರಂಗಿಣಿಯಲ್ಲಿ ನಿರ್ದಿಷ್ಟನಾದ ಮಾತೃಗುಪ್ತನ ಕಾಲವನ್ನು ಆರನೆಯ ಶತಮಾನವೆಂದು ವಾದಿಸುವರು.

## ಕರ್ನ್,[2] ಮ್ಯಾಕ್ಸ್‌ಮುಲ್ಲರ್,[3] ಡಾ|| ಸಿಲ್ವೇನ್[4] ಲೆವಿ ಮುಂತಾದವರ ವಾದ

ಜ್ಯೋತಿರ್ವಿದಾಭರಣದಲ್ಲಿ (ಅ. 26. ಶ್ಲೋ. 10) ಧನ್ವಂತರಿ ಮುಂತಾದ ಒಂಭತ್ತು ಜನ ಕವಿಗಳೋ ಪಂಡಿತರೋ ವಿಕ್ರಮಸಭೆಯ ನವಮಣಿಗಳೆಂದು ಪ್ರತಿಪಾದಿತರಾಗಿದ್ದಾರೆ. "ನವಾಧಿಕ ಪಂಚಶತ ಸಂಖ್ಯಾಕೇ (ಕ್ರಿ. ಶ. 587) ವರಾಹಮಿಹಿರಾಚಾರ್ಯೋ ದಿವಂಗತಃ" ಎಂಬ ಬ್ರಹ್ಮಗುಪ್ತನ ವಾಕ್ಯದ ಪ್ರಕಾರ ವರಾಹಮಿಹಿರನೂ ಅವನ ಸಮಕಾಲಿಕನಾದ ಕಾಳಿದಾಸನೂ ಆರನೆಯ ಶತಮಾನದವರೇ ಆಗುತ್ತಾರೆಂದು ಇವರು ಅಭಿಪ್ರಾಯಪಡುತ್ತಾರೆ.[5]

---

1. ಜೀವನ ಚರಿತ್ರೆ. ಪು. 1.
2. Preface to the Bṛhat Samhita. p. 20.
3. India What can it teach us. pp. (281—284).
4. Le Theatre Indien. p. 165.
5. ಮೇಘಸಂದೇಶದ "ಸ್ಥಾನಾದಸ್ಮಾತ್ಸರಸನಿಚುಳಾದುತ್ಪತೋದಙ್ಮುಖಃ ಖಂದಿಙ್ನಾಗಾನಾಂ ಪಥಿ ಪರಿಹರನ್ ಸ್ಥೂಲಹಸ್ತಾವಲೇಪಾನ್ ।" (1.14 ಉತ್ತರಾರ್ಧ) ಎಂಬಲ್ಲಿ ಕವಿಯು ವಿರೋಧಿಯಾಗಿದ್ದ ದಿಙ್ನಾಗನೆಂಬ ಬೌದ್ಧಮತ ಪ್ರಚಾರಕನಿಗೂ ಸ್ನೇಹಿತನಾಗಿದ್ದ ನಿಚುಲನಿಗೂ ಸೂಚನೆಯಿದೆಯೆಂದು ದಕ್ಷಿಣಾವರ್ತನಾಥನೂ ಮಲ್ಲಿನಾಥನೂ ವ್ಯಾಖ್ಯಾನ ಮಾಡಿರುವರು. ಇದನ್ನಾಶ್ರಯಿಸಿ ಕಾಳಿದಾಸನು ಇವರ ಸಮಕಾಲಿಕನೆಂದು ವಾದಿಸುವುದಕ್ಕೆ ಅವಕಾಶವಾಗಿದೆ. ಮ್ಯಾಕ್ಸ್‌ಮುಲ್ಲರ್‌ರವರು ದಿಙ್ನಾಗನ ಕಾಲವನ್ನು ಕ್ರಿ. ಶ. ಆರನೆಯ ಶತಮಾನವೆಂದು ನಿರ್ಣಯಿಸಿ ಕಾಳಿದಾಸನಿಗೂ ಇದೇ ಕಾಲವನ್ನು ಕಲ್ಪಿಸಿರುತ್ತಾರೆ. ಡಾ|| ಥಾಮಸ್‌ರವರು ಪ್ರಸಕ್ತ ಶ್ಲೋಕದಲ್ಲಿ ದಿಙ್ನಾಗನಿಗೆ ಮಾತ್ರವಲ್ಲದೆ ಅವನು ರಚಿಸಿದ 'ಹಸ್ತವಾಲ' ವೆಂಬ ಗ್ರಂಥಕ್ಕೂ ಸೂಚನೆಯಿರುವುದೆಂದು ವಾದಿಸುವರು. (J. R. A. S. 1918, pp. 118-122,)

## ಈ ಮತಗಳ ಖಂಡನೆ

ಡಾ|| ಫ್ಲೀಟ್‌ರವರು ಕ್ರಿ.ಶ. 549ಕ್ಕೆ ಒಂದು ಶತಮಾನ ಹಿಂದೆಯೇ ವಿಕ್ರಮಶಕೆಯೆಂಬ ಕಾಲಮಾನವು ಪ್ರಚಾರದಲ್ಲಿತ್ತೆಂದು ಶಾಸನಗಳ ಆಧಾರದ ಮೇಲೆ ನಿಶ್ಚಯಿಸಿರುವರು. ವತ್ಸಭಟ್ಟಿಯ ಮಂದೇಶ್ವರದ ಶಾಸನವು (ಕ್ರಿ. ಶ. 472) ಆ ವೇಳೆಗೆ ಕಾಳಿದಾಸನ ಕಾವ್ಯಗಳು ಜನ ಸಾಮಾನ್ಯದಲ್ಲೂ ಬಹಳ ಪರಿಚಿತವಾಗಿದ್ದುವೆಂದು ಸೂಚಿಸುವುದು. ಆದ್ದರಿಂದ ಕಾಳಿದಾಸನು ಆರನೆಯ ಶತಮಾನದವನೆಂಬ ವಾದವು ಸಮಂಜಸವಾಗಲಾರದು.

ಹೋ ಅರ್ನ್ಲಿ ಮತ್ತು ಹರಪ್ರಸಾದಶಾಸ್ತ್ರಿಗಳ ವಾದದ ಮುಖ್ಯ ಯುಕ್ತಿಗಳನ್ನು ಶ್ರೀ ಧನಪತಿಬ್ಯಾನರ್ಜಿಯವರು ಈ ರೀತಿ ಖಂಡಿಸಿರುವರು.

ಕಾಳಿದಾಸನ ಕೀರ್ತಿಯು ವಿಸ್ತರಿಸಿಕೊಳ್ಳಲು ಹೋ ಅರ್ನ್ಲಿಯವರು ಊಹಿಸಿರುವ ಕಾಲಾವಧಿಯು ಸಾಲದು. ಈ ವಾದಕ್ಕೆ ಮೂಲವಾದ ಕ್ರಿ. ಶ. 532ರ ಮಂದೇಶ್ವರದ ಶಾಸನವನ್ನು ಬರೆದಿರುವ ಕಕ್ಕನ ಮಗ ವಾಸುಲನು ತನ್ನ ದೊರೆಯನ್ನು ಸ್ತುತಿಸುವ ಉದ್ದೇಶದಿಂದಲೇ ಶ್ಲೋಕಗಳನ್ನು ರಚಿಸಿರುವುದಾಗಿ ಹೇಳಿಕೊಂಡಿರುವನು.[1] ಇಷ್ಟು ಸ್ಪಷ್ಟವಾಗಿ ಸ್ತುತಿಸುವುದು ಕಾಳಿದಾಸನ ಕಾವ್ಯರಚನಾಕ್ರಮಕ್ಕೆ ವಿರುದ್ಧ. ಕಾಳಿದಾಸನೇ ಯಶೋಧರ್ಮನ ಆಸ್ಥಾನ ಕವಿಯಾಗಿದ್ದಿದ್ದರೆ ಈ ಶಾಸನ ಲೇಖನ ಕಾರ್ಯವನ್ನು ದೊರೆಯು ಅವನನ್ನು ಬಿಟ್ಟು ವಾಸುಲನಿಗೆ ವಹಿಸುತ್ತಿರಲಿಲ್ಲ. ಶಾಸನದ ಶೈಲಿಯೂ ಅದರ ಅರ್ವಾಚೀನತೆಯನ್ನು ವ್ಯಕ್ತಗೊಳಿಸುವುದು. ವತ್ಸಭಟ್ಟಿಯ ಮಂದೇಶ್ವರ ಶಾಸನವೂ ಈ ವಾದಕ್ಕೆ ದೊಡ್ಡ ಪ್ರತಿಬಂಧಕ. ಇದರ ಲೇಖಕನು ಕಾಳಿದಾಸನ ಮೇಘಸಂದೇಶ,

---

1. *Vide* Wintz. Gosh. III. p. 45.

ಋತುಸಂಹಾರಗಳನ್ನನುಕರಿಸಿರುವುದು ಸ್ಪಷ್ಟವಾಗಿದೆ.[1] ಇದರ ಶ್ಲೋಕಗಳಿಗೂ ಕಾಳಿದಾಸನ ಶ್ಲೋಕಗಳಿಗೂ ಇರುವ ಸಾಮ್ಯವು ವತ್ಸಭಟ್ಟಿಯೇ ಪ್ರಯತ್ನಪೂರ್ವಕವಾಗಿ ಕಾಳಿದಾಸನನ್ನು ಅನುಕರಿಸಿರುವನೆಂಬುದನ್ನು ಸಮರ್ಥಿಸುವುದು.[2] ಆರನೆಯ ಶತಮಾನದಲ್ಲಿ ಪ್ರಬಲರಾಗಿದ್ದ ಪಾರಸಿಕರನ್ನು ಕವಿಯು ನಿರ್ದೇಶಿಸಿರುವನೆಂಬುದೂ ತಪ್ಪು. ಕಾವ್ಯದಲ್ಲಿ ಪಾರಸಿಕರ ಪ್ರಾಬಲ್ಯಕ್ಕೆ ಸೂಚನೆಯೇ ಇಲ್ಲ." ಹೂಣರು ಭಾರತದಲ್ಲಿ ನೆಲಸಿದ್ದು ಯಶೋಧರ್ಮನಿಂದ ಪರಾಜಿತರಾದರೆಂಬ ವಾದವು

---

1. ಚಲತ್ಪತಾಕಾನ್ಯಬಲಾಸನಾಥಾನ್ಯತ್ಯರ್ಥಶುಕ್ಲಾನ್ಯಧಿಕೋನ್ನತಾನಿ ।
ತಟಿಲ್ಲತಾಚಿತ್ರಸಿತಾಭ್ರಕೂಟತುಲ್ಯೋಪಮಾನಾನಿ ಗೃಹಾಣಿ ಯತ್ರ ॥
ಕೈಲಾಸತುಂಗಶಿಖರಪ್ರತಿಮಾನಿ ಚಾನ್ಯಾನ್ಯಾಭಾಂತಿ ದೀರ್ಘವಲಭೀನಿ ಸವೇದಿಕಾನಿ ।
ಗಾಂಧರ್ವಶಬ್ದಮುಖರಾಣಿ ನಿವಿಷ್ಟಚಿತ್ರಕರ್ಮಾಣಿ ಲೋಲಕದಲೀವನಶೋಭಿತಾನಿ ॥

ಇವುಗಳನ್ನು ವಿದ್ಯುತ್ವಂತಂ (ಮೇ. ಸಂ. II-1) ಎಂಬ ಶೋಕದೊಡನೆ ಹೋಲಿಸಿ ನೋಡಿ.

2. ವತ್ಸಭಟ್ಟಿಯ ಶಿಶಿರಋತು ವರ್ಣನೆಯ ಶ್ಲೋಕಗಳು ಕಾಳಿದಾಸನ ವಸಂತ ವರ್ಣನೆಯಲ್ಲಿ ಬರುವ ಲಕ್ಷಣಗಳ ಕೇವಲ ನಿಷೇಧರೂಪವಾಗಿವೆ. Cf. ನಿಶಾಶ್ಶಕಾಂಕಕ್ಷತ- (ಋ. ಸಂ. V.) with ಚಂದ್ರಾಂಶುಹರ್ಮ್ಯತಲಚಂದನತಾಲವೃಂತ Etc (Mandsor Inscription) ಋತುಸಂಹಾರದ ಕಾವ್ಯಗುಣಗಳು ಅನುಕರಣಾರ್ಹವಾಗುವಷ್ಟು ಮೇಲಿನವಲ್ಲ ಎಂಬುದು ಸುಳ್ಳು. ಭವಭೂತಿ, ಭಾರವಿ ಮುಂತಾದ ಮಹಾಕವಿಗಳೆಲ್ಲರೂ ಇದನ್ನನುಕರಿಸಿರುವುದು ಸ್ಪಷ್ಟವಾಗಿದೆ. ವತ್ಸಭಟ್ಟಿಯ 'ಸ್ಮರವತಗತಾ......' ಇತ್ಯಾದಿ ಶ್ಲೋಕವು ಋತುಸಂಹಾರದ 'ಪಯೋಧರೈಃ ಕುಂತುಮರಾಗ ಪಿಂಜರೈಃ' (V.) ಎಂಬ ಶ್ಲೋಕವನ್ನು ಎಲ್ಲ ಅಂಶಗಳಲ್ಲೂ ಅನುಕರಿಸಿರುವುದು.

3. ಯುದ್ಧದಲ್ಲಿ ಕುದುರೆಗಳನ್ನುಪಯೋಗಿಸಿದರೆಂದೂ ಸವಾರರು ಉದ್ದವಾದ ಗುಂಗುರು ಕೂದಲಿನ ಗಡ್ಡಗಳನ್ನು ಬಿಟ್ಟಿದ್ದರೆಂದೂ ಮಾತ್ರ ಕಾವ್ಯದಲ್ಲಿ ವರ್ಣಿಸಿದೆ. (ರ. ವಂ. IV-62-3.)

ಹುರುಳಿಲ್ಲದ್ದು.[1] ಉತ್ಸವಸಂಕೇತ ಶಬ್ದವನ್ನು ಶ್ರೀ ಶಾಸ್ತ್ರಿಗಳು ಉಚ್ಛಂಗ್, ಬೋಟಂಗ್, ಕೋಟಂಗ್ ಎಂದು ಬಿಡಿಸಿ ಅದು ಟಿಬೆಟನ್ನರನ್ನು ಸೂಚಿಸುವುದೆಂದು ವ್ಯಾಖ್ಯಾನ ಮಾಡಿರುವುದೂ, ಅಕ್ಷೋಭ್ಯ ಶಬ್ದವನ್ನು ಬೌದ್ಧ ಸನ್ಯಾಸಿಯ ಪರವೆಂದು ನಯನಮಾಡಿರುವುದೂ ಕೇವಲ ಹಾಸ್ಯಾಸ್ಪದ. ಚೋಳರ ರಾಜಧಾನಿಯಾದ ಉರಗಪುರವು ಪಾಂಡ್ಯರ ವಶದಲ್ಲಿದ್ದ ಸಂಗತಿಯು ಅಶೋಕನ ಕಾಲದಿಂದಲೂ ಪರಸ್ಪರ ಕಲಹವಾಡುತ್ತಿದ್ದ ಈ ರಾಜ್ಯಗಳ ಕ್ರಿ. ಪೂ. ಒಂದನೆಯ ಶತಮಾನದ ಚರಿತ್ರೆಗೂ ಅನ್ವಯಿಸಬಹುದು.[2] ಹಿಮಾಲಯವು ಸುಗಮವಾದುದನ್ನು ಕುರಿತ ಶ್ರೀ ಶಾಸ್ತ್ರಿಗಳ ಯುಕ್ತಿಯು ಅದಕ್ಕೆ ಆಧಾರವಾದ ಶಾಸನವನ್ನೂ ಅತಿಕ್ರಮಿಸುವುದು. "ಆ ಗಂಗಾಶ್ಲಿಷ್ಟಸಾನೋಃ ಪಶ್ಚಿಮದೋ ಪಯೋಧೇಃ । ಯಸ್ಯಾಶ್ಲಿಷ್ಟೋ ಭುಜಾಭ್ಯಾಂ ವಹತಿ ಹಿಮಗಿರಿಃ ದುರ್ಗಶಬ್ದಾಭಿಮಾನಮ್ ||" ಎಂಬ ಶ್ಲೋಕವು ಯಶೋಧರ್ಮನೇ ಮೊಟ್ಟಮೊದಲು ಹಿಮಾಲಯವನ್ನು ಸುಗಮವಾಗಿ ಮಾಡಿದನೆಂದು ಸ್ಥಾಪಿಸುವುದಿಲ್ಲ. ಕೊನೆಯದಾಗಿ, ಈ ವಾದವು ಭಾರವಿಯು ಕಾಳಿದಾಸನಿಗಿಂತ ಪ್ರಾಚೀನನೆಂದು ಭಾವಿಸಿರುವುದು. ಇದು ಆಧುನಿಕ ಸಂಶೋಧಕರಿಗಲ್ಲದೆ ಸಾಂಪ್ರದಾಯಿಕ ಪಂಡಿತರಿಗೂ ಗ್ರಾಹ್ಯವಾಗಲಾರದು.[3]

ಮಾತೃಗುಪ್ತನು ಶಾಕುಂತಲಾದಿ ಕಾವ್ಯಗಳನ್ನು ರಚಿಸಿದನೆಂದು ರಾಜತರಂಗಿಣಿಯಲ್ಲಿ ಹೇಳದಿರುವುದರಿಂದಲೂ ಇತರ ಕವಿಗಳ ಮತ್ತು ಅವರ ಪೋಷಕರ ಹೆಸರುಗಳು ಅಲ್ಲಿ ಬಂದರೂ ಕಾಳಿದಾಸನ ಪ್ರಸ್ತಾಪವೇ ಇಲ್ಲದುದರಿಂದಲೂ ಡಾ|| ಭೌದಾಜಿಯವರ ವಾದವನ್ನು ಸಮಂಜಸವೆನ್ನು

---

1. ಹೂಣರು ಭಾರತದಲ್ಲಿ ನೆಲೆಸಿದ್ದರೆಂದು ಕಾಳಿದಾಸನು ಹೇಳಿಲ್ಲ. ಪರ್ಷಿಯದಿಂದ ಸಿಂಧುನದಿಯ ಮೇಲ್ಭಾಗ, ಹಿಮಾಲಯ ಪ್ರದೇಶಗಳಿಗೆ ಹೋಗುವ ದಾರಿಯಲ್ಲಿದ್ದರೆಂದು ಹೇಳಿರುವನು. ಈಚೆಗೆ ಯಶೋಧರ್ಮನು ಹೂಣರನ್ನು ಜಯಿಸಿದ ಸಂಗತಿಯು ಅದಕ್ಕೆ ಬಹಳ ಹಿಂದೆ ವಿಕ್ರಮಾದಿತ್ಯನು ಅವರನ್ನು ಜಯಿಸಿದ್ದಿರಲಾರನೆಂದೂ ಸಮರ್ಥಿಸಲಾರದು.

2. ರ.ವಂ. VI-59.

3. K. C. Chattopadhyaya.- Allah. Univ. St. II, pp. 133 cf. Hillebrandt.—'Kālidāsa' pp. 13-25.

ವಂತಿಲ್ಲ; ವಿಕ್ರಮಾದಿತ್ಯನು ಕಾಳಿದಾಸನಿಗೆ ರಾಜ್ಯಾರ್ಧವನ್ನು ಕೊಟ್ಟ ನೆಂಬುದು ಭೋಜನು ಅಕ್ಷರಲಕ್ಷಕೊಟ್ಟನೆಂಬಂತೆ ಕೇವಲ ಉತ್ಪ್ರೇಕ್ಷೆ.

ಕರ್ನ್, ಮ್ಯಾಕ್ಸ್‌ಮುಲ್ಲರ್, ಲಿವಿ, ಮೊದಲಾದವರ ವಾದವನ್ನು ಕೆಲವರು ಖಂಡಿಸಿರುವರು.[1] ವರಾಹಮಿಹಿರನೆಂಬ ಹೆಸರಿನ ಇಬ್ಬರು ಜ್ಯೋತಿಶ್ಶಾಸ್ತ್ರಜ್ಞರಿದ್ದರು. 'ನವಾಧಿಕ ಪಂಚಶತ ಸಂಖ್ಯಾಕೇ' ಇತ್ಯಾದಿ ಶ್ಲೋಕದಲ್ಲಿ ನಿರ್ದಿಷ್ಟನಾಗಿರುವವನು ಇವರಿಬ್ಬರಲ್ಲಿ ಯಾರೆಂದು ಗೊತ್ತಿಲ್ಲ. ಶ್ಲೋಕವಲ್ಲಿ ಉಲ್ಲಿಖಿತನಾಗಿರುವ ವಿಕ್ರಮನು ಶಕಾರಿಯೇ ಎಂಬ ವಿಷಯವೂ ನಿರ್ಧರವಾಗಿಲ್ಲ. ಇದೂ ಅಲ್ಲದೆ ರಾಜತರಂಗಿಣಿ ಯಲ್ಲಿ ಮೂವರು ವಿಕ್ರಮಾದಿತ್ಯರೂ ಬೃಹತ್ಕಥೆಯಲ್ಲಿ ಇಬ್ಬರು ವಿಕ್ರಮಾದಿ ತ್ಯರೂ ಬರುವರು. ಅನೇಕ ದೊರೆಗಳಿಗೆ ವಿಕ್ರಮಾದಿತ್ಯನೆಂಬ ಬಿರುದೂ ಇತ್ತು. ಮತ್ತು ಇತರ ಏಳು ಜನಗಳೂ ಬೇರೆ ಬೇರೆ ಕಾಲದವರೆಂದು ಪ್ರಮಾಣಾಂತರಗಳಿಂದ ನಿರ್ಧರಿಸಬಹುದಾಗಿದೆ. ಈ ಕಾರಣಗಳಿಂದ ಈ ವಾದವನ್ನು ಒಪ್ಪಲು ಸಾಧ್ಯವಿಲ್ಲ.

---

1. Keith:—Hist. of Skt. Lit. pp. 80 81.

2. ಮೇಘದೂತದ ಶ್ಲೋಕದಲ್ಲಿ ದಿಙ್ನಾಗ ನಿಚುಲರಿಗೆ ಸೂಚನೆಯಿರುವು ದೆಂಬ ವಾದವೂ ಅದನ್ನಾಶ್ರಯಿಸಿ ದೊರಕುವ ನಿರ್ಣಯವೂ ಕೂಡ ಸಮಂಜಸ ವಲ್ಲ. ಬೌದ್ಧತಾರ್ಕಿಕನಿಗೂ ಹಿಂದೂಕವಿಗೂ ಪರಸ್ಪರ ದ್ವೇಷಕ್ಕೆ ಕಾರಣವೇನೂ ಗೋಚರವಾಗುವುದಿಲ್ಲ. ಮತ್ತು ನಿಚುಲನೆಂಬ ಹೆಸರಿನ ಕವಿಯಾಗಲಿ ಪಂಡಿತ ನಾಗಲಿ ಇದ್ದನೆಂದು ಸಮರ್ಥಿಸುವ ಯಾವ ಪ್ರಮಾಣವೂ ದೊರೆತಿಲ್ಲ. ಆದುದರಿಂದ ಪ್ರಕೃತ ಗ್ರಂಥದಲ್ಲಿ ಅವರಿಗೆ ಸೂಚನೆಯಿದೆಯೆಂಬುದನ್ನೇ ನಂಬುವುದಕ್ಕೆ ಸಾಧ್ಯ ವಿಲ್ಲ. ಒಂದುಪಕ್ಷ ಈ ಸೂಚನೆಯು ಸಾಧುವೆಂದರೂ ಇದರಿಂದ ಕಾಳಿದಾಸನು ಆರನೆಯ ಶತಮಾನದವನೆಂದು ನಿರ್ಣಯಿಸಲು ಸಾಧ್ಯವಿಲ್ಲ. ಏಕೆಂದರೆ ಅದಕ್ಕೆ ಆಧಾರಭೂತವಾದ ದಿಙ್ನಾಗನ ಕಾಲನಿರ್ಣಯವೇ ಸಮರ್ಪಕವಾಗಿಲ್ಲ. ಡಾ|| ಕೀತ್‌ರವರು ಈ ವಾದವನ್ನು ಖಂಡಿಸಿ ದಿಙ್ನಾಗನು ಎಷ್ಟೇ ಈಚಿನವನೆಂದರೂ ಕ್ರಿ. ಶ. 400ಕ್ಕೆ ಅರ್ವಾಚೀನನಾಗಲಾರನೆಂದು ಸಾಧಿಸಿರುವರು (Keith.—Indian Logic and Atomism. p 28.)-(also K. C. Chattopādhyāya. Allah. Univ. St. II. p. 167.)

ಕಾಳಿದಾಸನು ಪ್ರಯೋಗಿಸಿರುವ ಕೆಲವು ಜ್ಯೋತಿಶ್ಶಾಸ್ತ್ರಪದಗಳೂ[1] ಅವನು ಆರ್ಯಭಟ್ಟನ ಕಾಲ (ಕ್ರಿ. ಶ. 499) ಕ್ಕಿಂತ ಈಚಿನವನಾಗಬೇಕೆಂದು ಸಮರ್ಥಿಸುವುವು. ಮತ್ತು ರ. ವಂ. XIV-40 ನೆಯ ಶ್ಲೋಕವು ಸೂಚಿಸುವ ಚಂದ್ರಗ್ರಹಣ ತತ್ವವು ಆರ್ಯಭಟ್ಟನಿಗಿಂತ ಹಿಂದೆ ಭಾರತೀಯರಿಗೆ ತಿಳಿದಿರಲಿಲ್ಲವೆಂದೂ ಆದ್ದರಿಂದ ಕಾಳಿದಾಸನು ಆರ್ಯಭಟ್ಟನಿಂದೀಚಿನವನೆಂದೂ ಡಾ|| ಹೂತ್‌ರವರ ಮತ. ಆದರೆ, ಈ ಶ್ಲೋಕವು ಸ್ಥೂಲದೃಷ್ಟಿಗೂ ಗೋಚರವಾಗುವ ಚಂದ್ರನಲ್ಲಿರುವ ಕಳಂಕವನ್ನು ಸೂಚಿಸುವುದೇ ಹೊರತು ಚಂದ್ರಗ್ರಹಣ ತತ್ವವನ್ನು ನಿರೂಪಿಸುವುದಿಲ್ಲವೆಂದು ಡಾ|| ಕೀತ್‌ರವರು ಈ ವಾದವನ್ನು ಖಂಡಿಸಿರುತ್ತಾರೆ.[2]

ಆದುದರಿಂದ ಒಟ್ಟಿನಲ್ಲಿ ಕವಿಯು ಕ್ರಿ. ಶ. ಆರನೆಯ ಶತಮಾನದವನೆಂದು ಪ್ರತಿಪಾದಿಸುವ ಮತವು ಯಾವುದಾದರೂ ಸರಿಯೆ, ಸರ್ವಥಾ ಅಸಮಂಜಸ.[3]

## ಕಾಳಿದಾಸನು ಕ್ರಿ. ಶ. ಐದನೆಯ ಶತಮಾನದವನೆನ್ನುವ ವಾದಗಳು.

I. **ಪ್ರೊ. ಪಾಠಕ್** :—ಇವರು ಮೊದಲು ಶ್ರೀ ಶಾಸ್ತ್ರಿಗಳ ವಾದವನ್ನೇ ಅವಲಂಬಿಸಿದ್ದು[4] ಕೊಂಚಕಾಲದ ಮೇಲೆ ರ. ವಂ. IV-68 ರಲ್ಲಿ 'ಸಿಂಧು'ವಿಗೆ ಬದಲಾಗಿ 'ವಂಕ್ಷು' ಎಂಬ ಪಾಠವೇ ಸೂಕ್ತವೆಂದು ಹೇಳಿ ಹೂಣರು ಕ್ರಿ. ಶ. 450 ರಲ್ಲಿ 'ವಂಕ್ಷು' ನದೀತೀರದಲ್ಲಿದ್ದರೆಂದೂ ಕ್ರಿ. ಶ. 455 ರಲ್ಲಿ ಸ್ಕಾಂದಗುಪ್ತನು ಅವರನ್ನು ಸೋಲಿಸಿದ್ದರಿಂದ ಕವಿಯು ಸುಮಾರು ಕ್ರಿ. ಶ. 450 ರಲ್ಲಿದ್ದಿರಬೇಕೆಂದೂ ವಾದಿಸುವರು.

ಕಾಳಿದಾಸನ ವ್ಯಾಖ್ಯಾನಕಾರರಲ್ಲಿ ಅತಿ ಪ್ರಾಚೀನನಾದ ವಲ್ಲಭನೂ,

---

1. ಉದಾ—ಜಾಮಿತ್ರ ಎಂಬ ಶಬ್ದ. ಗ್ರೀಕರ ಡಯಾಮಿಟ್ರಸ್ ಎಂಬ ಶಬ್ದದಿಂದ ಉತ್ಪನ್ನವಾಗಿ ಆರ್ಯಭಟ್ಟನಿಂದ ಪ್ರಯುಕ್ತವಾಗಿರುವುದು.

2. Skt. Dr. p. 146.

3. Dr. K. C. Chattopādhyaya. Allah. Univ. St. Vol. II, p. 63.

4. Kālidāsa and the Hūṇas of the Oxus Valley.—Ind. Ant. 1912.

ಹೂಣರನ್ನು ರಘುವು ಬಾಹ್ಲೀಕದಲ್ಲಿ ಸೋಲಿಸಿದನೆಂದು ಹೇಳುವ ಕ್ಷೀರಸ್ವಾಮಿಯೂ ಈ ವಾದಕ್ಕೆ ಆಧಾರ.[1]

**II. ಕರ್ನಲ್ ವಿಲ್ಫರ್ಡ್ ಮತ್ತು ಹೆಚ್. ಹೆಚ್. ವಿಲ್ಸನ್ :—** ಇವರು ಧನೇಶ್ವರಸೂರಿಯ ಶತ್ರುಂಜಯ ಮಾಹಾತ್ಮ್ಯದ ಆಧಾರದ ಮೇಲೆ [2] ಕಾಳಿದಾಸನು ಕ್ರಿ. ಶ. ಐದನೆಯ ಶತಮಾನದವನೆಂದು ವಾದಿಸುವರು. ಹೆಚ್. ಹೆಚ್. ವಿಲ್ಸನ್‌ರವರು ವಿಲ್ಫರ್ಡ್‌ರವರ ವಾದಕ್ಕೆ ಕೆಲವು ಪೋಷಕ ಯುಕ್ತಿಗಳನ್ನು ಕೊಟ್ಟಿರುವರು.

**III. ಡಾ॥ ಗ್ರಿಯರ್‌ಸನ್, ಶ್ರೀ ಬಿ. ಸಿ. ಮಜುಂದಾರ್, ಶ್ರೀ ಮನೋಮೋಹನ ಚಕ್ರವರ್ತಿ, ಪ್ರೊ॥ ಭಿಡೆ** ಮುಂತಾದವರ ವಾದ.

ಇವರು ಕಾಳಿದಾಸನು ವಿಕ್ರಮಾದಿತ್ಯನ ಸಮಕಾಲಿಕನೆಂದೊಪ್ಪಿ ಕ್ರಿ. ಶ. 5ನೆಯ ಶತಮಾನದ ಗುಪ್ತರಾಜರಲ್ಲಿ ಕೆಲವರಿಗೆ ಆ ಬಿರುದಿದ್ದುದರಿಂದ ಕಾಳಿದಾಸನು ಅವರಲ್ಲೊಬ್ಬರ ಸಮಕಾಲಿಕನೆಂದು ವಾದಿಸುವರು ಕಾಳಿದಾಸನ ಗ್ರಂಥದ ಆಧಾರದಮೇಲೆ ಒಬ್ಬೊಬ್ಬರೂ ಈ ಮತಕ್ಕೆ ಕೆಲ ಕೆಲವು ಪೋಷಕ ಯುಕ್ತಿಗಳನ್ನು ಕೊಡುವರು. (ವಿವರಗಳ ವಿಷಯದಲ್ಲಿ ಅಲ್ಲಲ್ಲಿ ಪರಸ್ಪರ ಭಿನ್ನಾಭಿಪ್ರಾಯಗಳೂ ಉಂಟು.) ಅವುಗಳಲ್ಲಿ ಮುಖ್ಯವಾದುದನ್ನು ಮಾತ್ರ ಒಟ್ಟುಗೂಡಿಸಿ ಗಮನಿಸಬಹುದು.

1. ವಿಕ್ರಮಾದಿತ್ಯ, ಶಕಾರಿ ಎಂಬ ಶಬ್ದಗಳ ಜೊತೆಗೆ 'ಗುಪ್' ಧಾತುವನ್ನೋ ಅದರಿಂದ ನಿಷ್ಪನ್ನವಾಗುವ ಯಾವುದಾದರೂ ಒಂದು

---

1. Pathak-Introduction to Meghadūta.

2. ಈ ಗ್ರಂಥವು ವಲಭಿಯ ಶಿಲಾದಿತ್ಯನ ಕಾಲದಲ್ಲಿ ರಚಿತವಾಯಿತು. ಅದರಲ್ಲಿ ಮಹಾವೀರನು ಹೀಗೆಂದು ಹೇಳಿರುವನು.—"ನನ್ನ ನಿರ್ವಾಣವಾದ ಮೂರು ವರ್ಷ ಐದೂವರೆ ತಿಂಗಳಿನ ಆನಂತರದಲ್ಲಿ ಐದನೆಯ 'ಅರ.' ಆದಾದ 466 ವರ್ಷವೂ 45 ದಿನಗಳ ಮೇಲೆ ವಿಕ್ರಮರಾಜನು ಸಿದ್ಧಸೇನಸೂರಿಯ ಉಪದೇಶವನ್ನು ಹೊಂದಿ......ಆಗ ಪ್ರಚಾರದಲ್ಲಿರುವ ಶಕೆಯನ್ನು ಬಿಟ್ಟು ಬೇರೆ ಶಕೆಯನ್ನು ಸ್ಥಾಪಿಸುವನು." ಈ ವಾಕ್ಯಗಳ ಆಧಾರದ ಮೇಲೆ ವೀರನೂ ವೀರವಿಕ್ರಮನೂ ಒಂದೇ ವ್ಯಕ್ತಿಯೆಂದು ಭಾವಿಸಿ ಕರ್ನಲ್ ವಿಲ್ಫರ್ಡ್‌ರವರು ಲೆಕ್ಕ ಮಾಡಿರುವರು.

ರೂಪವನ್ನೋ ಕಾಳಿದಾಸನು ಪ್ರಯೋಗಿಸಿರುವುದನ್ನು ನೋಡಿ[1] ಕಾವ್ಯಗಳಲ್ಲಿ ನಿರೂಪಿತವಾಗಿರುವ ಸನ್ನಿವೇಶಗಳಿಗೂ ಗುಪ್ತರಾಜರ ಆಳ್ವಿಕೆಯಲ್ಲಿ ನಡೆದ ಸಂಗತಿಗಳಿಗೂ ಇರುವ ಸಾದೃಶ್ಯವನ್ನು ಪ್ರದರ್ಶಿಸಲಾಗಿದೆ.

2. ರಘುವಂಶದ "ಇಕ್ಷುಚ್ಛಾಯ ನಿಷಾದಿನ್ಯಃ"—(IV–20) ಎಂಬಲ್ಲಿ ಮೊದಲನೆ ಪಾದದ 'ಇಕ್ಷು' ಎಂಬುದನ್ನೂ ಮೂರನೆಯ ಪಾದದ 'ಆಕು' ಎಂಬುದನ್ನೂ ಜೋಡಿಸಿದರೆ 'ಇಕ್ಷ್ವಾಕು' ಎಂದಾಗುವುದು. 'ಗೋಪ್ತುಃ' 'ಗೋಪ್ತ್ರ್ಯಃ' ಎಂಬ ಪದಗಳು ಗುಪ್ತ ಸಂತತಿಯ ಸೂಚಕಗಳು. ಆದ್ದರಿಂದ ಈ ಎರಡು ಸಂತತಿಗಳ ಐಕ್ಯವನ್ನು ಪ್ರದರ್ಶಿಸಿ ಗುಪ್ತ ಸಂತತಿಯ ಮೇಲ್ಮೆಯನ್ನು ಪ್ರತಿಪಾದಿಸುವುದೇ ಕವಿಯ ಆಶಯವೆಂದು ಡಾ|| ಗ್ರಿಯರ್‌ಸನ್‌ರವರು ಅಭಿಪ್ರಾಯಪಡುವರು.[2]

---

1. ಗೋಪ್ತಾರಂಸುರಸೈನ್ಯಾನಾಂ (ಕು. ಸಂ. II-52); ಗುಪ್ತಾವಟಿ ಮನೋಹರಂ (ಕು. ಸಂ. VI-38); ನರೇಂದ್ರಗುಪ್ತಂ ನಗರಂ (ಕು. ಸಂ. VII-50); ಜುಗೋಪಾತ್ಮಾನಮತ್ರಸ್ತಃ (ರ. ವಂ. I-21); ಗೋಪ್ತ್ರೇ ಗುಪ್ತತಮೇಂದ್ರಿಯಾಃ (ರ. ವಂ. I-55); ಜುಗೋಪ ಗೋರೂಪ ಧರಾಮಿವೋರ್ವೀಂ (ರ. ವಂ. II-3); ಸ್ವವೀರ್ಯ ಗುಪ್ತಾಹಿ ಮನೋಃಪ್ರಸೂತಿಃ (ರ. ವಂ. II-4); ತಸ್ಮಿನ್ವನಂ ಗೋಪ್ತರಿ ಗಾಹಮಾನೆ. (ರ. ವಂ. II-14); ಗೋಪ್ತುಶೀವ ಗೃಹೇಕೃತಂ (ವಿಕ್ರಮೋ V-1); ವಸುಮಿತ್ರಂ ಗೋಪ್ತಾರ ಮಾದಿಶ್ಯ (ಮಾಲವಿ. V); ಸಂಪತ್ಸ್ಯತೇ ನ ಖಲು ಗೋಪ್ತರಿ (ಮಾಲವಿ ಭರತವಾಕ್ಯ). cf. F. W. Thomas-J. R. A. S. 1909. pp. 740 ff.

2. Referred to by Dr. Bloch in Z. D M. G. LXII, pp. 671-6. ಪ್ರೊ| ಭಿಡೆಯವರು ರಘುವಂಶವು ಮೊಟ್ಟಮೊದಲು ಹದಿನೈದು ಸರ್ಗಗಳ ಕಾವ್ಯವಾಗಿತ್ತೆಂದು ಹೇಳಿ ಅಲ್ಲಿ ನಿರೂಪಿತರಾದ ಸೂರ್ಯವಂಶದ ದೊರೆಗಳಿಗೂ ಗುಪ್ತರಾಜರಿಗೂ ಈರೀತಿ ಸಾಮ್ಯವನ್ನು ಕಲ್ಪಿಸಿರುವರು. ದಿಲೀಪ=ಚಂದ್ರಗುಪ್ತ, ರಘು=ಸಮುದ್ರಗುಪ್ತ; ಅಜ=ಇಮ್ಮಡಿ ಚಂದ್ರಗುಪ್ತ; ದಶರಥ=ಕುಮಾರಗುಪ್ತ; ರಾಮ=ಸ್ಕಾಂದಗುಪ್ತ; ಉಳಿದವರ ವಿಷಯದಲ್ಲಿ ಸೂಚಿತವಾಗಿರುವ ಸಾದೃಶ್ಯಕ್ಕಿಂತ ರಘು ಸಮುದ್ರಗುಪ್ತರಿಗೂ, ರಾಮ ಸ್ಕಾಂದಗುಪ್ತರಿಗೂ, ಇರುವ ಸಾದೃಶ್ಯವು ಹೆಚ್ಚು ಗಮನಾರ್ಹವಾಗಿರುವುದು. (P. O. C. I. Poona. Kālidāsa and the Gupta Kings.)

3. ಕವಿಯ ಗ್ರಂಥಗಳಲ್ಲಿ 'ಕುಮಾರ,' 'ಸ್ಕಂದ,' 'ಇಂದು, ಸಮುದ್ರ' ಮೊದಲಾದ ಶಬ್ದಗಳೋ ಅವುಗಳ ಪರ್ಯಾಯಗಳೋ ಬರುವ ಸಂದರ್ಭಗಳಲ್ಲಿ ಗುಪ್ತಸಂತತಿಯ ಕುಮಾರಗುಪ್ತ, ಸ್ಕಾಂದಗುಪ್ತ ಮೊದಲಾದ ದೊರೆಗಳೇ ಸೂಚಿತರಾಗಿರುವರೆಂದು ಇವರು ವಾದಿಸುವರು.[1] ಈ ಕ್ರಮವನ್ನನುಸರಿಸಿ ಶ್ರೀ ಬಿ. ಸಿ. ಮಜುಂದಾರ್‌ರವರು ಕಾಳಿದಾಸನ ಗ್ರಂಥಗಳಲ್ಲಿ ಶ್ರೀ ಗುಪ್ತ ಮೊದಲಾದ ಗುಪ್ತಸಂತತಿಯ ಎಲ್ಲ ದೊರೆಗಳಿಗೂ ಸೂಚನೆಯಿರುವುದೆಂದು ಪ್ರತಿಪಾದಿಸಿರುವರು.[2] ತನ್ನ ಪೋಷಕನಾದ ಕುಮಾರಗುಪ್ತನ ನೆನಪಿಗಾಗಿಯೇ 'ಕುಮಾರಸಂಭವ' ವನ್ನು ನಿರ್ಮಿಸಿದನೆಂದೂ ಹೇಳುವುದುಂಟು.

4. ಹೂಣರನ್ನು ಜಯಿಸಿದ ಸಂಗತಿಯು (ರ. ವಂ. IV) ಗುಪ್ತರನ್ನು ಸ್ಪಷ್ಟವಾಗಿ ಸೂಚಿಸುವುದು. ಕ್ರಿ. ಶ. 455ರಲ್ಲಿ ಸಿಂಹಾಸನವನ್ನೇರಿದ ಸ್ಕಾಂದಗುಪ್ತನ ಒಂದು ಶಾಸನದಲ್ಲಿ ಈ ಜಯವು ನಿರೂಪಿತವಾಗಿದೆ. ರಘುವು ಜಯಿಸಿದ ರಾಜ್ಯಗಳೂ ಸಮುದ್ರಗುಪ್ತನು ಜಯಿಸಿದ ರಾಜ್ಯಗಳೂ ಒಂದೇ. ಇವನ ಮಗ ಇಮ್ಮಡಿ ಚಂದ್ರಗುಪ್ತನು ಕ್ರಿ. ಶ. 380ರಲ್ಲಿ ರಾಜ್ಯಕ್ಕೆ ಬಂದು ತಂದೆಯಂತೆಯೇ ರಾಜ್ಯವನ್ನು ವಿಸ್ತರಿಸಿದನು. ಕ್ರಿ. ಶ. 413ರ ವೇಳೆಗೆ ಕುಮಾರಗುಪ್ತನು ರಾಜನಾದನು. ಇವನ ಕೊನೆ

---

1. Gawronski—The Digvijaya of Raghu; Manomohan Chakravarti; J. R. A. S. 1903. pp. 183 ff; 1904. pp. 158 ff; B. C. Mazumdar. J. R. A. S. 1909. pp. 731 ff.

2. J. R. A. S. 1909. pp. 731 ff.—ಉದಾಹರಣೆಗಾಗಿ—ಗುಪ್ತಸಂತತಿಯ ಮೊದಲನೆಯ ದೊರೆಯು ಶ್ರೀ ಗುಪ್ತನು. ಇವನ ಹೆಸರಿನ ಮೊದಲಲ್ಲಿ ಶ್ರೀ ಶಬ್ದವಿರುವುದು. ರಘುವಂಶದ ಮೊದಲನೆಯ ದೊರೆಯಾದ ವೈವಸ್ವತಮನುವನ್ನು ಕಾಳಿದಾಸನು ಪ್ರಣವಕ್ಕೆ ಹೋಲಿಸಿರುವನು. (ರ. ವಂ. I-11) ಪ್ರಣವವೂ ಶ್ರೀಕಾರವೂ ಮಂಗಳಕರವಾಗಿ ಏಕಾಕ್ಷರಗಳಾಗಿರುವುದರಿಂದ ಶ್ಲೋಕದಲ್ಲಿ ಶ್ರೀ ಗುಪ್ತನೇ ಸೂಚಿತನಾಗಿರುವನು. ಮತ್ತು ಆ ಸಮುದ್ರ ಕ್ಷಿತೀಶಾನಾಂ (ರ. ವಂ. I-4) ಎಂಬುದಕ್ಕೆ ಸಮುದ್ರಗುಪ್ತನು ಮೊದಲುಗೊಂಡು ದೊರೆಗಳೆಂದು ಅರ್ಥ. ಇದು ಗುಪ್ತರು ಸಮುದ್ರಗುಪ್ತನ ಕಾಲದಿಂದಲೇ ಮಹಾರಾಜಾಧಿರಾಜರೆಂದು ಕರೆದುಕೊಳ್ಳುತ್ತಿದ್ದುದನ್ನು ಸೂಚಿಸುವುದು, ಇತ್ಯಾದಿ.

ಗಾಲದಲ್ಲಿ ಶತ್ರುಗಳ ಕಾಟವು ಹೆಚ್ಚಾಗಿತ್ತು. ಕ್ರಿ. ಶ. 455ರಲ್ಲಿ ಇವನ ಮಗ ಸ್ಕಾಂದಗುಪ್ತನು ಶತ್ರುಗಳನ್ನು ಜಯಿಸಿ ತನ್ನ ತಂದೆಯ ಜ್ಞಾಪಕಾರ್ಥವಾಗಿ ಒಂದು ಜಯಸ್ತಂಭವನ್ನು ನೆಟ್ಟನು. ಇದರಲ್ಲಿ ರಾಜ್ಯವು ವಿದೇಶೀಯರ ಹಾವಳಿಯಿಂದ ಬಿಡುಗಡೆ ಹೊಂದಿದ ಸಂಗತಿಯನ್ನು ಉಲ್ಲೇಖಿಸಿದೆ.[1] ಕಾಳಿದಾಸನ ಕಾವ್ಯಗಳಲ್ಲಿ ನಿರ್ದಿಷ್ಟವಾಗಿರುವ ಹೂಣವಿಜಯವು ಇದೇ ಆಗಿರಬೇಕು. ಬೌದ್ಧಪ್ರಾಬಲ್ಯದಿಂದ ವಿಲುಪ್ತವಾಗಿದ್ದ ಬ್ರಾಹ್ಮಣಧರ್ಮದ ಪುನರುಜ್ಜೀವನ, ವಿದ್ಯೆ ಕಲೆ ಮುಂತಾದುವುಗಳಿಗೆ ಪ್ರೋತ್ಸಾಹ, ರಾಜಕೀಯ ವಾತಾವರಣದಲ್ಲಿ ನಿರಂಕುಶವಾದ ಏಕಚ್ಛತ್ರಾಧಿಪತ್ಯ, ರಾಜ್ಯದಲ್ಲಿದ್ದ ಸರ್ವತೋಮುಖವಾದ ಸುಖ ಶಾಂತಿಗಳು ಕಾವ್ಯಗಳಲ್ಲೂ ಪ್ರತಿಬಿಂಬಿತವಾಗಿರುವುದರಿಂದ ಕವಿಯು ಚಿತ್ರಿಸಿರುವ ಸನ್ನಿವೇಶಗಳು ಗುಪ್ತರ ಆಳ್ವಿಕೆಯ ಕುರುಹುಗಳೇ ಆಗಿವೆ. ಆದುದರಿಂದ ಕಾಳಿದಾಸನು ಗುಪ್ತರ ಸಮಕಾಲಿಕನಾಗಿದ್ದಿರಬೇಕು.

ಹೂಣವಿಜಯದ ವಿವರಗಳ ವಿಚಾರದಲ್ಲಿ ಮಾತ್ರ ಶ್ರೀ ಮನಮೋಹನ ಚಕ್ರವರ್ತಿಯವರು ಬೇರೆ ಅಭಿಪ್ರಾಯ ಹೊಂದಿರುವರು. ಚೀಣಾ ಮತ್ತು ಪಾರಸೀ ದೇಶಗಳ ಚರಿತ್ರೆಯಿಂದಲೂ, ನಾಣ್ಯಗಳ ಆಧಾರದಿಂದಲೂ ಹೂಣರು ಕ್ರಿ. ಶ. 475ರಲ್ಲಿ ಗಾಂಧಾರವನ್ನು ಕಿದಾರ ರಾಜರಿಂದ ಕಿತ್ತುಕೊಂಡರೆಂದೂ ರಘುವಂಶದಲ್ಲಿ ಹೂಣರು ಸಿಂಧುನದೀತೀರದಲ್ಲಿದ್ದರೆಂದು ಹೇಳಿರುವುದು ಅವರು ಗಾಂಧಾರವನ್ನು ಜಯಿಸಿದ ಅನಂತರ ಕಾಲಕ್ಕೆ ಅನ್ವಯಿಸುವುದೆಂದೂ ಇವರು ಪ್ರತಿಪಾದಿಸಿರುವರು. ಇದರ ಪ್ರಕಾರ ಕ್ರಿ. ಶ. ಐದನೆಯ ಶತಮಾನದ ಕೊನೆಯ ಭಾಗವೇ ಕಾಳಿದಾಸನ ಕಾಲವಾಗುವುದು.[2]

---

1. ಕಾಶಿಗೆ ಪೂರ್ವದಲ್ಲಿ ಘಾಜೀಪುರ್ ಡಿಸ್ಟ್ರಿಕ್ಟಿಗೆ ಸೇರಿದ ಭಿತರೀ ಎಂಬಲ್ಲಿ ಈ ಸ್ತಂಭವು ಸಿಕ್ಕಿದೆ. Wintz Gesh. III p. 39.

2. J. R. A. S. 1903. pp. 183 ff; J. R. A. S. 1904. pp. 158 ff. ಸ್ಕಾಂದಗುಪ್ತನಿಗೆ ವಿಕ್ರಮಾದಿತ್ಯನೆಂಬ ಬಿರುದಿದ್ದುದರಿಂದ ಈ ವಾದವು ಕಾಳಿದಾಸ ವಿಕ್ರಮಾದಿತ್ಯರ ಸಮಕಾಲಿಕತ್ವವನ್ನು ಅಂಗೀಕರಿಸುವ ಸಂಪ್ರದಾಯಕ್ಕೂ ಬೆಲೆ ಕೊಟ್ಟಂತಾಯಿತು. (cf. R. C. Mazumdar. J. A. S. B. 1921.)

ಮೇಲ್ಕಂಡ ವಾದಗಳಿಗನುಸಾರವಾಗಿ ಕವಿಯು ಕುಮಾರಗುಪ್ತ ಸ್ಕಾಂದಗುಪ್ತರ ಸಮಕಾಲಿಕನಾಗುವನು.[1] ಆದ್ದರಿಂದ ಅವನು ಕ್ರಿ. ಶ. 413-475ರ ಅವಧಿಯಲ್ಲಿದ್ದಿರಬೇಕೆಂದು ತಾತ್ಪರ್ಯ.

## ಈ ವಾದಗಳ ಖಂಡನೆ.

ಆದರೆ ಈ ವಾದಗಳ ಮೇಲೆಲ್ಲ ಒಂದು ಸಾಮಾನ್ಯಾಕ್ಷೇಪವನ್ನು ಹೇಳಬಹುದು. ಪ್ರಯತ್ನಪೂರ್ವಕವಾಗಿ ರಚಿತವಾದ ಮಂದೇಶ್ವರದ ಶಾಸನದಲ್ಲಿ (ಕ್ರಿ. ಶ. 472) ವತ್ಸಭಟ್ಟಿಯು ಕಾಳಿದಾಸನ ಋತುಸಂಹಾರ, ಮೇಘಸಂದೇಶಗಳನ್ನು ಅನುಕರಿಸಿರುವುದು ಉಪಪನ್ನವಾಗಲು ಸಾಕಾದಷ್ಟು ಕಾಲಾವಧಿಯು ಸಿಕ್ಕುವುದಿಲ್ಲ. ರಘುವಂಶದಲ್ಲಿ ಸೂಚಿತವಾಗಿರುವ ಹೂಣವಿಜಯವು ಸ್ಕಾಂದಗುಪ್ತನ ಈ ವಿಜಯಕ್ಕೇ ಅನ್ವಯಿಸುವುದೆಂದು ನಿರ್ಧರವಾಗಿ ಹೇಳುವಂತಿಲ್ಲ. ಮಹಾಭಾರತದಲ್ಲಿ ನಿರ್ದಿಷ್ಟರಾಗಿರುವ ಹೂಣರ ವಿಷಯದಲ್ಲಿ ಸಂದೇಹಪಟ್ಟರೂ ಪಾಶ್ಚಾತ್ಯರಿಗೆ ಕ್ರಿ. ಶ. 3ನೆಯ ಶತಮಾನದ ವೇಳೆಗೆ ಇವರ ಪರಿಚಯವಾಗಿತ್ತು. ಇದರಂತೆಯೇ ಭಾರತೀಯರಿಗೂ ಆಗಲೇ ಇವರ ಪರಿಚಯವಾಗಿತ್ತೆಂಬುದು ಸಂಭಾವಿತ.[2]

ಕರ್ನಲ್ ವಿಲ್ಫರ್ಡ್ಡರವರ ಲೆಕ್ಕದ ಪ್ರಕಾರ ವಲಭಿಯ ಶಿಲಾದಿತ್ಯನು ಶತ್ರುಂಜಯ ಮುಂತಾದ ಜೈನಯಾತ್ರಾಸ್ಥಳಗಳನ್ನು ಕ್ರಿ. ಶ. 420ರಲ್ಲಿ ಬೌದ್ಧರ ಕೈತಪ್ಪಿಸಿ ವಶಪಡಿಸಿಕೊಂಡನೆನ್ನಬೇಕಾಗುವುದೆಂದೂ ಆದರೆ ಇದು ತಪ್ಪಾಗುವುದೆಂದೂ ಹೇಳಿ ಡಾ|| ಭೌದಾಜಿಯವರು ವಿಲ್ಸನ್ ಮತ್ತು ವಿಲ್ಫರ್ಡ್ಡರವರ ವಾದವನ್ನು ಖಂಡಿಸಿರುವರು.[2] ಡಾ|| ಗ್ರಿಯರ್‌ಸನ್, ಪ್ರೊ. ಭಿಡೆ, ಶ್ರೀ ಬಿ. ಸಿ. ಮಜುಂದಾರ್ ಇವರುಗಳ ಪ್ರಯತ್ನವು ಚಾತುರ್ಯದಿಂದ ಕೂಡಿದ್ದರೂ ಪರಿಣಾಮಕಾರಿಯಾದ ಸಿದ್ಧಾಂತವನ್ನು ಸ್ಥಾಪಿಸುವುದಕ್ಕೆ ಆಧಾರಗಳನ್ನು ಒದಗಿಸುವುದಿಲ್ಲವೆಂದು ಹೇಳಬಹುದು. ಕೆಲವು ವೇಳೆ ಈ ಸೂಚನೆಗಳೂ ಊಹೆಗಳೂ ಹಾಸ್ಯಾಸ್ಪದವಾಗಿವೆ.[3]

---

1. Wintz. Gesch. Ind. Lit. p. 45. f. n. 1.
2. Dr. Bhan Dāji-Lit. Rem.
3. ಇದೇ ಅಧ್ಯಾಯದ ಪುಟ 59. ಟಿ. 1 ನೋಡಿ.

## III. ಇತರ ವಾದಗಳು.

(1) ಮೆಕ್ಡಾನೆಲ್, ಕೀತ್, ಮ್ಯಾಸನ್ ಔರ್‌ಸೆಲ್, ಡಾ|| ದೇ ಮುಂತಾದ ಈಚಿನ ಪಂಡಿತರ ಅಭಿಪ್ರಾಯ..[1]

ಮಂದೇಶ್ವರದ ಶಾಸನದಲ್ಲಿ ಕಂಡುಬರುವ ಋತುಸಂಹಾರ, ಮೇಘ ಸಂದೇಶಗಳ ಅನುಕರಣಗಳು ಉಪಪನ್ನವಾಗುವಂತೆಯೂ ಸಾಂಪ್ರದಾಯಿಕ ಕಥೆಗೆ ವಿರುದ್ಧವಾಗದಂತೆಯೂ ಕಾಳಿದಾಸನು ವಿಕ್ರಮಾದಿತ್ಯನೆಂಬ ಬಿರುದನ್ನು ಹೊಂದಿದ್ದ ಇಮ್ಮಡಿ ಚಂದ್ರಗುಪ್ತನ ಸಮಕಾಲಿಕನಾಗಿದ್ದ ನೆಂದು ಇವರು ಅಭಿಪ್ರಾಯಪಡುತ್ತಾರೆ. ಅಂದರೆ ಕಾಳಿದಾಸನ ಕಾಲವು ಕ್ರಿ. ಶ. ನಾಲ್ಕನೆಯ ಶತಮಾನದ ಕೊನೆ ಮತ್ತು ಐದನೆಯ ಶತಮಾನದ ಆದಿಯ ಅವಧಿಯಲ್ಲಿ ಸೇರುವುದು. (ಕ್ರಿ. ಶ. 380-412.)

1. ಸೇತುಬಂಧವೆಂಬ ಪ್ರಾಕೃತ ಕಾವ್ಯವನ್ನು ಬರೆದವನು ಪ್ರವರ ಸೇನನೋ ಅಥವಾ ಅವನ ಆಶ್ರಿತನಾಗಿದ್ದ ಕಾಳಿದಾಸನೋ ಆಗಿರಬೇಕೆಂದು ಪ್ರವಾದವಿದೆ. ಈ ಪ್ರವರಸೇನನೆಂಬುವನು ಕಾಶ್ಮೀರದ ಪ್ರವರಸೇನನಲ್ಲ ವೆಂದೂ ತೀರ್ಮಾನಿಸಿದೆ. ಆದುದರಿಂದ ಇಮ್ಮಡಿ ಚಂದ್ರಗುಪ್ತನಮಗಳಾದ ಪ್ರಭಾವತೀ ಗುಪ್ತಾ ಮತ್ತು ಇಮ್ಮಡಿ ರುದ್ರಸೇನ ಇವರ ಮಗನಾದ ಇಮ್ಮಡಿ ಪ್ರವರಸೇನನೆಂಬ ವಾಕಾಟಕ ಸಂತತಿಯ ದೊರೆಗೇ ಇದು ಅನ್ವಯಿ ಸುವುದೆಂದು ಹೇಳಿ ಈ ಆಧಾರವನ್ನು ಕಾಳಿದಾಸನ ಕಾಲನಿರ್ಣಯಕ್ಕೆ ಉಪ ಯೋಗಿಸಿಕೊಳ್ಳಲಾಗಿದೆ. "ಕುಂತೇಶ್ವರದೌತ್ಯ"[2] ವು ಕುಂತಲೇಶ್ವರನಾದ ಪ್ರವರಸೇನನ ಆಸ್ಥಾನಕ್ಕೆ ಕಾಳಿದಾಸನು ತನ್ನಪೋಷಕನಾದ ಚಂದ್ರಗುಪ್ತನ ರಾಯಭಾರಿಯಾಗಿ ಹೋಗಿದ್ದಾಗ ಅಲ್ಲಿ ನಡೆದ ಸಂಗತಿಗಳನ್ನೇ ಅಧಿಕರಿ

---

1. Macdonell—Hist Skt. Lit. p. 325; Keith-Skt. Dr. p. 146; and Hist. Skt. Lit p. 82; Massen Oursel—'Ancient India.' pp. 276-7; S. K. De-I. H. Q. XVI. part I. p. 392.

2. ಕ್ಷೇಮೇಂದ್ರನ ಔಚಿತ್ಯವಿಚಾರಚರ್ಚೆಯಲ್ಲೂ ಭೋಜನ ಶೃಂಗಾರ ಪ್ರಕಾಶದಲ್ಲೂ ಇದು ಉಲ್ಲಿಖಿತವಾಗಿದೆ.

ಸಿರುವುದೆಂಮೂ ಹೇಳಲಾಗಿದೆ.[1] ಆದುದರಿಂದ ಕಾಳಿದಾಸನು ಇಮ್ಮಡಿ ಚಂದ್ರಗುಪ್ತ ಮತ್ತು ವಾಕಾಟಿಕ ಸಂತತಿಯ ಇಮ್ಮಡಿ ಪ್ರವರಸೇನರ ಸಮಕಾಲಿಕ.[2]

2. ವಿಕ್ರಮೋರ್ವಶೀಯದಲ್ಲಿ ಬರುವ ಸಿಂಹರಾಶಿಯ ಸೂಚನೆಯೂ ರಘುವಿನ ಜನ್ಮಕಾಲದ ಗ್ರಹಸ್ಥಿತಿಯನ್ನು ನಿರೂಪಿಸುವಾಗ ಪ್ರಯುಕ್ತವಾಗಿರುವ ಉಚ್ಚಶಬ್ದವೂ ಗ್ರೀಕರ ಜ್ಯೋತಿಶ್ಶಾಸ್ತ್ರದ ಪರಿಚಯದಿಂದಲೇ ಕವಿಗೆ ಸಾಧ್ಯವಾಗಿರಬೇಕೆಂದು ಊಹಿಸಿ ಅದರಿಂದ ಕವಿಯು ಕ್ರಿ. ಶ. 350ಕ್ಕೆ ಹಿಂದಿನವನಾಗಲಾರನೆಂನು ಡಾ|| ಯಾಕೊಬಿಯವರು ಸಮರ್ಥಿಸಿರುವರು.[3]

3. ಕಾಳಿದಾಸನ ಪ್ರಾಕೃತವು ಭಾಸನ ಪ್ರಾಕೃತಕ್ಕಿಂತಲೂ ಪರಿಷ್ಕೃತವಾಗಿರುವುದಲ್ಲದೆ ಅವನ ಮಹಾರಾಷ್ಟ್ರಿಯು ಕ್ರಿ. ಶ. 3-4ನೇ ಶತಮಾನಗಳಲ್ಲಿ ರಚಿತವಾದ ಮಹಾರಾಷ್ಟ್ರಿ ಭಾವಗೀತೆಗಳ ಭಾಷೆಗಿಂತ ಈಚಿನದೆಂದು ನಿಶ್ಚಿತವಾಗಿದೆ. ಭಾಸನ ಪ್ರಾಕೃತವು ಅಶ್ವಘೋಷನ ಪ್ರಾಕೃತಕ್ಕಿಂತ ನಿಸ್ಸಂದೇಹವಾಗಿ ಅರ್ವಾಚೀನ. ಭಾಸನು ಕ್ರಿ. ಶ. ಮೂರನೆಯ ಶತಮಾನದವನೆಂದು ಹೇಳಬಹುದಾದ್ದರಿಂದ ಕಾಳಿದಾಸನು ವಿಕ್ರಮಾದಿತ್ಯನೆಂಬ ಬಿರುದನ್ನು ಪಡೆದಿದ್ದ ಗುಪ್ತಸಂತತಿಯ ಇಮ್ಮಡಿ ಚಂದ್ರಗುಪ್ತನ ಸಮಕಾಲಿಕನೆಂದು ಡಾ|| ಕೀತ್‌ರವರ ವಾದ.[4]

---

1. ಪ್ರವಾಸದಲ್ಲಿದ್ದ ಕವಿಯ ಈ ವಿರಹಾನುಭವವೇ ಮೇಘದೂತದಲ್ಲಿ ಚಿತ್ರಿತವಾಗಿವೆಯೆಂದು A. ರಂಗಸ್ವಾಮಿ ಸರಸ್ವತಿಯವರು ಅಭಿಪ್ರಾಯಪಡುವರು. (Q. J. M. S. XV p. 272). ಸೇತುಬಂಧವು ಪ್ರವರಸೇನವಿರಚಿತವೆಂಬ ಪ್ರವಾದಕ್ಕೆ ಕಾಳಿದಾಸನು ಕಾವ್ಯವನ್ನು ಬರೆದು ತನ್ನ ಪೋಷಕನ ಅಪ್ಪಣೆಯಂತೆ ಅದನ್ನು ಪ್ರವರಸೇನನ ಹೆಸರಿನಲ್ಲಿ ಪ್ರಕಟಿಸಲು ಅವಕಾಶ ಕೊಟ್ಟ ಸಂಗತಿಯೇ ಮೂಲವಾಗಿರಬೇಕು

2. K. S. Ramswami Sastri, Siromani.–King Pravarasena and Kālidāsa. P. O. C. VII, pp. 99-108; F. G. Peterson. 'A note on Kālidāsa.' J. R. A. S. 1926, pp. 725-6.

3. Z. D. M. G. —XXX. pp. 303 ff.

4. Keith' Skt. Dr. pp. 93-95 ; p. 146.

4. ವಾತ್ಸ್ಯಾಯನನ ಕಾಮಸೂತ್ರದಲ್ಲಿ ಏಕಚಾರಿಣಿಯರ ನಿಯಮಗಳನ್ನು ನಿರೂಪಿಸುವಾಗ ಭೋಗ್ವೇಷನುತ್ಸೇಕಃ; ಪರಿಜನೇಷು ದಾಕ್ಷಿಣ್ಯಂ'[1] ಎಂದಿರುವುದು ಕಾಳಿದಾಸನ 'ಶುಶ್ರೂಷಸ್ವಗುರೂನ್'[2] ಎಂಬ ಶ್ಲೋಕವನ್ನು ನೆನಪಿಗೆ ತರುವುದು. ಇವುಗಳ ಆಶಯ ಶೈಲಿಗಳ ಸಾಮ್ಯವೂ ಅತಿ ಸನ್ನಿಹಿತವಾಗಿರುವುದು. ಡಾ|| ಯಾಕೋಬಿಯವರು ವಾತ್ಸ್ಯಾಯನನನ್ನು ಕ್ರಿ. ಶ. ಮೂರನೆಯ ಶತಮಾನದವನೆಂದಿರುವುದರಿಂದ ಕಾಮಸೂತ್ರದಿಂದ ಈ ಸಂಗತಿಗಳನ್ನು ಸಾಲ ತೆಗೆದುಕೊಂಡಿರುವ ಕಾಳಿದಾಸನ ಕಾಲದ ಮೇಲ್ಮಟ್ಟವು ಕ್ರಿ. ಶ. ಮೂರನೆಯ ಶತಮಾನವಾಗುತ್ತದೆಯೆಂದು ಎನ್. ಜಿ. ಮಜುಂದಾರ್‌ರವರು ಹೇಳಿರುತ್ತಾರೆ.[3]

ಮೇಲ್ಕಂಡ ವಾದಗಳು ಪರಸ್ಪರ ಪೋಷಕವಾಗದಿದ್ದರೂ ಒಂದೊಂದೂ ಒಂದೊಂದು ರೀತಿಯಲ್ಲಿ ಕಾಳಿದಾಸನು ಕ್ರಿ. ಶ. ನಾಲ್ಕು ಮತ್ತು ಐದನೆಯ ಶತಮಾನಗಳ ಅವಧಿಯಲ್ಲಿದ್ದನೆಂಬ ವಾದವನ್ನು ಸಮರ್ಥಿಸುವುವು.

## ಖಂಡನೆಗಳು.

ಕಾಳಿದಾಸನು ವಾಕಾಟಕ ಸಂತತಿಯ ಪ್ರವರಸೇನನ ಸಮಕಾಲಿಕನೆನ್ನುವುದಕ್ಕೆ ಕೊಡಲಾಗಿರುವ ಯುಕ್ತಿಯು ಡಾ|| ಕೀತ್‌ರವರಿಗೆ ಅನಭಿಮತ.[4] ಡಾ|| ಕೀತ್‌ರವರ ಪ್ರಾಕೃತವನ್ನಾಶ್ರಯಿಸಿದ ವಾದ ಹೊರತು ಮಿಕ್ಕ ಯುಕ್ತಿಗಳು ಕಾಳಿದಾಸನು ಕ್ರಿ.ಶ. 4-5ನೆಯ ಶತಮಾನಗಳ ಅವಧಿಯಲ್ಲೇ ಇದ್ದಿರಬೇಕೆಂದು ನಿರ್ವಿವಾದವಾಗಿ ಸ್ಥಾಪಿಸಲು ಸಹಾಯಕವಾಗುವುದಿಲ್ಲ. ಕಾಳಿದಾಸನ ಪ್ರಾಕೃತವನ್ನಾಶ್ರಯಿಸಿದ ಯುಕ್ತಿಯೂ ಒಂಟಿಯಾಗಿ, ಕಾಳಿದಾಸನು ಇಮ್ಮಡಿ ಚಂದ್ರಗುಪ್ತನ ಸಮಕಾಲಿಕನೆಂದು ನಿರ್ಧರಿಸುವುದಕ್ಕೆ ಸಹಾಯಕವಾಗುವುದಿಲ್ಲ. ಈ ವಾದಕ್ಕೆ ಇತರ ಆಧಾರಗಳು

---

1. ಕಾಮಸೂತ್ರ. IV i. 39-40.
2. IV-18 ಶಾಕುಂತಲ.
3. Ind. Ant. XLVII.
4. "That the Vakataka Pravarasena had anything to do with the poem seems quite unproved" (Hist. Skt. Lit. p. 97 f. n. 4.)

ಸಮರ್ಥನೆಯನ್ನು ಒದಗಿಸುವುದಿಲ್ಲ. ಕವಿಯು ಗುಪ್ತರ ಸಮಕಾಲಿಕ ನೆನ್ನುವುದಕ್ಕೇ ಬಹಳ ಪ್ರತಿಬಂಧಕಗಳಿರುವುವು.[1] ಇದನ್ನೊಪ್ಪಿದರೂ ಕಾಳಿದಾಸನು ಕುಮಾರಗುಪ್ತ ಸ್ಕಾಂದಗುಪ್ತರ ಸಮಕಾಲಿಕನೆನ್ನುವ ವಾದಕ್ಕೆ ಕೊಡಲಾಗಿರುವ ಯುಕ್ತಿಗಳನ್ನೇ ಪ್ರಬಲಕರವೆಂದು ಒಪ್ಪಬೇಕಾಗ ಬಹುದು. ಆದುದರಿಂದ ಕಾಳಿದಾಸನು ಇಮ್ಮಡಿ ಚಂದ್ರಗುಪ್ತನ ಸಮ ಕಾಲಿಕನೆನ್ನುವುದಕ್ಕೆ ಬಲವಾದ ಆಧಾರಗಳಾವುವೂ ಇಲ್ಲವೆಂದು ಹೇಳ ಬೇಕಾಗುವುದು.

## 2. ಶ್ರೀ ದಶರಥ ಶರ್ಮರವರ ವಾದ

ಕೌಮುದೀಮಹೋತ್ಸವಕ್ಕೂ ಕಾಳಿದಾಸನ ಗ್ರಂಥಗಳಿಗೂ ಸಾಮ್ಯ ವಿರುವುದರಿಂದ ಅದರ ಲೇಖಿಕೆಯಾದ ವಿಜ್ಜಿಕೆಯು ಕಾಳಿದಾಸನ ಗ್ರಂಥ ಗಳನ್ನು ಉಪಯೋಗಿಸಿಕೊಂಡಿದ್ದಳೆಂದು ಇವರು ಊಹಿಸುತ್ತಾರೆ. ವಿಜ್ಜಿಕೆಯು ಕ್ರಿ. ಶ. 340ರ ವೇಳೆಯಲ್ಲಿದ್ದಳೆಂದು ಒಪ್ಪಿರುವುದರಿಂದ ಕಾಳಿದಾಸನು ಆ ಕಾಲಕ್ಕೆ ಬಹಳ ಹಿಂದಿನವನಾಗಬೇಕೆಂದು ಸಾರಾಂಶ.[2]

## 3-4. ಲಾಸನ್ ಮತ್ತು ಮಾನಿಯರ್ ವಿಲಿಯಂಸ್ ಇವರ ವಾದ

ಸಮುದ್ರಗುಪ್ತನಿಗೆ 'ಕವಿಗಳ ಮಿತ್ರ' ನೆಂಬ ಬಿರುದು ಇದ್ದಿತೆಂದು ಶಾಸನಗಳಿಂದ ತಿಳಿದುಬರುವುದರಿಂದಲೂ ರಘುವಿನ ದಿಗ್ವಿಜಯಕ್ರಮವೂ ಸಮುದ್ರಗುಪ್ತನ ದಿಗ್ವಿಜಯಕ್ರಮವೂ ಒಂದೇ ಆಗಿರುವುದರಿಂದಲೂ ಕವಿಯು ಸಮುದ್ರಗುಪ್ತನ ಸಮಕಾಲಿಕನೆಂದು ಭಾವಿಸಿ ಪ್ರೊ॥ ಲಾಸನ್ ರವರು ಅವನನ್ನು ಕ್ರಿ. ಶ. ಮೂರನೆಯ ಶತಮಾನದ ಆದಿಭಾಗಕ್ಕೆ ತರು ವರು.[3] ಮಾನಿಯರ್ ವಿಲಿಯಂಸ್‌ರವರೂ ಕವಿಗೆ ಈ ಕಾಲವನ್ನೇ ಒಪ್ಪಿರುವರು.[4]

---

1. ಇದನ್ನು ಮುಂದೆ ಸ್ಪಷ್ಟಪಡಿಸಲಾಗುವುದು.

2. VIII. All India Oriental Conference : Summaries of Papers, pp. 25-6 ; K. P. Jayaswal. 'Historical Data in the drama 'Kaumudi Mahotsava'—A B. O. R. I. XII, p. 50.

3. Ind : Ant : II 451 ; 1158—1160.

4. Indian Wisdom, p. 494.

## 5. ಡಾ|| ಕುನ್ಹನ್ ರಾಜರವರ ವಾದ

ಮಾಳವಿಕಾಗ್ನಿಮಿತ್ರದ ಭರತವಾಕ್ಯದಲ್ಲಿ[1] ಕವಿಯು ತನ್ನ ಸಮಕಾಲಿಕನಾದ ಅಗ್ನಿಮಿತ್ರನನ್ನು ಸೂಚಿಸಿರುವನೆಂದು ಈ ನಾಟಕದ ವ್ಯಾಖ್ಯಾನಕಾರನಾದ ಕಾಟಯವೇಮನು ಅಭಿಪ್ರಾಯಪಡುವನು.[2] ನಾಟಕದ ಇತಿವೃತ್ತವು ಪ್ರಸಿದ್ಧವಾಗಿರಬೇಕೆಂಬ ನಿಯಮಕ್ಕೆ ವಿರುದ್ಧವಾಗಿ ಸಾಮಾನ್ಯರಾಜನಾಗಿದ್ದ ಅಗ್ನಿಮಿತ್ರನ ಕಥೆಯನ್ನು ಆರಿಸಿರುವುದು ಕವಿಯು ರಾಜನ ಸಮಕಾಲಿಕನಾಗಿದ್ದನೆಂಬುದನ್ನೇ ದೃಢಪಡಿಸುವುದು [3] ಮತ್ತು ಕಾಳಿದಾಸನು ಪ್ರಯೋಗಿಸಿರುವ ಕೆಲವು ಶಬ್ದರೂಪಗಳು ಪಾಣಿನಿಯ ನಿಯಮಗಳನ್ನನುಸರಿಸಿದ್ದರೂ ಪತಂಜಲಿಯ ನಿಯಮಗಳಿಗೆ ವಿರುದ್ಧವಾಗಿರುವುವು. ಆದ್ದರಿಂದ ಕಾಳಿದಾಸನು ಪತಂಜಲಿ (ಕ್ರಿ. ಪೂ. 150)ಗೆ ಹಿಂದಿನವನಾಗಿ ಕ್ರಿ. ಪೂ. ಎರಡನೆಯ ಶತಮಾನಕ್ಕೆ ಸೇರುವನು.[4] ಶುಂಗರ ಕಾಲಕ್ಕೆ ಸೇರಿದ (ಕ್ರಿ. ಪೂ. 184-72) ಭಿಟಫಲಕದಲ್ಲಿ ಶಾಕುಂತಲದ ಮೊದಲನೆಯ ದೃಶ್ಯವು ಚಿತ್ರಿತವಾಗಿರುವುದು. ಆದ್ದರಿಂದ ಶಾಕುಂತಲದ ಕರ್ತೃವಾದ ಕಾಳಿದಾಸನು ಶುಂಗರ ಕಾಲದವನಾಗಿದ್ದಿರಬೇಕು.[5]

---

1. ಸಂಪತ್ಸ್ಯತೇ ನ ಖಲು ಗೋಪ್ತರಿ ನಾಗ್ನಿಮಿತ್ರೇ.........

2. ಅಗ್ನಿಮಿತ್ರಸ್ಯ ಕಥನಂ ತತ್ಕಾಲರಾಜೋಪಲಕ್ಷಣಮಿತಿ ಮಂತವ್ಯಮ್— ಅಲ್ಲಿ ಪ್ರಯುಕ್ತವಾಗಿರುವ ನಞ್ದ್ವಯವು ಇವನಿಗೆ ಆಧಾರವಾಗಿದ್ದಿರಬೇಕು. ಮತ್ತು ನಾಟಕದ 'ವಿರಚಿತಪದಂ ವೀರಪ್ರೀತ್ಯಾ'(V-2)ಎಂಬ ಶ್ಲೋಕವೂ ಇದನ್ನೇ ಸಮರ್ಥಿಸುವುದು.

3. 'ಪುರಾಣಮಿತ್ಯೇವ'—(1-2) ಎಂಬ ಶ್ಲೋಕವು ಹೀಗೆ ಅಪ್ರಸಿದ್ಧವಾದ ಇತಿವೃತ್ತವನ್ನು ಆರಿಸಿಕೊಂಡಿದ್ದಕ್ಕಾಗಿಯೇ ರಚಿತವಾಗಿದೆಯೆಂದು ಕೆ. ಎಸ್. ರಾಮಸ್ವಾಮಿಶಾಸ್ತ್ರಿಯವರ ಅಭಿಪ್ರಾಯ. (K. S. Ramaswami Sastri—Kālidāsa his period etc., Vol. I, p. 6.)

4. S'āradaranjan Ray—P. O. C. I. Kālidāsa and Chandragupta II.

5. ಭಿಟಫಲಕವೇ ಕಾಳಿದಾಸನಿಗಿಂತ ಹಿಂದಿನದಿರಬಹುದೆಂದು ಇದಕ್ಕೆ ಸಂಬಂಧಪಟ್ಟ ಶಾಸನದ ಇಲಾಖೆಯ ವರದಿಯಲ್ಲಿ ಸೂಚಿತವಾದ ಸಂದೇಹಕ್ಕೆ ಆಧಾರ ಸಾಲದೆಂದು ಹೇಳಲಾಗಿದೆ. (Introduction, Ray's Edn. of S'āk. pp. 9-10.)

ಕಾಳಿದಾಸನು ತನ್ನ ಸಮಕಾಲಿಕನಾದ ಅಗ್ನಿಮಿತ್ರನನ್ನು ಉಲ್ಲೇಖಿಸಿ ನಾಟಕವನ್ನು ರಚಿಸಿದನೆಂಬುದನ್ನು ಕೆಲವರು ಒಪ್ಪುವುದಿಲ್ಲ. ಕಾಟಯವೇಮನು 'ಮೌರ್ಯಸಚಿವ' ಎಂಬ ಪದಕ್ಕೆ ಮೌರ್ಯನ ಸಚಿವನೆಂಬ ಸರಿಯಾದ ಅರ್ಥವನ್ನು ಬಿಟ್ಟು ಅದನ್ನು ಅಂಕಿತನಾಮವೆಂದು ಭಾವಿಸಿರುವುದು ಅವನ ಮಾತು ನಂಬಿಕೆಗೆ ಯೋಗ್ಯವಲ್ಲವೆಂಬುದನ್ನು ಸೂಚಿಸುವುದು.[1] ಶಬ್ದರೂಪಗಳ ಪ್ರಾಚೀನತೆಯ ಆಧಾರದ ಮೇಲೆ ಕಾಳಿದಾಸನು ಪತಂಜಲಿಗಿಂತ ಹಿಂದಿನವನೆಂದು ನಿರ್ಧರಿಸುವುದು ಅಯುಕ್ತ. ಈ ವಿಧವಾದ ರೂಪಭೇದಗಳು ದೇಶಭಾಷೆಗಳ ಸಂಪರ್ಕದಿಂದಲೂ ಬರಬಹುದು. ಆದ್ದರಿಂದ ಈ ಆಧಾರಗಳು ಕಾಲನಿರ್ಣಯಕ್ಕೆ ಉಪಯೋಗವಾಗುವುದಿಲ್ಲವೆಂದು ಮ|| ಮ|| ಹರಪ್ರಸಾದ ಶಾಸ್ತ್ರಿಗಳೂ,[2] ಭಿಟಪದಕವು ಶುಂಗರ ಕಾಲದ್ದೆಂದು ದೃಢವಾಗಿ ಹೇಳುವಂತಿಲ್ಲವೆಂದೂ ಅದರಲ್ಲಿ ಚಿತ್ರಿತವಾಗಿರುವುದು ಶಾಕುಂತಲದ ಪ್ರಥಮ ದೃಶ್ಯವೆಂಬುದು ಸಂದೇಹಾಸ್ಪದವೆಂದೂ ಕೆ. ಸಿ. ಚಟ್ಟೋಪಾಧ್ಯಾಯರವರೂ[3] ಈ ವಾದವನ್ನು ಖಂಡಿಸಿದರು.

ಆದರೆ ಈಚೆಗೆ ಡಾ|| ಕುನ್ಹನ್‌ರಾಜರವರು ಈ ವಾದಕ್ಕೇ ಹೆಚ್ಚು ಬೆಂಬಲ ಕೊಟ್ಟಿರುವರು ನಾಟಕದಲ್ಲಿ ಪಾತ್ರವಾಗಿರುವ ಅಗ್ನಿಮಿತ್ರನನ್ನು ನಿರ್ದೇಶಿಸುವುದು ಮಾಲವಿಕಾಗ್ನಿಮಿತ್ರದ ಭರತವಾಕ್ಯದ ಒಂದು ವೈಶಿಷ್ಟ್ಯವೆಂದು ಹೇಳಿ ಇದು ಕವಿ ಮತ್ತು ರಾಜನ ಸಮಕಾಲಿಕತೆಯನ್ನೇ ದೃಢಪಡಿಸುವುದೆಂದು ಅಭಿಪ್ರಾಯಪಡುತ್ತಾರೆ. ವಿಶಾಖದತ್ತನ ಮುದ್ರಾರಾಕ್ಷಸದ ಭರತವಾಕ್ಯದಲ್ಲೂ ಕಂಡುಬರುವ ಈ ಲಕ್ಷಣಕ್ಕೆ ಅವನು ಇಮ್ಮಡಿ ಚಂದ್ರಗುಪ್ತನ ಸಮಕಾಲಿಕನೆಂದು ಡಾ|| ರಾಜರವರು ಉಪಪತ್ತಿ ಹೇಳುವರು.[4]

---

1. K. G. S. Iyer :—Q. J. M. S. p. 279.
2. J. B. O. R. S. II, pp. 31-44 ; P. K. Gode:—A.B.O.R. I. I.—The word ಅಶ್ವಭೂ : and the date of Kālidāsa.
3. Allah. Univ, St., Vol II, pp. 157-8.
4. ಆದರೆ ಮುದ್ರಾರಾಕ್ಷಸವು ಕ್ರಿ. ಶ 9ನೆಯ ಶತಮಾನಕ್ಕೆ ಸೇರಿದ್ದೆಂದು ಸಾಮಾನ್ಯವಾಗಿ ವಿಮರ್ಶಕರು ಅಭಿಪ್ರಾಯಪಡುತ್ತಾರೆ. (Keith—Skt. Dr p. 204.)

## ಈ ವಾದದ ಖಂಡನೆ

ಡಾ|| ರಾಜರವರ ಯುಕ್ತಿಯನ್ನನುಸರಿಸಿದರೆ ಮಾಳವಿಕಾಗ್ನಿ ಮಿತ್ರವು ಇಮ್ಮಡಿ ಅಗ್ನಿಮಿತ್ರನ ಕಾಲಕ್ಕೆ ಸೇರುವುದೆಂದು ಹೇಳಲು ಅವಕಾಶವಿದ್ದರೂ ಅವರು ಆದಕ್ಕೆ ಮೊದಲನೆಯ ಅಗ್ನಿಮಿತ್ರನ ಕಾಲವನ್ನೇ ನಿರ್ದೇಶಿಸುವುದು ಸಮಂಜಸವಲ್ಲ. ತಮ್ಮ ವಾದವನ್ನು ಸಾಧಿಸಲು ಡಾ|| ರಾಜರವರು ಕೊಟ್ಟಿರುವ ಇತರ ಯುಕ್ತಿಗಳನ್ನು (ಅಗ್ನಿ ಸೂಚನೆ, ಅಗ್ನಿ ಮಿತ್ರ ಶಬ್ದ ಸೂಚನೆ, ನಾಟಕದ ವಾತಾವರಣ ಮುಂತಾದುವು) ವಿಮರ್ಶಕರು ತಮ್ಮ ತಮ್ಮ ಅಭಿರುಚಿಗನುಗುಣವಾಗಿ ಬೇರೆ ರೀತಿಗಳಲ್ಲೂ ನಯನ ಮಾಡಬಹುದಾದ್ದರಿಂದ ಮತಭೇದಗಳಿಗೆ ಅವಕಾಶವುಂಟು. ಆದ್ದರಿಂದ ಅವುಗಳು ನಿರ್ಧಾರಕವಾಗಲಾರವು.[1] ಯಾವ ಯುಕ್ತಿಗಳನ್ನಾಶ್ರಯಿಸಿದರೂ ಕಾಳಿದಾಸನು ಅಗ್ನಿಮಿತ್ರನ ಸಮಕಾಲಿಕನೆಂಬ ಈ ವಾದದ ಗ್ರಾಹ್ಯತೆಗೆ ಒಂದು ದೊಡ್ಡ ಪ್ರತಿಬಂಧಕವಿದೆ. ಕಾಳಿದಾಸನು ವಿಕ್ರಮಾದಿತ್ಯನ ಸಮಕಾಲಿಕ ಮತ್ತು ಆಶ್ರಿತನೆಂಬ ಸಾಂಪ್ರದಾಯಿಕಸಿದ್ಧಾಂತಕ್ಕೆ ಇದು ವಿರುದ್ಧವಾಗಿದೆ. ಮತ್ತು "ಕಾಳಿದಾಸನು ಅಗ್ನಿಮಿತ್ರನಿಗಿಂತ ಅನೇಕ ಶತಮಾನಗಳ ಈಚೆಗೆ ಬರೆದನು"[2] ಎಂಬ ಚರಿತ್ರಕಾರರ ಮಾತೂ ಈ ವಾದವನ್ನು ಸುಳ್ಳಾಗಿಸುವುದು.

## 6. ಹಿಪ್ಪೊಲೈಟ್ ಫೌಷ್‌ರವರ ವಾದ

ಈಗ್ಗೆ ಸುಮಾರು ಎಂಭತ್ತು ವರ್ಷಗಳ ಹಿಂದೆ ಈ ಫ್ರೆಂಚ್ ವಿದ್ವಾಂಸರು ಕಾಳಿದಾಸನನ್ನು ರಘುವಂಶದ ಕೊನೆಯಲ್ಲಿ ನಿರೂಪಿತನಾಗಿರುವ ಅಗ್ನಿವರ್ಣನ ಅನಂತರ ರಾಜ್ಯಕ್ಕೆ ಬಂದ ಅವನ ಮಗನ ಸಮ

1. ಉದಾಹರಣೆ :—ಅಗ್ನಿಮಿತ್ರನು ಹೇಯವ್ಯಕ್ತಿಯಲ್ಲವೆಂದು ಡಾ|| ರಾಜರವರ ಭಾವನೆ. ಇದಕ್ಕೆ ಪ್ರತಿಯಾಗಿ ಶ್ರೀ. ಕೆ. ಆರ್. ಪಿಷಾರೊಟಿಯವರು ಈ ನಾಟಕವು ಯಾವನೋ ಒಬ್ಬ ದುರ್ವೃತ್ತನಾದ ರಾಜನ ಕಥೆಯ ವಿಡಂಬನವೆಂದು ಅಭಿಪ್ರಾಯಪಡುವರು. (S. K. De :—I. H. Q. XVI-ii, p. 404.)

2. "Kālidāsa wrote centuries later than the date of Agnimitra"—Cam. Hist. of India, p. 600.

ಕಾಲಿಕನೆಂದು ಭಾವಿಸಿದರು.[1] ಈ ದೃಷ್ಟಿಯಿಂದ ಕಾಳಿದಾಸನ ಕಾಲವು ಕ್ರಿ. ಪೂ. ಎಂಟನೆಯ ಶತಮಾನವಾಗುತ್ತದೆ.[2]

## 7. ಶ್ರೀ ಟಿ. ಎಸ್. ನಾರಾಯಣ ಶಾಸ್ತ್ರಿಗಳ ವಾದ

ಕಾಳಿದಾಸನು ವಿಕ್ರಮಾದಿತ್ಯನ ಸಮಕಾಲಿಕನೆಂಬ ಸಂಪ್ರದಾಯವನ್ನು ಒಪ್ಪಿದರೂ ಸ್ವಲ್ಪ ಮಟ್ಟಿಗೆ ದೃಷ್ಟಿ ಸಂಕೋಚವನ್ನು ತೋರ್ಪಡಿಸಿರುವರು. ಕ್ರಿ. ಶ. ಏಳನೆಯ ಶತಮಾನಕ್ಕೆ ಹಿಂದೆ ಆ ಬಿರುದನ್ನು ಪಡೆದಿದ್ದ ದೊರೆಗಳಲ್ಲಿ ಪ್ರಾಚೀನತಮನಾದ ಕಾಶ್ಮೀರದ ಹರ್ಷ ವಿಕ್ರಮಾದಿತ್ಯನ ಕಾಲಕ್ಕೆ ಕಾಳಿದಾಸನನ್ನು ತರಲೆಳಸಿರುವರು. ಈ ಹರ್ಷ ವಿಕ್ರಮಾದಿತ್ಯನೆಂಬುವನು ಶಕರು ಅಥವಾ ಪಾರಸಿಕರನ್ನು ಜಯಿಸಿ ಕ್ರಿ. ಪೂ. 457ರಲ್ಲಿ ಹರ್ಷಶಕೆಯನ್ನು ಸ್ಥಾಪಿಸಿದನು. ಈ ದೊರೆಯು ಕಾಳಿದಾಸನ ಪೋಷಕನೆಂದೂ ಇದೇ ದೊರೆಯ ಆಶ್ರಿತನಾಗಿದ್ದ ಭಾಸನು ಇವನ ಹಿರಿಯ ಸಮಕಾಲಿಕನಾಗಿದ್ದಿರಬೇಕೆಂದೂ ಇವರು ಭಾವಿಸುತ್ತಾರೆ.[3]

### ಖಂಡನೆ

ಮೊದಲನೆಯದಾಗಿ, ಶಕ ಶಬ್ದಕ್ಕೆ ಪಾರಸಿಕರೆಂದು ಅರ್ಥ ಹೇಳಲು ಇವರು ಯಾವ ಆಧಾರವನ್ನೂ ಕೊಟ್ಟಿಲ್ಲ, ಸಂಪ್ರದಾಯದಲ್ಲಿ ಕವಿಯನ್ನು ವಿಕ್ರಮಶಕೆಯ ಸ್ಥಾಪಕನ ಸಮಕಾಲಿಕನೆನ್ನುತ್ತಾರೆಯೇ ಹೊರತು ಹರ್ಷಶಕೆಯ ಸ್ಥಾಪಕನ ಸಮಕಾಲಿಕನೆನ್ನುವುದಿಲ್ಲ. ಇದೂ ಅಲ್ಲದೆ, ಮಾಳವಿಕಾಗ್ನಿಮಿತ್ರದ ನಾಯಕನಾದ ಅಗ್ನಿಮಿತ್ರನು ಇತಿಹಾಸದಲ್ಲಿ ಪ್ರಸಿದ್ಧನಾದ ಶುಂಗವಂಶದ ದೊರೆ. ಮಹಾಭಾಷ್ಯದಲ್ಲಿ ಶುಂಗ ಸಂತತಿಯ

---

1. Bhau Dāji :—Literary Remains: Saturday Review. Jan. 1860; J. B. R. A. S. XXV.

2. ಇದೇ ಕಾಳಿದಾಸನಿಗೆ ಗೊತ್ತುಮಾಡಲಾಗಿರುವ ಪ್ರಾಚೀನ ತಮಕಾಲ. ಆದರೆ ಕವಿಯು ಆ ದೊರೆಯ ಸಮಕಾಲಿಕನಾಗಿದ್ದರೆ ತನ್ನ ಪೋಷಕನ ಚರಿತ್ರೆಯನ್ನೇ ಕಾವ್ಯದಲ್ಲಿ ನಿರೂಪಿಸದಿರುವುದು ಉಪಪನ್ನವಾಗುವುದಿಲ್ಲವೆಂದು ಈ ವಾದವನ್ನು ಶ್ರೀ ಎಸ್. ಪಿ. ಪಂಡಿತ್‌ರವರು ಖಂಡಿಸಿರುತ್ತಾರೆ. (Introduction to Raghuvamsa, pp 27-28.)

3. Sri Harṣa, the Dramatist ; Age of Sankara : Introduction to Haidimba Vaidagdhya.

ಸ್ಥಾಪಕನಾದ ಪುಷ್ಯ (ಷ್ಪ) ಮಿತ್ರನನ್ನೂ ನಾಟಕದಲ್ಲಿ ಸೂಚಿತವಾದ ಇವನು ಮಾಡಿದ ಯಾಗವನ್ನೂ ನಿರ್ದೇಶಿಸಿರುವುದರಿಂದ ಇವನು ಸುಮಾರು ಕ್ರಿ. ಪೂ. 150 ರಲ್ಲಿದ್ದನೆಂದು ಹೇಳಬೇಕಾಗುವುದು. ಆದ್ದರಿಂದ ಕಾಳಿದಾಸನು ಇದಕ್ಕಿಂತ ಹಿಂದಿನವನೆಂದು ಹೇಳುವ ಈ ವಾದವನ್ನು ಅಂಗೀಕರಿಸಲು ಸಾಧ್ಯವಿಲ್ಲ.

ಇದುವರೆಗೆ ಕಾಳಿದಾಸನ ಕಾಲದ ವಿಚಾರದಲ್ಲಿರುವ ಮತಭೇದಗಳನ್ನು ಸಯುಕ್ತಿಕವಾಗಿ ನಿರೂಪಿಸಿ ಖಂಡಿಸಲಾಯಿತು. ಈಗ ಈ ವಿಚಾರದಲ್ಲಿ ಗ್ರಾಹ್ಯತಮವಾದ ಮತವನ್ನು ನಿರೂಪಿಸಿ ಅದಕ್ಕೆ ಪೋಷಕವಾದ ಯುಕ್ತಿಗಳನ್ನು ಪರಿಶೀಲಿಸಬಹುದು. ಹಿಂದೆ ನಿರೂಪಿಸಲ್ಪಟ್ಟ ಮತಗಳಲ್ಲಿ ಕೆಲವಕ್ಕೆ ಯುಕ್ತಿಗಳು ಹೆಚ್ಚಾಗಿದ್ದರೂ ಪ್ರಬಲವಾಗಿಲ್ಲ; ಮತ್ತೆ ಕೆಲವು ಮತಗಳಿಗೆ ಒಂದೆರಡು ಗ್ರಾಹ್ಯವಾದ ಯುಕ್ತಿಗಳಿದ್ದರೂ ಅವು ನಿರ್ಧಾರಕವಾಗುವಷ್ಟು ಪ್ರಬಲವಾಗಿಲ್ಲ; ಇತರ ಕೆಲವು ಮತಗಳಿಗೆ ಯುಕ್ತಿಗಳು ಸಮಂಜಸವಾಗಿದ್ದರೂ ಇದುವರೆಗೆ ತಿಳಿದಿರುವ ಸಂಪ್ರದಾಯಕ್ಕೆ ಅವು ಅನುಗುಣವಾಗಿಲ್ಲ ಕಾಳಿದಾಸನ ಕಾಲವು ಕ್ರಿ. ಶ. ಆರನೆಯ ಶತಮಾನವೆಂಬ ವಾದಕ್ಕೆ ಯುಕ್ತಿಗಳು ಹೇರಳವಾಗಿದ್ದರೂ ಪ್ರಬಲವಾಗಿಲ್ಲ. ಡಾ|| ಫ್ಲೀಟ್‌ರವರು ಸೂಚಿಸುವಂತೆ ಶಾಸನಗಳ ಆಧಾರವು ಈ ವಾದಕ್ಕೆ ಬೆಂಬಲವನ್ನೀಯುವುದಿಲ್ಲ. ಕ್ರಿ. ಶ. ಐದನೆಯ ಶತಮಾನವನ್ನೂ ಕ್ರಿ. ಶ, ನಾಲ್ಕು ಮತ್ತು ಐದನೆಯ ಶತಮಾನದ ಅವಧಿಯನ್ನೂ ಕಾಳಿದಾಸನ ಕಾಲವೆಂದು ಪ್ರತಿಪಾದಿಸುವ ಮತಗಳು ಸಾಮಾನ್ಯವಾಗಿ ಕವಿಯು ಗುಪ್ತರ ಸಮಕಾಲಿಕನೆಂಬ ಊಹೆಯ ಅಡಿಗಲ್ಲಿನ ಮೇಲಿರುವುವು. ಈ ಊಹೆಗೆ ಗ್ರಂಥಗಳ ಆಂತರ ಆಧಾರವೇ ಮೂಲ. ಆದರೆ ಕವಿಯು ಗುಪ್ತರ ಸಮಕಾಲಿಕನೆನ್ನುವುದಕ್ಕೆ ಅದೇ ಆಧಾರವು ಪ್ರತಿಬಂಧಕವಾಗಿದೆಯೆನ್ನಲೂ ಬಹುದು. ಗುಪ್ ಧಾತುವಿನಿಂದ ನಿಷ್ಪನ್ನವಾಗುವ ರೂಪಗಳನ್ನು ಲೆಕ್ಕಮಾಡಿ ಕವಿಯ ಕಾಲವನ್ನು ನಿರ್ಣಯಿಸುವುದಾದರೆ ಅಶ್ವಘೋಷನ ಗ್ರಂಥಗಳಲ್ಲೂ ಇಂತಹ ಒಂದು ಪಟ್ಟಿಯನ್ನು ಸಿದ್ಧಪಡಿಸಲು ಸಾಧ್ಯವಾದುದರಿಂದ ಅವನೂ ಗುಪ್ತರ ಸಮಕಾಲಿಕನೆನ್ನುವುದಕ್ಕೆ ಸಾಧ್ಯ. ಆದರೆ ಇದು ಸರ್ವಥಾ ತಪ್ಪು. ಕಾವ್ಯಶೈಲಿಯಲ್ಲಿ ಸಮುದ್ರ

ಚಂದ್ರ ಮೊದಲಾದ ಕೆಲವು ಶಬ್ದಗಳು ಧಾರಾಳವಾಗಿ ಪ್ರಯೋಗವನ್ನು ಹೊಂದುವುದರಿಂದ ಕಾಳಿದಾಸನ ಗ್ರಂಥಗಳಲ್ಲಿ ಮಾತ್ರ ಅವುಗಳಿಗೆ ವಿಶೇಷಾರ್ಥಗಳನ್ನು ಕಲ್ಪಿಸಿ ಅವುಗಳು ಪೋಷಕರಾದ ರಾಜರನ್ನು ಸೂಚಿಸುತ್ತವೆಯೆಂದು ನಿರ್ಣಯಿಸುವುದು ಯುಕ್ತವಲ್ಲ. ಸಂದರ್ಭಾನುಸಾರವಾಗಿ ಕಾವ್ಯಶೈಲಿಗೆ ಅರ್ಹವಾದ ಶಬ್ದಗಳನ್ನೂ ಉಪಮೆಗಳನ್ನೂ ಕವಿಯು ಆರಿಸಿಕೊಂಡಿರುವನೇ ಹೊರತು ಯಾರನ್ನೂ ಸ್ತುತಿಸುವುದಾಗಲಿ ಸೂಚಿಸುವುದಾಗಲಿ ಅವನ ಉದ್ದೇಶವಲ್ಲ. ಆದುದರಿಂದ ಕುಮಾರ, ಸ್ಕಂದ ಮೊದಲಾದ ಶಬ್ದಗಳ ಪ್ರಯೋಗವನ್ನಾಶ್ರಯಿಸಿದ ಯುಕ್ತಿಗಳಿಗೆ ಹೆಚ್ಚು ಬೆಲೆ ಕಟ್ಟಲು ಸಾಧ್ಯವಿಲ್ಲ. ಇದಲ್ಲದೆ ಈ ವಾದಗಳಿಗೆ ಇನ್ನೂ ಒಂದು ದೊಡ್ಡ ಪ್ರತಿಬಂಧಕವಿರುವುದು. ರಘುವಂಶವು, ರಾಜ್ಯವೆಲ್ಲಾ ಹಾಳಾಗಿ ರಘುವಿನ ವಂಶದ ದೊರೆಗಳಾದರೂ ಇಲ್ಲದೆ ವಂಶಾಂಕುರವಾಗಿ ಒಬ್ಬನು ಹುಟ್ಟಿದರೆ ಸಾಕೆಂದು ಜನರು ಹಂಬಲಿಸುತ್ತಿದ್ದರೆಂದು ಮುಗಿಯುವುದು. ಹೀಗೆಯೇ ನಿಸ್ಸಂದಿಗ್ಧವಾಗಿ ಕಾಳಿದಾಸಕೃತವೆಂದೊಪ್ಪುವ ಕುಮಾರಸಂಭವದ ಮೊದಲನೆಯ ಏಳು ಸರ್ಗಗಳ ಕೊನೆಯಲ್ಲೂ ದೇವತೆಗಳು ರಾಕ್ಷಸರ ಬಾಧೆಯಿಂದ ತಮ್ಮನ್ನು ರಕ್ಷಿಸುವ ವೀರನು ಹುಟ್ಟಲೆಂದು ಆಶಿಸುವರು. ಗುಪ್ತರಾಜರ ಪ್ರಾಬಲ್ಯದಲ್ಲಿ ಅವರ ಆಶ್ರಿತನಾಗಿದ್ದ ಕವಿಯು ತನ್ನ ಗ್ರಂಥಗಳಲ್ಲಿ ಅವರನ್ನೇ ಸೂಚಿಸುವನೆಂದು ಹೇಳಿದರೆ ಅದೇ ಗ್ರಂಥಗಳ ಕೊನೆಯಲ್ಲಿ ಸಂತತಿಯ ಕ್ಷೀಣಾವಸ್ಥೆಯನ್ನೂ ರಾಜ್ಯವಿಪ್ಲವವನ್ನೂ ವರ್ಣಿಸಿರುವುದು ಸಂಗತವಾಗುತ್ತದೆಯೇ? [1] ಈ ಕಾರಣಗಳಿಂದ ಕವಿಯು ಗುಪ್ತರ ಸಮಕಾಲಿಕನೆನ್ನಲು ಸಾಧ್ಯವಿಲ್ಲ

ಕಾಳಿದಾಸನು ಕ್ರಿ. ಪೂ. 56ರಲ್ಲಿ ಪ್ರಸಿದ್ಧನಾಗಿದ್ದ ಶಕಾರಿ ವಿಕ್ರಮಾದಿತ್ಯನ ಸಮಕಾಲಿಕನೆಂಬ ವಾದವನ್ನು ವಿವರಿಸುವುದಕ್ಕೆ ಮೊದಲು ಅಶ್ವಘೋಷನ ಕಾವ್ಯಗಳ ಕೆಲವು ಭಾಗಗಳಿಗೂ ಕಾಳಿದಾಸನ ಕಾವ್ಯಗಳ ಕೆಲವು ಭಾಗಗಳಿಗೂ ಇರುವ ಸಾಮ್ಯವನ್ನು ಗಮನಿಸಿ ಇದರಿಂದ ಇವರಿಬ್ಬರ ಪೌರ್ವಾಪರ್ಯದ ಸಮಸ್ಯೆಯನ್ನು ಬಿಡಿಸಬೇಕಾಗಿದೆ. ಏಕೆಂದರೆ,

---

1. ಈ ಯುಕ್ತಿಯನ್ನು ಸೂಚಿಸಿದುದಕ್ಕಾಗಿ ನಾನು ಡಾ|| ವೆಂಕಟಸುಬ್ಬಯ್ಯನವರಿಗೆ ಕೃತಜ್ಞನಾಗಿರುತ್ತೇನೆ.

ಕಾಳಿದಾಸನು ಅಶ್ವಘೋಷನನ್ನು ಅನುಕರಿಸಿದನೆಂದು ನಿರ್ಧರಿಸಬಹುದಾದರೆ ಅವನು ಕ್ರಿ. ಶ. ಒಂದನೆಯ ಶತಮಾನದಿಂದೀಚಿನವನಾಗಬೇಕಾಗುತ್ತದೆ.[1] ಹಾಗಿಲ್ಲದೆ ಅಶ್ವಘೋಷನೇ ಕಾಳಿದಾಸನನ್ನು ಅನುಕರಿಸಿದನೆಂದು ಸಿದ್ಧವಾದರೆ ಕಾಳಿದಾಸನು ಶಕಾರಿ ವಿಕ್ರಮಾದಿತ್ಯನ ಸಮಕಾಲಿಕನೆಂಬ ವಾದಕ್ಕೆ ಬಲದೊರಕುವುದು. ಆದುದರಿಂದ ಕಾಳಿದಾಸ ಮತ್ತು ಅಶ್ವಘೋಷ ಇವರ ಪೌರ್ವಾಪರ್ಯ ನಿರ್ಣಯವು ಕಾಳಿದಾಸನ ಕಾಲ ನಿರ್ಣಯಕ್ಕೆ ಅತ್ಯವಶ್ಯಕವೆಂದು ಹೇಳಬಹುದು.

ಕವೆಲ್ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಕಾಳಿದಾಸನು ಅಶ್ವಘೋಷನನ್ನು ಅನುಕರಿಸಿರುವನೆಂದು ಹೇಳುವರು [2] ಈ ವಾದದ ಯುಕ್ತಿಗಳನ್ನು ಈ ರೀತಿ ಸಂಗ್ರಹಿಸಬಹುದು.

ಕಾಳಿದಾಸನು ರೇಖಿಸಿರುವ ಚಿತ್ರಗಳು ಅಶ್ವಘೋಷನ ಒರಟು ಚಿತ್ರಗಳ ರಮ್ಯವಾದ ರೂಪ. ಮಾತೃಚೇತ, ಆರ್ಯಶೂರ, ಅಶ್ವಘೋಷ ಎಂಬ ಮೂರೂ ಒಂದೇ ವ್ಯಕ್ತಿಯ ಬೇರೆ ಬೇರೆ ಹೆಸರುಗಳೆಂದೊಪ್ಪಿಕೊಂಡರೆ ಅಶ್ವಘೋಷನು ಬರೆದ ಕಾವ್ಯಗಳ ಸಂಖ್ಯೆಯು ಅಪರಿಮಿತವಾಗುವುದು ಆದುದರಿಂದ ಬೌದ್ಧ ಸಂಪ್ರದಾಯದಲ್ಲಿ ನಿರೂಪಿಸುವಂತೆ ಅವನನ್ನೂ ಮಹಾಕವಿಯೆಂದು ಪರಿಗಣಿಸುವುದರಲ್ಲಿ ತಪ್ಪೇನೂ ಆಗುವುದಿಲ್ಲ. ಈ ರೀತಿ ಸೌಂದರನಂದ, ಬುದ್ಧಚರಿತ, ಶಾರಿಪುತ್ರಪ್ರಕರಣ, ಮೊದಲಾದ[3] ಗ್ರಂಥಗಳನ್ನು ರಚಿಸಿದ ಅಶ್ವಘೋಷನನ್ನು ಕಾಳಿದಾಸನು ಅನುಕರಿಸಿದನೆಂದೊಪ್ಪಿದರೂ ಕಾಳಿದಾಸನ ಪ್ರಾಶಸ್ತ್ಯಕ್ಕೆ ಕುಂದಕ ಬಂದಂತೆ ಭಾವಿಸಬೇಕಾಗಿಲ್ಲ.[4]

---

1 ಅಶ್ವಘೋಷನು ಕನಿಷ್ಕನ ಗುರುವಾಗಿದ್ದನೆಂದು ಪ್ರಸಿದ್ಧಿಯಿರುವುದರಿಂದ ಸುಮಾರು ಕ್ರಿ. ಶ. 78ರಲ್ಲಿ ಅವನು ಇದ್ದಿರಬೇಕೆಂದು ನಿರ್ಣಯಿಸಲಾಗಿದೆ.

2 ಇತರ ಯುಕ್ತಿಗಳನ್ನಾಶ್ರಯಿಸಿದರೂ ಡಾ|| ಕೀತ್‌ರವರೂ ಅಶ್ವಘೋಷನ ಪ್ರಾಚೀನತೆಯನ್ನೇ ಅಂಗೀಕರಿಸುತ್ತಾರೆ. ಅಶ್ವಘೋಷನ ಪ್ರಾಕೃತವು ಕಾಳಿದಾಸನ ಪ್ರಾಕೃತಕ್ಕಿಂತ ಆರ್ಷತರವೆಂಬುದೇ ಇವರ ವಾದಕ್ಕೆ ಆಧಾರ.

3 ಒಂದು ಅಜ್ಞಾತ ನಾಮಧೇಯವಾದ ಪೂರ್ಣನಾಟಕ ಮತ್ತು ಇನ್ನೊಂದು ಅಸಂಪೂರ್ಣ ನಾಟಕ.

4. Cowell--Preface to Buddhacarita, pp. x-xii.

ಪರಸ್ಪರ ಸಾಮ್ಯವಿರುವ ಇವರ ಗ್ರಂಥಭಾಗಗಳನ್ನು ಹೋಲಿಸಿ ನೋಡಿದರೆ ಅಶ್ವಘೋಷನೇ ಕಾಳಿದಾಸನನ್ನನುಕರಿಸಿರುವನೆಂದು ವಿಶದ ಪಡುವುದರಿಂದ ಕವೆಲ್‌ರವರ ವಾದವು ಯುಕ್ತಿಸಹವಲ್ಲ. ಸೌಂದರನಂದದ ಉಪಸಂಹಾರ ಶ್ಲೋಕಗಳಲ್ಲಿ[1] ಅಶ್ವಘೋಷನು ಮೋಕ್ಷಪ್ರತಿಪಾದಕ ವಾದ ತನ್ನ ಕೃತಿಯು ರತ್ಯರ್ಥವಲ್ಲವೆಂದೂ ಉಪಶಾಂತಿಗೋಸ್ಕರವೆಂದೂ ಅನ್ಯಮನಸ್ಕರಾದ ಶ್ರೋತೃಗಳು ಗ್ರಹಿಸಲೆಂದು ಕಾವ್ಯರೂಪದಲ್ಲಿ ನಿರ್ಮಿತವಾಗಿರುವುದೆಂದೂ ಮೊದಲಾಗಿ ಹೇಳಿರುವನು. ಇದರಿಂದ ಅಶ್ವ ಘೋಷನು ಮತಪ್ರಚಾರಕನಾದ ಪಾದರಿಯಂತೆ ತನ್ನ ಕಾರ್ಯಕ್ಕೆ ಅನು ಕೂಲವಾದ ಸಾಧನವೆಂದು ಮಾತ್ರ ಕಾವ್ಯರೂಪವನ್ನು ಪರಿಗ್ರಹಿಸಿರು ವುದು ಸ್ಪಷ್ಟವಾಗುವುದು. ತಾನು ಕವಿಯಲ್ಲವೆಂದು ಅಶ್ವಘೋಷನು ಬೇರೆ ಹೇಳಿಕೊಳ್ಳಬೇಕಾಗಿಲ್ಲ. ಮತ ವಿಷಯಕವಾದ ಗ್ರಂಥಭಾಗದ ಧೋರಣೆಯು ಇತರ ಸಂಗತಿಗಳನ್ನು ನಿರೂಪಿಸುನೆಡೆಗಳಲ್ಲಿ ಸಿಕ್ಕದು. ಇಂತಹವನು ಪ್ರಸಿದ್ಧ ಕವಿಗಳನ್ನು ಅನುಕರಿಸುವುದು ಸ್ವಾಭಾವಿಕ.[2]

ಕವೆಲ್‌ರವರು ಬುದ್ಧಚರಿತ (III-13-24) ಕ್ಕೂ ರಘುವಂಶ (VII-5-12) ಕ್ಕೂ ಇರುವ ಸಾಮ್ಯವನ್ನು ಅತಿ ಮುಖ್ಯವೆಂದು ಭಾವಿ. ಸಿರುವರು.[3] ಆದರೆ ಕುಮಾರ ಸಂಭವದ (VII-56-70) ಕೆಲವು ಶ್ಲೋಕ

---

1. ಇತ್ಯೇಷಾ ವ್ಯುಪಶಾಂತಯೇ ನ ರತಯೇ ಮೋಕ್ಷಾರ್ಥಗರ್ಭಾ ಕೃತಿಃ
ಶ್ರೋತೄಣಾಂಗ್ರಹಣಾರ್ಥ ಮನ್ಯಮನಸಾಂ ಕಾವ್ಯೋಪಚಾರಾತ್ಕೃತಾ।
ಮತ್ತು
ಪ್ರಾಯೇಣಾಲೋಕ್ಯ ಲೋಕಂ ವಿಷಯರತಿಪರಂ ಮೋಕ್ಷಾತ್ಪ್ರತಿಹತಂ
ಕಾವ್ಯವ್ಯಾಜೇನ ತತ್ತ್ವಂ ಕಥಿತಮಿಹ ಮಯಾ ಮೋಕ್ಷ ಪರಮಿತಿ।
ಎಂಬ ಭಾಗವನ್ನು ಗಮನಿಸಬಹುದು.

2. ಇದರಿಂದ ಅಶ್ವಘೋಷನು ಪ್ರತಿಭಾಶಾಲಿಯಲ್ಲವೆಂದು ಊಹಿಸುವ ಹಾಗಿಲ್ಲ. ಪ್ರತಿಭಾಶಾಲಿಯಲ್ಲದಿದ್ದರೆ ಇಂತಹ ಅನುಕರಣವೂ ಸಾಧ್ಯವಿಲ್ಲ. ಮೇಲೆ ಗಮನಿಸಿದ 'ನ ರತಯೇ' ಎಂಬುದು ಕಾಳಿದಾಸನ ಕಾವ್ಯಗಳ ಅಸಾಧಾರಣ ಲಕ್ಷಣ ವನ್ನೇ ಲಕ್ಷ್ಯದಲ್ಲಿಟ್ಟು ರಚಿತವಾಗಿರಬೇಕು.

3. ಈ ಸಾಮ್ಯವು ರಘುವಂಶದ ಅದೇ ಸರ್ಗದ 16-17 ನೇ ಶ್ಲೋಕಗಳ ವರೆಗೂ ಅನುಸ್ಯೂತವಾಗಿರುವುದೆಂದು ಕೆ. ಜಿ. ಶಂಕರರವರ ಸೂಚನೆ. (Q. J. M. S. X, pp. 188-90.)

ಗಳಲ್ಲೂ ರಘುವಂಶದ (VII-5-12) ಭಾಗದಲ್ಲಿಯ ಶಬ್ದಗಳು ಕಂಡು ಬರುತ್ತವೆ. ಒಂದು ಗ್ರಂಥದಲ್ಲಿ ಬರೆದಿರುವುದನ್ನೇ ಇನ್ನೊಂದರಲ್ಲೂ ಗರ್ಭೀಕರಿಸಿರುವುದು ಆ ಆಶಯಗಳಲ್ಲೂ ಅವುಗಳ ವಾಚಕಗಳಾದ ಕೆಲವು ಶಬ್ದ ರೂಪಗಳಲ್ಲೂ ಲೇಖಕನಿಗಿರುವ ಹೆಚ್ಚಿನ ಮಮತೆಯನ್ನು ಸೂಚಿಸು ವುದಲ್ಲದೆ ಆ ಭಾಗಗಳು ಅನನುಕೃತವೆಂಬುದನ್ನೂ ಪ್ರತಿಪಾದಿಸುವುದು. ಕದ್ದ ಮಾಲನ್ನು ಯಾರೂ ಉತ್ಸಾಹದಿಂದ ಪ್ರದರ್ಶಿಸುವುದಿಲ್ಲ ಕಾಳಿದಾಸನ ಮಾತೇಕೆ. ಅದುದರಿಂದ ಅಶ್ವಘೋಷನೇ ಕಾಳಿದಾಸನ ಈ ಮೆಚ್ಚಿನ ಶಬ್ದ ಗಳನ್ನೂ ಆಶಯಗಳನ್ನೂ ಉಳ್ಳ ಗ್ರಂಥ ಭಾಗಗಳನ್ನೂ ಅನುಕರಿಸಿ ಬುದ್ಧ ಚರಿತದ (III-13-24) ಭಾಗವನ್ನು ರಚಿಸಿದನೆಂದು ಸ್ಪಷ್ಟಪಡುವುದು. ಇಲ್ಲಿಯೂ ಕಾಳಿದಾಸನ ಕೆಲವು ಅಭಿಪ್ರಾಯಗಳನ್ನು ಸಂದರ್ಭಕ್ಕೆ ತಕ್ಕಂತೆ ಅಶ್ವಘೋಷನು ಮಾರ್ಪಡಿಸಿರುವುದು ಗೋಚರವಾಗುವುದು.[1] ಇದಲ್ಲದೆ, ಇಬ್ಬರ ಗ್ರಂಥಗಳಲ್ಲಿಯೂ ಈ ಭಾಗಗಳು ಬರುವ ಸಂದರ್ಭವನ್ನು ಪರಿ ಶೀಲಿಸಿದರೆ ಅಶ್ವಘೋಷನು ಮಾಡಿರುವ ವರ್ಣನೆಯು ಕಾವ್ಯವಸ್ತುವಿಗೆ ಅನಪೇಕ್ಷಿತವೂ ಅಯುಕ್ತವೂ ಆಗಿದೆಯೆಂಬುದು ಗೋಚರವಾಗುವುದು. ಮತ್ತು ಕಾಳಿದಾಸನ ವರ್ಣನೆಯು ಸಂಕ್ಷಿಪ್ತವಾಗಿದ್ದರೂ ಅಶ್ವಘೋಷನ ಅನವಶ್ಯಕವಾದ ವರ್ಣನೆಯು ವಿಸ್ತೃತವಾಗಿರುವುದು. ಇದೆಲ್ಲವೂ ಅಶ್ವ ಘೋಷನು ಅನುಕರಣಾಪೇಕ್ಷೆಯನ್ನುಳ್ಳ ಅರ್ವಾಚೀನನೆಂಬುದನ್ನು ನಿಸ್ಸಂದಿಗ್ಧವಾಗಿ ಪ್ರದರ್ಶಿಸುವುದು. ಪ್ರಾಕೃತದ ಅರ್ವಾಚೀನತೆಯ ಆಧಾರವನ್ನು ಆಶ್ರಯಿಸಿಯೂ ಕಾಳಿದಾಸನನ್ನು ಅರ್ವಾಚೀನನೆನ್ನುವ

---

1. ರಾಜಕುಮಾರನನ್ನು ನೋಡಲು ನೆರೆದಿದ್ದ ಯುವತಿಯರನ್ನು ಅವನ ರೂಪವು ಮೋಹಗೊಳಿಸಿತೆಂದೂ ಅವರು ಕನ್ಯೆಯ ಸೌಭಾಗ್ಯಕ್ಕೆ ಅಸೂಯೆಪಟ್ಟರೆಂ ದೂ ಕಾಳಿದಾಸನು ವರ್ಣಿಸಿರುವನು. ಇದನ್ನು ಅಶ್ವಘೋಷನು ಸ್ವಲ್ಪ ಮಾರ್ಪಡಿ ಸಿರುವನು. ಬುದ್ಧನು ಅಲಂಕೃತನಾದ ವರ ಸಲ್ಲದುದರಿಂದ ಯುವತಿಯರು ಪರಪುರು ಷನ ಸೌಂದರ್ಯಕ್ಕೆ ಮೋಹಗೊಂಡರೆಂಬುದು ಬೌದ್ಧ ಸನ್ಯಾಸಿಗೆ ಹೇಯವೆಂದು ಕಾಣಲು "ಶುದ್ಧೈಃ ಮನೋಭಿಃ ಖಲು ನಾನ್ಯಭಾವಾತ್" ಎಂದು (ಬು. ಚ. III-23) ಬದಲಾಯಿಸಿರುವನು. ರಘುವಂಶದ ಯುವತಿಯರು ಸ್ವತಂತ್ರಚಾರಿಣಿ ಯರು. ಆದರೆ ಬುದ್ಧಚರಿತದವರು ಹಿರಿಯರ ಅಪ್ಪಣೆಯನ್ನು ಪಡೆದು ಬಂದ ವರು. (ಜನೇನ ಮಾನ್ಯೇನ ಕೃತಾಭ್ಯನುಜ್ಞಾಃ. III-13. ಬು. ಚ.)

ಹಾಗಿಲ್ಲ ಏಕೆಂದರೆ ಅಶ್ವಘೋಷನ ಪ್ರಾಕೃತದ ಪ್ರಾಚೀನತೆಯ ವಿಷಯದಲ್ಲೂ ಭಿನ್ನಾಭಿಪ್ರಾಯವಿದ್ದೇ ಇದೆ[1] ಇದೂ ಅಲ್ಲದೆ ನಾಟಕದಲ್ಲಿ ಪ್ರಯುಕ್ತವಾಗಿರುವ ಪ್ರಾಕೃತವು ಆರ್ಷವೆಂದೊಪ್ಪಿದ್ದರೂ ಅದು ಮಾತ್ರ ಕೆಗಳ ಕಾಲವನ್ನೋ ಅಥವಾ ಅವು ಪ್ರಚಾರದಲ್ಲಿದ್ದ ದೇಶ ಭಾಗವನ್ನೋ ಸೂಚಿಸಬಹುದಾದ್ದರಿಂದ ಲೇಖಕನ ಕಾಲ ನಿರ್ಣಯಕ್ಕೆ ಅದರಿಂದ ಯಾವ ಉಪಯೋಗವೂ ಆಗುವುದಿಲ್ಲ.[2]

ಈ ಕಾರಣಗಳಿಂದ ಅಶ್ವಘೋಷನು ಕಾಳಿದಾಸನಿಗಿಂತ ಅರ್ವಾಚೀನನೆಂದು ಒಪ್ಪಬಹುದು. ಹೀಗೆ ಒಪ್ಪಿದಲ್ಲಿ ಕಾಳಿದಾಸನು ವಿಕ್ರಮಾದಿತ್ಯನ ಆಶ್ರಿತನೆಂಬ ಸಾಂಪ್ರದಾಯಿಕ ಆಧಾರಕ್ಕೆ ಸರಿಹೊಂದುವಂತೆ ಅವನ ಕಾಲವನ್ನು ನಿರ್ಣಯಿಸಲು ಸಾಧ್ಯವಾಗುತ್ತದೆ. ಸಾಂಪ್ರದಾಯಿಕ ಕಥೆಗೆ ವಿರೋಧವಿಲ್ಲದೆ ಇತರ ಆಧಾರಗಳಿಗೆ ಉಪಪತ್ತಿಯನ್ನು ಕಲ್ಪಿಸಲು ಅವಕಾಶವಿರುವಾಗ ಆ ಮತವನ್ನೇ ಗ್ರಾಹ್ಯತಮವನ್ನಾಗಿ ಸ್ವೀಕರಿಸುವುದರಲ್ಲಿ ತಪ್ಪೇನಿದೆ?

ವಿಕ್ರಮಾದಿತ್ಯನೆಂಬ ಹೆಸರನ್ನೋ ಬಿರುದನ್ನೋ ಉಳ್ಳ ಅನೇಕ ದೊರೆಗಳಲ್ಲಿ ಕ್ರಿ. ಶ. 57 ರಲ್ಲಿ ಶಕರನ್ನು ಗೆದ್ದು ತನ್ನದೇ ಒಂದು ಕಾಲಮಾನವನ್ನು ಸ್ಥಾಪಿಸಿದ ವಿಕ್ರಮಾದಿತ್ಯನು ಮೊದಲನೆಯವನು. ಈ ರಾಜನ ಹೆಸರೇ ವಿಕ್ರಮಾದಿತ್ಯನೆಂದಿದ್ದಿತು. ಮಿಕ್ಕವರಿಗೆ ವಿಕ್ರಮಾದಿತ್ಯನೆಂಬುದು ಬಿರುದು ಮಾತ್ರ. ಆದುದರಿಂದ ಆ ಬಿರುದನ್ನು ಪಡೆದ ಅನೇಕ

---

1. R. L. Turner.—J. R. A. S. 1925, pp. 174-6.

2. K. C. Chattopādhyāya-Allah. Univ. St., Vol. II, pp. 80-113 Cf. also K. M Shambhavanckar.—Jol. Bom. Univ. Vol. I, Part 6 " Dr. Keith's Prakṛt argument is inconclusive. There is no definite evidence to say that a particular type of Prakṛt belongs to a particular century."

Bapu Dhanapati Banerjee—Q. J. M. S. X. pp. 87-8.

K. G. Shankar—I. H. Q. I. 309—16.

K. C. Chattopādhyāya J. I. H. Vol. XV. pp. 93-102, and Chattopadhayaya : Kuppuswami Sastri, Commemoration Volume, pp. 17-24.

ವ್ಯಕ್ತಿಗಳು ಚರಿತ್ರೆಯಲ್ಲಿ ಗೋಚರವಾಗುವರೆಂದ ಮಾತ್ರಕ್ಕೆ ಕವಿಯು ಮೊಟ್ಟಮೊದಲಿನ ಆ ಹೆಸರಿನ ದೊರೆಯ ಸಮಕಾಲಿಕನಾಗಲಾರನೆಂದು ಸಿದ್ಧವಾಗುವುದಿಲ್ಲ. ಇತಿಹಾಸ ಸಂಶೋಧನೆಯಿಂದ ವಿಕ್ರಮಾದಿತ್ಯನೆಂಬ ದೊರೆಯು ಆ ಕಾಲದಲ್ಲಿ ರಾಜ್ಯಭಾರ ನಡೆಸುತ್ತಿದ್ದನೆಂದು ಸಿದ್ಧವಾದರೆ ಅದರ ಆಧಾರದ ಮೇಲೆ ಕವಿಯು ಅವನ ಸಮಕಾಲಿಕನೆಂಬ ಸಂಪ್ರದಾಯದ ಕಥೆಯನ್ನು ಸತ್ಯವೆಂದು ಪರಿಗಣಿಸಿ ಅಂಗೀಕರಿಸುವುದಕ್ಕೆ ಯಾವ ಪ್ರತಿಬಂಧಕವೂ ಕಂಡುಬರುವುದಿಲ್ಲ. ವಿಕ್ರಮಶಕೆಯೆಂಬ ಕಾಲಮಾನಕ್ಕೆ ಕೊಂಚಕಾಲ ಮಾಲವಶಕೆಯೆಂಬ ಹೆಸರಿದ್ದುದರಿಂದ ಅದರ ಹುಟ್ಟು ಹೆಸರಾದ ವಿಕ್ರಮಶಕೆಯನ್ನುವುದಕ್ಕಾಗಲಿ ಆ ಹೆಸರು ಬರಲು ಕಾರಣವಾಗಿದ್ದ ಚಾರಿತ್ರ ಸನ್ನಿವೇಶಗಳಿಗಾಗಲಿ ಏನೂ ಕುಂದಕ ಬರಲಾರದು. ಕಥಾಸರಿತ್ಸಾಗರದಲ್ಲಿಯೂ ರಾಜಪುತ್ರ ಚರಿತ್ರ ಗ್ರಂಥಗಳಲ್ಲಿಯೂ ಕಿ.ಪೂ. 56 ರಲ್ಲಿ ವಿಕ್ರಮಾದಿತ್ಯನು ಉಜ್ಜಯಿನಿಯಲ್ಲಿ ರಾಜ್ಯವಾಳುತ್ತಿದ್ದನೆಂದು ಹೇಳಿದೆ.[1] ಈ ವಿಕ್ರಮಾದಿತ್ಯನು ವಾಸ್ತವ ವ್ಯಕ್ತಿಯೆಂದು ಸಮರ್ಥಿಸುವುದಕ್ಕೆ ಐತಿಹಾಸಿಕ ಆಧಾರವಲ್ಲದೆ[2] ಇನ್ನೂ ಅನೇಕ ಪ್ರಬಲ ಯುಕ್ತಿಗಳಿವೆ[3] ಕಾಳಿದಾಸನಿಗೆ ಶೈವ ಮತದಲ್ಲಿ ಹೆಚ್ಚು ಒಲುಮೆಯಿತ್ತೆಂದು

---

1. ಶ್ರೀ ಕೆ. ಸಿ. ಚಟ್ಟೋಪಾಧ್ಯಾಯರು ಈ ಸಂಗತಿಯನ್ನು ಸಮರ್ಥಿಸುವ ಒಂದು ಜೈನಕಥೆಯೂ ಇರುವುದೆಂದು ಹೇಳುವರು. (Allah. Univ. St., Vol. V. p. 113.)

2. Cambridge History of India, Vol. I. pp. 532-3.

3. ಸುಭಾಷಿತರತ್ನ ಭಾಂಡಾಗಾರದಲ್ಲಿ ವಿಕ್ರಮನ ವಿಷಯವಾಗಿ ಸಿಕ್ಕುವ ಕೆಲವು ಶ್ಲೋಕಗಳಿಂದಲೂ ಇತರ ಕೆಲವು ಉಪಾಖ್ಯಾನಗಳಿಂದಲೂ ಈ ವಿಷಯಗಳು ತಿಳಿದುಬರುತ್ತವೆ. (ಸು. ರ. ಭಾ. ಪುಟ 127.)

ವಿಕ್ರಮಾದಿತ್ಯನು ತಂದೆಯ ಎರಡನೆಯ ಮಗ. ಇವನ ಅಣ್ಣ ಭರ್ತೃಹರಿಯು ಸನ್ಯಾಸಿಯಾಗಲು ಇವನೇ ಅವಂತಿಗೆ ದೊರೆಯಾದನು. ಧೀರ, ಉದಾತ್ತ, ದಾನಶೂರ, ವಿದ್ಯಾಪಕ್ಷಪಾತಿ, ಸಾಹಸ ಕಾರ್ಯಗಳಲ್ಲಿ ಇವನಿಗೆ ಅತ್ಯಾಸಕ್ತಿ, ರೂಪನ್ನು ಮರೆಸಿಕೊಂಡು ಸಂಚರಿಸುವುದು, ದೀನಾರ್ತರಿಗೆ ಸಹಾಯ ಮಾಡುವುದು ಇವೇ ಮೊದಲಾದ ಗುಣಗಳುಳ್ಳವನು. ಇವನು ಭೋಜರಾಜನ ಮಗಳು ಭಾನುಮತಿಯನ್ನು ಮದುವೆಯಾಗಿದ್ದನು. ರಾಜಧಾನಿಯನ್ನು ಹಸ್ತಿನಾಪುರದಿಂದ ಅವಂತಿಗೆ ವರ್ಗಮಾಡಿ ಅಲ್ಲಿ ಜ್ಯೋತಿಷಾಲಯವನ್ನು ಸ್ಥಾಪಿಸಿದನು.

ಅಯೋಧ್ಯೆಯನ್ನು ಜಯಿಸಿ ಸರಿಪಡಿಸಿದಮೇಲೆ ರಾಮರಘುಗಳ ವಂಶಕ್ಕೆ ಸೇರಿದವನೆಂಬ ಗರ್ವದಿಂದ ಆದಿತ್ಯನೆಂಬ ಬಿರುದನ್ನು ತನ್ನ ಹೆಸರಿಗೆ ಸೇರಿಸಿಕೊಂಡನು, ಇತ್ಯಾದಿ.

ಅವನ ಗ್ರಂಥಗಳಿಂದ ನಿಸ್ಸಂದೇಹವಾಗಿ ವ್ಯಕ್ತಪಡುವುದು. ಸಂವತ್ ಶಕೆಯ ಸ್ಥಾಪಕನಾದ ವಿಕ್ರಮಾದಿತ್ಯನೂ ಇವನ ತಂದೆ ಮಹೇಂದ್ರಾದಿತ್ಯನೂ[1] ಶಿವನ ಪರಮಭಕ್ತರು. ಇವರ ಆಳ್ವಿಕೆಯಲ್ಲಿ ಮಾಳವದಲ್ಲಿ ಶೈವಮತಕ್ಕೆ ಹೆಚ್ಚು ಆಶ್ರಯವೂ ಪ್ರಾಶಸ್ತ್ಯವೂ ದೊರೆತುವು. ಆದುದರಿಂದ ಕಾಳಿದಾಸನು ಇವರ ಆಶ್ರಿತನಾಗಿದ್ದನೆಂಬುದು ಹೆಚ್ಚು ಸಂಭಾವಿತ. ಕಾಳಿದಾಸನ ಗ್ರಂಥಗಳಲ್ಲಿ ಕಾಣುವ ಕೆಲವು ಶಬ್ದರೂಪಗಳೂ ಪ್ರಯೋಗಗಳೂ ಪಾಣಿನೀಯ ವ್ಯಾಕರಣವು ಬಳಕೆಗೆ ಬರುವುದಕ್ಕೆ ಹಿಂದಿನ ಕಾಲಕ್ಕೆ ಸೇರಿದಂತೆ ತೋರುತ್ತವೆ.[2] ಮೇಘಸಂದೇಶ (I-30) ದಲ್ಲಿ ಅವಂತಿಯ ಮುದುಕರಿಗೆ ಉದಯನನ ಕಥೆಯು ಚೆನ್ನಾಗಿ ಪರಿಚಿತವಾಗಿತ್ತೆಂದು ಹೇಳಿದೆ. ಕ್ರಿ. ಶ. ಒಂದನೆಯ ಶತಮಾನದ ಗುಣಾಢ್ಯನು ಉದಯನನ ಕಥೆಯನ್ನು ತನ್ನ ಗ್ರಂಥದಲ್ಲಿ ವಿವರಿಸಿರುವುದರಿಂದ ಆ ವೇಳೆಗೆ ಆದು ಶ್ರೋತ್ರಪರಂಪರಾವಸ್ಥೆಯನ್ನು ಮೀರಿತ್ತೆಂದು ತೋರುತ್ತದೆ. ಆದುದರಿಂದ ಕಾಳಿದಾಸನು ಅವಂತಿಯ ಮುದುಕರನ್ನು ವರ್ಣಿಸಿರುವುದು ಇದಕ್ಕೆ ಹಿಂದಿನ ಕಾಲಕ್ಕೆ ಅನ್ವಯಿಸುತ್ತದೆ. ಅಲ್ಲದೆ, ಗೌತಮ ಮಹಾವೀರರ ಸಮಕಾಲಿಕನಾಗಿದ್ದ ಉದಯನನು ಸಾಮಾನ್ಯ ಜನರು ಹೇಳಿ ಕೇಳಿ ಸಂತೋಷಪಡುತ್ತಿದ್ದ ಕಥೆಗಳಿಗೆ ನಾಯಕನಾಗಿದ್ದನು. ಗುಣಾಢ್ಯನ ಬೃಹತ್ಕಥೆಯ ವೇಳೆಗೆ ವಿಕ್ರಮಾದಿತ್ಯನು ಈ ಸ್ಥಾನಕ್ಕೆ ಏರಿಸಲ್ಪಟ್ಟಿದ್ದನು. ಆದ್ದರಿಂದ ಕವಿಯೂ ಇವನ ಪೋಷಕನಾಗಿದ್ದ ವಿಕ್ರಮಾದಿತ್ಯನೂ ಕ್ರಿ.ಶ. ಒಂದನೆಯ ಶತಮಾನಕ್ಕೆ ಹಿಂದಿನವರಾಗುವರು. ಮಾಲವಿಕಾಗ್ನಿ

---

1. ಇದು ಕಥಾಸರಿತ್ಸಾಗರವನ್ನಾಶ್ರಯಿಸಿದ ಮತ. ಶ್ರೀ K.C. ಚಟ್ಟೋಪಾಧ್ಯಾಯರೂ ಕೇಂಬ್ರಿಡ್ಜ್ ಹಿಂದೂ ಚರಿತ್ರೆಯ ಲೇಖಕರೂ, ಈ ವಿಕ್ರಮಾದಿತ್ಯನನ್ನು ಗರ್ದಭಿಲ್ಲನ ಮಗನೆನ್ನುವರು.

2. ಉದಾ :—ತಂ ಪಾತಯಾಂ ಪ್ರಥಮಮಾಸ ಪಪಾತ ಪಶ್ಚಾತ್ (ರ. ವಂ. IX-61) ; ಪ್ರಭ್ರಂಶಯಾಂ ಯೋ ನಹುಷಂ ಚಕಾರ (ರ. ವಂ. XIII 36); ಬಭೂವ ಎಂಬ ರೂಪಕ್ಕೆ ಬದಲಾಗಿ 'ಅಸ' ಎಂಬ ರೂಪ (ರ. ವಂ. XIV-23; ಕು. ಸಂ. I. 35); 'ಕಾಮಯಮಾನ' ಎಂಬುದಕ್ಕೆ ಬದಲಾಗಿ 'ಕಾಮಯಾನ' (ಶಾ. III). 'ಪತ್ತವಾನ್' ಎಂಬುದಕ್ಕೆ ಬದಲಾಗಿ 'ದಾಶ್ವಾನ್' (ರ. ವಂ. XIV-71); 'ತ್ರ್ಯಂಬಕ'ಕ್ಕೆ ಬದಲಾಗಿ 'ತ್ರಿಯಂಬಕ' (ಕು. ಸಂ. II-44) ಇತ್ಯಾದಿ.

ಮಿತ್ರದಲ್ಲಿ ಚಿತ್ರಿತವಾಗಿರುವ ಕೆಲವು ಸನ್ನಿವೇಶಗಳು ಕವಿಗೆ ಅವುಗಳ ದೃಢ ಪರಿಚಯವಿದ್ದುದನ್ನು ಸೂಚಿಸುವುವು. ಇದೂ ಕ್ರಿ. ಪೂ. ಒಂದನೆಯ ಶತಮಾನದಲ್ಲಿ ಕಾಳಿದಾಸನು ಪ್ರಸಿದ್ಧನಾಗಿದ್ದನೆಂಬ ವಾದಕ್ಕೇ ಉಪೋದ್ಬಲಕ. ಮಹೇಂದ್ರಾದಿತ್ಯನು ರಾಜ್ಯಸನ್ಯಾಸ ಮಾಡಿ ವಿಕ್ರಮನಿಗೆ ರಾಜ್ಯಾಭಿಷೇಕವನ್ನು ಮಾಡಿದಾಗ 'ವಿಕ್ರಮೋರ್ವಶೀಯ' ನಾಟಕವನ್ನು ರಚಿಸಿ ಅಭಿನಯಿಸಲಾಯಿತೆಂದು ಪ್ರವಾದವಿದೆ ರಘುವಂಶದಲ್ಲಿ (1-8; III-70 ; VII-71 ) ಸೂಚಿಸಿರುವಂತೆ ವಾರ್ಧಕದಲ್ಲಿ ರಾಜ್ಯಸನ್ಯಾಸವು ರಾಜಸ ಜೀವನಮಾರ್ಗದ ಒಂದು ಮೆಟ್ಟಲಾಗಿತ್ತು. ಮಹೇಂದ್ರಾದಿತ್ಯನು ಹೀಗೆ ಆಚರಿಸಿದನೆಂದು ಕಥಾಸರಿತ್ಸಾಗರದಲ್ಲಿ ಹೇಳಿದೆ.[1] ಶಾಕುಂತಲದಲ್ಲಿ ಧನಮಿತ್ರನ ಹೆಂಡತಿಗೆ ಸ್ವತ್ತಿನಲ್ಲಿ ಉತ್ತರಾಧಿಕಾರವೂ ರತ್ನವನ್ನು ಕದ್ದವನಿಗೆ ಮರಣದಂಡನೆಯೂ ನಿರೂಪಿತವಾಗಿರುವುವು. ಕ್ರಿ. ಶ. ಒಂದನೆಯ ಶತಮಾನಕ್ಕೆ ಸೇರಿದ ಬೃಹಸ್ಪತಿ ಧರ್ಮಶಾಸ್ತ್ರಕ್ಕೆ ಇದು ವಿರುದ್ಧವಾಗಿರುವುದರಿಂದ ಆದಕ್ಕಿಂತ ಹಿಂದಿನ ಕಾಲಕ್ಕೆ ಅನ್ವಯಿಸುತ್ತದೆ.[2] ಕ್ರಿ. ಶ. ಒಂದನೆಯ ಶತಮಾನದ ಗುಣಾಢ್ಯನು ತನ್ನನ್ನೂ ತನ್ನ ಪೋಷಕನಾದ ರಾಜನನ್ನೂ ಸ್ಪಷ್ಟವಾಗಿ ಹೊಗಳಿಕೊಂಡಿರುವನು. ಅವನಿಗಿಂತ ಈಚಿನವರೆಲ್ಲರೂ ಅದನ್ನು ಕವಿತಾ ಸಂಪ್ರದಾಯಕ್ಕೆ ಸೇರಿಸಿಬಿಟ್ಟರು. ಕಾಳಿದಾಸನು ಹೀಗೆ ಸ್ತುತಿಸದಿರುವುದು ಆ ಸಂಪ್ರದಾಯವು ಬೇರೂರುವುದಕ್ಕೆ ಹಿಂದೆಯೇ ಅವನು ಇದ್ದಿರಬೇಕೆಂದು ದೃಢಪಡಿಸುವುದು. ಈ ಯುಕ್ತಿಗಳ ಆಧಾರದ ಮೇಲೆ ಕಾಳಿದಾಸನು ಕ್ರಿ. ಪೂ. 56 ರಲ್ಲಿದ್ದ ವಿಕ್ರಮಾದಿತ್ಯನ ಕಾಲಕ್ಕೇ ಸೇರುವನೆಂದು ನಿರ್ಧರಿಸಬಹುದು.[3] ಇದೇ

---

1. ಕ. ಸ. ಸಾ. XVIII (59-60).

2. ಅಸವರ್ಣವಿವಾಹವು ಅನುಲೋಮವಾಗಿದ್ದರೆ ಶಾಸ್ತ್ರವಿರುದ್ಧವಲ್ಲವೆಂದು ಶಾಕುಂತಲದಲ್ಲಿ ಸೂಚಿತವಾಗಿದೆ. ಇದೂ ಕ್ರಿ. ಪೂ. ಒಂದನೆಯ ಶತಮಾನದ ವಾದಕ್ಕೇ ಉಪೋದ್ಬ. (D. Bannerjee—Q. J. M. S. X. p. 89.)

3. ಶ್ರೀ. ಕೆ. ಎಂ. ಶಂಭವನೇಕರ್‌ರವರೂ ಇದೇ ರೀತಿ ಅಭಿಪ್ರಾಯಪಡುವರು. (Jol. Univ. Bom. Vol. I, Part 6).

ವಾದವನ್ನು ಸಮರ್ಥಿಸಲು ಬಾಪು ಧನಪತಿ ಬಾನರ್ಜಿಯವರು[1] ಎರಡು ಮುಖ್ಯವಾದ ಯುಕ್ತಿಗಳನ್ನು ಕೊಟ್ಟಿರುವರು. ಗುಣಾಢ್ಯನ ಪೋಷಕನಾದ ಹಾಲ ಸಾತವಾಹನನ 'ಸಪ್ತಶತಿ' ಯಲ್ಲಿ ಕಾಳಿದಾಸನ ಅನುಕರಣವು ಕಂಡುಬರುವುದು.[2] ಹಿಂದೆ ಉದ್ಧೃತವಾದ 'ದಿಙ್ನಾಗಾನಾಂ ........ ಎಂಬ ಶ್ಲೋಕಪಾದವನ್ನು ಇವರು ಈ ವಾದಕ್ಕೆ ಸರಿಹೋಗುವಂತೆ ವ್ಯಾಖ್ಯಾನ ಮಾಡುವರು. ಅಶೋಕನ ಕಾಲದಿಂದಲೂ ಬೌದ್ಧರಾಜರು ಶಾಸನಗಳಲ್ಲೂ ಸ್ತಂಭಗಳಲ್ಲೂ ಮಾಡಿಕೊಳ್ಳುತ್ತಿದ್ದ ಆತ್ಮಸ್ತುತಿಯ ದೂಷಣೆಯೇ ಇಲ್ಲಿ ಕವಿಗೆ ಅಭಿಪ್ರೇತವೆಂದು ಹೇಳಿ ಕ್ರಿ. ಪೂ. ಒಂದನೆ ಶತಮಾನದಲ್ಲಿ ಬಹಳ ಪ್ರಸಿದ್ಧವಾಗಿದ್ದ ಅಶೋಕನ ಸ್ತಂಭಗಳೇ 'ಸ್ಥೂಲಹಸ್ತಾವಲೇಪ' ಗಳೆಂದು ಊಹಿಸಿರುವರು. ಬೌದ್ಧಮತ ಪ್ರಚಾರಕರು ತಮ್ಮನ್ನು 'ನಾಗ' ರೆಂದು ಕರೆದುಕೊಳ್ಳುತ್ತಿದ್ದುದರಿಂದ ಅವರು ಬೇರೆ ಬೇರೆ ಸ್ಥಳಗಳಿಗೆ ಹೋದಾಗ ದಿಙ್ನಾಗರೆಂದು ಅವರನ್ನು ಕರೆಯುವುದು ಸಂಭಾವಿತ.

ಒಟ್ಟಿನಲ್ಲಿ, ಕಾಳಿದಾಸನು ಕ್ರಿ. ಪೂ. 56 ರಲ್ಲಿ ಸ್ಥಾಪಿತವಾದ ವಿಕ್ರಮ ಶಕೆಗೆ ಮೂಲ ಪುರುಷನಾದ ಆ ಹೆಸರಿನ ದೊರೆಯ ಆಶ್ರಿತನೆಂದು ಸಾಂಪ್ರದಾಯಿಕ ವಾದ. ಆಗ ಆ ಹೆಸರಿನ ದೊರೆ ಯಾವನೂ ಇರಲಿಲ್ಲವೆಂದು ಭಾವಿಸಿದ್ದುದರಿಂದ ಕವಿಯು ಆ ಬಿರುದನ್ನೆತ್ತಿದ್ದ ಈಚಿನ ದೊರೆಯೊಬ್ಬನ ಸಮಕಾಲೀನನೆಂದು ವಿಮರ್ಶಕರು ಸಿದ್ಧಾಂತಿಸ ತೊಡಗಿದರು. ಆದರೆ

---

1. Q. J. M. S. X, pp. 80-81; p. 78; Also C. V. Vaidya—A. B. O. R. I. Vol. VII, pp. 63-8. Pandyas and the date of Kalidasa; Also Prof. A. B. Gajendragadkar—Introduction to his Edn. of Sakuntala, p. 27.

2. ಉದಾ :—ಕಾಳಿದಾಸನ 'ಅಶಾಬಂಧಃ ಕುಸುಮಸದೃಶಂ ಪ್ರಾಯಶೋಹ್ಯಂಗನಾನಾಂ। ಸದ್ಯಃ ಪಾತಿ ಪ್ರಣಯಿ ಹೃದಯಂ ವಿಪ್ರಯೋಗೇ ರುಣದ್ಧಿ॥ ಎಂಬುದರ ಆಶಯವನ್ನು ಸ್ವಲ್ಪ ಮಾರ್ಪಡಿಸಿರುವುದು ಸಪ್ತಶತಿಯ ವಿರಹಾಣಮೋಸಹಿಜ್ಜಇ ಆಸಾಬಂಧೇನ ವಲ್ಲಹಜಣಸ್ಸ। ಏಕಗ್ಗಾಮ ಪವಾಸೋ ಮಾತ್ರುಮರಣಾಂ ವಿಶೇಸೇ ಇ॥

ಎಂಬಲ್ಲಿ ವ್ಯಕ್ತವಾಗುವುದು.

ಈಚಿನ ಸಂಶೋಧನೆಯಿಂದ ಆ ದೊರೆಯು ವಾಸ್ತವಿಕ ವ್ಯಕ್ತಿಯೆಂದು ಸ್ಥಾಪಿತವಾಗಿರುವುದರಿಂದ ಸಂಪ್ರದಾಯವು ಕೇವಲ ಉತ್ಪ್ರೇಕ್ಷೆಯೆಂದು ಪರಿಗಣಿಸಲು ಅವಕಾಶ ಸಾಲದು. ಇಂದು ಉತ್ತರದೇಶದಲ್ಲಿ ಈ ವಿಕ್ರಮಾದಿತ್ಯನ ದ್ವಿಸಹಸ್ರಾಬ್ದಿಯನ್ನು ಆಚರಿಸುತ್ತಿರುವುದೂ ಗಮನಾರ್ಹವಾಗಿದೆ. ಆದುದರಿಂದ ಕಾಳಿದಾಸನು ಕ್ರಿ. ಪೂ. ಒಂದನೆಯ ಶತಮಾನದವನೆಂಬ ಮತವೇ ಗ್ರಾಹ್ಯತಮವೆಂದು ಹೇಳಬಹುದು.[1] ಈ ವಾದವನ್ನು ಸಮರ್ಥಿಸುವ ಯುಕ್ತಿಗಳೆಲ್ಲವೂ ಭಾರತೀಯ ವಿಮರ್ಶಕರಿಂದಲೇ ಒದಗಿಸಲ್ಪಟ್ಟವೆಯಾದರೂ ಬೇರೆ ದೇಶದ ವಿದ್ವಾಂಸರು ಈ ಮತವನ್ನು ಒಪ್ಪುವುದಿಲ್ಲವೆನ್ನುವ ಡಾ| ಕೀತ್‌ರವರ ಮಾತು[2] ನಿಜವಲ್ಲ. ಪ್ರೊ. ರೈಡರ್ ಮತ್ತು ಡಾ| ಪೀಟರ್‌ಸನ್[3] ರವರೂ ಈ ವಾದವನ್ನು ಒಪ್ಪಿಕೊಂಡಿರುವರು.

---

## ಋತು ಸಂಹಾರ

ಪ್ರಕೃತಿ ವರ್ಣನೆಯನ್ನು ಮುಖ್ಯೋದ್ದೇಶವನ್ನಾಗಿಟ್ಟು ರಚಿಸಿದ ಕಾವ್ಯಗಳಲ್ಲಿ ಕಾಳಿದಾಸನ "ಋತು ಸಂಹಾರ"[4] ವು ಪ್ರಪಂಚದ ಸಾಹಿತ್ಯದಲ್ಲೆಲ್ಲಾ ಮೊಟ್ಟಮೊದಲಿನದು. 'ಋತು ಸಂಹಾರ' ವೆಂದರೆ

---

1. Cf. Vikramaditya, President of a Republic by R.B. Pande. I. H. Q. XIX—IV, pp. 359-409; T. J. Kedar—'Date of Kālidāsa'—(Nagpur Univ, Journal, Dec. 1939); H. E. Seth—'Kharvela and Gardabhilla'—'Nagpur Univ. Jour. Dec. 1942.)

2. Keith,—Skt. Dr. p. 143.

3. "Kālidāsa stands near the beginning of the Christian era if he does not overtop it."

PETERSON. Quoted by

K. M. SHAMBHAVANEKAR,

Jol. Univ. Bom. Vol. I, Pt. 6.

4. ಕೆಲವು ಮಾತೃಕೆಗಳಲ್ಲಿ 'ಋತು ಸಮಾಹಾರ' ವೆಂದೂ ಇರುವುದು. 'ಸಮಾಹಾರ' ವೆಂದರೂ ಸಮೂಹವೆಂದು ಅರ್ಥ.

ಋತುಗಳ ಒಟ್ಟುಗೂಡಿಸುವಿಕೆ[1] ಅಥವಾ ಸಮೂಹವೆಂದು ಅರ್ಥ. ಭಾರತವರ್ಷದಲ್ಲಿ ಮಾತ್ರ ಸ್ಪಷ್ಟವಾಗಿ ಗೋಚರವಾಗುವ ವಸಂತ, ಗ್ರೀಷ್ಮ ಮೊದಲಾದ ಎಲ್ಲ ಋತುಗಳ ವರ್ಣನೆಯೂ ಇಲ್ಲಿ ಒಟ್ಟುಗೂಡಿರುವುದರಿಂದ ಕಾವ್ಯಕ್ಕೆ ಈ ಹೆಸರು ಬಂದಿದೆಯೆನ್ನುವುದು ಸರ್ವವಿದಿತವಾದ ವಿಷಯ. ಋತುಗಳ ಸಂಖ್ಯೆಯನ್ನನುಸರಿಸಿ ಕಾವ್ಯವು ಆರು ಸರ್ಗಗಳನ್ನೊಳಗೊಂಡಿದೆ. ಪಾಠಭೇದದಿಂದ ಪ್ರತಿಯೊಂದು ಸರ್ಗದಲ್ಲೂ ಒಟ್ಟು ಕಾವ್ಯದಲ್ಲೂ ಇರುವ ಶ್ಲೋಕಗಳ ಸಂಖ್ಯೆಯು ಭಿನ್ನವಾಗಿರುವುದು. ಸ್ಥೂಲವಾಗಿ ಹೇಳಬಹುದಾದರೆ ಒಂದು, ಎರಡು ಮತ್ತು ಆರನೆಯ ಸರ್ಗಗಳಲ್ಲಿ ಒಂದೊಂದರಲ್ಲೂ 28 ಶ್ಲೋಕಗಳೂ ; ಮೂರು, ನಾಲ್ಕು ಮತ್ತು ಐದನೆಯ ಸರ್ಗಗಳಲ್ಲಿ ಕ್ರಮವಾಗಿ 26, 18, 16 ಶ್ಲೋಕಗಳೂ ಇವೆಯೆನ್ನಬಹುದು.

ಈ ಕಾವ್ಯವು ಯಾವ ಕಥಾಭಿತ್ತಿಯನ್ನೂ ಆಶ್ರಯಿಸದಿರುವುದು ಗಮನಾರ್ಹವಾದ ವಿಷಯ. ಇದರಲ್ಲಿ ನಾಯಕ ನಾಯಿಕೆಯರ ವಿಚಾರವೇ ಇಲ್ಲ. ಅವರ ಸುಖದುಃಖಗಳ ಆವಿರ್ಭಾವ ತಿರೋಭಾವಗಳ ವರ್ಣನೆಯಾಗಲಿ ರಾಗದ್ವೇಷಾದಿಗಳಿಂದ ಉಂಟಾಗುವ ಪ್ರವೃತ್ತಿ ನಿವೃತ್ತಿಗಳ ನಿರೂಪಣೆಯಾಗಲಿ ಇಲ್ಲಿ ಕಂಡುಬರುವುದಿಲ್ಲ. ಆದರೂ ಕಾವ್ಯವನ್ನು ಮಾತ್ರ ನೀರಸವೆನ್ನುವಂತಿಲ್ಲ. ಏಕೆಂದರೆ ಇಲ್ಲಿನ ಋತುವರ್ಣನೆಯು ಋತುಗಳ ಲಕ್ಷಣ ಮಾತ್ರವಲ್ಲ; ಅವುಗಳ ವಿನೋದ. ಅಂದರೆ, ಗೊತ್ತಾಗಿ ಒಬ್ಬ ನಾಯಕ ಅಥವಾ ನಾಯಿಕೆಯ ವೃತ್ತಾಂತವನ್ನು ನಿರೂಪಿಸದಿದ್ದರೂ ಕಾವ್ಯವು ಸಾಮಾನ್ಯವಾಗಿ ಕಾಮುಕ ಕಾಮುಕಿಯರ ಪ್ರೇಮಕ್ಕೆ ಉದ್ದೀಪಕಗಳಾದ ಋತುಗಳ ಸನ್ನಿವೇಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡೇ ರಚಿತವಾಗಿದೆ. ಈ ದೃಷ್ಟಿಯಿಂದ ಇದನ್ನು ಭಾವಗೀತೆಯೆಂದು ಆಧುನಿಕರು ವ್ಯವಹರಿಸುವುದು ಯುಕ್ತವೆನ್ನಬಹುದು. ಈ ಉದ್ದೀಪಕ ಸನ್ನಿವೇಶಗಳು ಮನಸ್ಸನ್ನು ಕೆರಳಿಸುವುದೆಂದು ಸ್ಪಷ್ಟವಾಗಿಯೇ

1. 'ಸಂಹಾರ' ಶಬ್ದವು 'ಕೊಲ್ಲುವುದೆಂಬ' ಅರ್ಥದಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿದ್ದರೂ 'ವೇಣೀಸಂಹಾರ' ಮುಂತಾದ ಕೆಲವು ಕಡೆಗಳಲ್ಲಿ 'ಒಟ್ಟುಗೂಡಿಸುವಿಕೆ' ಎಂಬ ಅರ್ಥದಲ್ಲೂ ಪ್ರಯುಕ್ತವಾಗಿರುವುದು.

ಅನೇಕ ಕಡೆ ಹೇಳಿದೆ.[1] ಮತ್ತು ವರ್ಣನೆಗಳು ಕೆಲವು ಕಡೆ ಕಾಮುಕನು ತನ್ನ ಪ್ರೇಯಸಿಯನ್ನು ಸಂಬೋಧಿಸಿ ಹೇಳಿದಂತಿವೆ.[2] ಕಾವ್ಯದಲ್ಲಿ ಅಲ್ಲಲ್ಲಿ ಪ್ರಯುಕ್ತವಾದ ಉಪಮಾದ್ಯಲಂಕಾರಗಳೂ ಕಾಮುಕ ವೃತ್ತಾಂತವನ್ನೇ ಅನುಸರಿಸಿವೆ.[3] ಕಾವ್ಯದ ಮೊದಲಿನ ಮೂರು ಸರ್ಗಗಳಲ್ಲಿ ಕಾಮುಕರ ಇಂದ್ರಿಯ ಸುಖಲೋಲುಪತೆಯನ್ನು ಕೆರಳಿಸುವ ಋತು, ಸ್ತ್ರೀ ಸೌಂದರ್ಯಗಳೂ ಕೊನೆಯ ಸರ್ಗಗಳಲ್ಲಿ ಸುರತಾಭಿಲಾಕ್ಷಿಣಿಯರಾದ ಪ್ರಮದೆಯರ ರಾಗಾಂಧತೆಯ ವಿಭ್ರಮಾದಿಗಳೂ ವರ್ಣಿತವಾಗಿವೆ. ಆದುದರಿಂದ ಕಥಾತ್ಮಕಗಳಾದ ಕಾವ್ಯಗಳಲ್ಲಿರುವಂತೆ ರಸಾಂತರ ಸಂಪರ್ಕವಿಲ್ಲದೆ ಶೃಂಗಾರ ರಸವೊಂದೇ ಈ ಕಾವ್ಯದಲ್ಲಿ ನಲಿಯುವುದು[4] ಪಶುಪಕ್ಷಿಗಳ ವರ್ಣನೆಯಲ್ಲೂ ಶೃಂಗಾರ ವ್ಯಾಪಾರವೇ ನಿರ್ದಿಷ್ಟವಾಗಿದೆ. ಒಟ್ಟಿನಲ್ಲಿ ಕುಲಸ್ತ್ರೀಯರ ಮತ್ತು ಮುನಿಗಳ ಚಿತ್ತವೂ ಕಾಮದಿಂದ ಕದಡುವುದು.[5] ಪ್ರಕೃತಿಸೌಂದರ್ಯವೂ ಅಂಗನೆಯರ ಅಂಗಸೌಂದರ್ಯಾಲಂಕಾರಗಳೂ ನಾಯಕೋಪಭೋಗಕ್ಕಾಗಿಯೇ ನಿರ್ಮಿತವಾಗಿರುವುವೆಂಬ ಭಾವನೆಯೂ ವ್ಯಕ್ತವಾಗುತ್ತದೆ.

ಕಾವ್ಯದ ವಸ್ತುವನ್ನು ವಿಶದವಾಗಿ ಪರಿಶೀಲಿಸುವುದಕ್ಕೆ ಮೊದಲು ಇದರ ಕರ್ತೃತ್ವ ವಿಚಾರದಲ್ಲಿ ನಡೆದಿರುವ ವಾದವಿವಾದಗಳನ್ನು ಸಂಗ್ರಹವಾಗಿ ನಿರೂಪಿಸುವುದು ಆವಶ್ಯಕ. ಋತುಸಂಹಾರವು ಕಾಳಿದಾಸಕೃತ

---

1. 'ಜನಸ್ಯ ಚಿತ್ತಂ ಕ್ರಿಯತೇ ಸಮನ್ಮಥಂ' (ಋ. ಸಂ. I-5); I-6; I-8; I-12; II. 16, 17, 18, 28.—"ಕಾಮಿನೀಚಿತ್ತಹಾರೀ"—III. 5, 6, 10, 11, 14, 15; IV. 8, 9; V. 10, 16; VI. 8, 9, 10, 11, 13, 15, 16, 17, 18, 20-24.

2. ......'ನಿದಾಘಕಾಲೋ ಯಮುಪಾಗತಃ ಪ್ರಿಯೇ. I. 1, 2; II. 1; IV. 10; V. 1; VI. 1, 2, 18—ವರೋರು.'

3. ಋ. ಸಂ. II. 2, 7, 24; III. 1, 3, 7, 17, 18, 23, 24, 26; IV. 10; VI. 9.

4. ಶೃಂಗಾರೈಕಪ್ರಧಾನಂ ಯದ್ವೃತುಸಂಹಾರನಾಮಕಂ" ...... ಋ. ಸ. ಮಣಿರಾಮ ವ್ಯಾಖ್ಯಾನದ ಪೀಠಿಕೆ.

5. ಋ. ಸಂ. IV. 21, 23.

ವಲ್ಲವೆಂಬ ಮತವನ್ನಾಶ್ರಯಿಸಿ ಡಾ|| ನೊಬೆಲ್‌ರವರು[1] ಈ ಕೆಲವು ವಾದ ಗಳನ್ನು ಮುಂದಿಟ್ಟರು—

1. ಚೀನಾ ದೇಶಕ್ಕೆ ತೆಗೆದುಕೊಂಡು ಹೋದ ಒಂದು ಹಸ್ತ ಪ್ರತಿಯಲ್ಲಿ ಲೇಖಕನು ಕು. ಸಂ., ರ. ವಂ., ಮೇ. ಸಂ. ಗಳ ಆರಂಭ ವಾಕ್ಯವನ್ನು ಬರೆದು ಮುಂದೆ "ಕಾವ್ಯತ್ರಯಮ್" ಎಂದೋ "ತ್ರಯಕಾವ್ಯ" ಎಂದೋ ಕೆಲವು ಅಸ್ಪಷ್ಟವಾದ ಅಕ್ಷರಗಳನ್ನು ಬರೆದಿರು ವನು. ಅವನಿಗೆ ಮೂರು ಕಾವ್ಯಗಳು ಮಾತ್ರ ಗೊತ್ತಿದ್ದಿರಬೇಕೆಂದು ಇದರಿಂದ ಸ್ಪಷ್ಟಪಡುವುದರಿಂದ ಋತುಸಂಹಾರವು ಕಾಳಿದಾಸನ ಕೃತವಾಗಿರ ಲಾರದು.

2. ಇದೇ ರೀತಿ, ಮಲ್ಲಿನಾಥನಿಗೂ ಕಾಳಿದಾಸನ ಕಾವ್ಯತ್ರಯ ಮಾತ್ರ ಪರಚಿತವಾಗಿತ್ತೆಂದು ತಿಳಿದುಬರುವುದರಿಂದ[2] ನಾಲ್ಕನೆಯದಾದ ಋತುಸಂಹಾರವೆಂಬುದು ಅವನಿಂದ ರಚಿತವಾಗಿರಲಾರದು.

3. ಋತುಸಂಹಾರದ ಕಾವ್ಯಗುಣವು ಕಾಳಿದಾಸನ ಇತರ ಕೃತಿಗಳ ಗುಣಕ್ಕಿಂತ ಬಹಳ ಕೆಳಮಟ್ಟದ್ದು.[3]

4. ಈ ಕಾವ್ಯದ ಅಸಾಧಾರಣ ಚಿಹ್ನೆಯಾದ ಒಂದೇ ಶಬ್ದದ ಪುನಃ ಪ್ರಯೋಗಾಶಕ್ತಿಯು ಕಾಳಿದಾಸ ಕೃತವೆಂದು ಪ್ರಸಿದ್ಧವಾಗಿರುವ ಬೇರೆ ಯಾವ ಕಾವ್ಯದಲ್ಲೂ ಕಂಡುಬರುವುದಿಲ್ಲ.

---

1. Z. D. M. G. LXVI, pp. 275-8. Weber, Stenzler, Oldenberg, Harichand, **ಮುಂತಾದವರೂ ಈ ವಾದವನ್ನೇ ಒಪ್ಪುತ್ತಾರೆ.**

2. **ಮಲ್ಲಿನಾಥನು ಮಾಘ ವ್ಯಾಖ್ಯಾನದಲ್ಲಿ** (XIII-24) **ಒಂದು ನಿಯಮ ವನ್ನು ನಿರ್ದೇಶಿಸಿ ಅದನ್ನು ಕಾಳಿದಾಸತ್ರಯ ಸಂಜೀವಿನಿಯಲ್ಲಿ ತಾನು ವಿವರಿಸಿರು ವುದಾಗಿ ಹೇಳಿರುವನು. ಇದು ಮೇ. ಸಂ.** (I-40) **ದಲ್ಲೂ ರ. ವಂ.** (XII-19) **ದಲ್ಲೂ ಕಂಡುಬರುವುದು.**

3. **ಡಾ|| ಎಸ್. ಕೆ. ದೇ ರವರೂ ಇದೇ ಅಭಿಪ್ರಾಯವನ್ನು ಹೊಂದಿರು ತ್ತಾರೆ. "ಕಾವ್ಯದಲ್ಲಿರುವ ಸ್ಖಲನ ನ್ಯೂನತೆಗಳು ನಿಕೃಷ್ಟವಾದ ಕವಿತಾ ಶಕ್ತಿಯ ಚಿಹ್ನೆಗಳೇ ಹೊರತು ಉತ್ತಮ ವರ್ಗದ ಕವಿತಾಶಕ್ತಿಯ ಬಾಲ್ಯಾವಸ್ಥೆಯ ಕುರುಹು ಗಳಲ್ಲಿ"** (cf. S. K. De—"Its peculiarities and weaknesses are such as etc." I. H. Q. XVIII—p. 389.)

5. ಋತುಸಂಹಾರದ ಅಲಂಕಾರಗಳು ಉತ್ಕೃಷ್ಟವಾಗಿಲ್ಲ. ಮೇಘಸಂದೇಶದಲ್ಲಿ ಅನೇಕವೇಳೆ ಪ್ರಯುಕ್ತವಾಗಿರುವ ಕಾಳಿದಾಸನ ನೆಚ್ಚಿನ ಅರ್ಥಾಂತರನ್ಯಾಸವು ಇಲ್ಲಿ ಎಲ್ಲೂ ಕಾಣಿಸುವುದಿಲ್ಲ. ಇದನ್ನು ಡಾ|| ಕೀತ್‌ರವರು ಈ ಕೆಳಗೆ ಕಂಡ ವಾದಗಳ ಸಹಾಯದಿಂದ ಖಂಡಿಸಿದರು.

1. ಡಾ|| ನೊಬೆಲ್‌ರವರ ಮೊದಲನೆಯ ಯುಕ್ತಿಯು ಖಂಡನೆಗೂ ಅನರ್ಹವಾದಷ್ಟು ಅಜ್ಞತೆಯನ್ನು ವ್ಯಕ್ತಗೊಳಿಸುವುದು. ಕಾಳಿದಾಸನ ಕಾವ್ಯತ್ರಯವು ಹಸ್ತಲಿಖಿತ ಪ್ರತಿಯ ಲೇಖಕನಿಗೆ ತಿಳಿದಿದ್ದ ಮಾತ್ರಕ್ಕೆ ಇನ್ನಾವ ಕಾವ್ಯವನ್ನೂ ಕಾಳಿದಾಸನು ಬರೆಯಲೇ ಇಲ್ಲವೆಂದು ಹೇಳಲು ಸಾಧ್ಯವೆ ?

2. ಇದೇ ರೀತಿ, ಕಾಳಿದಾಸನ ಮೂರು ಕಾವ್ಯಗಳಿಗೆ ಮಾತ್ರ ತಾನು ವ್ಯಾಖ್ಯಾನ ಮಾಡಿರುವನೆಂದೇ ಮಲ್ಲಿನಾಥನ ವಾಕ್ಯಕ್ಕೆ ತಾತ್ಪರ್ಯ ವಲ್ಲದೆ ಅವು ಮೂರು ಮಾತ್ರ ಕಾಳಿದಾಸ ಕೃತವೆಂದು ಅವನು ನಂಬಿದ್ದ ನೆನ್ನಲಾಗದು.

3. ಋತುಸಂಹಾರವು ಕಾಳಿದಾಸನ ಉತ್ತಮ ಕೃತಿಗಳಲ್ಲೊಂದೆಂದು ಪರಿಗಣಿಸಿರುವ ಡಾ|| ಮೆಕ್ಡಾನೆಲ್‌ರವರ ಋತುಸಂಹಾರದ ಪ್ರಶಂಸೆಯೇ[1] ನೊಬೆಲ್‌ರವರ ಮೂರನೆ ಯುಕ್ತಿಗೆ ಸರಿಯಾದ ಉತ್ತರ.

4. ಶಬ್ದ ಪುನರುಕ್ತಿಯು ಋತುಸಂಹಾರದ ವಿಶೇಷ ಲಕ್ಷಣವಲ್ಲ. ಮೇಘಸಂದೇಶದಲ್ಲೂ ಅದು ಗೋಚರವಾಗುವುದು. ಋತುಸಂಹಾರವಲ್ಲಿ ಅದು ಸ್ಪಷ್ಟವಾಗಿ ಕಾಣುವುದು ಅದೇ ಕವಿಯ ಪ್ರಥಮ ಕೃತಿಯಾದ್ದರಿಂದ.

5. ಅಲಂಕಾರಗಳ ರಮ್ಯತೆಯು ಕಡಿಮೆಯಾಗಿರುವುದೂ, ಕಾಳಿದಾಸನು ಕವಿಮಾರ್ಗದಲ್ಲಿ ತಪ್ಪು ಹೆಜ್ಜೆಯಿಡುತ್ತಿದ್ದನೆಂಬುದರ ಚಿಹ್ನೆ. ಋತುಸಂಹಾರದ ವಿಷಯವು ಅರ್ಥಾಂತರನ್ಯಾಸಪ್ರಯೋಗಕ್ಕವಕಾಶ ಕೊಡದಿರುವುದೇ ಆ ಕಾವ್ಯದಲ್ಲಿ ಅದು ಬಾರದಿರಲು ಕಾರಣ.

---

1. ಮೆಕ್ಡಾನೆಲ್‌ರವರ "India's Past" ಪುಟ 95 ; 'History of Sanskrit Literature'—ಪುಟ 337.

ಇದೂ ಅಲ್ಲದೆ, ವತ್ಸಭಟ್ಟಿಯು ಋತುಸಂಹಾರದ ಕೆಲವು ಶ್ಲೋಕಗಳನ್ನು ಅನುಕರಿಸಿರುವುದು ಅದು ಕಾಳಿದಾಸ ಕೃತಿಯೆಂಬುದನ್ನೇ ಸಮರ್ಥಿಸುವುದು. ಈ ವಿಷಯಗಳಲ್ಲಿ ಪ್ರಮಾಣ ಮೂರ್ಧನ್ಯರಾದ ಡಾ|| ಕೀಲ್‌ಹಾರನ್‌ರವರು ಅದನ್ನು ನಿಸ್ಸಂದಿಗ್ಧವಾಗಿ ಕಾಳಿದಾಸ ಕೃತಿಯೆಂದೊಪ್ಪಿರುವರು. ಇದಕ್ಕೂ ಇತರ ಕಾವ್ಯಗಳಿಗೂ ಇರುವ ಭೇದಗಳು ಒಬ್ಬನೇ ಕವಿಯ ಪ್ರತಿಭೆಯು ಬೆಳೆಯುತ್ತಿದ್ದ ಕ್ರಮದಸೋಪಾನಗಳು.[1]

ಭಾರತೀಯ ಸಂಪ್ರದಾಯದಲ್ಲಿ ಋತುಸಂಹಾರವು ಕಾಳಿದಾಸ ಕೃತವಲ್ಲವೆಂಬ ಸಂದೇಹವು ಯಾವಾಗಲೂ ಇದ್ದಂತೆ ತೋರುವುದಿಲ್ಲ. ಸುಭಾಷಿತಾವಳಿಯಲ್ಲಿ ಎರಡು ಶ್ಲೋಕಗಳು (1674, 1678) ಕಾಳಿದಾಸ ಕೃತವೆಂದು ಉದ್ಧೃತವಾಗಿವೆ. ಇವು ಋತುಸಂಹಾರದ (VI. 16, 19 ನೆಯ) ಶ್ಲೋಕಗಳು. ಋತುಸಂಹಾರದ ಕಾವ್ಯಗುಣಗಳು ಮೇಲು ಮಟ್ಟಕ್ಕೇರದ ಕಾರಣ, ಮಣಿರಾಮನೆಂಬ ವ್ಯಾಖ್ಯಾನಕಾರನು ಹೇಳಿರುವಂತೆ ಇದು 'ಅಪ್ರಚಾರತಮೊಮಗ್ನ' ವಾಗಿದ್ದಿರಬಹುದು. ಮಲ್ಲಿನಾಥಾದಿಗಳು ವ್ಯಾಖ್ಯಾನ ಮಾಡದಿರುವುದಕ್ಕೆ ಕಾವ್ಯದ ಸರಳತೆಯೇ ಕಾರಣವಾಗಿರಬಹುದು. ಪ್ರತಿಭಾಶಕ್ತಿಯು ಕ್ರಮವಾಗಿ ಬೆಳೆದುದನ್ನು ಗುರುತಿಸುವುದಕ್ಕೆ ಕವಿಯ ವಯಃಪರಿಣಾಮದಲ್ಲಿ ಹುಟ್ಟಿದ ಗ್ರಂಥಗಳಿಗಿಂತ ಹೆಚ್ಚು ಸಹಾಯಕವಾಗುವ ಮಹಾಕವಿಗಳ ಪ್ರಥಮ ಕಾವ್ಯಗಳಲ್ಲಿ ಋತುಸಂಹಾರವೂ ಒಂದು. ಇತರ ಕಾವ್ಯರತ್ನಗಳನ್ನು ನಿರ್ಮಿಸಿದ ಕವಿಯ ಅಸಾಧಾರಣ ಶಕ್ತಿಯು ಇಲ್ಲೂ ಗೋಚರವಾಗುವುದು. ಕವಿತೆಯು ಹುಟ್ಟುಬಣ್ಣವೇ ಹೊರತು ಕಟ್ಟುಬಣ್ಣವಲ್ಲ. ಕವಿತಾಶಕ್ತಿಯ ಜೊತೆಗೆ ವ್ಯಾಸಂಗ, ಅಭ್ಯಾಸ, ಅನುಭವಗಳಿಲ್ಲದಿದ್ದರೆ ಕವಿ ಸಾರ್ವಭೌಮರಾಗುವುದಿಲ್ಲ. ಅದರಲ್ಲೂ ವಿವಿಧ ಶಕ್ತಿಗಳುಳ್ಳ ವ್ಯಕ್ತಿಗಳ ಮಹಿಮೆಯು ಉದಯಿಸುವುದು ಕೊಂಚಕಾಲದ ಮೇಲೆಯೇ. ಎಳೆಯ ಪೈರು ಮೊಳೆಯಲ್ಲೇ

---

1. J. R. A. S. 1912 II pp. 1066—76. **ಇದರ ಮುಂದಿನ ಸಂಪುಟದಲ್ಲಿ** (1913, Vol. I, p. 401 ff; p. 410 ff.) **ಪುನಃ ಈ ವಾದಿ ದಿಗ್ಗಜಗಳಿಗೆ ಕಾಳಗವಾಗಿ ಒಬ್ಬೊಬ್ಬರೂ ತಮ್ಮ ತಮ್ಮ ಮತವನ್ನೇ ಸಮರ್ಥಿಸಿ ಸುಮ್ಮನಾದರು.**

ಕಾಣುವಂತೆ ಈ ಮೇಲ್ಮೆಯೂ ಅನೇಕ ನ್ಯೂನಾತಿರೇಕಗಳ ಮಧ್ಯದಲ್ಲಡಗಿರುವುದು. ಆದರೂ ಋತುಸಂಹಾರದಲ್ಲಿ ಕಾಳಿದಾಸನ ವ್ಯಕ್ತಿತ್ವವೂ ಅದರ ಮುಖ್ಯವಾದ ಚಿಹ್ನೆಗಳೂ ಸ್ಪಷ್ಟವಾಗಿರುವುವು. ಪ್ರತಿಭೆಯ ತೀವ್ರತೆ, ಶೈಲಿಯ ಅಚ್ಚುಕಟ್ಟು, ವಿಷಯ ಲೋಲುಪತೆ, ಉಪಮೆಗಳ ಅನ್ಯಾದೃಶವಾದ ಸೌರಭ, ಅನುಕರಣಕ್ಕೆ ಸಿಕ್ಕದ ವರ್ಣನಾರೀತಿ—ಇವುಗಳಲ್ಲಿ ಅನೇಕ ಚಿಹ್ನೆಗಳು ಸ್ವಲ್ಪ ಮಾತ್ರ ತಲೆದೋರಿ ಸರಿಯಾಗಿ ಹೊಂದಿಕೊಳ್ಳದೆ ಪ್ರಕಾಶಿಸುತ್ತವೆ. ಕಡೆಯದಾಗಿ, ಋತುಸಂಹಾರದ ಸರಣಿಯನ್ನೇ ಅನುಸರಿಸಿ ರಚಿತವಾಗಿರುವ ಈಚಿನ ಕೆಲವು ಕಾವ್ಯಗಳೂ[1] ಅದು ಕಾಳಿದಾಸರಚಿತವೆಂಬುದನ್ನೇ ದೃಢೀಕರಿಸುವುವು. ಇದರಲ್ಲಿ ಕಂಡುಬರುವ ಪಾಠಭೇದಗಳೂ ಸಂಪ್ರದಾಯದಲ್ಲಿ ಇದು ಗ್ರಾಹ್ಯವಾಗಿತ್ತೆಂಬುದನ್ನೇ ಸಮರ್ಥಿಸುವುವು.[2]

ಸಾಮಾನ್ಯವಾಗಿ ಋತುಗಳನ್ನು ವಸಂತಾದಿಯಾಗಿ ಪರಿಗಣಿಸುವುದು ವಾಡಿಕೆಯಾಗಿದ್ದರೂ ಕಾಳಿದಾಸನು ಕಾವ್ಯವನ್ನು ಗ್ರೀಷ್ಮದಿಂದ ಪ್ರಾರಂಭಿಸಿರುವನು. ಋತುಗಳ ರಾಜನಾದ ವಸಂತನ ವರ್ಣನೆಯು ಶಿಖರ ಪ್ರಾಯವಾಗಿ ಕಾವ್ಯದ ಕೊನೆಯಲ್ಲಿರಬೇಕೆಂದೂ ಋತುಗಳ ನಿರ್ದೇಶವು ಅವುಗಳ ವಿನೋದವನ್ನು ಅನುಭವಿಸುವ ಮಾನವನ ಕಾಮಶಕ್ತಿಯ ಉದ್ಬೋಧ[3] ವೃದ್ಧಿ ಮತ್ತು ಸಿದ್ಧಿಗಳಿಗನುಗುಣವಾಗಿರಬೇಕೆಂದೂ ಈ ಕ್ರಮವನ್ನನುಸರಿಸಿರುವಂತೆ ತೋರುತ್ತದೆ. "ಸರ್ವಂ ಪ್ರಿಯೇ ಚಾರುತರಂ ವಸಂತೇ" ಎಂದು ಹೇಳಿರುವುದೂ ಈ ವ್ಯುತ್ಕ್ರಮ ನಿರ್ದೇಶವನ್ನು ಸಮರ್ಥಿಸುವುದಕ್ಕಾಗಿಯೇ ಎಂದು ಹೇಳಬಹುದು. ಕಾಮೋದ್ಬೋಧ

---

1. ವಿಶ್ವಂಭರ ಕವಿಯ ಋತುವರ್ಣನ, ವ್ರಜರಾಜನ ಶಿಶಿರಋತುವರ್ಣನ, ಶಂಕರಶಾಸ್ತ್ರಿಯ ವಸಂತವರ್ಣನ ಶರದ್ವರ್ಣನಗಳು, ಅಜ್ಞಾತ ಕರ್ತೃಕಗಳಾದ ಷಡೃತುಕಾವ್ಯ ಷಡೃತುವಿನೋದಗಳು—

Krishnamachariar's Classical Sanskrit Literature.

2. Vide Kale's Edn. p. 70-6; Aurobindo Ghose—Kālidāsa's 'Seasons'; P. C. Lahiri-Cultural Heritage of India, Vol. III, p. 627.

3. "ವಸಂತೇ ದ್ವಿಗುಣಃ ಕಾಮಃ"

ವನ್ನು ಸೂಚಿಸುವ ಶ್ಲೋಕಗಳು ವಸಂತ ಸರ್ಗದಲ್ಲಿ ಮಾತ್ರ ಹೆಚ್ಚಾಗಿರುವುದೂ ಇದನ್ನೇ ದೃಢಪಡಿಸುವುದು. ಅಂತೂ ಗ್ರೀಷ್ಮಸರ್ಗದಲ್ಲಿ ಈ ಋತುವಿನ ಅಸಹ್ಯವಾದ ತಾಪವೂ ಅದರ ಪರಿಹಾರಕ್ಕಾಗಿ ನರ, ಪಶುಪಕ್ಷ್ಯಾದಿಗಳು ಮಾಡುವ ಉಪಾಯಗಳೂ ವರ್ಣಿತವಾಗಿವೆ. ಗ್ರೀಷ್ಮ ಋತುವಿನ ಅಸಾಧಾರಣವಾದ ಚಿಹ್ನೆಗಳೆಂದರೆ, ಉಗ್ರವಾದ ಬಿಸಿಲು, ಬತ್ತಿದ ಕೊಳಗಳು, ಕಾದ ಭೂಮಿ, ಕಾಡುಕಿಚ್ಚು ಇವೇ ಮೊದಲಾದುವು. ಈ ಕಾಲದಲ್ಲಿ ಜಿಂಕೆಗಳು ಬಾಯಾರಿ ಬಿಸಿಲುಗುದುರೆಗಳ ಕಡೆಗೆ ನೋಡುವುವು. ಬಿಸಿಲು ಮತ್ತು ಕಾದ ಧೂಳು ಇವುಗಳಿಂದ ತಪ್ತವಾದ ಸರ್ಪವು ನವಿಲಿನ ನೆರಳನ್ನಾದರೂ ಆಶ್ರಯಿಸುವುದು. ಸಿಂಹಗಳು ಕೂಡ ನೀರಡಿಕೆಯಿಂದ ಪೀಡಿತವಾಗಿ, ಶಕ್ತಿಗುಂದಿ, ಹತ್ತಿರದಲ್ಲಿರುವ ಆನೆಗಳನ್ನೂ ಕೊಲ್ಲುವುದಿಲ್ಲ. ಕಾಡು ಹಂದಿಗಳ ಹಿಂಡು ಬತ್ತಿದ ಕೊಳದ ಬದಿಯನ್ನು ಕೊಂಬಿನಿಂದ ತಿವಿಯುತ್ತಾ ನೆಲದಲ್ಲೇ ಅಡಗಿರುವಂತೆ ಕಾಣುವುದು. ಸುತ್ತಲೂ ಆವರಿಸಿಕೊಂಡಿರುವ ಕಾಡುಕಿಚ್ಚಿನ ದೆಸೆಯಿಂದ ಸಸ್ಯ, ವೃಕ್ಷಗಳೆಲ್ಲವೂ ಸುಟ್ಟು ಹೋಗಿ ಆ ತಾಪದಿಂದ ಸಮೀಪಸ್ಥವಾದ ಜಲಾಶಯಗಳೆಲ್ಲ ಬತ್ತುವುವು. ಈ ಭಯಂಕರ ಸನ್ನಿವೇಶವು ಈ ರೀತಿ ವರ್ಣಿತವಾಗಿದೆ:

ಜ್ವಲತಿ ಪವನವೃದ್ಧಃ ಪರ್ವತಾನಾಂ ದರೀಷು
ಸ್ಫುಟತಿ ಪಟು ನಿನಾದಃ ಶುಷ್ಕವಂಶಸ್ಥಲೀಷು ।
ಪ್ರಸರತಿ ತೃಣಮಧ್ಯೇ ಲಬ್ಧವೃದ್ಧಿಃ ಕ್ಷಣೇನ
ಗ್ಲಪಯತಿ ಮೃಗವರ್ಗಂ ಪ್ರಾಂತಲಗ್ನೋ ದವಾಗ್ನಿಃ ॥
(I—25)

"ಗಾಳಿಯಿಂದ ವೃದ್ಧಿಹೊಂದಿದ ಕಾಡುಕಿಚ್ಚು ಪರ್ವತಗಳ ಗುಹೆಗಳಲ್ಲೆಲ್ಲ ಜ್ವಲಿಸುವುದು; ಒಣಗಿದ ಬಿದಿರು ಮೆಳೆಗಳಲ್ಲೆಲ್ಲ ಚಟಪಟ ಶಬ್ದವು ಮೂಡುವುದು; ಕ್ಷಣಕ್ಷಣಕ್ಕೂ ಹೆಚ್ಚುತ್ತ ಅದು ಒಣಗಿದ ಹುಲ್ಲನ್ನೂ ಆವರಿಸುವುದು. ಮತ್ತು ಪಕ್ಕದಲ್ಲೇ ಹರಡುತ್ತ ಮೃಗಗಳನ್ನೂ ಸೊರಗಿಸುವುದು." ಈ ವಿಧವಾದ ಪ್ರಕೃತಿ ಸನ್ನಿವೇಶದಲ್ಲಿ ಮಾನವನಿಗೂ ಕೂಡ ಸಂಜೆಯ ವೇಳೆಯೇ ಹಗಲಿಗಿಂತ ರಮ್ಯವಾಗಿ ತೋರುವುದು. ಹಗಲೆಲ್ಲ ಬಿಸಿಲಿನ ತಾಪದಿಂದ ಬೆಂದು ಬಳಲಿದ ಅವನಿಗೂ ಕೂಡ ಬೆಳದಿಂಗಳ

ರಾತ್ರಿಗಳು, ತಣ್ಣಗಿರುವ ಗಂಧ, ತೆಳ್ಳನೆಯ ರೇಷ್ಮೆಬಟ್ಟೆ, ಬೀಸಣಿಗೆಯ ತಂಗಾಳಿ ಮೊದಲಾದುವು ಬೇಕೆನಿಸುವುವು. ಈ ಸರ್ಗದ ಮೊದಲಿನ ಶ್ಲೋಕದಲ್ಲೇ ಈ ಪರಿಸ್ಥಿತಿಯು ಹೃದಯಂಗಮವಾಗಿ ವರ್ಣಿಸಲ್ಪಟ್ಟಿದೆ:

ಪ್ರಚಂಡ ಸೂರ್ಯಃ ಸ್ಪೃಹಣೀಯ ಚಂದ್ರಮಾಃ
ಸದಾವಗಾಹಕ್ಷಮವಾರಿಸಂಚಯಃ ।
ದಿನಾಂತರಮ್ಯೋಽಭ್ಯುಪಶಾಂತಮನ್ಮಥೋ
ನಿದಾಘಕಾಲೋಽಯಮುಪಾಗತಃ ಪ್ರಿಯೇ ॥ (I-1)

ಚಳಿಯ ಸುಳಿವೇ ಇಲ್ಲದಿರುವುದರಿಂದ ಎಲ್ಲ ಕಾಲಗಳಲ್ಲಿಯೂ ಜಲಾಶಯಗಳು ಅವಗಾಹನಕ್ಕೆ ಅರ್ಹವಾಗಿರುತ್ತವೆ. ಇಂತಹ ಸಹಿಸಲಸಾಧ್ಯವಾದ ಪ್ರಕೃತಿ ಸನ್ನಿವೇಶದಲ್ಲಿ ರತಿಕ್ರೀಡಾಸಕ್ತಿಯು ಯಾರಿಗೆ ತಾನೆ ಇದ್ದೀತು? ಮನ್ಮಥನು ಉಪಶಾಂತನಾಗಿರದೆ ವಿಧಿಯಿಲ್ಲ. ಆದರೂ ತಾಪಪರಿಹಾರಕ್ಕಾಗಿ ಬೇಕಾಗುವ ಕೆಲವು ವಸ್ತುಗಳ ಮತ್ತು ಸನ್ನಿವೇಶಗಳ ಪ್ರಭಾವದಿಂದ ಸುಪ್ತನಾಗಿರುವ ಮನ್ಮಥನೂ ಎಚ್ಚರಗೊಳ್ಳುವನಂತೆ.[1]

ಹೀಗೆ ಎಚ್ಚರಗೊಂಡ ಮನ್ಮಥನು ವರ್ಷಋತುವಿನಲ್ಲಿ ಅತಿಶಯವಾಗಿ ಬೆಳೆದು ಕಾಮಿಗಳ ಮನಸ್ಸನ್ನು ಕೆರಳಿಸುವನು. ಇದರ ಜೊತೆಗೆ ವರ್ಷಋತುವಿನ ಪ್ರಕೃತಿ ಸನ್ನಿವೇಶವೂ ಶೃಂಗಾರಕ್ಕೆ ಅನುಕೂಲವಾಗಿ ಪರಿಣಮಿಸುವುದು. ಎಲ್ಲವೂ ಸೇರಿ ವಿರಹಿಗಳ ಮನಸ್ಸನ್ನು ನೋಯಿಸುವುವು. ಮಿಳಿತರಾದ ಯುವಕ ಯುವತಿಯರಂತೂ ಅಗಲುವುದೇ ಇಲ್ಲ. ಅಭಿಸಾರಿಕೆಯರು ಕಗ್ಗತ್ತಲೆಯ ರಾತ್ರಿಗಳಲ್ಲೂ ಮಿಂಚಿನ ಬೆಳಕಿನಿಂದ ದಾರಿಯನ್ನು ತಿಳಿದು ಪ್ರಿಯರ ಸಮೀಪಕ್ಕೆ ಹೋಗುವರು. ಎಲ್ಲೆಲ್ಲೂ ಶೃಂಗಾರವೇ. ನವಿಲುಗಳು ಕೂಡ ಗರಿಯನ್ನು ವಿಶಾಲವಾಗಿ ಕೆದರಿಕೊಂಡು ಕೇಕೆಹಾಕುತ್ತ ಶೃಂಗಾರಚೇಷ್ಟೆಗಳನ್ನು ನಡೆಸುವುವು. ಅಷ್ಟೇಕೆ? ಅಚೇತನ ವಸ್ತುಗಳೂ ಶೃಂಗಾರ ವ್ಯಾಪಾರದಲ್ಲಿ ತೊಡಗಿರುವಂತೆ ತೋರುತ್ತವೆ. ವರ್ಷಋತುವೇ ರಾಜನಂತೆ ಉತ್ತಮ ಪರಿವಾರಸಮೇತನಾಗಿ ಬರುವುದು. ಮೋಡಗಳೇ ಆನೆಗಳು; ಮಿಂಚು ಬಾವುಟ; ಗುಡುಗು ಮರ್ದಲಧ್ವನಿ; ಎಲ್ಲವೂ ಕಾಮಿಜನಪ್ರಿಯ—

---

1. **ವಿಬೋಧ್ಯತೇ ಸುಪ್ತ ಇವಾದ್ಯ ಮನ್ಮಥಃ** (I—8).

ಸಶೀಕರಾಂಭೋಧರ ಮತ್ತಕುಂಜರ
ಸ್ತಡಿತ್ಪತಾಕೋಽಶನಿಶಬ್ದಮರ್ದಲಃ ।
ಸಮಾಗತೋ ರಾಜವದುದ್ಧತದ್ಯುತಿ
ರ್ಘನಾಗಮಃ ಕಾಮಿಜನಪ್ರಿಯಃ ಪ್ರಿಯೇ ॥ (II-1)

ಇದಲ್ಲದೆ, ಕತ್ತರಿಸಿದ ಪಚ್ಚೆಗಳಂತೆ ಇರುವ ಪಸುರು ಗರಿಕೆಗಳು, ಬಾಳೆಯ ಎಲೆಗಳು, ಮಿಣುಕುಹುಳುಗಳು ಇವುಗಳಿಂದ ಅಲಂಕೃತವಾದ ಭೂಮಿಯು ರತ್ನಾಲಂಕೃತಳಾದ ಉತ್ತಮ ನಾಯಿಕೆಯಂತೆ ರಾಜಿಸುವುದು. ಮತ್ತು ಪ್ರವಾಹದಿಂದ ಕೂಡಿದ ನದಿಗಳು ಲಲಿತಚೇಷ್ಟೆಗಳಲ್ಲಾಸಕ್ತರಾದ ದುಷ್ಟ ಸ್ತ್ರೀಯರಂತೆ ದಡದಲ್ಲಿರುವ ಮರಗಳನ್ನುರುಳಿಸುತ್ತಾ ಜಾಗ್ರತೆಯಾಗಿ ಸಮುದ್ರವನ್ನು ಸೇರುವುವಂತೆ. ಹೀಗಿರುವುದರಿಂದಲೇ ವಿರಹಿಣಿಯರು ಕಣ್ಣೀರಿನಿಂದ ತುಟಿಗಳನ್ನು ನೆನೆಸುತ್ತಾ ಮಾಲ್ಯಾದಿಗಳನ್ನು ಬಿಟ್ಟು ನಿರಾಶ ರಾಗುವರು, ಇಡಿಯ ಪ್ರಪಂಚವೇ ಶೃಂಗಾರ ವ್ಯಾಪಾರದಲ್ಲಿ ತೊಡಗಿರು ವಾಗ ತಾನು ವಿರಹಿಣಿಯಾಗಿರಬೇಕಲ್ಲ ಎಂದು. ಒಟ್ಟಿನಲ್ಲಿ, ಕದಂಬ, ಸರ್ಜ, ಕೇತಕೀ ಮೊದಲಾದ ಹೂಗಳ ಪರಾಗಗಳಿಂದಲೂ ಜಲಕಣ ಗಳಿಂದಲೂ ಕೂಡಿದ ಸುವಾಸಿತವಾದ ತಂಗಾಳಿಯೊಂದು ಕಡೆ; ಇಂಪಾದ ಶಬ್ದವನ್ನು ಹೊರಡಿಸುತ್ತ ಕುಣಿಯುತ್ತಿರುವ ನವಿಲುಗಳ ಗರಿಗಳಿಗೂ ಮದೋದಕದಿಂದ ಕೂಡಿದ ಆನೆಗಳ ಕೆನ್ನೆಗಳಿಗೂ ಮುತ್ತುವ ದುಂಬಿ ಗಳೊಂದು ಕಡೆ; ಬೆಟ್ಟಗಳ ಶಿಖರ ಪ್ರದೇಶದ ಬಂಡೆಗಳನ್ನು ಸೋಕುವ ಮಿಂಚು, ಗುಡುಗುಗಳಿಂದೊಡಗೂಡಿದ ಕಪ್ಪುಮೋಡಗಳು; ಇವೆಲ್ಲವೂ ಕಾಮಿಗಳ ಮನಸ್ಸನ್ನು ಕೆರಳಿಸಿ ಅವರನ್ನು ರತಿಕ್ರೀಡೆಗೆ ಪ್ರೇರಿಸುವುವು.

ಅನಂತರ ಶರದೃತುವು ಆರಂಭವಾಗುವುದು. ಶರಲ್ಲಕ್ಷ್ಮಿಯು ಮದ ವಣಿಗಿತ್ತಿಯಂತೆ ಬರುವಳಂತೆ :—

ಕಾಶಾಂಶುಕಾ ವಿಕಚಪದ್ಮಮನೋಜ್ಞವಕ್ತ್ರಾ
ಸೋನ್ಮಾದಹಂಸರವನೂಪುರನಾದರಮ್ಯಾ ।
ಆಪಕ್ವಶಾಲಿರುಚಿರಾನತಗಾತ್ರಯಷ್ಟಿಃ
ಪ್ರಾಪ್ತಾ ಶರನ್ನವವಧೂರಿವ ರೂಪರಮ್ಯಾ ॥ (III-1)

"ಬಲಿತ ಭತ್ತದ ಪೈರಿನ ಬಣ್ಣ ಅವಳದು; ಕಾಶವೆಂಬ ಹೂವೇ ಅವಳ ಸೀರೆ; ಅರಳಿದ ಕಮಲಗಳೇ ವದನ; ಮದಿಸಿದ ಹಂಸಗಳ ಕೂಗೇ ಅವಳ ಗೊಲಸಿನ ಶಬ್ದವಂತೆ" ರೂಪರವ್ಯೆಯಾದ ಶರಲ್ಲಕ್ಷ್ಮಿಯು ಬಂದ ಕೂಡಲೆ, ಭೂಮಿಯು ಕಾಶಪುಷ್ಪಗಳಿಂದಲೂ, ರಾತ್ರಿಯು ಚಂದ್ರಕಿರಣಗಳಿಂದಲೂ, ನದಿಗಳು ಹಂಸಗಳಿಂದಲೂ, ಕೊಳಗಳು ನೈದಿಲೆಗಳಿಂದಲೂ, ಉಪವನ ಗಳು ಜಾಜಿ ಹೂವಿನಿಂದಲೂ ಕೂಡಿ ಬಿಳುಪೇರುವುವು. ಮೋಡಗಳು ಕೂಡ ಮಳೆ ಸುರಿಸಿ ಹಗುರವಾಗಿ, ಬೆಳ್ಳಗಾಗಿ, ಆಕಾಶವೆಂಬ ರಾಜನನ್ನು ಉತ್ತಮ ಚಾಮರಗಳಿಂದ ಬೀಸುತ್ತಿರುವಂತೆ ಕಾಣುವುವು. ಕೋವಿದಾ ರವು ಮಕರಂದಪಾನದಿಂದ ಝೇಂಕರಿಸುವ ದುಂಬಿಗಳಿಂದ ಕೂಡಿದ ತನ್ನ ಹೂಗೊಂಚಲುಗಳಿಂದಲೂ ಮೃದುವಾತಕ್ಕಲುಗುವ ಕೊಂಬೆಯ ತುದಿಗಳಿಂದಲೂ ಹೃದಯವನ್ನು ಸೆಳೆಯುತ್ತದೆ. ಈ ಋತುವಿನಲ್ಲಿ ಕಾಮನು ನವಿಲುಗಳನ್ನು ಬಿಟ್ಟು ಹಂಸಗಳಲ್ಲಿ ರಮಿಸುವನಂತೆ. ಸಪ್ತ ಪರ್ಣ, ಕಲ್ಹಾರ, ಪದ್ಮ, ಕುಮುದಗಳು ಹೂಬಿಟ್ಟು ಕದಂಬ ಮೊದಲಾ ದುವು ಹೂಮರೆಯವುವು. ಉಪವನಗಳಲ್ಲಿ ಶೇಫಾಲಿಕೆಗಳ ಸೌರಭವೂ ಪಕ್ಷಿಗಳ ಪ್ರತಿಧ್ವನಿಯೂ ಜನರ ಮನಸ್ಸನ್ನು ಸೆಳೆಯುವುವು. ಸ್ತ್ರೀಯರು ಹೊಸ ಜಾಜಿಯನ್ನು ಮುಡಿದು ಕರ್ಣಾಭರಣದೊಡನೆ ನೀಲೋತ್ಪಲ ಗಳನ್ನೂ ಧರಿಸುವರಂತೆ.

ಗಿಡಗಳಲ್ಲಿ ಕಾಣುವ ಹೊಸ ಚಿಗುರುಗಳೂ, ಅರಳಿದ ಲೋಧ್ರ ಗಳೂ, ಬಲಿತ ಭತ್ತದ ತೆನೆಗಳೂ, ಹೇಮಂತದ ವಿಶೇಷ ಲಕ್ಷಣಗಳು. ಈ ಋತುವಿನಲ್ಲಿ ಸರೋವರಗಳ ನೀರು ತಿಳಿಯಾಗುವುದು. ಕ್ರೌಂಚಗಳು ಸೀಮಾಂತರಗಳಲ್ಲಿ ಸುಳಿದಾಡುವುವು. ಸಾಮಾನ್ಯವಾಗಿ ಪಶುಪಕ್ಷಿಗಳಾಗಲಿ ತರುಲತೆಗಳಾಗಲಿ ಸುಂದರವಾದ ರೂಪಾಂತರಗಳನ್ನು ಪಡೆದು ಆಕರ್ಷಕ ವಾಗುವುದಿಲ್ಲ. ಅವುಗಳ ವಿಹಾರಗಳಲ್ಲೂ ಮಾರ್ದವ ಸೌಂದರ್ಯಗಳು ಗೋಚರವಾಗುವುದಿಲ್ಲ. ಪ್ರಮದೆಯರು ಮಾತ್ರ ಪ್ರಿಯರನ್ನಾಕರ್ಷಿ ಸುವುದಕ್ಕಾಗಿ ಅಲಂಕಾರಗಳನ್ನು ಮಾಡಿಕೊಳ್ಳುವರು. ಆದರೆ ಆ ಅಲಂ ಕಾರಗಳ ರೀತಿಯೇ ಬೇರೆ. ತೋಳುಗಳಲ್ಲಿ ವಂಕಿ (ಅಂಗದ) ಗಳಿಲ್ಲ; ಪಯೋಧರಗಳಿಗೂ ನಿತಂಬಪ್ರದೇಶದಲ್ಲಿಯೂ ತೆಳುವಾದ ದುಕೂಲವಿಲ್ಲ;

ಸೊಂಟದಲ್ಲಿ ರತ್ನ ಭೂಷಿತವಾದ ಒಡ್ಯಾಣವಿಲ್ಲ, ಹಂಸದಂತೆ ದನಿಗೈಯುವ ಗೊಲಸುಗಳಾಗಲೀ ಕಾಲುಗಳನ್ನಲಂಕರಿಸುವುದಿಲ್ಲ; ಅವರ ಅಲಂಕಾರ ಗಳೆಲ್ಲ ಸುರತಕ್ಕನುಕೂಲವಾಗುವಂತೆಯೇ ಇರುವುವಂತೆ. ದೇಹಕ್ಕೆಲ್ಲ ಕಾಲೀಯಕ (ಹಾಲುಮಡ್ಡಿ) ಲೇಪನ; ವದನ ಕಮಲಕ್ಕೆ ಸುವಾಸಿತವಾದ ಶ್ರೀಗಂಧದ ಬಣ್ಣ ಬಣ್ಣದ ರೇಖೆಗಳಿಂದ ಚಿತ್ರ; ಕೇಶಪಾಶಕ್ಕೆ ಕಾಲಾ ಗುರುಧೂಪ; ಇವೇ ಮೊದಲಾದುವುಗಳಿಂದ ಅಲಂಕೃತರಾಗಿ ಪ್ರಿಯರೊಡನೆ ಕೂಡಿ ದ್ರಾಕ್ಷಾರಸ ಪಾನದಿಂದ ಮತ್ತರಾಗಿ 'ಕಾಮರಸ' ದಿಂದ ವ್ಯಾಪ್ತರಾಗುವರಂತೆ. ಹೀಗೆ ಶೃಂಗಾರ ವ್ಯಾಪಾರದಿಂದ ಹರ್ಷ ಹೊಂದಿ ದರೂ ಅವರ ಬಿಳುಪೇರಿದ ವದನಕಮಲಗಳಲ್ಲಿ ಹೆಚ್ಚಾದ ನಗುವು ತಲೆ ದೋರುವುದಿಲ್ಲವಂತೆ :

> ರತಿಶ್ರಮಕ್ಷಾಮವಿಪಾಂಡುವಕ್ತ್ರಾಃ
> ಸಂಪ್ರಾಪ್ತಹರ್ಷಾಭ್ಯುದಯಾಸ್ತರುಣ್ಯಃ ।
> ಹಸಂತಿ ನೋಚ್ಚೈರ್ದಶನಾಗ್ರಭಿನ್ನಾ
> ನ್ಪ್ರಪೀಡ್ಯಮಾನಾನಧರಾನವೇಕ್ಷ್ಯ ॥ (IV–6)

ಅನಂತರ ಪ್ರಾಪ್ತವಾಗುವ ಶಿಶಿರಋತುವನ್ನೂ ಕವಿಯು "ಪ್ರಕಾಮ ಕಾಮಂ",[1] ಮತ್ತು "ಪ್ರಬಲಸುರತಕೇಳಿಜಾತಕಂದರ್ಪದರ್ಪಃ"[2] ಎಂಬಿವೇ ಮೊದಲಾದ ಕೆಲವು ವಿಶೇಷಣಗಳಿಂದ ಸ್ಪಷ್ಟವಾಗಿ ರೇಖಿಸಿರು ವನು. ಹೇಮಂತಋತುವೂ ಶಿಶಿರಋತುವೂ ಅನೇಕ ವಿಷಯಗಳಲ್ಲಿ ಸಮ. ಮೊದಲಿನದರ ಲಕ್ಷಣಗಳು ಕಡೆಯದರಲ್ಲಿ ಹೆಚ್ಚು ಸ್ಪಷ್ಟವಾಗಿ ಗೋಚರ ವಾಗುವುವು. ಆದುದರಿಂದ ಇದಕ್ಕನುಸಾರವಾಗಿ ಮಾನವನ ಶೃಂಗಾರ ವ್ಯಾಪಾರವೂ ಮೊದಲಿಗಿಂತ ಅತಿಶಯವಾಗಿ ವೃದ್ಧಿ ಹೊಂದುತ್ತದೆ. ಈ ಸರ್ಗದಲ್ಲಿ ಬಾಹ್ಯಪ್ರಕೃತಿಯ ಪ್ರಸ್ತಾಪವು ಪೂರ್ತಿ ಲುಪ್ತವಾಗಿದೆಯೆನ್ನ ಬಹುದು. ಪ್ರಮದೆಯರು ಸುರತಾಭಿಲಾಷಿಣಿಯರಾಗಿ ಮಾಡುವ ಕಾಮ ಚೇಷ್ಟೆಗಳೂ ಸುರತಶ್ರಮಪರಿಹಾರಕ್ಕಾಗಿ ಮಾಡಿಕೊಳ್ಳುವ ಉಪಚಾರವೂ ಇಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ.

---

1. V—1. 2. V—16.

ಇಷ್ಟಾದರೂ ಕಾಮುವು ಕೊನೆಗಾಣುವಂತಿಲ್ಲ. ತರುಣಕವಿಯ ದೃಷ್ಟಿಯಿಂದ ಒಂದೊಂದು ಋತುವೂ ಒಂದೊಂದು ವಿಧವಾಗಿ ಮಾನವ ನನ್ನು ಶೃಂಗಾರ ವ್ಯಾಪಾರಕ್ಕೆ ಪ್ರೇರಿಸುವುದು. ಆ ವಿನೋದದ ವೈವಿಧ್ಯವನ್ನು ವರ್ಣಿಸುವುದೇ ಕವಿಯ ಆಶಯ. ಆದುದರಿಂದ, ಯಾವ ಋತುವಿನಲ್ಲೂ ಸುರತಪ್ರಸಂಗವಿಲ್ಲದೆ ಇಲ್ಲ. ಆದರೂ ವಸಂತವು ಮನ್ಮಥನ ಮುಖ್ಯ ಸ್ನೇಹಿತನಂತೆ; ಸುರತ ಪ್ರಸಂಗಿಗಳ ಹೃದಯವನ್ನು ಇರಿಯುವು ದಕ್ಕಾಗಿಯೇ ವಸಂತಭಟನು ಹೊರಡುವನಂತೆ, ಮಾವಿನ ಚಿಗುರುಗಳೇ ಅವನ ಧನುಸ್ಸಂತೆ; ಭ್ರಮರಮಾಲೆಯೇ ಹೆದೆಯಂತೆ:

ಪ್ರಫುಲ್ಲಚೂತಾಂಕುರತೀಕ್ಷ್ಣಸಾಯಕೋ
ದ್ವಿರೇಫಮಾಲಾವಿಲಸದ್ಧನುರ್ಗುಣಃ ।
ಮನಾಂಸಿ ಭೇತ್ತುಂ ಸುರತಪ್ರಸಂಗಿನಾಂ
ವಸಂತಯೋದ್ಧಾ ಸಮುಪಾಗತಃ ಪ್ರಿಯೇ ॥ (VI-1)

ಈ ಋತುವಿನಲ್ಲಿ ಅಶೋಕ, ಕರ್ಣಿಕಾರ, ನವಮಲ್ಲಿಕೆ, ಕುರವಕ ಮೊದಲಾದ ಗಿಡಗಳು ಹೂ ಬಿಡುವುವು. ಸರೋವರಗಳಲ್ಲಿ ಕಮಲಗಳು ಅರಳುವುವು. ಸ್ತ್ರೀಯರು ಎಂದಿನಂತೆ ಕಾಮಾಸಕ್ತೆಯರಾಗುವರು. ಹಗಲು ಸಾಯಂಕಾಲಗಳೆರಡೂ ಸುಖಕರ. ಒಟ್ಟಿನಲ್ಲಿ ಎಲ್ಲವೂ ವಸಂತದಲ್ಲಿ ಹೆಚ್ಚಿನ ಸೊಬಗನ್ನು ಪಡೆಯುವುದು. ಕೋಗಿಲೆ, ದುಂಬಿಗಳೂ ತಮ್ಮ ತಮ್ಮ ಪ್ರಿಯೆಯರೊಡನೆ ಲಲ್ಲೆಯಾಡುವುವು.

ಪುಂಸ್ಕೋಕಿಲ ಶ್ಚೂತರಸಾಸವೇನ
ಮತ್ತಃ ಪ್ರಿಯಾಂ ಚುಂಬತಿ ರಾಗಹೃಷ್ಟಃ ।
ಕೂಜದ್ದ್ವಿರೇಫೋಽಪ್ಯಯಮಂಬುಜಸ್ಥಃ
ಪ್ರಿಯಂ ಪ್ರಿಯಾಯಾಃ ಪ್ರಕರೋತಿ ಚಾಟು ॥ (VI-14)

"ಮಾವಿನ ರಸವೆಂಬ ಮದ್ಯದಿಂದ ಮತ್ತವಾದ ಗಂಡು ಕೋಗಿಲೆಯು ತನ್ನ ಪ್ರಿಯೆಯನ್ನು ಪ್ರೀತಿಯಿಂದ ಮುತ್ತಿಡುವುದು, ಝೇಂಕರಿಸುವ ಭ್ರಮರವೂ ಕಮಲಗಳನ್ನಾಶ್ರಯಿಸಿ ಪ್ರಿಯೆಯೊಡನೆ ಹಿತಕರವಾದ ಲಲ್ಲೆಯಲ್ಲಿ ತೊಡ ಗುವುದು" ಇದು ಕಾವ್ಯದ ಸಂಗ್ರಹವಾದ ವಸ್ತುನಿರೂಪಣ.

ಈ ಕಾವ್ಯದಂತೆ ಋತುವರ್ಣನೆಯಲ್ಲೇ ತೊಡಗಿದಂತೆ ತೋರುವ "ಸೀಸನ್ಸ್" ಎಂಬ ಆಂಗ್ಲ ಕಾವ್ಯವೊಂದಿದೆ. ಅದನ್ನು ರಚಿಸಿದವನು ಥಾಂಸನ್ ಎಂಬುವನು. ಇದರ ಋತುವರ್ಣನಾಭಾಗವನ್ನು ಮಾತ್ರ ಒಟ್ಟುಗೂಡಿಸಿ ಬರೆದರೆ ಕಾಳಿದಾಸನ ಕಾವ್ಯಕ್ಕಿಂತ ದೊಡ್ಡದಾಗುವುದಿಲ್ಲ. ಈ ಎರಡು ಕಾವ್ಯಗಳ ಹೆಸರು, ಉದ್ದೇಶ, ಆಕಾರ, ವಿಭಾಗ, ಆಶಯಗಳ ಪುನರುಕ್ತಿಯೇ ಮೊದಲಾದ ಕೆಲವು ಚಿಹ್ನೆಗಳು, ಎಲ್ಲವೂ ಒಂದೇ ಆದರೂ ಛಂದೋಮಾತ್ರನಿಪುಣನಾದ ಆಧುನಿಕ ಆಂಗ್ಲಕವಿಯ ಕೃತಿಯು ಅಪಕೃಷ್ಟವೆನ್ನಲೇಬೇಕಾಗಿದೆ. ಭಾರತೀಯ ಕಾವ್ಯದಲ್ಲಿರುವ ನ್ಯೂನತೆಗಳನ್ನೂ ಮುಂದೆ ಗಮನಿಸಲಾಗುವುದು. ಆದರೂ ಆಂಗ್ಲಕೃತಿಗೆ ಹೋಲಿಸಿದಲ್ಲಿ ಋತುಸಂಹಾರದ ಪೂರ್ಣಶಕ್ತಿ, ತೀವ್ರತೆ ಮತ್ತು ಶೈಲಿಯ ಸಮತೆಗಳೂ, ಅದರ ಆಧುನಿಕ ಪ್ರತಿಬಿಂಬದ ಕಾಲ್ಪನಿಕತೆ, ಶಬ್ದಾಡಂಬರಗಳೂ ಸ್ಪಷ್ಟವಾಗಿ ಗೋಚರವಾಗದಿರದು.

ಇನ್ನು ಈ ಕಾವ್ಯದ ಗುಣದೋಷಗಳನ್ನು ಪರಿಶೀಲಿಸಲು ಪ್ರಯತ್ನಿಸಬಹುದು. ಋತುಸಂಹಾರವು ಕಾಳಿದಾಸನ ತಾರುಣ್ಯದ ಕೃತಿಯೆಂದು ಹಿಂದೆಯೇ ತಿಳಿಸಲಾಗಿದೆ. ಐಹಿಕ ಸುಖಗಳಲ್ಲಿ ಆಸಕ್ತಿ ಹೊಂದಿದ ತರುಣ ಕವಿಯ ಮನಸ್ಸು ಋತುಗಳ ಸೊಬಗನ್ನು ಮಾನವನ ಇಂದ್ರಿಯಸುಖಕ್ಕೆ ಸಾಧನವನ್ನಾಗಿ ಪರಿಗಣಿಸಿ ವರ್ಣಿಸಿರುವುದೂ ಸ್ವಾಭಾವಿಕವೇ ಆಗಿದೆ. ಆದರೂ ಕಾಳಿದಾಸನು ಪ್ರಕೃತಿವರ್ಣನೆಯ ಜೊತೆಯಲ್ಲಿ, ತನ್ನ ಪ್ರತಿಭೆಯು ಸಹಾಯ ಮಾಡುತ್ತಿದ್ದ ಕಾಲದಲ್ಲಿ ಮಾತ್ರ, ಕಾಮುಕ ವೃತ್ತಾಂತವನ್ನು ಹೆಣೆದು, ಶೀಲ ದೌರ್ಬಲ್ಯಕ್ಕೆ ಅವಕಾಶ ಕೊಡುವ ಇಂದ್ರಿಯ ಸುಖಾಭಿಲಾಷೆಯನ್ನು ಮುಖ್ಯವಸ್ತುವನ್ನಾಗಿಟ್ಟುಕೊಂಡಿಲ್ಲದಿರುವುದು ಗಮನಾರ್ಹವಾಗಿದೆ. ಮೊದಲನೆಯದಾದ ಗ್ರೀಷ್ಮಸರ್ಗವು ರಾಜದರ್ಪಕ್ಕನುಗುಣವಾದ ರೀತಿಯಿಂದ ಪ್ರಾರಂಭವಾಗಿ ಸಂಪೂರ್ಣ ಕಾವ್ಯವೇ ಅಸಾಧಾರಣವಾಗಿ ತೀವ್ರವೂ ಸ್ವರಸವೂ ಆಗುವುದೆಂಬ ಭಾವನೆಯನ್ನು ತರುತ್ತದೆ. ಕವಿಯ ಹುಮ್ಮಸ್ಸು ಕಾವ್ಯರಾಜ್ಯವನ್ನು ಬಲಾತ್ಕಾರವಾಗಿ ವಶಪಡಿಸಿಕೊಂಡು ಹೊರಟಿರುವಂತೆ ತೋರುವುದು. ವಿಸ್ಮಯಕರವಾದ ಪ್ರತಿಭೆ, ವಸ್ತುಗಳನ್ನು ಸೂಕ್ಷ್ಮವಾಗಿಯೂ ಸ್ಪಷ್ಟವಾಗಿಯೂ ನೋಡುವ

ಸಾಮರ್ಥ್ಯ ಶೈಲಿಯ ಬಿಕ್ಕಟ್ಟು, ಇವೇ ಮೊದಲಾದ ಗುಣಗಳು ಪಾಠಕ ರನ್ನಾಕರ್ಷಿಸುವುವು. ಆದರೆ ಈ ತೀವ್ರತೆಯು ಕ್ರಮೇಣ ಕಡಿಮೆಯಾಗಿ ಕಡೆಕಡೆಯ ಸರ್ಗಗಳು ಕಲಾದೃಷ್ಟಿಯಿಂದ ರುಚಿಕರವಾಗಿ ಪರಿಣಮಿಸು ವುದಿಲ್ಲ. ಕವಿಯು ತನ್ನ ಶಕ್ತಿಸರ್ವಸ್ವವನ್ನೂ ಮುಂದಾಲೋಚನೆಯಿಲ್ಲ ದವನಂತೆ ಮೊಟ್ಟಮೊದಲೇ ಖರ್ಚು ಮಾಡಿರುವಂತೆ ತೋರುತ್ತದೆ. ಈ ಶಕ್ತಿಹ್ರಾಸವು ವರ್ಷಸರ್ಗದಲ್ಲಿ ಗೋಚರವಾಗದೆ ಶರತ್ಸರ್ಗದಲ್ಲಿ ಸ್ಪಷ್ಟವಾಗಿ ಉದಯಿಸಿದ್ದರೂ ಶೈಲಿಯ ಸೊಬಗು, ರಚನಾಚಾತುರ್ಯಗಳಿಂದ ಸ್ವಲ್ಪ ಮರೆಯಾಗಿದೆ. ಮುಂದಿನ ಭಾಗಗಳಲ್ಲಿ ಅದು ಯಾರ ದೃಷ್ಟಿಯನ್ನೂ ತಪ್ಪಿಸಿಕೊಳ್ಳುವಂತಿಲ್ಲ. ಹೇಮಂತ ಶಿಶಿರ ಋತುಗಳ ವರ್ಣನೆಯಲ್ಲಿ ಕೆಲವುಕಡೆ ರಮಣೀಯತೆಯಿದ್ದರೂ ಸೂಕ್ಷ್ಮದೃಷ್ಟಿ ಉತ್ಸಾಹಗಳೇನೂ ಕಾಣದೆ ಕೇವಲ ಕವಿಸಮಯದ ಮಾರ್ಗವನ್ನು ಅನುಸರಿಸಿರುವಂತೆ ಕಾಣುತ್ತದೆ. ಸ್ತ್ರೀಸೌಂದರ್ಯರಾಗಾಂಧತೆಗಳೆರಡೂ ಪ್ರಕೃತಿ ವರ್ಣನೆ ಯೊಡನೆ ಹದವಾಗಿ ಬೆರೆತಿಲ್ಲ. ಬಾಹ್ಯ ಪ್ರಕೃತಿಯ ವರ್ಣನೆಯು ಕಡಿಮೆಯಾಗಿ ಸುರತ ಪ್ರಸಂಗದ ವರ್ಣನೆಯು ವಿಸ್ತೃತವಾಗಿರುವುದಲ್ಲದೆ ಒಂದೆರಡು ಕಡೆಗಳಲ್ಲಿ ಈ ವರ್ಣನೆಯನ್ನು ಅಸಭ್ಯವೆಂದರೂ ಎನ್ನ ಬಹುದಾಗಿದೆ.[1] ಎಲ್ಲಕ್ಕಿಂತಲೂ ಮಿಗಿಲಾಗಿ ವಸಂತದ ರೂಪು, ಸೊಬಗು ಗಳೇ ಕವಿಯ ಸಹಜವಾದ ಸೌಂದರ್ಯಾಸಕ್ತಿಗನುಗುಣವಾಗಿ ಚಿತ್ರಿತ ವಾಗಿಲ್ಲ. ಧ್ವನಿಮಾಧುರ್ಯ, ಪದಪ್ರಸಾದಗಳಿದ್ದರೂ ಪ್ರತಿಭೆಯ ಜೀವ ಕಳೆಯಿಲ್ಲದೆ ಕಾವ್ಯದ ಶಿಖರವಾಗಿರಬೇಕಾಗಿದ್ದ ಸರ್ಗವು ಕಳೆಗುಂದಿ ಕ್ಷೀಣವಾಗಿದೆ.

ಈ ಕಾರಣಗಳಿಂದಲೂ ಕವಿಯ ಇತರ ಗ್ರಂಥಗಳಲ್ಲಿರುವ ಭಾವೌ ನ್ನತ್ಯ, ಪ್ರತಿಭಾವೈಖರಿಗಳು ಇಲ್ಲಿ ತೋರದಿರುವುದರಿಂದಲೂ ಇದು ಕಾಳಿದಾಸನ ಕವಿತೆಯ ಕಸುಗಾಯಿಯೆಂದೇ ಹೇಳಬೇಕಾಗಿದೆ. ಡಾ|| ಮೆಕ್ಡಾನೆಲ್‌ರವರು ಈ ಕಾವ್ಯದ ಕಾಂತಿವಿಶೇಷಗಳಿಗೆ ಬೆರಗಾಗಿ ಇದನ್ನು ಅವನ ಉತ್ತಮ ಕೃತಿಗಳಲ್ಲೊಂದೊಂದು ಪರಿಗಣಿಸಿರುವುದು

1. II—21; V—5.

ವಿಸ್ಮಯಕರವಾಗಿದೆ.[1] ಆದರೂ ಆಗಿನ ಜನರು ಇದನ್ನು ಅಭಿನವ ಸೂರ್ಯೋದಯದಂತೆ ಭಾವಿಸಿ ಶ್ಲಾಘಿಸಿರಬಹುದು. ಇದಕ್ಕೂ ಅನೇಕ ಕಾರಣಗಳಿವೆ. ಪ್ರಕೃತಿಯಲ್ಲೂ ಮನುಷ್ಯನಲ್ಲೂ ಗೋಚರವಾಗುವ ಸುಂದರವಾದ ಭಾವಗಳನ್ನು ಧೈರ್ಯದಿಂದ ವಿವರವಾಗಿ ವಸ್ತುಶ್ಲಾಘನಾ ದೃಷ್ಟಿಯಿಂದ ವರ್ಣಿಸಿರುವುದು ಕಾಳಿದಾಸನ ಇತರ ಕಾವ್ಯಗಳಿಗೂ ಇದಕ್ಕೂ ಇರುವ ಸಾಮ್ಯಭಾಗವೆನ್ನಬಹುದು. ಇದಲ್ಲದೆ ಈ ಹೇಚಿನಲ್ಲೂ ಕೂಡ ಅವನ ಪ್ರಸಿದ್ಧಿಗೆ ಕಾರಣವಾದ ಉಪಮೆಗಳು ಬಹಳವಾಗಿ ಇವೆ. ಗ್ರೀಷ್ಮಮಧ್ಯದಲ್ಲಿ ಅತಿ ನೀಲವಾಗಿದ್ದ ಆಕಾಶವು ಅರೆದು ಚೆಲ್ಲಿದ್ದ ಕಾಡಿಗೆಯ ಮುದ್ದೆಯಂತೆ; ರಾಗಸೂಚಕವಾದ ದೃಷ್ಟಿಗಳುಳ್ಳ ಮುಗುಳ್ನಗೆಯ ಕುಮಾರಿಯರು ಚಂದ್ರನನ್ನು ಆಭರಣವಾಗಿ ಧರಿಸಿದ್ದ ಸಂಧ್ಯೆಗಳಂತೆ; ಹೊಸದಾಗಿ ಮೊಳೆತ ಗರಿಕೆಗಳು ಕತ್ತರಿಸಿದ ಪಚ್ಚೆಯ ಚೂರುಗಳಂತೆ; ತೀರದ ಗಿಡಮರಗಳನ್ನು ಮೊದಲು ಅಪ್ಪಿಕೊಂಡು ಕಡೆಗೆ ಉರುಳಿಸುವ ನದಿಗಳು ಮೊದಲು ರಾಗಾತಿಶಯವನ್ನು ಪ್ರದರ್ಶಿಸಿ ಕೊನೆಗೆ ಕಾಮುಕರನ್ನು ಕೊಲ್ಲುವ ದುಷ್ಟಸ್ತ್ರೀಯರಂತೆ. ಇವೇ ಮೊದಲಾದುವು ಋತುಸಂಹಾರದ ಸಾಮಾನ್ಯವಾದ ಉತ್ಕರ್ಷವನ್ನು ಪ್ರದರ್ಶಿಸುವುವು. ಕಾಳಿದಾಸನು ತನ್ನ ಪರಿಪಕ್ವಾವಸ್ಥೆಯಲ್ಲಿ ಗಮನಿಸಿ ತಪ್ಪಿಸಿರುವ ಆಶಯಗಳ ಪುನರುಕ್ತಿ, ಅಧಿಕಪದಪ್ರಯೋಗ, ಪದಗಳ ವ್ಯುತ್ಕ್ರಮರಚನೆ, ಶಬ್ದದೈನ್ಯ ಇವೇ ಮೊದಲಾದ ಕೆಲವು ದೋಷಗಳು ಇಲ್ಲಿರಬಹುದು. ಇವೆಲ್ಲಕ್ಕೂ ಅವನ ಸುಖಲೋಲುಪತೆ, ಅಶಿಕ್ಷಿತವಾಗಿ ಹುಳಿಮುರಿಯದ ಪ್ರತಿಭೆ, ತಾನು ಪ್ರತಿಭಾಶಾಲಿಯೆಂಬ ಗರ್ವಗಳೂ ಕಾರಣವೆನ್ನಬಹುದು. ಹೇಗೂ ತರುಣ ಕವಿಯ ಪ್ರಥಮ ಕಾವ್ಯವಾದುದರಿಂದ ಇದರ ದೋಷಗಳೂ ಸಹ್ಯವಾದಾವು.

---

1. Macdonell's India's Past p. 95.

# ಮಾಳವಿಕಾಗ್ನಿ ಮಿತ್ರ

---

ಇದು ಕಾಳಿದಾಸನ ಮೊಟ್ಟಮೊದಲಿನ ರೂಪಕವೆಂದು ಊಹಿಸಲಾಗಿದೆ.[1] ಅನಂತರ ರಚಿತವಾದ ವಿಕ್ರಮೋರ್ವಶೀಯ, ಶಾಕುಂತಲಗಳ ಜೊತೆಗೆ ನಿಲ್ಲುವುದಕ್ಕೆ ಇದು ಅನರ್ಹವೆಂದು ವಿಮರ್ಶಕರ ಭಾವನೆ. ಸಂಭೋಗ ಶೃಂಗಾರವು ಪ್ರಧಾನವಾಗಿರುವುದರಿಂದ ಕೆಲವರಿಗೆ ಅರುಚಿಯನ್ನೂ ಉಂಟುಮಾಡಿದೆ. ಕಾಳಿದಾಸನು ಶೃಂಗಾರ ಲೋಲನೆಂಬ ವಾರ್ತೆಗೂ ಇದು ಬಹಳ ಮಟ್ಟಿಗೆ ಕಾರಣವಾಗಿದೆ. ಒಟ್ಟಿನಲ್ಲಿ, ಇದರ ಸ್ವರೂಪವನ್ನು ಪರಿಶೀಲಿಸಿದ ಕೆಲವರು ಇದನ್ನು ಕಾಳಿದಾಸ ಕೃತವೆಂದು ಹೇಳುವುದಕ್ಕೂ ಒಡಂಬಡುವುದಿಲ್ಲ.[2] ಶಾಕುಂತಲ, ರಘುವಂಶ, ಮೇಘಸಂದೇಶಗಳನ್ನು ರಚಿಸಿದ ಪ್ರತಿಭೆಯು ಈ ಅಧಮಕೃತಿಗೆ ಕಾರಣವಾಗಿರಲಾರದೆಂದು ಇವರ ಊಹೆ.

ಆದರೆ, ಅಲಂಕಾರ ಗ್ರಂಥಗಳೂ[3] ಮಾತೃಕೆಗಳ ಆಧಾರವೂ ಈ ಊಹೆಯನ್ನು ಸ್ಥಿರಗೊಳಿಸುವುದಿಲ್ಲ. ನಾಟಕಗಳ ಉತ್ಕರ್ಷ ಅಪಕರ್ಷಗಳು ಬಹಳ ಮಟ್ಟಿಗೆ ಕಥಾವಸ್ತು, ವಾತಾವರಣಗಳಿಗನುಸಾರವಾಗಿರುತ್ತವೆ ಮತ್ತು ಕವಿಶಕ್ತಿಯ ಬೆಳವಣಿಗೆಯನ್ನು ಸೂಚಿಸುವಂತೆ ಇರುವುದೂ ಉಂಟು. ಮೊದಮೊದಲಿನ ಕೃತಿಗಳು ಸಾಮಾನ್ಯವಾಗಿಯೂ ಅನಂತರ

---

1. ಮೊದಲನೆಯ ಅಧ್ಯಾಯ ಪುಟ 50 ನೋಡಿ. ನಾಟಕದ ಪ್ರಸ್ತಾವನೆಯಲ್ಲಿ ಬರುವ "ಪುರಾಣಮಿತ್ಯೇವ ನ ಸಾಧು ಸರ್ವಂ" ಎಂಬ ಶ್ಲೋಕವು ಇದನ್ನು ಬಲಗೊಳಿಸುವುದು.

2. ಹೆಚ್. ಹೆಚ್. ವಿಲ್ಸನ್—"Select Specimens Etc. ಪುಟ 346" The internal evidence is adverse to the drama being the work of the author of the Sakuntala and Vikramorvasiya. There is neither the same melody in the verse nor fancy in the thoughts." ಮತ್ತು ಅದೇ ಗ್ರಂಥ II. ಪುಟ 348; ಡಾ|| ಹಾಲ್. Preface to Vasavadatta ಪು. 15.

3. "ತಥಾಚಾಸ್ಯೈವಕವೇರ್ಮಾಲವಿಕಾಗ್ನಿ ಮಿತ್ರನಾಟಕ ಪ್ರಯೋಗಃ" ಕಾಟಾಯವೇಮನ ಅರ್ಥದ್ಯೋತನಿಕೆ. ಪುಟ 74. (ನಿರ್ಣಯಸಾಗರ ಪ್ರತಿ.)

ಹುಟ್ಟಿದುವು ಕೀರ್ತಿ ತರುವಂತೆಯೂ ಆಗಬಹುದು. ಆದ್ದರಿಂದ ಪ್ರಶಸ್ತವಾದುದನ್ನು ಮಾತ್ರ ಕಾಳಿದಾಸನು ಬರೆದನೆಂದು ಹೇಳಿ ಗುಣದಲ್ಲಿ ಕಡಿಮೆಯಾಗಿರುವ ಕೃತಿಗಳನ್ನು ಅವನು ಬರೆಯಲಿಲ್ಲವೆಂದು ವಾದಿಸುವುದು ಸರಿಯಲ್ಲ. ಹಾಗೆ ಮಾಡಿದಲ್ಲಿ ಖಚಿತವಾಗಿ ಸಿಕ್ಕಿರುವ ಆಧಾರವನ್ನೆಲ್ಲ ತೃಣೀಕರಿಸಿದಂತಾಗುವುದು, ನಾಟಕವು ಗುಣದಲ್ಲಿ ಕಡಿಮೆಯಾಗಿದ್ದರೂ ಮಿಕ್ಕನಾಟಕಗಳೂ ಇದೂ ಒಬ್ಬನಿಂದಲೇ ರಚಿತವೆಂದು ಹೇಳುವುದಕ್ಕೆ ತಕ್ಕಷ್ಟು ಆಧಾರವನ್ನು ಖಂಡಿತ ಒದಗಿಸುವುದು. ಮೂರು ನಾಟಕಗಳಲ್ಲೂ ಇರುವ ಆಶಯಗಳು, ಶೈಲಿ ಮತ್ತು ಶಬ್ದಭಂಗಿಗಳು ಒಂದೇ ವಿಧವಾದುವು. ಆರ್ಯಾವೃತ್ತ ಪ್ರಯೋಗವು ಮತ್ತೊಂದು ಸಾಮ್ಯದ ಅಂಶ. ರಸಭಾವನಿರೂಪಣಪ್ರಕಾರವು ಮೂರರಲ್ಲೂ ಒಂದೇ ಆಗಿರುವುದು. ಹೆಚ್ಚೇಕೆ? ಮೂರು ನಾಟಕಗಳ ಶಬ್ದಕೋಶವೂ ಏಕಕರ್ತೃಕವಾದವನ್ನೇ ಬಲಗೊಳಿಸುವುದು.[1]

ನಾಟಕದ ಕತೆಯ ಹಿನ್ನೆಲೆ:—ಶುಂಗವಂಶಸ್ಥಾಪಕನಾದ ಸೇನಾಪತಿ[2] ಪುಷ್ಯಮಿತ್ರನ ಮಗ ಅಗ್ನಿಮಿತ್ರನು ವಿದಿಶಾನಗರದಲ್ಲಿ ತನ್ನ ತಂದೆಯ ಕಡೆಯ ಅಧಿಕಾರಿಯಾಗಿ ರಾಜಕಾರ್ಯವನ್ನು ನಿರ್ವಹಿಸುತ್ತಿದ್ದನು. ಆದರೂ ನಾಟಕದಲ್ಲಿ ಇವನನ್ನು ರಾಜನೆಂದೇ ವ್ಯವಹರಿಸ

---

1. S. P. Pandit—Preface to the Mālavikāgnimitra p. VIII, XVIII—XX.

2. ಇವನು ಮೌರ್ಯ ಸಂತತಿಯ ಬೃಹದಶ್ವನ ಹತ್ತಿರ ಸೇನಾಪತಿಯಾಗಿದ್ದನು. ಯಜಮಾನನನ್ನು ಕೊಂದು ತಾನೇ ದೊರೆಯಾದ ಮೇಲೂ ಇನ್ನು ಕೆಲವರು ರಾಜರು ಅಶ್ವಪತಿ, ಗಜಪತಿ ಎಂದು ತಮ್ಮನ್ನು ಕರೆದುಕೊಳ್ಳುತ್ತಿದ್ದಂತೆ ಇವನೂ ತನ್ನನ್ನು ಸೇನಾಪತಿಯೆಂದು ಕರೆದುಕೊಂಡಿರಬಹುದು. ಪುಷ್ಯಮಿತ್ರ, ಪುಷ್ಪಮಿತ್ರ ಎಂದು ಎರಡು ರೀತಿ ಕರೆಯುವುದುಂಟು. ಪುಷ್ಯಮಿತ್ರನ ವಿಚಾರದ ಇತಿಹಾಸವು—R. C. Mazumdar—I. H. Q 1925, pp. 91-44; H. A. Shah; P. O. C. III; Cambridge History of India I, p. 519; ಮೊದಲಾದ ಆಕರಗಳಲ್ಲಿ ಸಿಕ್ಕುತ್ತದೆ.

ಲಾಗಿದೆ. ಇವನಿಗೆ ಧಾರಿಣಿಯೆಂಬ ಸತ್ಪತ್ನಿ; ವಸುಮಿತ್ರನೆಂಬ ಮಗ; ವಸುಲಕ್ಷ್ಮಿಯೆಂಬ ಮಗಳು. ಹೀಗಿರುವಾಗ ಯಾವುದೋ ಒಂದು ಸಮಯದಲ್ಲಿ ಇರಾವತಿಯೆಂಬವಳಲ್ಲನುರಕ್ತನಾಗಿ ಅವಳನ್ನೂ ತನ್ನ ರಾಣಿ ವಾಸಕ್ಕೆ ಸೇರಿಸಿಕೊಂಡಿದ್ದನು. ಪಾಪ! ಧಾರಿಣಿಯು ನಿರ್ವಾಹವಿಲ್ಲದೆ ಈ ಅವಮಾನವನ್ನೂ ಸಹಿಸಿಕೊಂಡಿದ್ದಳು. ದೊರೆಯ ಪ್ರಣಯಸಾಹಸ ಇಷ್ಟಕ್ಕೂ ನಿಲ್ಲುವುದಿಲ್ಲ. ಮಾಲವಿಕೆ ಮತ್ತೊಬ್ಬಳು ರಾಜಕುಮಾರಿ. ಇವಳ ವಿಷಯದಲ್ಲಿ ಒಂದು ಸಿದ್ಧಾದೇಶವಿತ್ತು. ಅದಕ್ಕೆ ತಕ್ಕಂತೆ ಇವಳು ಒಂದು ವರ್ಷಕಾಲ ದಾಸಿಯಾಗಿರಬೇಕಾಗಿತ್ತು. ಅನಂತರ ಉಚಿತಪದವಿಗೇರುವ ಯೋಗವಿತ್ತು. ಈ ಕಾರಣದಿಂದ ಮಾಲವಿಕೆಯು ಧಾರಿಣಿಯ ಪರಿಚಾರಿಣಿ ಯಾಗಿದ್ದಳು. ಈ ಅವಧಿಯಲ್ಲಿ ನಾಟಕದ ಕತೆಯು ಜರುಗಿ ಅದು ಮುಗಿಯುವ ವೇಳೆಗೆ ಅಗ್ನಿಮಿತ್ರ ಮಾಳವಿಕೆಯರ ವಿವಾಹವು ನೆರವೇರು ವುದು. ಧಾರಿಣಿ ಇರಾವತಿಯರ ನಡುವೆ ಸಿಕ್ಕಿದ ನಾಯಕ ನಾಯಿಕೆಯರ ಪ್ರೇಮದ ಅಂಕುರ, ಬೆಳವಣಿಗೆ ಮತ್ತು ಸಿದ್ಧಿಗಳು ಮುಖ್ಯಕಥಾವಸ್ತು. ಇವರಿಬ್ಬರ ಮದುವೆಗಾಗಿ ನಡೆಯುವ ಅಂತಃಪುರದ ಸಂಚೂ ಬಹಳ ಹೃದಯಂಗಮವಾಗಿ ಚಿತ್ರಿತವಾಗಿದೆ. ನಾಯಕ ನಾಯಿಕೆಯರ ಪ್ರೇಮ ವ್ಯವಹಾರಕ್ಕೆ ಸರಿಯಾದ ಹಿನ್ನೆಲೆಯು ರಚಿತವಾಗಿದೆ. ನಾಟ್ಯ ಕಲಿಸುವಿಕೆ, ಅದರಲ್ಲಿ ಹರದತ್ತ ಗಣದಾಸರ ಜಗಳ ಮೊದಲಾದ ಸನ್ನಿವೇಶಗಳು ನಾಟಕದ ಸಂಭೋಗ ಶೃಂಗಾರಕ್ಕೆ ಉತ್ತಮವಾತಾವರಣವನ್ನು ಕಲ್ಪಿಸುತ್ತವೆ.

## ಒಂದನೆಯ ಅಂಕ [1]

ಧಾರಿಣಿಯ ಚೇಟಿ ಬಕುಳಾವಳಿಕೆಯು ನಾಟ್ಯಾಚಾರ್ಯ ಗಣದಾಸನ ಬಳಿಗೆ ಹೊರಟಿದ್ದಾಳೆ. ನಾಟ್ಯ ಶಾಸ್ತ್ರಾಭ್ಯಾಸ ಮಾಡುವುದಕ್ಕಾಗಿ ಅವನ ಹತ್ತಿರ ಬಿಡಲ್ಪಟ್ಟಿದ್ದ ಮಾಲವಿಕೆಯು ಎಷ್ಟು ಮಟ್ಟಿಗೆ ವಿದ್ಯೆಯಲ್ಲಿ ಮುಂದು

---

1. ಪ್ರಸ್ತಾವನೆಯಲ್ಲಿ ಪ್ರಸಿದ್ಧವಾದ "ಪುರಾಣಮಿತ್ಯೇವ ನ ಸಾಧು ಸರ್ವಂ। ನ ಚಾಪಿ ಕಾವ್ಯಂ ನವಮಿತ್ಯವದ್ಯಂ॥ ಸಂತಃ ಪರೀಕ್ಷ್ಯಾನ್ಯತರದ್ಭಜಂತೆ ಮೂಢಃ ಪರ ಪ್ರತ್ಯಯನೇಯಬುದ್ಧಿಃ॥ ಎಂಬ ಶ್ಲೋಕ ಬರುವುದು. ಇದು ಕವಿಯ ಆತ್ಮ ವಿಶ್ವಾಸವನ್ನು ಸೂಚಿಸುವುದು.

ವರಿದಿದ್ದಾಳೆಂದು ತಿಳಿದು ಬರಬೇಕೆಂದು ಒಡತಿಯ ಅಪ್ಪಣೆ. ದಾರಿಯಲ್ಲಿ ಕೌಮುದಿಕೆ (ಮತ್ತೊಬ್ಬಳು ಚೇಟಿ) ಸಿಕ್ಕುವಳು. ಇವಳು ಧಾರಿಣಿಯು ಆಗತಾನೆ ಮಾಡಿಸಿದ್ದ ನಾಗಮುದ್ರೆಯ ಉಂಗುರವನ್ನು ತೆಗೆದುಕೊಂಡು ಬರುತ್ತಿದ್ದಳು. ಇಬ್ಬರಿಗೂ ಸ್ವಲ್ಪ ಮಾತುಕತೆ ನಡೆಯುವುದು ಅಗ್ನಿ ಮಿತ್ರನು ಮಾಲವಿಕೆಯಲ್ಲಿ ಅನುರಕ್ತನಾಗಿರುವ ವಿಚಾರ ಆಗಲೇ ಅರಮನೆ ಯಲ್ಲಿ ಅನೇಕರಿಗೆ ತಿಳಿದಿರುವಂತಿದೆ. ಕೌಮುದಿಕೆಯ ಕಿವಿಗೂ ಇದು ಬಿದ್ದಿತ್ತು. ಮಾಲವಿಕೆಯು ಗಣದಾಸನ ಬಳಿ ಇದ್ದರೂ ಹೇಗೆ ದೊರೆಯು ಅವಳನ್ನು ನೋಡಿ ಅನುರಕ್ತನಾದನೆಂದು ಅವಳಿಗೆ ಆಶ್ಚರ್ಯ ಮತ್ತು ಕುತೂಹಲ. ಬಕುಳಾವಳಿಕೆಯು ಸಂದರ್ಭವನ್ನು ಚೆನ್ನಾಗಿ ವಿವರಿಸುವಳು; ಧಾರಿಣಿಯು ತನ್ನ ಚಿತ್ರವೊಂದನ್ನು ನೋಡುವುದಕ್ಕಾಗಿ ಚಿತ್ರಶಾಲೆಗೆ ಹೋಗಿದ್ದಾಗ ಅಕಸ್ಮಾತ್ ದೊರೆಯೂ ಅಲ್ಲಿಗೆ ಬಂದದ್ದು; ಒಡತಿಯ ಜೊತೆಯಲ್ಲಿ ನಿಂತಿದ್ದಂತೆ ಚಿತ್ರಿತಳಾಗಿದ್ದ ಮಾಲವಿಕೆಯ ಆಕೃತಿಯನ್ನು ನೋಡಿ "ನಿನ್ನ ಹತ್ತಿರ ನಿಂತಿರುವಂತೆ ಚಿತ್ರಿತಳಾಗಿರುವ ಈ ಅಪೂರ್ವ ಸುಂದರಿ ಯಾರು?" ಎಂದು ಕೇಳಿದ್ದು; ಧಾರಿಣಿಯು ಸುಮ್ಮನಿದ್ದರೂ ವಸುಲಕ್ಷ್ಮಿಯು ಅವಳ ಹೆಸರನ್ನು ತಿಳಿಸಿದ್ದು; ಮೊದಲಾಗಿ ದೊರೆಗೆ ಮಾಲವಿಕೆಯಲ್ಲಿ ಅನುರಾಗ ಹುಟ್ಟಿದ ಸನ್ನಿವೇಶವನ್ನು ವಿಶದಗೊಳಿಸುವಳು. ಜೊತೆಗೆ, ಮಾಲವಿಕೆಯನ್ನು ಗಣದಾಸನ ಬಳಿ ಬಿಡುವುದಕ್ಕೂ ಇದೇ ಕಾರಣವೆಂದೂ ಸೂಚಿಸುವಳು. ರಾಣಿವಾಸದಲ್ಲೇ ಇವಳನ್ನಿಟ್ಟುಕೊಂಡಿದ್ದರೆ ಅಗ್ನಿಮಿತ್ರನ ಕಣ್ಣಿಗೆ ಬೀಳುವುದು ಖಂಡಿತವೆಂದು ಹೆದರಿ ಧಾರಿಣಿಯು ಇವಳನ್ನು ಈ ರೀತಿ ಬಚ್ಚಿಟ್ಟಿದ್ದಳಂತೆ. ಕೌಮುದಿಕೆಯು ಇದನ್ನು ತಿಳಿದುಕೊಂಡು ಒಡತಿಯ ಬಳಿಗೆ ಹೊರಡಲಾಗಿ ಬಕುಳಾವಳಿಕೆಯು ಸಮೀಪದಲ್ಲೇ ಬರುತ್ತಿದ್ದ ಆಚಾರ್ಯ ಗಣದಾಸನ ಬಳಿಗೆ ತೆರಳುವಳು.

"ಎಲ್ಲರಿಗೂ ಅವರವರ ಕುಲವಿದ್ಯೆಯೇ ಹೆಚ್ಚು; ಆದರೆ ನಮಗೇನೋ ನಾಟ್ಯದ ವಿಚಾರದಲ್ಲಿರುವ ಗೌರವವು ಕಪಟವಲ್ಲ" ಎಂದುಕೊಂಡು ಗಣದಾಸನು ಬರುತ್ತಿರುವನು. ಅವನ ಅಭಿಪ್ರಾಯದಲ್ಲಿ ನಾಟ್ಯವು ಬಹಳ ಉತ್ತಮವಾದ ಕಲೆ.

ದೇವಾನಾಮಿದಮಾಮನಂತಿ ಮುನಯಃ ಕಾಂತಂ ಕ್ರತುಂ ಚಾಕ್ಷುಷಂ
ರುದ್ರೇಣೇದಮುಮಾಕೃತವ್ಯತಿಕರೆ ಸ್ವಾಂಗೆ ವಿಭಕ್ತಂ ದ್ವಿಧಾ |
ತ್ರೈಗುಣ್ಯೋದ್ಭವಮತ್ರ ಲೋಕಚರಿತಂ ನಾನಾರಸಂ ದೃಶ್ಯತೆ
ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಮ್ ||
(ಮಾ. I-4

"ಮುನಿಗಳು ಇದನ್ನು ದೇವತೆಗಳ ತೃಪ್ತಿಗಾಗಿ ಮೀಸಲಾದ 'ಚಾಕ್ಷುಷಕ್ರತು' (ನೇತ್ರಕರ್ತೃಕಯಾಗ) ವೆಂದು ಆದರಿಸುವರು. ಉಮೆಯೊಡಗೂಡಿದ ರುದ್ರನಿಂದ ಇದು ಎರಡು ವಿಧವಾಗಿ (ಲಾಸ್ಯ, ತಾಂಡವ ಎಂದು) ತನ್ನ ದೇಹದಲ್ಲಿ ವಿಭಾಗಿಸಲ್ಪಟ್ಟಿದೆ. (ಸತ್ವ, ರಜಸ್ಸು, ತಮಸ್ಸು) ಎಂಬ ಮೂರು ಗುಣಗಳಿಂದ ಉಂಟಾಗುವ ಪ್ರಪಂಚದ ಚರಿತ್ರೆ (ನಡವಳಿಕೆ) ಯು ಇಲ್ಲಿ ನಾನಾರಸ ರೂಪದಲ್ಲಿ ಅನುಭವಿಸಲ್ಪಡುತ್ತದೆ. ನಾಟ್ಯವು ಬಹಳ ಮಟ್ಟಿಗೆ ಭಿನ್ನ ರುಚಿಯುಳ್ಳ ಜನರಿಗೂ ಒಂದೇ ವಿಧವಾದ ಆನಂದವನ್ನೊದಗಿಸುವುದು."

ಬಕುಳಾವಳಿಕೆಯು ಅವನನ್ನು ಮಾತನಾಡಿಸಿ ಮಾಲವಿಕೆಯ ವಿಚಾರ ಪ್ರಶ್ನಿಸುವಳು. ಗಣದಾಸನು ಬಹಳ ಸಂತೋಷದಿಂದ ಮಾಲವಿಕೆಯನ್ನು ಹೊಗಳಿ ದೇವಿ ಧಾರಿಣಿಗೆ ತನ್ನ ಮೆಚ್ಚುಗೆಯನ್ನು ತಿಳಿಸುವಂತೆ ಹೇಳುವನು. "ಇವಳು ಇರಾವತಿಯನ್ನೂ ಮೀರಿಸುವಂತೆ ತೋರುವುದು" ಎಂದುಕೊಳ್ಳುವಳು ಬಕುಳಾವಳಿಕೆ. ಇಂತಹ ಶಿಷ್ಯಳು ಸಿಕ್ಕುವುದು ಬಹಳ ಕಷ್ಟವಾದುದರಿಂದ ಗಣದಾಸನು ಇವಳ ವೃತ್ತಾಂತವನ್ನು ತಿಳಿಯಲಪೇಕ್ಷಿಸುವನು. ಧಾರಿಣಿಯ ಅಣ್ಣ ವೀರಸೇನನು ಇವಳನ್ನು ಇಲ್ಲಿಗೆ ಕಳುಹಿಸಿದ ವಿಚಾರ ತಿಳಿಯುವುದು ಕಪ್ಪೆಯಚಿಪ್ಪಿನೊಳಗೆ ಬಿದ್ದ ಮಳೆಯ ನೀರು ಮುತ್ತಾಗುವಂತೆ ಸತ್ಪಾತ್ರದಲ್ಲಿ ನಿಕ್ಷಿಪ್ತವಾದ ಗುರುವಿನ ವಿದ್ಯೆಯು ಉತ್ತಮ ಗುಣವನ್ನು ಹೊಂದುತ್ತದೆಯೆಂದು ಹೇಳಿ ಇಂತಹ ಶಿಷ್ಯಳು ಸಿಕ್ಕಿದ್ದು ತನ್ನ ಅದೃಷ್ಟವೆಂದು ಗಣದಾಸನು ಅಭಿಪ್ರಾಯಪಡುವನು. ಬಕುಳಾವಳಿಕೆಯು ಎಲ್ಲವನ್ನೂ ಒಡತಿಗೆ ತಿಳಿಸುವುದಕ್ಕಾಗಿ ಹೊರಡುವಳು[1]

ಇತ್ತ ಅಗ್ನಿಮಿತ್ರನು ವಿದರ್ಭರಾಜನಾದ ಯಜ್ಞಸೇನನಿಗೂ ತನಗೂ ನಡೆಯುತ್ತಿದ್ದ ಪತ್ರವ್ಯವಹಾರವನ್ನು ಕುರಿತು ಮಂತ್ರಿಯೊಡನೆ ಪ್ರಸ್ತಾಪಿ

1. ಇದು ಮಿಶ್ರವಿಷ್ಕಂಭಕ.

ಸುತ್ತಿರುವನು. ಯಜ್ಞಸೇನನ ಚಿಕ್ಕಪ್ಪನ ಮಗ ಮಾಧವಸೇನನು ಅಗ್ನಿ ಮಿತ್ರನಿಗೆ ತನ್ನ ತಂಗಿಯನ್ನು ಕೊಟ್ಟು ಸಂಬಂಧ ಬೆಳೆಸುವುದಾಗಿ ಒಪ್ಪಿ ವಿದಿಶೆಗೆ ಬರುತ್ತಿದ್ದಾಗ ದಾರಿಯಲ್ಲಿ ಯಜ್ಞಸೇನನ ಕಡೆಯ ಅಧಿಕಾರಿ ಯೊಬ್ಬನು ಅವನನ್ನು ಸೆರೆಹಿಡಿದಿದ್ದನಂತೆ. ಇದನ್ನು ಕೇಳಿ ಅಗ್ನಿಮಿತ್ರನು, ಮಾಧವಸೇನನನ್ನೂ ಅವನ ಹೆಂಡತಿ ತಂಗಿಯರನ್ನೂ ಬಿಡುಗಡೆ ಮಾಡಿ ಕಳುಹಿಸಬೇಕೆಂದು ಯಜ್ಞಸೇನನಿಗೆ ಓಲೆಯನ್ನು ಕಳುಹಿಸಿದ್ದನು. ಓಲೆಗೆ ಉತ್ತರವು ತೀಕ್ಷ್ಣವಾಗಿಯೇ ಇತ್ತು. ಮಾಧವಸೇನನ ತಂಗಿಯು ಆಗಿನ ಗಲಭೆಯಲ್ಲಿ ತಪ್ಪಿಸಿಕೊಂಡಿರುವಳೆಂದೂ, (ಅಗ್ನಿಮಿತ್ರನ ಬಳಿ ಸೆರೆ ಯಾಗಿದ್ದ) ಅವನ ಭಾವಮೈದುನ ಮೌರ್ಯ ಸಚಿವನನ್ನು ಬಿಟ್ಟರೆ ಮಾಧವ ಸೇನನನ್ನು ಬಿಡುವುದಾಗಿಯೂ ಯಜ್ಞಸೇನನು ಜವಾಬು ಕಳುಹಿಸಿದ್ದನು. ಇದರಿಂದ ಅಗ್ನಿಮಿತ್ರನು ಕೋಪಗೊಂಡು ವಿದರ್ಭನ ಮೇಲೆ ದಂಡೆತ್ತಿ ಹೋಗಬೇಕೆಂದು ವೀರಸೇನನ ಸೈನ್ಯಕ್ಕೆ ಅಪ್ಪಣೆಕೊಡುವನು.

ಮಂತ್ರಿಯು ಹೊರಡುವಷ್ಟರಲ್ಲಿ ವಿದೂಷಕ ಗೌತಮನು ಬರುವನು. ಇವನು ದೊರೆಗೆ ಕಾರ್ಯಾಂತರದಲ್ಲಿ ಸಚಿವನಾಗಿದ್ದನು. ಚಿತ್ರದಲ್ಲಿ ನೋಡಿದ್ದ ಹುಡುಗಿಯನ್ನು ಕಣ್ಣೆದುರಿಗೆ ಕರೆತರುವುದಕ್ಕಾಗಿ ಸಂಚುಮಾಡಲು ಇವನಿಗೆ ಅಪ್ಪಣೆಯಾಗಿತ್ತು. ಈ ವಿಚಾರವಾಗಿ ದೊರೆಯು ಪ್ರಶ್ನೆಮಾಡಲು ಗೌತಮನು ಪಿಸುಮಾತಿನಲ್ಲಿ ತನ್ನ ಉಪಾಯವನ್ನು ವಿವರಿಸುವನು. ದೊರೆಯು ಇದನ್ನು ಮೆಚ್ಚಿ ವಿದೂಷಕನನ್ನು ಹೊಗಳುವನು. ಇಷ್ಟರಲ್ಲಿ ಹರದತ್ತ ಗಣದಾಸರ ವಿವಾದ ಕೋಲಾಹಲವು ಕಿವಿಗೆ ಬೀಳುವುದು. ಸಂಚು ಫಲಕಾರಿಯಾಗುವಂತಾದುದನ್ನು ನೋಡಿ ದೊರೆಗೆ ಸಂತೋಷ; ವಿದೂ ಷಕನಿಗೆ ಹೆಮ್ಮೆ. ಅಪ್ಪಣೆಪಡೆದು ಹರದತ್ತ ಗಣದಾಸರು ಪ್ರವೇಶಿಸಿ ದೊರೆಯ ಮುಂದೆ ತಮ್ಮ ಕಲಹದ ಕಾರಣವನ್ನು ತಿಳಿಸುವರು. ಗುರುಮುಖೇನ ಅಭಿನಯ ವಿದ್ಯೆಯನ್ನು ಅಭ್ಯಾಸಮಾಡಿ ಪ್ರದರ್ಶನಗಳನ್ನು ಕೊಟ್ಟು ಮಹಾರಾಜ ಮಹಾರಾಣಿಯರ ಮೆಚ್ಚುಗೆಯನ್ನು ಗಳಿಸಿದ ತನ್ನನ್ನು ಹರ ದತ್ತನು ದೊಡ್ಡವರೆದುರಿನಲ್ಲಿ "ಇವನು ನನ್ನ ಕಾಲಿನ ದೂಳಿಗೂ ಸಮನಲ್ಲ" ಎಂದು ಬೈದನೆಂದು ಗಣದಾಸನ ಆಪಾದನೆ. ಮೊಟ್ಟಮೊದಲು ಗಣ ದಾಸನೇ ತನ್ನನ್ನು ಅವಮಾನಗೊಳಿಸಿ "ಇವನಿಗೂ ನನಗೂ ಕುಂಟೆಗೂ

ಸಮುದ್ರಕ್ಕೂ ಎಷ್ಟು ವ್ಯತ್ಯಾಸವೋ ಅಷ್ಟು ವ್ಯತ್ಯಾಸ" ಎಂದನೆಂದು ಹರದತ್ತನ ದೂಷಣೆ. ಇದಕ್ಕಾಗಿ ತಮ್ಮಲ್ಲಿ ಯಾರು ಹೆಚ್ಚೆಂಬುದನ್ನು ಪರೀಕ್ಷಿಸಿ ತೀರ್ಮಾನಿಸಬೇಕೆಂದು ಅವನು ದೊರೆಯನ್ನು ಪ್ರಾರ್ಥಿಸುವನು. ಗಣದಾಸನು ಧಾರಿಣಿಯ ಆಶ್ರಿತನಾದುದರಿಂದ ಧಾರಿಣಿ, ಪಂಡಿತ ಕೌಶಿಕಿಯರಿಗೂ ತಿಳಿದಂತೆಯೇ ಈ ಪರೀಕ್ಷೆಯನ್ನು ನಡೆಸಬೇಕೆನ್ನಿಸುವುದು. ಇಲ್ಲದಿದ್ದಲ್ಲಿ ಧಾರಿಣಿಯು ಪಕ್ಷಪಾತದ ಆಪಾದನೆಯನ್ನು ತನ್ನಮೇಲೆ ಹೊರಿಸಬಹುದೆಂದು ಶಂಕಿಸಿ ಅಗ್ನಿಮಿತ್ರನು ಅವರನ್ನೂ ಕರೆಕಳುಹಿಸುವನು. ತನ್ನಕಡೆಯವನಾದ ಗಣದಾಸನು ಪರೀಕ್ಷೆಯಲ್ಲಿ ಸೋತು ಅವಮಾನವಾಗುವುದೋ ಏನೋ ಎಂದು ಧಾರಿಣಿ ಸಂದೇಹಪಡುತ್ತ ಕೌಶಿಕಿಯು ಉಚಿತ ರೀತಿಯಲ್ಲಿ ಸಮಾಧಾನಗೊಳಿಸುತ್ತ ಇಬ್ಬರೂ ರಾಜಸನ್ನಿಧಿಗೆ ಬರುವರು. ಕೌಶಿಕಿಯು ಪರೀಕ್ಷಕಳಾದಲ್ಲಿ ಯಾವ ಪಕ್ಷಪಾತಕ್ಕೂ ಅವಕಾಶವಿಲ್ಲವೆಂದು ದೊರೆಯು ಸೂಚಿಸುವನು. ಆಚಾರ್ಯನೂ ಇದಕ್ಕೊಪ್ಪುವರು. ಇನ್ನೇನು ವಾದವನ್ನು ಪ್ರಾರಂಭಿಸಬೇಕು ಎನ್ನುವಾಗ ಕೌಶಿಕಿಯು ಅಡ್ಡಬಂದು ಪ್ರಯೋಗಪ್ರಧಾನವಾದ ನಾಟ್ಯಶಾಸ್ತ್ರದ ಪರೀಕ್ಷೆಯನ್ನು ವಾಗ್ವ್ಯವಹಾರದಿಂದ ನಿರ್ವಹಿಸಲಾಗದೆಂದು ಸೂಚಿಸುವಳು. ಧಾರಿಣಿಯಂತೂ ಈ ವಿವಾದವೇ ಅನುಚಿತವೆಂದು ಬುಡಕ್ಕೇ ಕೊಡಲಿಯಿಡುವಳು. ತನ್ನ ಏರ್ಪಾಡೆಲ್ಲ ಎಲ್ಲಿ ಮುರಿದು ಬೀಳುವುದೋ ಎಂದು ಹೆದರಿ ವಿದೂಷಕನು ಉಪಾಯದಿಂದ ಅವಳನ್ನು ಸುಮ್ಮನಾಗಿಸುವನು. 'ನೋಡೋಣಮ್ಮ, ಇವರ ಸಂವಾದವನ್ನು. ಸುಮ್ಮನೆ ಸಂಬಳಕೊಡುವುದೇತಕ್ಕೆ? ಕಲಹಪ್ರಿಯರಾದ ಈ ಎರಡು ಮದಿಸಿದ ಆನೆಗಳಲ್ಲಿ ಒಂದು ಸೋಲದಿದ್ದರೆ ಹೇಗೆ ಶಾಂತಿ?' ಎಂದು ಅವನು ಧಾರಿಣಿಗೆ ಹೇಳುವನು. 'ಇಬ್ಬರ ಅಂಗಸೌಷ್ಠವವೂ ಪರಿಚಿತವಾಗಿರುವಾಗ ಪ್ರಯೋಗದ ಆವಶ್ಯಕತೆ ಹೇಗೆ?' ಎಂದು ದೊರೆಯು ಪ್ರಶ್ನಿಸುವನು. ಕೌಶಿಕಿಯು ಉತ್ತರ ಕೊಡುತ್ತ

'ಶ್ಲಿಷ್ಟಾಕ್ರಿಯಾ ಕಸ್ಯಚಿದಾತ್ಮಸಂಸ್ಥಾ
ಸಂಕ್ರಾಂತಿರನ್ಯಸ್ಯ ವಿಶೇಷಯುಕ್ತಾ ।
ಯಸ್ಯೋಭಯಂ ಸಾಧು ಸ ಶಿಕ್ಷಕಾಣಾಂ
ಧುರಿ ಪ್ರತಿಷ್ಠಾಪಯಿತವ್ಯ ಏವ ॥'

"ಕೆಲವರ ವಿದ್ಯೆ (ಕಲೆ) ಯು ತಮ್ಮಲ್ಲಿ ಮಾತ್ರ ಶ್ಲಾಘ್ಯವಾಗಿರುತ್ತದೆ. ಇನ್ನು ಕೆಲವರದು ಇತರರನ್ನು (ಶಿಷ್ಯರನ್ನು) ಸೇರಿದರೆ ಚೆನ್ನಾಗಿ ಕಾಣುತ್ತದೆ. ಎರಡರಲ್ಲೂ (ಸ್ವತಃ ತೋರಿಸುವುದು ಮತ್ತು ಇತರರಿಗೆ ಹೇಳಿಕೊಡುವುದು) ವಿಶೇಷಜ್ಞರಾದವರೇ ಆಚಾರ್ಯಾಗ್ರೇಸರರೆನ್ನಿಸಿಕೊಳ್ಳುವರು" ಎಂದು ಹೇಳುವಳು. ಆಚಾರ್ಯರಿಬ್ಬರೂ ಇದನ್ನು ಒಪ್ಪಿದರೂ ಧಾರಿಣಿಯು ಮಾತ್ರ "ದಡ್ಡಳಾದ ಶಿಷ್ಯೆಯು ಉಪದೇಶಕ್ಕೆ ಕಳಂಕ ತಂದರೆ ಅದು ಆಚಾರ್ಯನ ದೋಷವೆ?" ಎಂದಾಕ್ಷೇಪಿಸುವಳು. ಕೂಡಲೆ ಅಗ್ನಿ ಮಿತ್ರನು "ಅನರ್ಹವಾದ್ದನ್ನು ಆರಿಸುವುದೂ ದಡ್ಡತನವನ್ನು ಪ್ರಕಾಶ ಗೊಳಿಸುವುದೆಂದು ಕೇಳಬರುವುದಷ್ಟೆ!" ಎನ್ನುವನು. ಅಂತು ಧಾರಿಣಿಗೆ ಈ ವಿವಾದವನ್ನು ಮುಂದುವರಿಸಲು ಇಷ್ಟವಿಲ್ಲ. ಇಷ್ಟಾದರೂ ತನ್ನ ಮಾತು ನಡೆಯದೆ ಹೋಗಲಾಗಿ ಅವಳು ಗಣದಾಸನಿಗೆ ಉಪದೇಶಮಾಡತೊಡಗು ವಳು. ಆದರೆ ವಿದೂಷಕನು ಗಣದಾಸನನ್ನು ಹೀಯಾಳಿಸುತ್ತ ಅವನು ಹೇಗೂ ಪರೀಕ್ಷೆಯಿಂದ ಪರಾಙ್ಮುಖನಾಗದಂತೆ ಮಾಡುವನು.

"ಲಬ್ಧಾಸ್ಪದೋಽಸ್ಮೀತಿ ವಿವಾದಭೀರೋ-
ಸ್ತಿತಿಕ್ಷಮಾಣಸ್ಯ ಪರೇಣ ನಿಂದಾಮ್ ।
ಯಸ್ಯಾಗಮಃ ಕೇವಲಜೀವಿಕಾಯೈ
ತಂ ಜ್ಞಾನಪಣ್ಯಂ ವಣಿಜಂ ವದಂತಿ ॥"

"ಅನುಕೂಲವಾದ ಪದವಿಯನ್ನೇರಿದ ಮೇಲೆ ವಿವಾದಕ್ಕೆ ಹೆದರಿ ಪ್ರತಿವಾ ದಿಯ ದೂಷಣೆಯನ್ನೂ ಸಹಿಸುತ್ತ ಕೇವಲ ಜೀವಿಕೆಗಾಗಿ ಶ್ರಮಿಸುವವನು ಜ್ಞಾನವನ್ನು ಮಾರುವ ವರ್ತಕನೆನ್ನಿಸಿಕೊಳ್ಳುವನು" ಎಂದು ಗಣದಾಸನು ಗಡಗುಟ್ಟುತ್ತ ಪರೀಕ್ಷೆಯನ್ನು ನಡೆಸಲೇಬೇಕೆಂದು ಮುಷ್ಕರ ಹಿಡಿಯು ವನು. "ನಿನ್ನ ಶಿಷ್ಯೆಯು ಈಗತಾನೆ ಅಭ್ಯಾಸ ಮಾಡುವುದರಿಂದ ಅವಳ ಪ್ರಯೋಗವನ್ನು ತೋರಿಸುವುದು ಅಯುಕ್ತ" ವೆಂದು ಧಾರಿಣಿಯು ಪುನಃ ಸೂಚಿಸುವಳು. "ಆದಕ್ಕಾಗಿಯೇ ನನ್ನ ಒತ್ತಾಯ" ಎನ್ನುವನು ಗಣದಾಸ. "ಹಾಗಾದರೆ ಇಬ್ಬರೂ ಕೌಶಿಕಿಗೆ (ಮಾತ್ರ) ಉಪದೇಶವನ್ನು ತೋರಿಸಲಿ" ಎಂಬ ಸಲಹೆಗೆ ಕೌಶಿಕಿಯು ಒಪ್ಪದೆ ದೊರೆಯ ಮತ್ತು ಇತರರ ಸಹಾಯುವನ್ನೂ ಅಪೇಕ್ಷಿಸುವಳು. ಧಾರಿಣಿಯ ಪ್ರಯತ್ನವೆಲ್ಲ

ವ್ಯರ್ಥವಾಗಿ ಅವಳಿಗೆ ಕೋಪ ಬರುವುದು. "ಮೂಢೆ! ಪರಿವ್ರಾಜಿಕೆ, ಎಚ್ಚರಗೊಂಡಿರುವ ನನ್ನನ್ನೂ ನಿದ್ರಿತಳಂತೆ ಮಾಡುವಿ" ಎಂದು ಗುಟ್ಟಾಗಿ ಅವಳನ್ನು ನಿಂದಿಸಿ ಹೊರಡಲುದ್ಯುಕ್ತಳಾಗುವಳು. ಕೌಶಿಕಿಯು ಅವಳನ್ನು ಸಮಾಧಾನಗೊಳಿಸಿ ನಿಲ್ಲಿಸುವಳು. ತಂತ್ರಿಯಾದ ವಿದೂಷಕನು ಗಣ ದಾಸನನ್ನು ಕುರಿತು "ಸಕಾರಣವೇ (ದೇವಿಯ ಕೋಪ)! ತನ್ನವನು ರಕ್ಷಿಸಲ್ಪಡಬೇಕು. ಸದ್ಯ ಕೋಪದ ನೆವದಿಂದ ನೀನು ದೇವಿಯಿಂದ ರಕ್ಷಿ ಸಲ್ಪಟ್ಟೆ" ಎಂದು ಪುನಃ ಹೀಯಾಳಿಸುವನು. ಧಾರಿಣಿಯನ್ನು ಸಮಾ ಧಾನಗೊಳಿಸಿ ಸ್ಪರ್ಧೆಗೆ ಅನುಮತಿ ಕೊಡುವಂತೆ ಮಾಡುವ ಭಾರ ಗಣ ದಾಸನ ಮೇಲೆಯೇ ಬೀಳುವುದು. ಪಾಪ! ಗಣದಾಸನಿಗೆ ದೇವಿಯ ನಿಗೂಢವಾದ ಹೃದಯವೇದನೆ ತಿಳಿಯದು. ಇದು ಪಾಂಡಿತ್ಯ ಪ್ರಕಾಶಕ್ಕೆ ಮಾತ್ರ ಸಮಯವೆಂದು ಧಾರಿಣಿಗೆ ತನ್ನ ಶಕ್ತಿಯ ವಿಚಾರದಲ್ಲಿ ಭರವಸೆ ಕೊಟ್ಟು ಅವಳ ಅನುಮತಿಯನ್ನು ಕೋರುವನು. ಧಾರಿಣಿಯ ಮನಸ್ಸಿನ ಶಂಕೆಯನ್ನೂ ಕೌಶಿಕಿಯು ಹೊರಗೆಳೆಯುವಳು. ದೊರೆಯು ಅನುರೂಪ ವಾದ ಉತ್ತರವನ್ನು ಕೊಡಲಾಗಿ ಆಚಾರ್ಯರಿಬ್ಬರ ಹೋರಾಟಕ್ಕೆ ಅವಳೂ ಸಮ್ಮತಿಸಬೇಕಾಗುವುದು ಶರ್ಮಿಷ್ಠೆಯ 'ಛಲಿತ' ವೆಂಬ ನಾಟ್ಯವನ್ನು ಇಬ್ಬರೂ ಶಿಷ್ಯೆಯರ ಕೈಯಲ್ಲಿ ಅಭಿನಯಿಸಬೇಕೆಂದು ಕೌಶಿಕಿಯು ಗೊತ್ತು ಮಾಡುವಳು. ಅಭಿನಯದಲ್ಲಿ ಅಂಗಗಳ ಕೌಶಲವು ಸ್ಪಷ್ಟವಾಗುವಂತೆ ಶಿಷ್ಯೆಯರು ಹೆಚ್ಚು ಬಟ್ಟೆಗಳನ್ನು ಧರಿಸಕೂಡದೆಂದು ವಿಧಿಸುವಳು. ಸಂಗೀತಶಾಲೆಯಲ್ಲಿ ಸ್ಪರ್ಧೆಗೆ ಸಿದ್ಧಗೊಳಿಸಬೇಕೆಂದು ಆಜ್ಞೆಯಾಗಿ ಮೃದಂಗ ಧ್ವನಿಯಾದ ಕೂಡಲೆ ಎಲ್ಲರೂ ಹೊರಡಬೇಕೆಂದು ತೀರ್ಮಾನ ವಾಗುವುದು. ಈ ಏರ್ಪಾಡೆಲ್ಲ ತಂತ್ರದಿಂದಲೇ ನಡೆದಿದೆಯೆಂದು ಧಾರಿಣಿ ಮನಗಂಡಿರುವಳು. "ರಾಜಕಾರ್ಯದಲ್ಲಿ ಈ ಉಪಾಯನಿಪುಣತೆಯು ಆರ್ಯಪುತ್ರನಿಗಿದ್ದರೆ ಚೆನ್ನಾಗಿತ್ತು" ಎಂದು ದೊರೆಯನ್ನು ಹಂಗಿಸುವಳು. ಧಾರಿಣಿಯ ಮನಸ್ಸಿನಲ್ಲಿದ್ದ ಶಂಕೆಯೆಲ್ಲ ದೊರೆಗೂ ತಿಳಿದಿತ್ತು. ಅದು ದರಿಂದಲೇ ಅವನು ದೇವಿಯನ್ನು ಸಮಾಧಾನಗೊಳಿಸಿ ತನ್ನ ನಿರಪರಾ ಧಿತ್ವವನ್ನು ವ್ಯಕ್ತಗೊಳಿಸುವನು. ಇಷ್ಟರಲ್ಲಿ ಮೃದಂಗ ಶಬ್ದವು ಕೇಳು ವುದು. ಎಲ್ಲರೂ ಸಂಗೀತಶಾಲೆಗೆ ಹೊರಡುವರು. "ಧಾರಿಣಿಯ

ಸಂಶಯವನ್ನು ಬಲಗೊಳಿಸದಂತೆ ಧೈರ್ಯವಾಗಿ ನಡೆಯಬೇಕೆಂದು ವಿದೂಷಕನು ದೊರೆಗೆ ಸಲಹೆ ಕೊಡುವನು.

## ಎರಡನೆಯ ಅಂಕ

ವಯೋವೃದ್ಧನಾದ ಗಣದಾಸನ ಶಿಷ್ಯೆಗೇ ಪ್ರಥಮ ಪುರಸ್ಕಾರ ದೊರೆಯುವುದು. ಆದರೂ ಅಷ್ಟರಲ್ಲೇ ಅಗ್ನಿಮಿತ್ರನಿಗೆ ಅವಸರ; ವಿದೂಷಕನ ಪ್ರೋತ್ಸಾಹ ಬೇರೆ. ಮಾಲವಿಕೆ ಬರುವಳು. ಅವಳನ್ನು ಕಂಡೊಡನೆ ಅಗ್ನಿಮಿತ್ರನಿಗೆ "ಚಿತ್ರದಲ್ಲಿ ಇವಳ ಆಕೃತಿಯನ್ನು ಅರ್ಪಿಸಿದ ಶಿಲ್ಪಿಯೂ ಕೆಲವಂಶಗಳನ್ನು ಗಮನಿಸಿರಲಿಲ್ಲ" ವೆನ್ನಿಸುವುದು. ಅಷ್ಟು ರೂಪವತಿ ಮಾಲವಿಕೆ. ಗಣದಾಸನು ಶಿಷ್ಯೆಗೆ ಧೈರ್ಯಹೇಳುತ್ತಾ ಹತ್ತಿರಕ್ಕೆ ಬರಮಾಡುವನು. ಅಭಿನಯಕಲೆಗೆ ಸರಿಯಾದ ಶರೀರಸೌಷ್ಠವ ಅವಳದು. ತಾನು ಅವನಲ್ಲನುರಕ್ತಳೆಂದು ಸೂಚಿಸುವ ಗೀತವನ್ನು ಹಾಡುತ್ತ ಅಭಿನಯ ಪ್ರದರ್ಶನ ಮಾಡುವಳು. ವಿದೂಷಕನು ಪದೇಪದೇ ಮುಗ್ಧನಾಯಕನಿಗೆ ಉಪದೇಶಿಸುವಂತೆ ಮಾತಾಡುವನು. ಅಗ್ನಿಮಿತ್ರನ ಮನಸ್ಸಿನ ಭಾವಗಳು ಕಾಮಪೂರಿತವಾಗುವುವು. ಮಾಲವಿಕೆಯು ಹೊರಡುವಾಗ ಕೂಡ ವಿದೂಷಕನ ಸಂಚಿನಿಂದ ಅವಳ ರೂಪವನ್ನು ಮತ್ತೊಮ್ಮೆ ನೋಡಿ ತಣಿಯುವ ಅವಕಾಶ ಅಗ್ನಿಮಿತ್ರನಿಗೆ ದೊರೆಯುವುದು. ಇತ್ತ, ಕಡೆಯವರೆಗೂ ಧಾರಿಣಿಯು ತನ್ನ ಅಭಿಮತವನ್ನು ಸೂಚಿಸುತ್ತಲೇ ಇರುವಳು ಮಾಲವಿಕೆಯ ನಾಟ್ಯವು ನಿರ್ದುಷ್ಟವೆಂದು ತೀರ್ಮಾನವಾಗುವುದು. ಗಣದಾಸನು ಪರಮಾನಂದದಿಂದ ಧಾರಿಣಿಗೆ ತನ್ನ ಕೃತಜ್ಞತೆಯನ್ನು ಸೂಚಿಸುವನು. ವಿದೂಷಕನ ಹಾಸ್ಯದಿಂದ ಎಲ್ಲರ ಮುಖದ ಮೇಲೂ ನಗು ತೋರುವುದು, ಮಾಲವಿಕೆಯ ಮಂದಸ್ಮಿತವು ದೊರೆಯ ಪ್ರೇಮವನ್ನು ಇಮ್ಮಡಿಗೊಳಿಸುವುದು. ವಿದೂಷಕನು ದೊರೆಯ ಕೈಯಿಂದ ಬಳೆಯನ್ನು ಕಳಚಿ ಬಹುಮಾನ ಕೊಡಲು ಯತ್ನಿಸಿದಾಗ ಧಾರಿಣಿಯ ಕೋಪವು ಮಿತಿಮೀರುವುದು. ವಿದೂಷಕನನ್ನು ತಡೆದು ಗಣದಾಸ ಮಾಲವಿಕೆ ಇಬ್ಬರೂ ಅಲ್ಲಿಂದ ಹೊರಡುವಂತೆ ಮಾಡುವಳು. ಹರದತ್ತನ ನಾಟ್ಯಪ್ರಯೋಗವು ಬೇಕಿಲ್ಲದಿದ್ದರೂ ದೊರೆಯು ಕುತೂಹಲಿಯಂತೆ ನಟಿಸುತ್ತ ನೋಡಲೆಳಸುವನು.

ಆ ವೇಳೆಗೆ ಮಧ್ಯಾಹ್ನ ಕಾಲವಾಯಿತೆಂದು ವೈತಾಳಿಕರ ಗಾನ ಸೂಚಿಸುವುದು. ಹರದತ್ತನ ಬೇಡಿಕೆಯನ್ನು ಮರುದಿನ ಸಲ್ಲಿಸಬಹುದೆಂದು ತೀರ್ಮಾನವಾಗಿ ಎಲ್ಲರೂ ಹೊರಡುವರು. ಅಗ್ನಿಮಿತ್ರನು ಮಾತ್ರ ವಿದೂಷಕನಿಗೆ ತನ್ನ ಕಾಮತಾಪವನ್ನು ತಿಳಿಸಿ ಮುಂದಿನ ಕಾರ್ಯದಲ್ಲಿ ಅವನ ಸಹಾಯವನ್ನು ಕೋರುವನು.

## ಮೂರನೆಯ ಅಂಕ

ಸುಮಾರು ಹದಿನೈದು ದಿವಸಗಳು ಕಳೆದಿವೆ. ಮಾಲವಿಕೆ, ಅಗ್ನಿಮಿತ್ರರು ಪರಸ್ಪರ ಸಮಾಗಮವನ್ನೆಳಸುತ್ತ ವಿರಹದಿಂದ ಕಂಗೆಟ್ಟಿರುವರು. ಒಂದು ದಿನ ಪ್ರಾತಃಕಾಲ ಪ್ರಮದವನದಲ್ಲಿ ಚೇಟಿ ಸಮಾಹಿತಿಕೆಯು ಅಲ್ಲಿನ ಕಾವಲುಗಾತಿ ಮಧುಕರಿಕೆಯನ್ನು ಮಾತನಾಡಿಸುವಳು. ಅಗ್ನಿಮಿತ್ರನ ಮಾಲವಿಕಾಪ್ರೇಮವು ರೂಢಮೂಲವಾಗಿ ಧಾರಿಣಿಯ ದಾಕ್ಷಿಣ್ಯಕ್ಕಾಗಿ ಅವನು ಕುಗ್ಗದವನಂತೆ ನಟಿಸುತ್ತಿದ್ದುದೂ ಮಾಲವಿಕೆಯೂ ಕೂಡ ಮುಡಿದು ಬಿಸಾಡಿದ ಜಾಜಿಯ ಹೂವಿನಂತೆ ಬಾಡುತ್ತಿದ್ದುದೂ ಮಧುಕರಿಕೆಗೆ ತಿಳಿಯುವುದು. ಅಶೋಕವು ಹೂ ಬಿಡಲು ಸಾವಕಾಶವಾಗಿದ್ದುದರಿಂದ ದೋಹದ[1] ವನ್ನು ನಡೆಸುವುದಕ್ಕೆ ಏರ್ಪಾಡು ಮಾಡುವುದಕ್ಕಾಗಿ ಮಧುಕರಿಕೆಯು ಧಾರಿಣಿಯ ಬಳಿಗೆ ಬರಬೇಕಾಗಿತ್ತು. ಇಬ್ಬರೂ ಜೊತೆಯಲ್ಲೇ ಹೊರಡುವರು.[2]

ಅಗ್ನಿಮಿತ್ರ ಮಾಲವಿಕೆಯರ ಸಮಾಗಮಕ್ಕೆ ಅವಕಾಶವನ್ನು ಕಲ್ಪಿಸಿಕೊಡುವುದಕ್ಕಾಗಿ ವಿದೂಷಕನು ಬಕುಳಾವಳಿಕೆಯೊಡನೆ ಪ್ರಯತ್ನ ನಡೆಸುತ್ತಿರುವನು. ಆದರೆ ಸರ್ಪವು ನಿಧಿಯನ್ನು ರಕ್ಷಿಸುವಂತೆ ಇತ್ತ ಧಾರಿಣಿಯು ಮಾಲವಿಕೆಯನ್ನು ಹೆಚ್ಚು ಜಾಗರೂಕತೆಯಿಂದ ಕಾಯುತ್ತಿರುವಳು. ಹೀಗಿ

---

1. 'ದೋಹದ' ವು ಗಿಡಕ್ಕೆ ಒಂದು ವಿಧವಾದ ಸಂಸ್ಕಾರ. ಉತ್ತಮ ಸ್ತ್ರೀಯರು ಅಲಂಕೃತವಾದ ಎಡಗಾಲಿನಿಂದ ಒದೆಯುವುದಕ್ಕೆ 'ದೋಹದ' ವೆಂದು ಹೆಸರು. ಹೀಗೆ ಮಾಡಿದಲ್ಲಿ ಗಿಡವು ಕೂಡಲೆ ಹೂಬಿಡುವುದೆಂದು ನಂಬಿಕೆಯಿತ್ತು.

2. ಇದು ಪ್ರವೇಶಕ.

ರುವಾಗ ಒಂದು ದಿನ ಇರಾವತಿಯು ಪ್ರಮದವನದಲ್ಲಿ ಉಯ್ಯಾಲೆಯಾಟಕ್ಕಾಗಿ ಅಗ್ನಿಮಿತ್ರನನ್ನು ಆಹ್ವಾನಿಸುವಳು. ಅಗ್ನಿಮಿತ್ರನಿಗೆ ಆಹ್ವಾನವನ್ನು ಅಂಗೀಕರಿಸಲು ಇಷ್ಟವಿಲ್ಲ. ತನ್ನ ಅತಿಶಯವಾದ ಉಪಚಾರವನ್ನು ನೋಡಿ ನಿಪುಣೆಯಾದ ಇರಾವತಿಯು ಒಳಗುಟ್ಟನ್ನು ಕಂಡುಹಿಡಿಯುವಳೆಂದು ಭಯ. ಆದರೂ ವಿದೂಷಕನ ಒತ್ತಾಯದಿಂದ ಪ್ರಮದವನಕ್ಕೆ ಹೊರಡುವನು.

ಅಷ್ಟುಹೊತ್ತಿಗೆ ಮಾಲವಿಕೆಯೂ ಅಲ್ಲಿಗೆ ಬಂದಿರುವಳು. ಉಯ್ಯಾಲೆಯಿಂದ ಬಿದ್ದು ಧಾರಿಣಿಯು ಕಾಲುನೋವಾಗಿದ್ದ ಕಾರಣ ಅಶೋಕದೋಹದವನ್ನು ನಡೆಸುವುದು ಮಾಲವಿಕೆಯ ಕರ್ತವ್ಯವಾಗಿತ್ತು. ಐದು ರಾತ್ರಿಗಳಲ್ಲಿ ಅದು ಹೂ ಬಿಟ್ಟರೆ ಇಷ್ಟಾರ್ಥವನ್ನು ಸಲ್ಲಿಸುವುದಾಗಿಯೂ ಧಾರಿಣಿಯು ಮಾಲವಿಕೆಗೆ ಮಾತುಕೊಟ್ಟಿದ್ದಳು. ಅಲಂಕಾರಕ್ಕಾಗಿ ಆಭರಣ, ಅಲಕ್ತಕಗಳನ್ನು ತರಲು ಬಕುಳಾವಳಿಕೆ ಹೋಗಿರುವಲ್ಲಿ ಮಾಲವಿಕೆಯು ಅಶೋಕನ ನೆರಳಿನಲ್ಲಿ ಹಾಸುಗಲ್ಲಿನ ಮೇಲೆ ಕುಳಿತು ಏಕಾಕಿನಿಯಾಗಿ ತನ್ನ ದುಃಖವನ್ನು ಕುರಿತು ಚಿಂತಿಸುತ್ತಿರುವಳು. ಇವಳು ಇಲ್ಲಿರುವುದು ವಿದೂಷಕನಿಂದ ದೊರೆಗೆ ತಿಳಿಯುವುದು. ಮಾಲವಿಕೆಯ ಸಂತಾಪದ ಮಾತುಗಳೂ ಕಿವಿಯನ್ನು ಮುಟ್ಟುವುವು. ಬಕುಳಾವಳಿಕೆಯು ಹಿಂತಿರುಗಿ ಬಂದು ಮಾಲವಿಕೆಯ ಕಾಲುಗಳನ್ನು ಗೊಲಸು, ಅಲಕ್ತಕಗಳಿಂದಲಂಕರಿಸುವಳು. ಮಾಲವಿಕೆಯ ರಮಣೀಯ ವೇಷವು ಅಗ್ನಿಮಿತ್ರನ ಅನುರಾಗವನ್ನು ಕೆರಳಿಸುವುದು. ನಿಮಿತ್ತವೂ ಕೂಡ ಅವರ ಮಾತಿನಿಂದ ಗೊತ್ತಾಗುವುದು. ಇರಾವತಿಯು ಬರಬಹುದೆಂಬ ಭಯವು ವಿದೂಷಕನಿಗಿದ್ದರೂ ದೊರೆಗೆ ಯಾವುದೂ ಲಕ್ಷ್ಯವೇ ಇಲ್ಲ. ಮಾಲವಿಕೆಯನ್ನೇ ನೋಡುತ್ತ, ವರ್ಣಿಸುತ್ತ ಮರೆಯಲ್ಲಿ ನಿಂತಿರುವನು.

ಇಷ್ಟು ಹೊತ್ತಿಗೆ ಇರಾವತಿಯು ಮದ್ಯಪಾನದಿಂದ ಉನ್ಮತ್ತಳಾಗಿ ದಾಸಿ ನಿಪುಣಿಕೆಯೊಡನೆ ಅಲ್ಲಿಗೆ ಬರುವಳು. ಅಲಂಕೃತಳಾದ ಮಾಲವಿಕೆಯೂ, ಬಕುಳಾವಳಿಕೆಯೂ ಮೊದಲು ಕಣ್ಣಿಗೆ ಬೀಳುವರು. ಮಾಲವಿಕೆಯ ಅಲಂಕಾರವು ಇವರನ್ನು ವಿಸ್ಮಯಗೊಳಿಸುವುದು. ಧಾರಿಣಿಯು ಈ ಪರಿಚಾರಿಕೆಯನ್ನು ಇಷ್ಟೇಕೆ ಗೌರವಿಸುವಳೆಂದು ಯೋಚಿಸುತ್ತ ಉಯ್ಯಾಲೆ

ಮನೆಯ ಬಳಿ ನಿಲ್ಲುವರು. ಬಕುಳಾವಳಿಕೆಯು ಮಾಲವಿಕೆಯೊಡನೆ ಮಾತು ಬೆಳೆಸುವಳು. ಮೊದಲು ಇವರ ಪ್ರಣಯವನ್ನು ಕುರಿತು ವ್ಯಂಗ್ಯರೀತಿಯಲ್ಲಿ ಹಾಸ್ಯಮಾಡಲೆಳಸಿ ಕ್ರಮವಾಗಿ ಮಾಲವಿಕೆಯ ಮನಸ್ಸನ್ನು ಅರಿಯುವಳು. ಅನಂತರ, ತಾನು ಅಗ್ನಿಮಿತ್ರನ ಕಡೆಯವಳಾಗಿ ಪ್ರಣಯವೃತ್ತಾಂತವನ್ನು ಮುಂದುವರಿಸುತ್ತಿದ್ದುದು, ದೇವಿ ಧಾರಿಣಿಯು ಪ್ರತಿಬಂಧಕವನ್ನು ತರುತ್ತಿದ್ದುದು ಮೊದಲಾಗಿ ಎಲ್ಲವನ್ನೂ ಅವಳಿಗೆ ವಿವರಿಸುವಳು. ಈ ಕತೆಯೆಲ್ಲವನ್ನೂ ಒಂದು ಕಡೆ ಇರಾವತಿ ನಿಪುಣಿಕೆಯರೂ ಇನ್ನೊಂದು ಕಡೆ ದೊರೆ ವಿದೂಷಕರೂ ಕೇಳುತ್ತಿರುವರು. ಒಬ್ಬರ ಅರಿವು ಇನ್ನೊಬ್ಬರಿಗಿಲ್ಲ. ದೊರೆಯ ಉತ್ಸಾಹ ಪ್ರೇಮಗಳು ಮುಗಿಲುಮುಟ್ಟುವುವು ಪ್ರೇಯಸಿಯನ್ನು ಪ್ರತ್ಯಕ್ಷವಾಗಿ ಕಾಣಲು ಅವನು ಸಮಯವನ್ನು ನಿರೀಕ್ಷಿಸುತ್ತಿರುವಾಗ ವಿದೂಷಕನು ಒಂದು ಉಪಾಯ ಹೂಡುವನು. "ದೊರೆಯು ಹತ್ತಿರದಲ್ಲಿರುವಾಗಲೇ ಅಶೋಕವನ್ನು ನೀನು ಎಡಗಾಲಿನಿಂದ ಒದೆಯಬಹುದೆ?" ಎಂದು ಪ್ರಶ್ನಿಸುತ್ತ ಅವರ ಮುಂದೆ ದೊರೆಯನ್ನು ಕರೆತರುವನು. ಬಕುಳಾವಳಿಕೆಯು ದೇವಿಯ ಅಪ್ಪಣೆಯಿಂದ ಅದು ನಡೆಯಿತೆಂದು ತಿಳಿಸುವಳು. ಕ್ಷಮಾಪಣೆಗಾಗಿ ಇಬ್ಬರೂ ನಮಸ್ಕರಿಸಲು ಅಗ್ನಿಮಿತ್ರನು ಕೈಹಿಡಿದೆಬ್ಬಿಸುವನು. ಇರಾವತಿ, ನಿಪುಣಿಕೆಯರಿಗೆ ಇವರ ವೃತ್ತಾಂತವೆಲ್ಲ ತಿಳಿದು ಅವಳು ಕಿಡಿ ಕಿಡಿಯಾಗುತ್ತಿರುವಳು. ಕಡೆಗೆ, ಮಾಲವಿಕೆಯೊಡನೆ ದೊರೆಯ ಮಾತು ತಕ್ಕಮಟ್ಟಿಗೆ ಪ್ರಣಯ ಪುರಸ್ಸರವಾಗಿ ಮುಂದುವರಿಯುವುದನ್ನೇ ಕಾದಿದ್ದು ತಟ್ಟನೆ ಇರಾವತಿ ಅವರಿಗೆ ಕಾಣಿಸಿಕೊಳ್ಳುವಳು. ಬರುತ್ತಲೇ ಇವನನ್ನು ಚೆನ್ನಾಗಿ ಬೈದು ವ್ಯಂಗ್ಯವಾಗಿ ಅವಹೇಳನ ಮಾಡುವಳು. ಬಕುಳಾವಳಿಕೆ ಮಾಲವಿಕೆಯರು ಕೂಡಲೆ ಹೊರಡುವರು. ದೊರೆ ವಿದೂಷಕರು ಒಡವೆ ಸಮೇತ ಸಿಕ್ಕಿಬಿದ್ದ ಕಳ್ಳರಂತಾಗುವರು. ಏನು ಹೇಳುವುದಕ್ಕೂ ತೋರದು. ಆದರೂ ವಿದೂಷಕನ ಸಲಹೆಯಮೇರೆ ಕೆಲವು ಕುಂಟು ನೆಪಗಳನ್ನು ಅವಳ ಮುಂದಿಡುತ್ತ ಸಮಾಧಾನಪಡಿಸಲು ಯತ್ನಿಸುವನು. "ನೀನು ಬರುವುದು ತಡವಾದ್ದರಿಂದ ಇವಳೊಡನೆ ಸ್ವಲ್ಪವಿನೋದವಾಡಿದೆ, ಅಷ್ಟೆ?" ಎಂದು ಮೊದಲಾದ ದೊರೆಯ ಹೇಳಿಕೆ ವ್ಯರ್ಥವಾಗುವುದು. ಕಳಚಿಹೋದ ಗೊಲಸಿನಿಂದ ದೊರೆಯನ್ನು ಹೊಡೆಯುವುದಕ್ಕೇ ಹೋಗು

ವಳು. ಕಾಲಿಗೆಬಿದ್ದರೂ ಸಮಾಧಾನಗೊಳ್ಳದೆ ಕುಪಿತಳಾಗಿಯೇ ದುಡ ದುಡನೆ ಹೊರಟು ಹೋಗುವಳು. ವಿದೂಷಕನು ರಾಜನನ್ನೆಬ್ಬಿಸಿ ಬೇರೆ ಕಡೆಗೆ ಕರೆದೊಯ್ಯುವನು.

## ನಾಲ್ಕನೆಯ ಅಂಕ

ಮೂರು ದಿವಸದ ಮೇಲೆ ಅಗ್ನಿಮಿತ್ರನು ಮಾಲವಿಕಾವೃತ್ತಾಂತ ವನ್ನು ತಿಳಿಯುವುದಕ್ಕಾಗಿ ವಿದೂಷಕನನ್ನು ಕಳುಹಿಸುವನು. ಈ ಮಧ್ಯೆ ಕಾಮಾರ್ತನಾಗಿ ಮೈಮರೆತು ಒಂದು ಸಲ ಎದುರಿಗಿದ್ದ ಪ್ರತಿಹಾರಿಯನ್ನೇ, ಗೌತಮನೆಂದು ಭ್ರಮಿಸುವನು. ಪ್ರತಿಹಾರಿಯು ಅವನನ್ನು ಎಚ್ಚರ ಗೊಳಿಸುವ ವೇಳೆಗೆ ವಿದೂಷಕನೂ ಹಿಂತಿರುಗುವನು. ಪ್ರತೀಹಾರಿಯನ್ನು ಕಳುಹಿಸಿ ಮಾಲವಿಕೆಯ ಸ್ಥಿತಿಯನ್ನೆಲ್ಲ ವಿಶದವಾಗಿ ತಿಳಿಸುವನು. ಇರಾವತಿಯು ಇವರಿಬ್ಬರ ಪ್ರಣಯವೃತ್ತಾಂತವನ್ನೆಲ್ಲ ಧಾರಿಣಿಗೆ ತಿಳಿಸಿ ಅವಳನ್ನೂ ಬಕುಳಾವಳಿಕೆಯನ್ನೂ ನೆಲಮಾಳಿಗೆಯಲ್ಲಿ ಬಂಧಿಸಿದ್ದು; ನಾಗಮುದ್ರೆಯ ಉಂಗುರವನ್ನು ತೋರಿಸಿದಲ್ಲದೆ ಅವರನ್ನು ಬಿಡುಗಡೆ ಮಾಡಕೂಡದೆಂದು ಧಾರಿಣಿ ಅಪ್ಪಣೆಮಾಡಿ ಮಾಧವಿಕೆಯನ್ನು ಕಾವಲಿರಿ ಸಿದ್ದು; ಎಲ್ಲವನ್ನೂ ವಿದೂಷಕನು ತಿಳಿಸಲಾಗಿ ದೊರೆಯು ನಿರಾಶ ನಾಗುವನು. ಕಡೆಗೆ ಬಹಳ ಯೋಚಿಸಿ ವಿದೂಷಕನು ಮತ್ತೊಂದು ಉಪಾಯವನ್ನು ಸೂಚಿಸುವನು. ದೊರೆಯು ಸ್ವಲ್ಪ ಧೈರ್ಯಗೊಂಡು ಸಮ್ಮತಿ ಕೊಡುವನು. ಪ್ರತಿಹಾರಿಯು ಬಂದು ಧಾರಿಣಿಯ ಯೋಗ ಕ್ಷೇಮವನ್ನು ತಿಳಿಸಲಾಗಿ ಅವಳನ್ನು ನೋಡುವುದಕ್ಕಾಗಿ ಅಗ್ನಿಮಿತ್ರನು ಹೊರಡುವನು. ಧಾರಿಣಿಯ ಕಾಲುನೋವು ವಾಸಿಯಾಗುತ್ತಿತ್ತು. ದೊರೆಯು ಕುಶಲಪ್ರಶ್ನೆ ಮಾಡುತ್ತಿದ್ದಾಗಲೇ ಯಜ್ಞೋಪವೀತದಿಂದ ಹೆಬ್ಬೆರಳನ್ನು ಸುತ್ತಿಕೊಂಡು ಗಾಬರಿಯಿಂದ ವಿದೂಷಕನು ಓಡಿಬರುವನು. "ಅಯ್ಯೋ! ನನ್ನನ್ನು ಹಾವು ಕಚ್ಚಿತು, ಬದುಕಿಸಿ, ಬದುಕಿಸಿ" ಎಂದು ಅರಚುವನು. ಕೌಶಿಕಿಯು ಚಿಕಿತ್ಸೆಯನ್ನು ಸೂಚಿಸಿದರೂ ದೊರೆಯು ಧ್ರುವಸಿದ್ಧಿಯೆಂಬ ವೈದ್ಯನನ್ನು ಕರೆಕಳುಹಿಸುವನು. ವಿದೂಷಕನು ಬಹಳ ವೇದನೆಪಟ್ಟಂತೆ ನಟಿಸಿ, ಸಾಯುವುದೇ ನಿಶ್ಚಯವೆಂದು ಭಾವಿಸಿ

ದವನಂತೆ ತನ್ನ ಉಯಿಲಿನ ಕ್ರಮವನ್ನೂ ದೊರೆಗೆ ವಿವರಿಸುವನು. ಆಗ ಉದಕುಂಭ ವಿಧಿಯಿಂದ ಸರ್ಪಮುದ್ರೆಯನ್ನು ಚಿಕಿತ್ಸೆಗಾಗಿ ಹಾಕ ಬೇಕೆಂದು ಧ್ರುವಸಿದ್ಧಿಯು ಹೇಳಿ ಕಳುಹಿಸುವನು. ತನ್ನ ನಿಮಿತ್ತವಾಗಿ ಬ್ರಾಹ್ಮಣನು ಸತ್ತುಹೋಗುವನಲ್ಲ ಎಂದು ಕಾತರಳಾಗಿ ಧಾರಿಣಿಯು ಒಡನೆಯೇ ಸರ್ಪಮುದ್ರೆಯ ಉಂಗುರವನ್ನು ತೆಗೆದುಕೊಡುವಳು. ಅದನ್ನು ಕೊಂಡೊಯ್ದು ಜಯಸೇನೆಯು ಗೌತಮನಿಗೆ ಗುಣವಾದುದನ್ನು ತಿಳಿಸಲು ಧಾರಿಣಿಯ ಬಳಿಗೆ ಹಿಂತಿರುಗುವಳು.

ಅಗ್ನಿಮಿತ್ರನು ವಾಹತಕನೆಂಬ ಮಂತ್ರಿಯೊಡನೆ ರಾಜಕಾರ್ಯವನ್ನು ಚರ್ಚಿಸುವುದಕ್ಕೆಂದು ಹೊರಟು ಗುಪ್ತ ಮಾರ್ಗದಿಂದ ಪ್ರಮದವನದ ಕಡೆಗೆ ಹೊರಡುವನು. ಎದುರಿಗೆ ಜಯಸೇನೆಯು ಸಿಕ್ಕಿ ವಿದೂಷಕನ ಕೆಲಸ ಕೈಗೂಡಿತೆಂದು ಹೇಳುವಳು. ವಿದೂಷಕನೂ ಕೂಡಲೆ ಬಂದು ಜಯ ಸೇನೆಯನ್ನು ಹಿಂದಕ್ಕೆ ಕಳುಹಿಸಿ ಸರ್ಪಮುದ್ರೆಯನ್ನು ಮಾಧವಿಕೆಗೆ ತೋರಿಸಿದ್ದು; ಧಾರಿಣಿಯ ಪರಿಚಾರಿಕೆ ತರಬೇಕಾಗಿದ್ದ ಮುದ್ರೆಯುಂಗುರ ವನ್ನು ಇವನು ತಂದು ಮಾಲವಿಕೆಯ ಬಿಡುಗಡೆಯನ್ನಪೇಕ್ಷಿಸುವುದನ್ನು ಕಂಡು ಅವಳಿಗೂ ಸ್ವಲ್ಪ ಸಂಶಯವುಂಟಾದ್ದು; ಕೂಡಲೆ ಇವನು ಸಮ ರ್ಥಕವಾಗಿ ತೋರುವಂತೆ ಒಂದು ಕತೆಕಟ್ಟಿ ಅವಳನ್ನು ಒಪ್ಪಿಸಿದ್ದು; ಮಾಲವಿಕೆ ಬಕುಳಾವಳಿಕೆಯರ ಬಿಡುಗಡೆಯಾದದ್ದು; ಎಲ್ಲವನ್ನೂ ವಿಶದವಾಗಿ ತಿಳಿಸಲಾಗಿ ಅಗ್ನಿಮಿತ್ರನು ವಿದೂಷಕನ ನೈಪುಣ್ಯವನ್ನು ವಿಶೇಷ ವಾಗಿ ಶ್ಲಾಘಿಸುವನು. ಇಬ್ಬರೂ ಸಮುದ್ರಗೃಹವೆಂಬ ಸಂಕೇತಸ್ಥಾನಕ್ಕೆ ಹೊರಡುವರು. ಈಗಲೂ ತೊಂದರೆ ತಪ್ಪುವುದಿಲ್ಲ. ಇರಾವತಿಯ ಪರಿ ಚಾರಿಕೆ ಚಂದ್ರಿಕೆಯು ಎದುರಾಗಲಾಗಿ ಇಬ್ಬರೂ ಗೋಡೆಯ ಪಕ್ಕದಲ್ಲಿ ಅವಿತುಕೊಳ್ಳುವರು. ಇತ್ತ ಬಕುಳಾವಳಿಕೆಯು ಮಾಲವಿಕೆಗೆ ಅಗ್ನಿ ಮಿತ್ರನ ಚಿತ್ರವನ್ನು ತೋರಿಸಿ ಅವಳ ಆಶಯವನ್ನು ಪರೀಕ್ಷಿಸುತ್ತಿದ್ದುದೂ ಮಾಲವಿಕೆಯು ಚಿತ್ರದಲ್ಲಿನ ಅಗ್ನಿಮಿತ್ರನ ಇರಾವತೀಪ್ರೇಕ್ಷಣವನ್ನು ನೋಡಿ ಅಸೂಯೆಪಡುವುದೂ ಇವರ ಗಮನಕ್ಕೆ ಬರುವುದು. "ಈಗ ಅವಳನ್ನು ಸಮಾಧಾನಗೊಳಿಸಲು ಸಿದ್ಧನಾಗು" ಎಂದು ಹೇಳಿ ವಿದೂ ಷಕನು ಅಗ್ನಿಮಿತ್ರನನ್ನು ಅವಳೆದುರಿಗೆ ನಿಲ್ಲಿಸಿ ಬಕುಳಾವಳಿಕೆಯೊಡನೆ

ಹೊರಗೆ ಬಂದು ನಿಲ್ಲುವನು. ಹೀಗೆ ನಾಯಕ ನಾಯಿಕೆಯರ ರಹಃಕೇಲಿಗೆ ಅವಕಾಶವಾಗುವುದು.

ಇಷ್ಟರಲ್ಲಿ 'ಹಾವು ಕಡಿದು ಚೇತರಿಸಿಕೊಳ್ಳುತ್ತಿರುವ' ವಿದೂಷಕನನ್ನು ನೋಡುವುದಕ್ಕೆಂದು ಇರಾವತಿ ಬರುವಳು. ಹಾಗೆಯೇ ಹಿಂದೆ ಅಗ್ನಿಮಿತ್ರನನ್ನು ತಿರಸ್ಕರಿಸಿದ್ದ ಪಾಪವನ್ನು ಕಳೆಯುವುದಕ್ಕಾಗಿ ಸಮುದ್ರಗೃಹದಲ್ಲಿದ್ದ ಅವನ ಚಿತ್ರಕ್ಕೆ ಕ್ಷಮಾಪಣೆಯನ್ನು ಸಲ್ಲಿಸುವುದೂ ಅಭಿಪ್ರಾಯದಲ್ಲಿತ್ತು. 'ದಾರಿಯಲ್ಲೇ ನಿದ್ರಿಸುವ ಗೂಳಿಯಂತೆ' ವಿದೂಷಕನು ನಿದ್ರಿಸುತ್ತಿದ್ದುದು ಗೋಚರವಾಗುವುದು. ಹಾಗೆ ನೋಡುತ್ತಿರುವಷ್ಟರಲ್ಲೇ ಇವನು ಮಾಲವಿಕೆಯನ್ನು ಕುರಿತು ಕನವರಿಸಿಕೊಳ್ಳುವನು. ಇರಾವತಿ ನಿಪುಣಿಕೆಯರಿಗೆ ಇದನ್ನು ನೋಡಿ ಕೋಪ ಬರುವುದು. "(ಮಾಲವಿಕೆ,) ನೀನು ಇರಾವತಿಯನ್ನು ಮೀರಿಸು" ಎಂಬ ಕನವರಿಕೆಯ ಮಾತನ್ನು ಕೇಳಿದಾಗಲಂತು ಅವಳ ದ್ವೇಷ ಮಿತಿಮೀರುವುದು. ಇಬ್ಬರೂ ಬಂದು ಕಂಬದ ಮಗ್ಗುಲಲ್ಲಿ ಸರಿದು ನಿಂತು ನಿದ್ರಿತನಾಗಿದ್ದ ವಿದೂಷಕನ ಮೇಲೆ ಒಂದು ದೊಣ್ಣೆಯನ್ನು ಎಸೆಯುವರು. ವಿದೂಷಕನು ಎಚ್ಚರಗೊಂಡು "ಅಯ್ಯೋ! ಅಯ್ಯೋ! ಹಾವು ಬಿತ್ತು ನನ್ನ ಮೇಲೆ" ಎನ್ನುವನು. ಕೂಡಲೆ ದೊರೆಯು ಓಡಿಬಂದು 'ಮಿತ್ರ, ಹೆದರಬೇಡ, ಹೆದರಬೇಡ' ಎನ್ನುವನು. ಮಾಲವಿಕೆಯೂ ಅನುಸರಿಸಿ ಬಂದು 'ಪ್ರಿಯ, ಹಿಂದುಮುಂದು ನೋಡದೆ ಹೋಗುವುದು ಬೇಡ; ಹಾವಿರಬೇಕೆಂದು ಹೇಳಲಾಗಿದೆ' ಎನ್ನುವಳು. ದೊರೆಯು ಇರಾವತಿಯ ಕಣ್ಣಿಗೆ ಬೀಳುವನು. ವಿದೂಷಕನಿಗೆ ಎಚ್ಚರವಾಗಿ ಹಾವಲ್ಲ, ದೊಣ್ಣೆ ತನ್ನ ಮೇಲೆ ಬಿದ್ದದ್ದು ಎಂದು ತಿಳಿಯುವುದು. ಇದುವರೆಗೆ ನಿಗೂಢವಾಗಿ ನಡೆದಿದ್ದೆಲ್ಲ ಎಲ್ಲಿ ಇರಾವತಿಗೆ ತಿಳಿಯುವುದೋ ಎಂದು ಹೆದರಿ ಬಕುಳಾವಳಿಕೆ ದೊರೆಯನ್ನು ಹಿಂದಕ್ಕೆ ಸಮುದ್ರಗೃಹಕ್ಕೆ ಕಳುಹಿಸಲು ಯತ್ನಿಸುವಳು. ಯಾವುದೂ ಸಾಧ್ಯವಾಗದೆ ದೊರೆಯು ಪುನಃ ಇರಾವತಿಯ ಬೈಗಳ ಮಳೆಗೆ ಸಿಕ್ಕಿಬೀಳುವನು. ಇರಾವತಿಯು ತನ್ನ ಕೆಲಸವನ್ನು ಚೆನ್ನಾಗಿ ನೆರವೇರಿಸಿ ಎಲ್ಲವನ್ನೂ ಧಾರಿಣಿಗೆ ತಿಳಿಸುವುದಕ್ಕಾಗಿ ನಿಪುಣಿಕೆಯನ್ನು ಕಳುಹಿಸುವಳು. ಇವಳ ಕೈಯಿಂದ ಹೇಗೆ ಪಾರಾಗುವುದೋ? ಎಂದು ಅಗ್ನಿಮಿತ್ರನು ಯೋಚಿಸುತ್ತಿರುವಷ್ಟರಲ್ಲಿ ವಸುಲಕ್ಷ್ಮಿಗೆ ಜ್ಞಾನತಪ್ಪಿದ್ದ

ವರ್ತಮಾನ ಇವರನ್ನು ಮುಟ್ಟುವುದು. ಅವಳು ಆಡುತ್ತಿದ್ದಾಗ ಕೋತಿಯೊಂದು ಹೆದರಿಸಿತೆಂದೂ ಅದರಿಂದ ಅವಳಿಗೆ ಜ್ಞಾನತಪ್ಪಿದ್ದಿತೆಂದೂ ಜಯಸೇನೆಯು ತಿಳಿಸುವಳು. ಅಗ್ನಿಮಿತ್ರನು ಗಾಬರಿಗೊಳ್ಳಲಾಗಿ, ಬೇಗ ಹೋಗಿ ಅವಳನ್ನು ಸಮಾಧಾನಪಡಿಸಬೇಕೆಂದು ಇರಾವತಿ ಹೇಳುವಳು. ಹೀಗೆ ತಮ್ಮಿಬ್ಬರನ್ನೂ ಪಾರುಮಾಡಿದ ತನ್ನ 'ತಮ್ಮ'ನಾದ ಕೋತಿಯನ್ನು ವಿದೂಷಕನು ಅಭಿನಂದಿಸುವನು.

ಧಾರಿಣಿಯು ಯಾವ ಉಗ್ರಶಿಕ್ಷೆಯನ್ನು ವಿಧಿಸುವಳೋ ಎಂದು ಮಾಲವಿಕೆಗೂ ಬಹಳ ಭಯ. ಅಷ್ಟರಲ್ಲಿ "ದೋಹದವನ್ನು ನಡೆಸಿದ ಐದು ದಿನಗಳೊಳಗೇ ಅಶೋಕವು ಹೂ ಬಿಟ್ಟಿರುವುದೆಂಬ ಕೂಗು ಕೇಳಿಬರುವುದು. ಧಾರಿಣಿಯು ಸತ್ಯ ಪ್ರತಿಜ್ಞಳಾದ್ದರಿಂದ ಹೆಚ್ಚು ಆತಂಕಪಡಬೇಕಾಗಿಲ್ಲವೆಂದು ಸಮಾಧಾನಗೊಂಡು ಮಾಲವಿಕೆಯು ಅವಳನ್ನು ನೋಡುವುದಕ್ಕೆ ಹೊರಡುವಳು. ಪ್ರಮುದವನದ ಕಾವಲುಗಾತಿಯನ್ನೂ ಜೊತೆಯಲ್ಲೇ ಕರೆದುಕೊಂಡು ಹೋಗುವಳು.

## ಐದನೆಯ ಅಂಕ

ಧಾರಿಣಿಯ ಅಪ್ಪಣೆಯಂತೆ ಮಧುಕರಿಕೆಯು ಹೊನ್ನಿನ ಅಶೋಕಕ್ಕೆ ವೇದಿಕೆಯನ್ನು ಸಿದ್ಧಪಡಿಸುತ್ತಿರುವಾಗ ಅಂತಃಪುರದ ಕುಬ್ಜಸಾರಸಿಕನು ಅವಳನ್ನು ಸಂಧಿಸುವನು. ತನ್ನ ಕೆಲಸವನ್ನು ತಿಳಿಸುತ್ತ ವೀರಸೇನನು ವಿದರ್ಭರಾಜನನ್ನು ಸೋಲಿಸಿದ ನಿಮಿತ್ತ ಮಾಧವಸೇನನ ಬಿಡುಗಡೆಯಾಗಿರುವುದನ್ನೂ ತಿಳಿಸುವನು. ಇದಕ್ಕಾಗಿ ಮಾಧವಸೇನನು ಅಗ್ನಿಮಿತ್ರನಿಗೆ ರತ್ನವಾಹನ ಶಿಲ್ಪಕಾರಿಕಾದಿ ಕಾಣಿಕೆಯನ್ನೂ ಕಳುಹಿಸಿದ್ದನಂತೆ.[1]

ಅಶೋಕವು ಹೂ ಬಿಟ್ಟಿದನ್ನು ದೊರೆಯೊಡನೆಯೇ ನೋಡಬೇಕೆಂದೆಳಸಿ ಧಾರಿಣಿಯು ಪ್ರತಿಹಾರಿಯ ಮೂಲಕ ಆಹ್ವಾನವಿತ್ತಿದ್ದಳು. ಅಗ್ನಿಮಿತ್ರನಿಗೆ ಒಂದು ಕಡೆ ವಿದರ್ಭನನ್ನು ಜಯಿಸಿದ್ದಕ್ಕಾಗಿ ಸಂತೋಷವಾದರೆ ಮತ್ತೊಂದು ಕಡೆ ಮಾಲವಿಕೆಯು ಸಿಕ್ಕದಿದ್ದುದಕ್ಕಾಗಿ ವ್ಯಥೆ.

---

1. ಇದು ಪ್ರವೇಶಕ.

ಮಾಲವಿಕೆಗೆ ವಿವಾಹದ ಉಡುಪನ್ನು ತೊಡಿಸಬೇಕೆಂದು ಧಾರಿಣಿಯು ಕೌಶಿಕಿಗೆ ಆಜ್ಞೆ ಮಾಡಿದ್ದಳು. ಇದನ್ನು ಹೇಗೊ ವಿದೂಷಕನು ತಿಳಿದುಕೊಂಡು ದೊರೆಯನ್ನು ಸಮಾಧಾನಪಡಿಸುತ್ತಿದ್ದನು. ಪರಿಜನರೊಡನೆ ಅಶೋಕದ ಸಮೀಪದಲ್ಲಿ ಕಾದಿದ್ದ ಧಾರಿಣಿಯನ್ನು ನೋಡಲು ಅಗ್ನಿಮಿತ್ರನು ಹೊರಡುವನು.

ಅಲಂಕೃತಳಾದ ಮಾಲವಿಕೆಯನ್ನು ನೋಡುತ್ತ ಅಗ್ನಿಮಿತ್ರನ ಕುತೂಹಲ ಹೆಚ್ಚುವುದು. ಈ ವೇಳೆಗೆ ಕಂಚುಕಿ ಬಂದು ಮಂತ್ರಿಯ ಬಿನ್ನಹವನ್ನು ತಿಳಿಸುವನು. "ವಿದರ್ಭರಾಜನ ಕಾಣಿಕೆಗೆ ಸೇರಿದ್ದ ಇಬ್ಬರು ಶಿಲ್ಪಿಕಾರಿಕೆಯರು ಮಾರ್ಗಾಯಾಸದಿಂದ ಅಸ್ವಸ್ಥರಾಗಿದ್ದುದರಿಂದ ಮೊದಲು ಅವರನ್ನು ದೊರೆಯಬಳಿಗೆ ಕಳುಹಿಸಿರಲಿಲ್ಲ. ಈಗ ಅವರು ವಿಶ್ರಮಿಸಿಕೊಂಡು, ಬರಲು ಸಿದ್ಧರಾಗಿರುವರು" ಎಂದು ಕೇಳಿ ಅವರನ್ನು ಬರಮಾಡಲು ಅಪ್ಪಣೆಯಾಗುವುದು. ಇಬ್ಬರೂ ಸಂಗೀತದಲ್ಲಿ ನಿಪುಣೆಯರು. "ಇವರಲ್ಲಿ ಬೇಕಾದ ಒಬ್ಬಳನ್ನು ಸ್ವೀಕರಿಸು" ಎಂದು ಅಗ್ನಿಮಿತ್ರನು ಧಾರಿಣಿಗೆ ಹೇಳುವನು. ಅವಳು ಆಯುವ ಜವಾಬ್ದಾರಿಯನ್ನು ಮಾಲವಿಕೆಗೆ ವಹಿಸುವಳು. ಆಗ ಅವರಿಬ್ಬರೂ ಮಾಲವಿಕೆಯನ್ನು ನೋಡಿ ಆಶ್ಚರ್ಯದಿಂದ "ಓಹೊ! ನಮ್ಮ ರಾಜಕುಮಾರಿ" ಎಂದು ಜಯಕಾರದೊಡನೆ ನಮಸ್ಕರಿಸುವರು. ಮಾಲವಿಕೆಯೇ ಮಾಧವಸೇನನ ತಂಗಿ; ಮಾಧವಸೇನನು ತನ್ನ ದಾಯಾದಿಯ ಕೈವಶವಾದಾಗ ಅವನ ಮಂತ್ರಿ ಆರ್ಯಸುಮತಿಯು ಇವಳನ್ನು ಗುಟ್ಟಾಗಿ ಕರೆದೊಯ್ದನೆಂದು ಅವರಿಂದ ತಿಳಿಯುವುದು. ಕೌಶಿಕಿಯು ಮುಂದಿನ ವೃತ್ತಾಂತವನ್ನೆಲ್ಲ ವಿವರಿಸುವಳು. ಶಿಲ್ಪಿಕಾರಿಕೆಯರು ಇವಳನ್ನೂ ಕೂಡಲೆ ಗುರ್ತಿಸುವರು. ಮಾಧವಸೇನನ ಮಂತ್ರಿಯು ತನ್ನ ಅಣ್ಣನೆಂದು ಹೇಳಿ, ಮಾಲವಿಕೆಯನ್ನು ರಕ್ಷಿಸುವುದಕ್ಕಾಗಿ ಅವನು ಮಡಿದುದನ್ನೂ ಅನಂತರ ಇಬ್ಬರಿಗೂ ಜ್ಞಾನತಪ್ಪಿದ್ದುದೂ, ಎಚ್ಚೆತ್ತ ಮೇಲೆ ತಾನು ಮಾಲವಿಕೆಯನ್ನು ಕಾಣದೆ ವಿದಿಶೆಗೆ ಬಂದು ಕಾಷಾಯ ಧರಿಸಿದುದೂ, ಮೊದಲಾಗಿ ಎಲ್ಲವನ್ನೂ ಕೌಶಿಕಿಯು ಹೊರಗೆಡಹುವಳು. ಆಗಲೇ ಮಾಲವಿಕೆಯು ವೀರಸೇನನ ಕೈಸೇರಿ ಧಾರಿಣಿಯ ಬಳಿ ಬಿಡ

ಲ್ಪಟ್ಟಿದ್ದಳೆಂದು ಗೊತ್ತಾಗುವುದು. ಇದನ್ನೆಲ್ಲ ಮೊದಲೇ ತಿಳಿಸದಿದ್ದುದಕ್ಕೆ ಸಿದ್ಧಾದೇಶವೇ ಕಾರಣವೆಂದು ದೊರೆಯ ಆಕ್ಷೇಪಣೆಗೆ ಸಮಾಧಾನ ಹೇಳುವಳು.

ಅಗ್ನಿಮಿತ್ರನು ಬಹಳ ಸಂತೋಷಪಟ್ಟು ಆಗತಾನೆ ಗಳಿಸಿದ್ದ ವಿದರ್ಭ ರಾಜ್ಯವನ್ನು ಯಜ್ಞಸೇನ ಮಾಧವಸೇನರಿಗೆ ಹಂಚಿ, ವೀರಸೇನನಿಗೆ ನಿರೂಪವನ್ನು ಕಳುಹಿಸುವನು. ಈ ವೇಳೆಗೆ ಸರಿಯಾಗಿ ತಂದೆ ಪುಷ್ಯಮಿತ್ರನಿಂದಲೂ ಪತ್ರ ಬಂದಿರುವುದು. ಅಶ್ವಮೇಧಕ್ಕಾಗಿ ಬಿಟ್ಟಿದ್ದ ಕುದುರೆಯನ್ನು ಕುಮಾರ ವಸುಮಿತ್ರನು ರಕ್ಷಿಸಿ ಶತ್ರುಗಳನ್ನು ಜಯಿಸಿದ್ದನೆಂದೂ ಯಾಗಕ್ಕಾಗಿ ಎಲ್ಲರೂ ಬರಬೇಕೆಂದೂ ಆಹ್ವಾನವಿತ್ತು. ಪುತ್ರವಿಜಯ ವೃತ್ತಾಂತದಿಂದ ಆನಂದಗೊಂಡು ಅಗ್ನಿಮಿತ್ರನು ಸರ್ವಬಂಧ ಮೋಕ್ಷವನ್ನಪ್ಪಣೆ ಮಾಡುವನು.

ಧಾರಿಣಿಯು ಅಶೋಕ ದೋಹದ ಕಾಲದಲ್ಲಿ ತಾನು ಮಾಡಿದ್ದ ವಾಗ್ದಾನವನ್ನು ಸಲ್ಲಿಸಬೇಕಾಗಿದೆಯೆಂದೂ ಮಾಲವಿಕೆಯು ರಾಜಕುಮಾರಿಯೆಂಬುದು ತಿಳಿದುದರಿಂದ ಅವಳನ್ನು ಅಗ್ನಿಮಿತ್ರನಿಗೆ ಮದುವೆ ಮಾಡಿಸಿ ವಾಗ್ದಾನವನ್ನು ಪೂರ್ತಿಗೊಳಿಸಲು ಸಹಾಯ ಮಾಡಬೇಕೆಂದೂ ಇರಾವತಿಗೆ ಹೇಳಿಕಳುಹಿಸುವಳು. ಎಲ್ಲರ ಒಪ್ಪಿಗೆಯ ಮೇಲೆ ಮಾಲವಿಕೆ ಅಗ್ನಿಮಿತ್ರರ ವಿವಾಹವಾಗುವುದು. ಕೌಶಿಕಿಯು ಧಾರಿಣಿಯ ಪತಿಭಕ್ತಿ ವಾತ್ಸಲ್ಯಗಳನ್ನು ಸ್ತುತಿಸುವಳು. ಇರಾವತಿಯು ಅಗ್ನಿಮಿತ್ರನ ಕ್ಷಮಾಪಣೆ ಬೇಡುವಳು.

ಇದು ಕಥೆಯ ಸಂಗ್ರಹವಾದ ಅನುವಾದ. ಮಧ್ಯೆಮಧ್ಯೆ ಕೆಲವು ವಿವರಗಳನ್ನು ಬಿಡಬೇಕಾಗಿದೆ. ಇದಕ್ಕೆ ಸಂಗ್ರಹಗೊಳಿಸುವ ಉದ್ದೇಶವಲ್ಲದೆ ಮತ್ತೊಂದು ಕಾರಣವೂ ಇದೆ. ಮಾಲವಿಕಾಗ್ನಿಮಿತ್ರದಲ್ಲಿನ ಕೆಲವು ಭಾಗಗಳು ಅನುವಾದ ಮಾಡಲಾಗದಷ್ಟು ಉತ್ಕಟ ಸಂಭೋಗ ಶೃಂಗಾರದಿಂದ ಕೂಡಿವೆ. ಆದುದರಿಂದ ಆಧುನಿಕ ಅಭಿರುಚಿ (taste)ಗೆ ಅವು ಸರಿಹೊಂದುವುದಿಲ್ಲ. ಆಗಿನ ಕಾಲದಲ್ಲಿ ಅನೇಕರು ಇವನ್ನು ಮೆಚ್ಚಿದಿರಬಹುದು. ಈಗಲೂ ಕೆಲವರ ಆದರಕ್ಕೆ ಇವು ಪಾತ್ರವಾಗಬಹುದು.

ಆದರೆ ಸುಸಂಸ್ಕೃತ ಸಾಹಿತ್ಯ ವಿಮರ್ಶಕರ ಅಭಿಪ್ರಾಯದಲ್ಲಿ ಈ ಭಾಗಗಳು ಕಾಳಿದಾಸನಿಗೆ ಕೀರ್ತಿತರುವಂಥವಲ್ಲ.[1]

ಮಾಲವಿಕಾಗ್ನಿಮಿತ್ರದ ಕಥಾವಸ್ತುವು ಶಾಕುಂತಳ, ವಿಕ್ರಮೋರ್ವಶೀಯ ಇವುಗಳ ವಸ್ತುಗಳಂತೆ ಪೌರಾಣಿಕವಲ್ಲ. ಮುಖ್ಯಭಾಗಗಳು ಐತಿಹಾಸಿಕವಾಗಿಯೂ ವಿವರಗಳು ಬಹುಶಃ ಕವಿಕಲ್ಪಿತವಾಗಿಯೂ ಇವೆ. ಮೇಲೆ ಹೇಳಿದಂತೆ ರಾಜಾಸ್ಥಾನದ ಗೂಢವಾದ ನಡವಳಿಕೆಗಳನ್ನು ನೋಡಿ, ರೂಪಕದಲ್ಲಿ ನಿರೂಪಿಸುವುದು ಕವಿಯ ಆಶಯವಾಗಿದ್ದಿರಬೇಕು. ಇದರಿಂದಲೇ ಕಾಳಿದಾಸನು ಅಗ್ನಿಮಿತ್ರನ ಕಾಲಕ್ಕೆ ಸನ್ನಿಹಿತನಾಗಿದ್ದು ಅಲ್ಲಿನ ಆಂತರ ಘಟನೆಗಳನ್ನು ತಿಳಿದಿದ್ದನೆಂದೂ ಊಹಿಸಲಾಗಿದೆ. ಇಲ್ಲದಿದ್ದಲ್ಲಿ ಇಷ್ಟು ವಿವರಗಳನ್ನು ನಾಟಕದಲ್ಲಿ ನಿರೂಪಿಸಲು ಸಾಧ್ಯವಾಗುತ್ತಿರಲಿಲ್ಲ.

ಈ ನಾಟಕವು ಕಥಾವಸ್ತು, ರಸ, ಪಾತ್ರರಚನೆಗಳ ದೃಷ್ಟಿಯಿಂದ ಅನೇಕ ವಿಧವಾದ ವಿಮರ್ಶೆಗಳಿಗೆ ಸಿಕ್ಕಿದೆ. ಕೆಲವರು ಇದನ್ನು ಅಧಮ ಕೃತಿಯೆಂದು ತೀರ್ಮಾನಿಸಿ ಕಾಳಿದಾಸನು ಇದನ್ನು ರಚಿಸಿದನೆಂದು ಹೇಳುವುದಕ್ಕೂ ಹಿಂಜರಿಯುತ್ತಾರೆ. ಮತ್ತೆ ಕೆಲವರು ಇದರ ಶೃಂಗಾರ ರಸವನ್ನು ಮೆಚ್ಚಿ ಕಾಳಿದಾಸನ ಯೌವನದ ಕಾಲದಲ್ಲಿ ಹೊರಹೊಮ್ಮಿರಬಹುದಾದ ಕೃತಿಯಿದೆಂದು ಹೇಳುತ್ತಾರೆ.[2] ಕಾಳಿದಾಸನು ಸನ್ಯಾಸಿಯಾಗಿರಲಿಲ್ಲವೆಂದೂ ಎಲ್ಲರಂತೆಯೇ ಅವನೂ ಯೌವನದಲ್ಲಿ ಶೃಂಗಾರಲೋಲ

---

1. ಈ ಕಾರಣದಿಂದಲೇ ಮಾಲವಿಕಾಗ್ನಿಮಿತ್ರದ ಗುಣ ಕಡಿಮೆಯೆಂದು ಹೇಳಲಾಗಿರುವುದು ಮತ್ತು ಈ ವಿಷಯದಲ್ಲಿ ಋತುಸಂಹಾರಕ್ಕೆ ಸಲ್ಲುವ ವಿಮರ್ಶೆಯೆಲ್ಲ ಇದಕ್ಕೂ ಸಲ್ಲಬೇಕಾಗುವುದು. ಆದರೆ ಇಲ್ಲೂ ಕೂಡ ಕಾಳಿದಾಸನ ಪರವಾಗಿ ಒಂದೆರಡು ಮಾತುಗಳನ್ನು ಹೇಳಬಹುದಾಗಿದೆ. ಆಧುನಿಕ ರಜತ ಫರದೆಯ ಕಾಮು ಜೀವನ ಚಿತ್ರಗಳನ್ನು ನೋಡಿ ಆನಂದಿಸುವ ಸಹೃದಯರಿಗೆ ಇಂತಹ ಹಿಂದಿನ ಚಿತ್ರಗಳು ರುಚಿಸದಿರಲಾರವು. ಮುಖ್ಯವಾಗಿ ಹೃದಯ ದೌರ್ಬಲ್ಯಕ್ಕೆ ಅವಕಾಶ ಕೊಡದಿದ್ದಲ್ಲಿ ಯಾವದನ್ನೂ ಕೇವಲ ಅಲೌಕಿಕ ರಸಾಸ್ವಾದಕ್ಕಾಗಿ ಅನುಭವಿಸಲು ಸಾಧ್ಯ. ಇಲ್ಲದಿದ್ದಲ್ಲಿ ಕಟುವಲ್ಲದ್ದೂ ಕಟುವಾಗಿ ಕಾಣಬಹುದು.

2. ಇತರ ಕೃತಿಗಳಿಗಿಂತ ಇದೇ ಉತ್ತಮವೆಂದೂ ಅಭಿಪ್ರಾಯ V. Henry 'Les Litteratures de l' Inde." pp. 31

ನಾಗಿದ್ದನೆಂದೂ ಅವರು ವಾದಿಸುವರು. ಕಡೆಕಡೆಗೆ ಪ್ರತಿಭೆಯು ಪರಿಪಕ್ವವಾದ ಮೇಲೂ ಯೌವನದಲ್ಲಿ ವಿಷಯಾಭಿಲಾಷಿಯಾಗಿರಬೇಕೆಂಬ ಆದರ್ಶವನ್ನು "ಯೌವನೇ ವಿಷಯೈಷಿಣಾಂ" (ರ.ವಂ. I) ಎಂದು ರಘುವಂಶದ ದೊರೆಗಳನ್ನು ವರ್ಣಿಸುವ ಪ್ರಸಂಗದಲ್ಲಿ ಸೂಚಿಸಿರುವನೆಂದೂ ಹೇಳುವುದುಂಟು. ಆದುದರಿಂದ ಮಾಲವಿಕಾಗ್ನಿಮಿತ್ರವನ್ನು ರಚಿಸಿದುದರಿಂದ ಕವಿಯ ಕೀರ್ತಿಗೆ ಕಳಂಕ ಬರುವುದಿಲ್ಲವೆಂದು ಇವರ ವಾದ. ಪ್ರಕೃತ ಹೀಗಿರುವುದರಿಂದ ನಾಟಕದ ವಿಮರ್ಶೆಯು ಕಷ್ಟತರವಾಗಿ ಪರಿಣಮಿಸಿದೆ.

ಯಾವ ನಾಟಕವನ್ನು ವಿಮರ್ಶೆ ಮಾಡಬೇಕಾದರೂ ಕವಿಯ ಆಶಯ, ಅದರಿಂದ ನಮ್ಮ ಮನಸ್ಸಿನಮೇಲೆ ಆಗುವ ಪರಿಣಾಮ, ಅವನು ಅನುಸರಿಸುವ ಮಾರ್ಗ, ಅದರ ಔಚಿತ್ಯ ಅನೌಚಿತ್ಯಗಳು, ಭಾಷೆ, ಶೈಲಿ ಮೊದಲಾದುವೆಲ್ಲವನ್ನೂ ಪರಿಗಣಿಸಬೇಕು. ಸಮಗ್ರ ನಾಟಕದಿಂದ ಹೊರಹೊಮ್ಮುವ ಒಂದು 'ಪ್ರಬಂಧ ಧ್ವನಿ', 'ಅಮೂಲ್ಯವಾದ ವ್ಯಂಗ್ಯಾರ್ಥ' ವಿದ್ದು ಅದನ್ನು ಪ್ರತಿಪಾದಿಸಿರುವ ರೀತಿಯೂ ಸನ್ನಿವೇಶವೂ ಪ್ರಶಸ್ತತಮವಾಗಿದ್ದರೆ ನಾಟಕವು ಗ್ರಾಹ್ಯತಮವಾಗುವುದರಲ್ಲಿ ಸಂದೇಹವಿಲ್ಲ. ಶಾಕುಂತಲವನ್ನು ವಿಮರ್ಶಿಸುವಾಗ ಇದು ವ್ಯಕ್ತಪಡುವುದು. ಒಂದುಪಕ್ಷ ಅಂತಹ 'ಪ್ರಬಂಧ ಧ್ವನಿ' ಯು ಇಲ್ಲದಿದ್ದರೂ, ಅಥವ ಸ್ಪಷ್ಟವಾಗಿ ತೋರದಿದ್ದರೂ ನಾಟಕವು ಕೆಳಗಿನ ದರ್ಜೆಯದಾಗುವುದು. ಅಲ್ಲಿ ಕೇವಲ ರಚನಾಚಾತುರ್ಯ, ಸನ್ನಿವೇಶ ಕಲ್ಪನೆಗಳೇ ಮೆಚ್ಚುಗೆಗೆ ಕಾರಣವಾಗುವುವು. ಪ್ರಕೃತ ಮಾಲವಿಕಾಗ್ನಿಮಿತ್ರದಲ್ಲಿ 'ಅಮೂಲ್ಯ' ವಾದ, ಎಂದರೆ ಸರ್ವಸಾಧಾರಣವಾಗಿ ಉಪಾದೇಯವಾಗಬಹುದಾದ (Universal) ಅರ್ಥವಾವುದೂ ತೋರುವುದಿಲ್ಲ. ಇದು ಅಂತಃಪುರದ ವೈಭವದಲ್ಲಿ ಮೈಮರೆತಂತಿದ್ದು ಇಬ್ಬರು ಹೆಂಡಿರಿದ್ದರೂ ಮೂರನೆಯವಳೊಬ್ಬಳನ್ನು ಮದುವೆಯಾಗಲೆಳಸಿ, ಅದು ತಪ್ಪಿದಂತಾದರೂ ಕಡೆಗೆ ತನಗೂ ತಿಳಿಯದಂತೆ ಅವಳನ್ನೇ ಮದುವೆಯಾಗುವ ದೊರೆಯೊಬ್ಬನ ಕತೆ. ಈ ಕತೆಯಲ್ಲಿ ಸತ್ಯ, ಧರ್ಮ ಅಥವ ನೀತಿ ಇವುಗಳ ಪ್ರಸ್ತಾಪವಿಲ್ಲ. ದೊರೆಯಾದ ಅಗ್ನಿಮಿತ್ರನು ಮಾಡಿದ್ದು ಸರಿಯೇ?

ಅದು ಧರ್ಮವೇ? ಎನ್ನಿಸಬಹುದು. ನಿಜ; ಎಲ್ಲ ಅಧರ್ಮವೇ. ಆದ ರೇನು? ನಡೆದುದು ಹೀಗೆ. ಅದಕ್ಕೆ ವಿಧಿಯ ಅಥವ ಇತರರ ಪ್ರತೀಕಾರ ಯಾವುದೂ ಇಲ್ಲ. ಹೀಗೆ, ಕೇವಲ ವಸ್ತುಸ್ಥಿತಿ ನಿರೂಪಣೆ ಮಾತ್ರ ಕವಿಯ ಆಶಯ.[1] ಅದರಿಂದ ತಿಳಿಯಬೇಕಾದ್ದು ತಿಳಿದುಕೊಳ್ಳುವವನ ಬುದ್ಧಿ ಕೌಶಲಕ್ಕೆ ಸೇರಿದ್ದು. ಅಗ್ನಿಮಿತ್ರನಂತೆ ನಡೆದುಕೊಳ್ಳಬಾರದು ಎಂದು ಬೇಕಾದರೆ ಭಾವಿಸಬಹುದು. ಹಾಗೆಯೇ ಅಗ್ನಿಮಿತ್ರನ ಅದೃಷ್ಟವೇ ಅದೃಷ್ಟ! ಇದ್ದರೆ ಹಾಗಿರಬೇಕು; ಕೈಹಿಡಿದ ಹೆಂಡತಿಯೇ ಪ್ರೀತಿಯಿಂದ ಬೇರೊಬ್ಬಳನ್ನು ಮದುವೆ ಮಾಡಿಸುವಂತಾದರೆ ಅದಕ್ಕಿಂತ ಅದೃಷ್ಟವೇ? ಎನ್ನಿಸಬಹುದು. ಹಾಗಿಲ್ಲದೆ, 'ಸರಿ; ನಡೆಯಬೇಕಾದ ಮದುವೆ ಕಡೆಗೂ ನಡೆಯಿತು. ಆದರೂ ಬಹಳ ವಿಚಿತ್ರ ರೀತಿಯಲ್ಲಿ ನಡೆದಿದೆ' ಯೆಂದೂ ತೋರಬಹುದು. ಒಟ್ಟಿನಲ್ಲಿ ನಾಟಕದಿಂದ ಇದೇ ಅರ್ಥ ಹೊರಹೊಮ್ಮ ಬೇಕೆಂದು ನಿಯಮವಿಲ್ಲ. ಯಾವ ಅರ್ಥ ಹೊರಟರೂ ಸಾಕಷ್ಟು ಲೋಕ ಮೋಹಕವಾಗಿಲ್ಲ. ಆದುದರಿಂದ ನಾಟಕವು ಶಾಕುಂತಲ ವಿಕ್ರಮೋರ್ವ ಶೀಯಗಳಿಗಿಂತ ಕೆಳಗಿನ ದರ್ಜೆಯದೆಂದು ಖಂಡಿತ ಹೇಳಬಹುದಾಗಿದೆ. ಇದಕ್ಕೆ ಉಪಪತ್ತಿಯನ್ನು ಹೇಗೆ ಬೇಕಾದರೂ ಕಲ್ಪಿಸಬಹುದು. ಕವಿಯ ಪ್ರಥಮ ಕೃತಿಯಿದು ಎನ್ನಬಹುದು; ಅಥವ ಯೌವನದ ಕೃತಿ ಎನ್ನ ಬಹುದು; ಇದರಲ್ಲಿ ಕವಿ ಪ್ರತಿಭೆ ಅಷ್ಟಾಗಿ ಕೆಲಸಮಾಡಿಲ್ಲವೆಂದು ಬೇಕಾ ದರೂ ಹೇಳಬಹುದು. ಹೇಗೂ ನಾಟಕದ ಅಪಕರ್ಷಕ್ಕೆ ಕಾರಣ ಅಷ್ಟಾಗಿ ಪ್ರಸಕ್ತವಲ್ಲ. ಆದರೆ ಮಾತ್ರ ಇದರ ರಚನೆ ಕಾಳಿದಾಸನದಲ್ಲವೆಂದು ಹೇಳುವ ಹಾಗಿಲ್ಲ. ಗ್ರಾಹ್ಯವಾದ ವ್ಯಂಗ್ಯಾರ್ಥವಿಲ್ಲದಿದ್ದರೂ ನಾಟಕದ ರಚನೆ ವಿಸ್ಮಯಗೊಳಿಸುವಷ್ಟು ಚೆನ್ನಾಗಿದೆ. ಕಥಾವಸ್ತುವು ಕೇವಲ ಐತಿಹಾಸಿ ಕತೆಯಿಂದಲೇ ಕುತೂಹಲಗೊಳಿಸುವಂತಿದೆ. ಆ ವಸ್ತುವನ್ನು ಆರಿಸಿಕೊಂಡು ವಿವರಗಳನ್ನು ಕಲ್ಪಿಸಿ ನಾಟಕವನ್ನು ರಚಿಸಿರುವ ಕೀರ್ತಿ ಕಾಳಿದಾಸನಿಗೇ

---

1. ದುರ್ವೃತ್ತನಾದ ಅಗ್ನಿಮಿತ್ರನ ಅರ್ಥಾತ್ ಆಗಿನಕಾಲದ ರಾಜಕ ವಿಡಂಬನೆಯೇ ಕಾಳಿದಾಸನ ಆಶಯವಾಗಿತ್ತೆಂದು ಕೆಲವರ ಅಭಿಪ್ರಾಯ. (ಕೆ. ಆರ್. ಪಿಶಾರೊಟಿ, ಎಸ್. ಕೆ. ಡೇ ಮೊದಲಾದವರು). ಆದರೆ ಇದಕ್ಕೆ ಖಚಿತವಾದ ಆಧಾರಗಳು ನಾಟಕದಲ್ಲಿ ಸಿಕ್ಕುವುದಿಲ್ಲ.

ಸಲ್ಲತಕ್ಕದ್ದು. ಮತ್ತು ಕಾಳಿದಾಸನ ಕೀರ್ತಿಗೆ ಇದು ಯಾವ ದೃಷ್ಟಿಯಿಂದಲೂ ಕಳಂಕ ತರುವುದಿಲ್ಲ. ಅದಕ್ಕೆ ಬದಲಾಗಿ, ಲಕ್ಷಣಕಾರರ ಸಂಕೋಲೆಗಳಿಗೆ ಸಿಕ್ಕದೆ ಧೈರ್ಯವಾಗಿ ಐತಿಹಾಸಿಕ ಕತೆಯನ್ನಾಶ್ರಯಿಸಿ ಮೊಟ್ಟಮೊದಲು ರೂಪಕವನ್ನು ರಚಿಸಿದ ಕೀರ್ತಿಯನ್ನು ಮಾಲವಿಕಾಗ್ನಿಮಿತ್ರವು ಸಂಪಾದಿಸಿಕೊಟ್ಟಿದೆಯೆನ್ನಬಹುದು.

ನಾಟಕದ ವಸ್ತುವಿನಲ್ಲಿ ಮಾಲವಿಕೆ ಮತ್ತು ಅಗ್ನಿಮಿತ್ರರ ವಿವಾಹದ ಅಂಶವು ಪ್ರಧಾನವಾದದ್ದು. ಇದೇ ನಾಟಕದ ಕಡೆಯ ಗುರಿ. ಮಾಲವಿಕೆಯು ರಾಜಪುತ್ರಿಯೆಂದೂ ಇವಳನ್ನು ಅಗ್ನಿಮಿತ್ರನಿಗೆ ಮದುವೆ ಮಾಡಿಕೊಡಬೇಕೆಂದು ಕರೆತರುತ್ತಿದ್ದಾಗ ದಾರಿಯಲ್ಲಿ ವಿದರ್ಭರಾಜನ ಹಾವಳಿಯಿಂದ ಯುದ್ಧ ನಡೆದು ಆ ಮದುವೆ ತಪ್ಪಿತೆಂದೂ ನಾಟಕದ ಮೊದಲಲ್ಲೇ ಪ್ರೇಕ್ಷಕರಿಗೆ ತಿಳಿದು ಬರುವುದು. ಯುದ್ಧ ನಡೆದಾಗ ತಪ್ಪಿಸಿಕೊಂಡು ಹೋದಳೆಂದು ಹೇಳಲಾದ ವ್ಯಕ್ತಿ ಮಾಲವಿಕೆಯೇ ಇರಬಹುದೆಂದು ಶಂಕೆ ಬಂದು ಕ್ರಮವಾಗಿ ಆ ಹಿನ್ನೆಲೆಯಲ್ಲೇ ಕತೆಯು ಮುಂದುವರಿಯುವುದು. ಇದರಿಂದ ಅಗ್ನಿಮಿತ್ರನು ಕೇವಲ ಅಂತಃಪುರದ ದಾಸಿಯನ್ನು ಪ್ರೀತಿಸಿದನೆಂದು ಜುಗುಪ್ಸೆ ಹುಟ್ಟುವುದಿಲ್ಲ. ದಾಸಿಯೆನ್ನಿಸಿಕೊಂಡಿರುವವಳು ರಾಜಪುತ್ರಿಯಿರಬಹುದೆಂದೂ ಸಿದ್ಧಾದೇಶದಿಂದ ಒಂದು ವರ್ಷ ಈ ಪದವಿಯನ್ನು ಹೊಂದಿರಬಹುದೆಂದೂ ಶಂಕೆಯು ಆಗಲೇ ಹುಟ್ಟಿರುತ್ತದೆ. ಆದುದರಿಂದ ಅಗ್ನಿಮಿತ್ರನ ವಿಷಯದಲ್ಲಿ ಧಾರಿಣಿ, ಇರಾವತಿಯರಿಗೆ ಉಂಟಾಗುವ ಭಾವನೆ ಪ್ರೇಕ್ಷಕರಿಗೆ ಉಂಟಾಗುವುದಿಲ್ಲ. ಇದೊಂದು ವಿಚಿತ್ರವಾದ ಸನ್ನಿವೇಶ. ಹೀಗೆ ನಿರ್ವಹಿಸಿರುವುದರಿಂದ ರಸದೃಷ್ಟಿಯಿಂದ ನಾಟಕದ ಅಪಕರ್ಷಕ್ಕೆ ಅವಕಾಶವಿಲ್ಲದಂತಾಗಿದೆ. ಅನುರಾಗವು ಕೀಳುಮಟ್ಟದ ಜನರನ್ನಾಶ್ರಯಿಸುವುದನ್ನು ನಿರೂಪಿಸಿದರೆ ರಸಾಭಾಸವು ವ್ಯಕ್ತವಾಗುತ್ತದೆಯೇ ಹೊರತು ರಸವಲ್ಲವೆಂದು ಅಲಂಕಾರಿಕರ ಸಿದ್ಧಾಂತವಿದೆ.[1] ನಾಟಕದಲ್ಲಿ ಮುಖ್ಯರಾದ ನಾಯಕ ನಾಯಿಕೆಯರು ಉತ್ತಮಗುಣವುಳ್ಳವರಾಗಿರಬೇಕೆಂದು ನಿಯಮವಿರುವುದರಿಂದ ಯಾರೊಬ್ಬರ ಪ್ರೇಮವು ನೀಚ

---

1. ಏಕತ್ರೈವಾನುರಾಗಶ್ಚೇತ್ತಿರ್ಯಙ್ಮ್ಲೇಚ್ಛಗತೋಽಪಿ ವಾ ।
ಯೋಷಿತೋ ಬಹುಸಕ್ತಿಶ್ಚೇದ್ರಸಾಭಾಸಸ್ತ್ರಿಧಾ ಮತಃ ॥ ಎಂದು ಲಕ್ಷಣ.

ಸಂಕ್ರಾಂತವಾದರೂ ಅವರ ಗುಣಕ್ಕೆ ಲೋಪಬರುತ್ತದೆ. ಪ್ರಕೃತ ಮಾಲವಿಕೆಯು ದಾಸಿಯೇ ಆಗಿದ್ದಲ್ಲಿ ಅವಳಲ್ಲಿ ಅನುರಕ್ತನಾದ ಅಗ್ನಿಮಿತ್ರನು ಗುಣಹೀನನಾಗಿ ನಾಯಕಪದವಿಗೆ ಅನರ್ಹನಾಗಬೇಕಾಗುತ್ತದೆ. ಇದು ವಿಮರ್ಶಕರ ದೃಷ್ಟಿಯಿಂದ ತೋರುವ ವಿಚಾರ. ಅಗ್ನಿಮಿತ್ರನು ಅವಳನ್ನು ಪ್ರೀತಿಸಿದಾಗ 'ದಾಸಿಯನ್ನು ಪ್ರೀತಿಸಿದೆನೆಂ'ದೇ ಭಾವಿಸಿದ್ದಿರಬಹುದು. ಆದರೆ ಅವನು ಪ್ರೀತಿಸಿದ ದಾಸಿಯು ದಾಸಿಯಲ್ಲ; ರಾಜಪುತ್ರಿ; ಅವನ ಪ್ರೀತಿಗೆ ಯೋಗ್ಯಳಾದವಳು; ಅದರಲ್ಲೂ ಅವನನ್ನೇ ಮದುವೆಯಾಗಬೇಕಾಗಿದ್ದವಳು; ಎಂದು ಪ್ರೇಕ್ಷಕರಿಗೆ ತೋರಬೇಕೆಂದು ಲಕ್ಷಣಕಾರರ ತಾತ್ಪರ್ಯ. ಆದುದರಿಂದ ಕಾಳಿದಾಸನು ನಿರ್ಮಿಸಿರುವ ಈ ಸನ್ನಿವೇಶವು ನಾಟಕ ಲಕ್ಷಣಕ್ಕನುಸಾರವಾಗಿಯೂ ಉತ್ತಮವಾಗುವುದು. ಹೀಗಿಲ್ಲದೆ ಅಗ್ನಿಮಿತ್ರನು ನಿಜವಾಗಿಯೂ ದಾಸಿಯನ್ನೇ ಪ್ರೀತಿಸಿದನೆಂದೂ ನಿರೂಪಿತವಾಗಿದ್ದಿದ್ದರೆ, ಆಗ ಆ ರೂಪಕವು 'ನಾಟಕ' ವಾಗುತ್ತಿರಲಿಲ್ಲ. ನಾಟಕದಲ್ಲಿ 'ರಸಾಭಾಸ'ವು ಪ್ರಧಾನವಾಗಿರಲು ಸಾಧ್ಯವಿಲ್ಲ.[1]

ಕತೆಯ ಸ್ವರೂಪಕ್ಕೆ ತಕ್ಕಂತೆ ಕಲಾಮಯವಾದ ಹಿನ್ನೆಲೆಯನ್ನು ಸೃಷ್ಟಿಸಿರುವುದೂ ಒಂದು ಮೇಲ್ಮೆ. ಅಗ್ನಿಮಿತ್ರನ ಲಲಿತ ಸ್ವಭಾವವೂ, 'ದಾಕ್ಷಿಣ್ಯ' ವೂ ಅನೇಕ ಕಡೆಗಳಲ್ಲಿ ನಮ್ಮ ಗಮನಕ್ಕೆ ಬರುತ್ತದೆ. ಧಾರಿಣಿ ಹೇಳುವಂತೆ ರಾಜಕಾರ್ಯದಲ್ಲಿ ಆಸಕ್ತಿ ಅಷ್ಟಾಗಿ ಇರಲಿಲ್ಲವೆಂದು ನಂಬುವುದಕ್ಕಾಗುವುದಿಲ್ಲ. ಮಾಲವಿಕೆಯಲ್ಲಿ ಅನುರಕ್ತನಾದದ್ದು ನಮ್ಮ ಈಗಿನ ದೃಷ್ಟಿಯಿಂದ ಅಧರ್ಮವೆಂದು ತೋರಿದರೂ ಅಗ್ನಿಮಿತ್ರನ ನಡತೆಯಲ್ಲಿ ಅದು ಅಂತಹ ದೊಡ್ಡ ದೋಷವಾಗಿ ತೋರಿ ಬರುವುದಿಲ್ಲ. ಆಗಿನ ಕಾಲದಲ್ಲಿ, ಅದರಲ್ಲೂ ರಾಜಮನೆತನದಲ್ಲಿ ಈ ವಿಧವಾದ ನಡವಳಿಕೆಗಳೆಲ್ಲ ಸ್ವಾಭಾವಿಕವಾಗಿದ್ದಿರಬೇಕು. ದೊರೆಗಳಾರೂ ಏಕಪತ್ನೀವ್ರತಧಾರಿಗಳಾಗಿದ್ದರೆನ್ನುವಂತಿಲ್ಲ. ಅವರ ಲಲಿತ ಜೀವನದಲ್ಲಿ ರೂಪ

1. ನಾಟಕದಲ್ಲಿ ಶೃಂಗಾರ ಅಥವ ವೀರರಸಗಳು ಪ್ರಧಾನವಾಗಿಯೂ ಪರಸ್ಪರ ವಿರುದ್ಧವಲ್ಲದ ಇತರ ರಸಗಳು ಅಂಗಭೂತವಾಗಿಯೂ ಇರಬೇಕೆಂದು ನಿಯಮ. ರಸಾಭಾಸವು ರೂಪಕಗಳಲ್ಲಿ ಅಂಗಭೂತವಾಗಿರಬೇಕು. 'ಈಹಾ ಮೃಗ' ವೆಂಬುದರಲ್ಲಿ ಸ್ವಲ್ಪ ಹೆಚ್ಚಾಗಿ ಉಪಯೋಗಿಸಲು ಅವಕಾಶವಿದೆ.

ವತಿಯರಾಗಿದ್ದರೆ ದಾಸಿಯರನ್ನೂ ಪ್ರೀತಿಸಲು ಅವಕಾಶವಿತ್ತೆಂದು ಮಾತ್ರ ಹೇಳಬಹುದು. ಎರಡು ಮತ್ತು ಮೂರನೆಯ ವಿವಾಹಗಳಿಗೆ ಮೊದಮೊದಲಿನ ಪತ್ನಿಯರಿಂದ ತೊಂದರೆ ಖಂಡಿತವಾಗಿ ಬರುತ್ತಿತ್ತು. ಆದರೂ ವಿವಾಹ ನೆರವೇರುತ್ತಿತ್ತು. ಕಡೆಗೆ ಸಪತ್ನಿಯರು ಹೊಂದಿಕೊಂಡು ದೊರೆಯನ್ನು ಸ್ಪರ್ಧೆಯಿಂದ ಪ್ರೀತಿಸುವುದೂ ಸ್ವಾಭಾವಿಕವಾಗಿತ್ತೆನ್ನ ಬಹುದು. ರಾಣಿಯರಲ್ಲಿ ಧಾರಿಣಿಯಂತಹವರು ಇದ್ದಂತೆಯೇ ಇರಾ ವತಿಯಂತಹವರೂ ಇರುತ್ತಿದ್ದರು. ಅವರಿಂದ ಯಾವಾಗಲೂ ದೊರೆ ಗಳಿಗೆ ಮಾನಹೋಗುವ ಸನ್ನಿವೇಶಗಳು ಉಂಟಾಗುತ್ತಿದ್ದುವು. ಹೀಗೆ ಎಲ್ಲ ವಿಧದಲ್ಲಿಯೂ ಮಾಲವಿಕಾಗ್ನಿ ಮಿತ್ರದಲ್ಲಿ ಆಗಿನ ಕಾಲದ ಸಾಮಾ ಜಿಕ ಸ್ಥಿತಿ ರಾಜಮನೆತನದ ನಡವಳಿಕೆಗಳು ಚಿತ್ರಿಸಲ್ಪಟ್ಟಿರುವಂತೆ ತೋರುವುದು. ಅಗ್ನಿಮಿತ್ರನು ಎಲ್ಲ ದೃಷ್ಟಿಗಳಿಂದಲೂ ಆಗಿನಕಾಲದ ದೊರೆತನಕ್ಕೆ ತಕ್ಕ ಉದಾಹರಣೆಯಂತಿರುವನು. ಕಲಾಪ್ರೇಮ, ಮೃದು ಸ್ವಭಾವ, ಕಾಮ ಜೀವನದಲ್ಲಿ ಆಸಕ್ತಿ, ರಾಜನಿಗೆ ತಕ್ಕ ಆಡಂಬರ, ಅನ್ಯರ ಅವಹೇಳನ ಮತ್ತು ದ್ವೇಷ ಮೊದಲಾದ ಗುಣಗಳೆಲ್ಲವೂ ಅವನಲ್ಲಿರು ವುವು. ಇವನ ದೃಷ್ಟಿಯಿಂದ ಪ್ರೇಮಜೀವನಕ್ಕೂ ರಾಜ್ಯಭಾರದ ಜವಾಬ್ದಾ ರಿಗೂ ಪರಸ್ಪರ ಸಂಬಂಧವಿಲ್ಲ. ಪ್ರೇಮಾಸಕ್ತಿಯಿಂದ ರಾಜ್ಯಭಾರವನ್ನು ಬಿಡುವಷ್ಟು ಅಂಧನಲ್ಲ. ಪ್ರೇಮಕ್ಕಾಗಿ ಎಲ್ಲವನ್ನೂ ತೊರೆದು ಹುಚ್ಚು ಹುಚ್ಚಾಗುವ ಸ್ಥಿತಿ ಇವನಿಗೆ ಬರುವುದಿಲ್ಲ. ಆದರೆ ಮಾತ್ರ ಪ್ರೇಮಕ್ಕೆ ಯೋಗ್ಯವಾದ ರತ್ನವನ್ನು ಕಂಡಾಗ ಮನಸ್ಸು ಸುಮ್ಮನಿರದು. ಸರಿಯೋ ತಪ್ಪೋ ಅದು ತನ್ನ ದಾರಿಗೆಳೆಯುವುದು. ಅನಂತರ ಅದರ ಸಿದ್ಧಿಗೆ ಯಾವ ಮಾರ್ಗಗಳನ್ನು ಬೇಕಾದರೂ ಅನುಸರಿಸುವಂತೆ ಇವನ ಮನಸ್ಸು ಪ್ರೇರಿ ಸುವುದು. ಈ ಕಾಮತಂತ್ರದಲ್ಲಿ ಇವನಿಗೆ ಮಂತ್ರಿ ವಿದೂಷಕ. ವಿದೂ ಷಕನಿಗೆ ಈ ಕಾಮತಂತ್ರ ಸಚಿವ ಪದವಿಯು ಲಕ್ಷಣ ಗ್ರಂಥಗಳಲ್ಲಿ ಕ್ಲೃಪ್ತ ವಾಗಿಲ್ಲ. ಪಾಪ! ಈ ಬಡಬ್ರಾಹ್ಮಣನಿಗೆ ಈ ಪದವಿಯನ್ನು ಕೊಡಿಸಿ ಅದಕ್ಕೆ ಪ್ರತೀಕಾರವೋ ಎಂಬಂತೆ ಇರಾವತಿಯ ಕೈಯಿಂದ ಇವನ ಮೇಲೆ ಬೈಗಳ ಮಳೆಯನ್ನೂ ಸುರಿಸಿದ್ದಾನೆ ಕಾಳಿದಾಸ. ಅಂತು, ವಿದೂಷಕನಾದ ಗೌತಮನು ನಾಟಕದಲ್ಲಿ ಬಹಳ ಮುಖ್ಯ ಪದವಿಯನ್ನು ಹೊಂದಿದ್ದಾನೆ.

ಇವನಿಂದಲೇ ಅಗ್ನಿಮಿತ್ರನ ಆಸೆಯು ನೆರವೇರುವುದು. ಮತ್ತು ಅನೇಕ ವೇಳೆ ಮಾನ ಸಂರಕ್ಷಣೆಯಾಗುವುದು. ಸಾಮಾನ್ಯವಾಗಿ ಮಿತಿಮೀರಿ ಊಟಮಾಡಿ ನರಳುವುದಕ್ಕೂ, ದೊರೆಯ ಅಪಹಾಸ್ಯಕ್ಕೆ ಗುರಿಯಾಗು ವುದಕ್ಕೂ ಪ್ರಸಿದ್ಧನಾದ ವಿದೂಷಕನು ಈ ನಾಟಕದಲ್ಲಿ ತನ್ನ ಹುಟ್ಟು ಗುಣವನ್ನು ಬಿಟ್ಟಂತಿದೆ. ಇವನ ಬುದ್ಧಿ ಬಹಳ ಚುರುಕು. ಯಾವು ದಕ್ಕೂ ಕೂಡಲೆ ಪ್ರತೀಕಾರ ಹುಡುಕುವ ಸ್ವಭಾವ ಇವನದು. ಹರ ದತ್ತ ಗಣದಾಸರಿಗೆ ಜಗಳ ತಂದುಹಾಕಿ ತತ್ಪರಿಣಾಮವಾಗಿ ದೊರೆಗೆ ಮಾಲವಿಕೆಯನ್ನು ನೋಡುವ ಅವಕಾಶವನ್ನು ಕಲ್ಪಿಸಿದ್ದು ಇವನ ಅಸ ದೃಶವಾದ ಪ್ರತಿಭೆ. ಹರದತ್ತ ಗಣದಾಸರ ಜಗಳವನ್ನು ತಪ್ಪಿಸಿ ತನ್ಮೂ ಲಕ ದೊರೆಯು ಮಾಲವಿಕೆಯನ್ನು ನೋಡದಂತೆ ಮಾಡಬೇಕೆಂಬ ಧಾರಿಣಿಯ ಪ್ರಯತ್ನವನ್ನು ಮಣ್ಣು ಗೂಡಿಸಿದವನು ವಿದೂಷಕ. (ಮೊದಲನೆಯ ಅಂಕದಲ್ಲಿ) ಚರ್ಚೆಯು ನಡೆಯುತ್ತಿದ್ದಾಗ ಹೆಚ್ಚು ಮಾತ ನ್ನಾಡದೆ ಸುಮ್ಮನೆ ಕುಳಿತಿದ್ದರೂ ಸರಿಯಾದ ಸಮಯದಲ್ಲಿ ಗಣದಾಸನನ್ನು ರೇಗಿಸಿ ಸ್ಪರ್ಧೆಯು ನಿಂತು ಹೋಗದಂತೆ ಇವನು ನೋಡಿಕೊಳ್ಳುತ್ತಾನೆ. ಇದೆಲ್ಲಕ್ಕಿಂತ ಹೆಚ್ಚಾಗಿ ಧಾರಿಣಿ, ಇರಾವತಿಯರಿಗಾಗಿ ಹೆದರುತ್ತಿದ್ದ ಅಗ್ನಿ ಮಿತ್ರನಿಗೆ ಧೈರ್ಯಕೊಡುವ ಕೆಚ್ಚು ಇವನಲ್ಲಿತ್ತು. ಧಾರಿಣಿ ಮಾಲವಿಕೆ ಯನ್ನು ನೆಲಮಾಳಿಗೆಯಲ್ಲಿ ಬಚ್ಚಿಟ್ಟಾಗಲೂ ಇವನ ಬುದ್ಧಿಯು ವಿರಾಮ ಹೊಂದದೆ ಕೆಲಸಮಾಡಿ ತಕ್ಕ ಉಪಾಯವನ್ನು ಹುಡುಕಿತು. ನಾಗ ಮುದ್ರೆಯನ್ನು ಕಸಿದುಕೊಳ್ಳಲು ಇವನು ಹೂಡಿದ ಉಪಾಯ ಬಹಳ ಜಾಣತನದ್ದು. ಕಡೆಗೂ ಇವನು ಮಾಲವಿಕೆ ಅಗ್ನಿಮಿತ್ರರ ಸಮಾಗಮಕ್ಕೆ ಒದಗಿದ ಅಡ್ಡಿಗಳನ್ನೆಲ್ಲ ಪರಿಹರಿಸಿ ಸಮುದ್ರ ಗೃಹದಲ್ಲಿ ಅವರ ಸಮಾ ಗಮಕ್ಕೆ ಏರ್ಪಾಡು ಮಾಡುವನು. ಇಲ್ಲಿಗೆ ಈ ಕಾಮತಂತ್ರಸಚಿವನ ಕೆಲಸ ಪೂರ್ತಿಯಾಗುವುದು. ಮುಂದೆ ನಡೆಯುವ ವಿವಾಹಾದಿಗಳಿಗೆ ಇವನ ಸಹಾಯ ಅಷ್ಟು ಬೇಕಾಗುವುದಿಲ್ಲ.

ಧಾರಿಣಿ, ಇರಾವತಿಯರಿಗೆ ವಿದೂಷಕನನ್ನು ಕಂಡರಾಗದು. ಅವರ ದೃಷ್ಟಿಯಿಂದ ಇವನು 'ಕಲಹಪ್ರಿಯ,' 'ಉಪದ್ರವವನ್ನು ಅನುಭವಿಸಲು ತಕ್ಕವನು'. ನಿಪುಣಿಕೆ ಹೇಳುವಂತೆ ಮೂರು ಹೊತ್ತೂ ಇವರ ಸನ್ನಿಧಿಯಲ್ಲೇ

ತೆಂದು ತೇಗಿಯೂ ಮಾಲವಿಕೆಯನ್ನು ಕುರಿತು ಕನವರಿಸಿಕೊಳ್ಳುವ ಸ್ವಭಾವದವನು. ಇಬ್ಬರಲ್ಲಿ ಇರಾವತಿ ಹೆಚ್ಚು ಕೋಪಿಷ್ಠೆ; ಅಸಹಿಷ್ಣು ಪ್ರಕೃತಿಯುಳ್ಳವಳು. ಜೊತೆಗೆ ಕುಡಿತದ ಅಮಲು ಬೇರೆ, ಹೀಗಾಗಿ ದೊರೆಯನ್ನೂ ಕೂಡ ಕಟುವಾಗಿ ಬೈಯುವುದು ಇವಳ ಸ್ವಭಾವವಾಗಿ ಹೋಗಿದೆ. ಇವಳಲ್ಲಿ ಧಾರಿಣಿಗಿಂತ ಹೆಚ್ಚು ಅಸೂಯೆಯಿದೆ. ಆದುದರಿಂದಲೇ ಮಾಲವಿಕೆಯ ಮದುವೆಗೆ ಧಾರಿಣಿಯು ಒಪ್ಪಿ ಸಿದ್ಧತೆ ಮಾಡಿದಾಗಲೂ ಇವಳ ಅನುಮತಿ ದೊರೆಯುವುದಿಲ್ಲ. ಮಾಲವಿಕೆಯನ್ನು ಕಡೆಯವರೆಗೂ ಬಂಧನದಲ್ಲಿಟ್ಟಿದ್ದರೇ ಸರಿಯಾಗಿತ್ತೆಂದು ಇವಳ ಅಭಿಪ್ರಾಯ. ಆದರೂ ತಾನು ಧಾರಿಣಿಯನ್ನು ಸೋಲಿಸಿ ಅಗ್ನಿಮಿತ್ರನನ್ನು ಮದುವೆಯಾದಂತ ಮಾಲವಿಕೆಯೂ ತನ್ನನ್ನು ಸೋಲಿಸಿದಳೆಂದೋ ಏನೊ ಕಡೆಗೆ ಪ್ರಸನ್ನಳಾಗಿ ಅಗ್ನಿಮಿತ್ರನ ಕ್ಷಮಾಪಣೆ ಬೇಡುವಳು, ಮಾಲವಿಕೆಯ ಪಾತ್ರವು ಎಲ್ಲಕ್ಕಿಂತ ಚೆಲುವಾದದ್ದು. ರಾಜಪುತ್ರಿಯಾದರೂ ದಾಸಿಯಾಗಿ ಕಾಲಕಳೆಯುವ ದಶೆಯು ಇವಳಿಗೆ ಒದಗಿದೆ. ಆದರೆ ದಾಸಿಯಾಗಿರುವಾಗಲೂ ನಡತೆಯಲ್ಲಿ ಇವಳು ರಾಜಪುತ್ರಿಯರಿಗೆ ಎಳ್ಳಷ್ಟೂ ಕಡಿಮೆಯಿಲ್ಲ. ಇರಾವತಿಗಿಂತ ಎಷ್ಟೋ ಮೇಲು ಸ್ವಭಾವವಾಗಿಯೇ ಬಹಳ ರೂಪವತಿ. ನಾಟ್ಯಕಲೆಯ ಅಭ್ಯಾಸ ಮಾಡಿದ ಮೇಲಂತು ಇವಳ ರೂಪು ಇನ್ನೂ ಆಕರ್ಷಕವಾಗಿದೆ. ಆದುದರಿಂದಲೇ ಅಗ್ನಿಮಿತ್ರನ ಪ್ರೇಮಕ್ಕೆ ಇವಳು ಪಾತ್ರಳಾದುದು. ನಾಟಕದಲ್ಲಿ ಮೊದಲಿನಿಂದ ಕೊನೆಯವರೆಗೂ ಅಗ್ನಿಮಿತ್ರನ ಅಭಿಪ್ರಾಯ, ಪ್ರೇಮ ವಿರಹದುಃಖ ಮೊದಲಾದುವುಗಳಿಗೇ ಪ್ರಾಧಾನ್ಯ ಹೆಚ್ಚು. ಅವನ ಪ್ರೇಮದ ಬಯಕೆಯನ್ನು ತೀರಿಸುವುದೇ ವಿದೂಷಕ, ಬಕುಳಾವಳಿಕೆಯರ ಸಂಚಿನ ಉದ್ದೇಶ. ಹೀಗಾಗಿ ಒಂದೆರಡು ಕಡೆಗಳಲ್ಲಿ ಹೊರತು ಮಾಲವಿಕೆಯ ಮನಸ್ಸಿನ ಯೋಚನೆಗಳು ಸರಿಯಾಗಿ ಹೊರಪಡುವುದಕ್ಕೆ ಅವಕಾಶವೇ ಆಗಿಲ್ಲವೆನ್ನುವಂತಿದೆ. ಪ್ರೇಮದಲ್ಲಿ ಮುಖ್ಯ ಪಾತ್ರ ಅಗ್ನಿಮಿತ್ರನದಾಗಿ ಮಾಲವಿಕೆಯು ದೊರೆಯ ಪ್ರೇಮಕ್ಕೆ ಪಾತ್ರಳಾದ 'ದಾಸಿ' ಯಂತೆಯೇ ವರ್ತಿಸುವಳು. ಆದರೆ ಇದರಿಂದ, ಮಾಲವಿಕೆಯ ಪ್ರೇಮವು ಗಾಢವಲ್ಲವೆನ್ನುವಂತಿಲ್ಲ. ಹೊರಗೆ ತೋರದ ಅವಳ ವಿರಹದುಃಖವು ಪ್ರಾಯಶಃ ಅಗ್ನಿಮಿತ್ರನದಕ್ಕಿಂತ

ಕಡಿಮೆಯಾಗಿರಲಾರದು. ಸನ್ನಿವೇಶ ವಶದಿಂದ ಅವಳು ಹಾಗಿರಬೇಕಾಗಿತ್ತು. ದೊರೆಗೆ ವಿದೂಷಕ, ಬಕುಳಾವಳಿಕೆಯಿದ್ದಂತೆ ಅವಳ ಕಡೆಯಾರೂ ಇರಲಿಲ್ಲವೆಂಬುದು ಸ್ಪಷ್ಟವಾಗಿದೆ. ಅವಳ ಆಸೆಗಳನ್ನು ಈಡೇರಿಸುವುದಕ್ಕಾಗಿ ಯಾರೂ ಪ್ರಯತ್ನಪಡುವಂತಿರಲಿಲ್ಲ. ಯಾರೊಡನೆಯೂ ಅವಳು ತನ್ನ ದುಃಖಗಳನ್ನು ಹೇಳಿಕೊಳ್ಳುವಂತಿರಲಿಲ್ಲ. ಅಗ್ನಿಮಿತ್ರನಿಗೂ ಕೂಡ ಅವಳ ಪ್ರೇಮದ ವಿಚಾರದಲ್ಲಿ ನಂಬಿಕೆಯಿತ್ತೋ ಇಲ್ಲವೋ ಹೇಳುವುದಕ್ಕೆ ಸಾಧ್ಯವಿಲ್ಲ. ಬಹುಶಃ ಇದನ್ನು ದೃಢಪಡಿಸಿಕೊಳ್ಳುವುದಕ್ಕಾಗಿಯೇ ಎರಡುಸಲ ಬಕುಳಾವಳಿಕೆ ಅವಳನ್ನು ಮಾತನಾಡಿಸಿ ಅವಳ ಹೃದಯವನ್ನು ತಿಳಿಯುವುದಕ್ಕೆ ಪ್ರಯತ್ನಿಸುವುದೆಂದು ತೋರುತ್ತದೆ. ಹೇಗೂ ಮಾಲವಿಕೆಯ ಮುಗ್ಧತನವು ಅವಳ ಪಾತ್ರವನ್ನು ಮತ್ತೂ ಮನೋಹರವಾಗಿ ಮಾಡಿದೆ. ಧಾರಿಣಿ ಇರಾವತಿಯರ ಭಯದಿಂದ ಈ ಮುಗ್ಧತನ, ಮೌನಗಳು ಮತ್ತೂ ಹೆಚ್ಚಿವೆ.

ಉಳಿದ ಪಾತ್ರಗಳಲ್ಲಿ ಪಂಡಿತ ಕೌಶಿಕಿ, ಬಕುಳಾವಳಿಕೆ, ಹರದತ್ತ, ಗಣದಾಸ ಇವರು ಮುಖ್ಯ. ಪಂಡಿತ ಕೌಶಿಕಿಯೂ ವಿದೂಷಕನ ಸಂಚಿನಲ್ಲಿ ಭಾಗವಹಿಸುವಂತೆ ತೋರುವುದು. ಬಕುಳಾವಳಿಕೆಯದೂ ವಿದೂಷಕನ ಕಾಮತಂತ್ರದಲ್ಲಿ ಬಹಳ ಮುಖ್ಯವಾದ ಕೆಲಸ. ನಿಪುಣಿಕೆಯು ಇರಾವತಿಗೆ ತಕ್ಕ ಸಖಿ. ಒಟ್ಟಿನಲ್ಲಿ ನಾಟಕದ ಪಾತ್ರಗಳೆಲ್ಲ ಸಜೀವ ವ್ಯಕ್ತಿಗಳಾಗಿ ನಮ್ಮ ಮನಸ್ಸಿನಲ್ಲಿ ನಿಲ್ಲುವರು.

ನಾಟಕದ ವಸ್ತುವನ್ನು ಇನ್ನೊಂದು ದೃಷ್ಟಿಯಿಂದ ವಿಮರ್ಶಿಸುವುದೂ ಉಂಟು. ಇರಾವತಿಯು ತನಗೆ ಮಾಡಿದ ದ್ರೋಹಕ್ಕಾಗಿ ಅವಳ ಮೇಲಿನ ಸೇಡನ್ನು ತೀರಿಸಿಕೊಳ್ಳಲು ಧಾರಿಣಿಯು ಮಾಡಿದ ಸಂಚು ಮಾಲವಿಕಾವಿವಾಹ ಎಂದು ಕೆಲವರ ಅಭಿಪ್ರಾಯ. ಆದರೆ ಇದನ್ನು ಸರಿಯಾದ ಅರ್ಥವೆಂದು ಹೇಳಲಸಾಧ್ಯ. ಧಾರಿಣಿಯು ಈ ವಿಧವಾದ ಸಂಚನ್ನು ನಡೆಸುವುದು ಅಸ್ವಾಭಾವಿಕ. ಒಂದುಪಕ್ಷ ನಡೆಸಿದ್ದರೂ ಅವಳ ಬುದ್ಧಿಕೌಶಲವನ್ನು ಮೆಚ್ಚುವುದಕ್ಕಾಗುವುದಿಲ್ಲ. ಮಾಲವಿಕೆಯನ್ನು ಮೊದಲಿನಿಂದಲೂ ಅಗ್ನಿಮಿತ್ರನ ಕಣ್ಣಿಗೆ ಬೀಳದಂತೆಯೇ ಧಾರಿಣಿ ರಕ್ಷಿಸುತ್ತಿದ್ದಳೆಂದು ಅನೇಕ ಕಡೆ ಸ್ಪಷ್ಟವಾಗಿ ಹೇಳಿದೆ. ಮಾಲವಿಕೆ ಅಗ್ನಿಮಿತ್ರರ

ಪ್ರೇಮಕ್ಕೆ ಧಾರಿಣಿಯು ಮೊದಮೊದಲು ಯಾವಾಗಲೂ ಸಹಾನುಭೂತಿ ತೋರಿಸಿಲ್ಲ. ಗಣದಾಸ, ಹರದತ್ತರ ಸ್ಪರ್ಧೆಗೆ ಅವಳ ಪ್ರತಿಭಟನೆ ಮನಃ ಪೂರ್ವಕವಾದುದು. ಮೂರನೆಯ ಮತ್ತು ನಾಲ್ಕನೆಯ ಅಂಕಗಳಲ್ಲಿ ನಡೆಯುವ ಸಂಗತಿಗಳ ಅರಿವು ಅವಳಿಗೆ ಸ್ವಲ್ಪವೂ ಇಲ್ಲ. ಎಲ್ಲ ಧಾರಿಣಿಯು ಸಂಜೆಂದು ಹೇಳಿದ್ದಲ್ಲಿ ಇಲ್ಲಿನ ಸಂಗತಿಗಳನ್ನು ಅವಳು ಮೊದಲೇ ಊಹಿ ಸಿದ್ದಳೆಂದು ಹೇಳಬೇಕಾಗುವುದು. ಹೀಗೆ ಅನೇಕ ತೊಂದರೆಗಳು ಒದಗು ವುದರಿಂದ ಈ ಉಪಪತ್ತಿಯನ್ನು ಕಲ್ಪಿಸುವುದಕ್ಕೆ ಸಾಧ್ಯವಿಲ್ಲ. ಮಾಲವಿಕೆ ಅಗ್ನಿಮಿತ್ರರ ಪ್ರೇಮಕ್ಕೆ ಇರಾವತಿಯಂತೆ ಧಾರಿಣಿಯೂ ಅಡ್ಡಿಪಡಿಸಿದಳು. ಆದರೂ ಅವಳ ಪ್ರಯತ್ನ ನಡೆಯದೆ ಹೋಗಲಾಗಿ ಇರಾವತಿಯ ಮದುವೆ ಯಂತೆಯೇ ಇದನ್ನೂ ಸಹಿಸಬೇಕೆಂಬ ಭಾವನೆಯಿಂದ ಕಡೆಗೆ ಅಗ್ನಿಮಿತ್ರನ ಸಂತೋಷಕ್ಕಾಗಿ ಅವಳು ಇಷ್ಟರಮಟ್ಟಿನ ಸ್ವಾರ್ಥತ್ಯಾಗಕ್ಕೆ ಸಿದ್ಧಳಾದಳು. ಖಂಡಿತ ಇದು ಅಪೂರ್ವ ಸ್ವಾರ್ಥತ್ಯಾಗವಾದರೂ ಸಂಭವಿಸಬಹುದಾ ದದ್ದು. ಮಾಲವಿಕೆಯು ರಾಜಕುಮಾರಿಯೆಂದು ತಿಳಿಯುವುದಕ್ಕೆ ಮುಂಚೆಯೇ ಧಾರಿಣಿಯ ಮನಸ್ಸು ಈ ರೀತಿ ಮಾರ್ಪಟ್ಟಿತ್ತು. ಅದ ರಿಂದಲೇ ಅವಳು ಯಾರಿಗೂ ತಿಳಿಯದಂತೆ ಮಾಲವಿಕೆಗೆ ವಿವಾಹದ ಅಲಂಕಾರಗಳನ್ನು ತೊಡಿಸುವಂತೆ ಹೇಳಿದ್ದುದು. ರಾಜಕುಮಾರಿಯೆಂದು ತಿಳಿದ ಮೇಲಂತು ಮದುವೆಯು ಹೆಚ್ಚು ಸಮ್ಮತಿಯಿಂದ ನೆರವೇರುವುದು.

ಕವಿಯ ಈ ಪ್ರಥಮ ಕೃತಿಯಲ್ಲೂ ಅನೇಕ ಉತ್ತಮವಾದ ವರ್ಣನೆ ಗಳಿವೆ. ಸಂಗೀತ ನಾಟ್ಯಗಳಿಗೆ ಜನಜೀವನದಲ್ಲಿದ್ದ ಪ್ರಾಶಸ್ತ್ಯವು ಇಲ್ಲಿ ಚೆನ್ನಾಗಿ ಹೊರಬೀಳುವುದು. ವಿಕ್ರಮೋರ್ವಶೀಯ, ಶಾಕುಂತಲಗಳಲ್ಲಿ ರುವಷ್ಟು ವಿಪ್ರಲಂಭ ಶೃಂಗಾರವಿಲ್ಲದಿದ್ದರೂ ಪ್ರೇಮವು ಕೊಂಚಕಾಲ ದುರ್ಘಟನೆಗಳಿಂದ ಫಲಕಾರಿಯಾಗದೆ ಕೊನೆಗೆ ಸುಖದಲ್ಲಿ ಮುಗಿಯುವ ಸಂಗತಿ ಈ ಪ್ರಥಮ ಕೃತಿಯಲ್ಲೂ ಕಂಡುಬರುತ್ತದೆ. "ಈಗಾಗಲೇ ಯೂರೋಪಿನ ರಸಿಕರು ಕಾಳಿದಾಸನಿಗರ್ಪಿಸಿರುವ ಕೀರ್ತಿ ಮಾಲಿಕೆಯ ಸೌರಭವನ್ನು ಈ ಎಳಚಿಗುರೂ ಹೆಚ್ಚಿಸಲಿ" ಎಂಬ ಡಾ|| ವೆಬರ್ ಅವರ ಹಾರೈಕೆಯಿಂದ ವಿಮರ್ಶೆಯನ್ನು ಮುಗಿಸಬಹುದು.

# ವಿಕ್ರಮೋರ್ವಶೀಯ

ಯೌವನದ ಮುಂಬರದಲ್ಲಿದ್ದ ಕವಿಯ ಮನೋಧರ್ಮವು ಸಂಭೋಗ ಶೃಂಗಾರ ಪ್ರಧಾನವಾದ ಮತ್ತು ವಾಸ್ತವಿಕವಾದ ರಾಜಮನೆತನದ ಪಿತೂರಿಯ ಕತೆಯಾದ ಮಾಲವಿಕಾಗ್ನಿಮಿತ್ರದ ಮೂಲಕ ಹೊರಹೊಮ್ಮಿದುದನ್ನು ಗಮನಿಸಿಯಾಯಿತು. ವಿಕ್ರಮೋರ್ವಶೀಯದ ನಿರ್ಮಾಣದಲ್ಲಿ ಅವನ ಪ್ರತಿಭೆಯು ಇನ್ನೊಂದು ಹೆಜ್ಜೆ ಮುಂದೆ ಹೋಗಿದೆ. ಸಂಭೋಗ ಶೃಂಗಾರವನ್ನು ಪ್ರಧಾನವಾಗಿಟ್ಟುಕೊಂಡೂ ಋಗ್ವೇದದ ಕಾಲದಿಂದ ಪ್ರಸಿದ್ಧವಾದ ಪೌರಾಣಿಕ ಕತೆಯನ್ನಾಶ್ರಯಿಸಿ ಅದರ ಉದಾತ್ತತೆಯು ಲುಪ್ತವಾಗದಂತೆ ನಿರ್ವಹಿಸಲು ಪ್ರಯತ್ನಿಸಿ ಇದನ್ನು ರಚಿಸಿರುವಂತೆ ತೋರುತ್ತದೆ. ಮಾಲವಿಕಾಗ್ನಿಮಿತ್ರದ ಕತೆಯು ಮಾನುಷ ಪ್ರಪಂಚಕ್ಕೆ ಸೇರಿದ್ದು. ಆದರೆ ವಿಕ್ರಮೋರ್ವಶೀಯದ ಕತೆಯಲ್ಲಿ ದಿವ್ಯಮಾನುಷ ಪ್ರಪಂಚಗಳಿಗೆ ಅನಿರ್ಭೇದ್ಯವಾದ ಯಾವ ವಿಭಾಗವೂ ಇಲ್ಲ. ಮತ್ತು 'ನ ವಿನಾ ವಿಪ್ರಲಂಭೇನ ಸಂಭೋಗಃ ಪುಷ್ಟಿಮಶ್ನುತೇ' (ವಿಪ್ರಲಂಭವಿಲ್ಲದಿದ್ದರೆ ಸಂಭೋಗವು ಪುಷ್ಟಿಹೊಂದುವುದಿಲ್ಲ) ಎಂಬ ವಾಕ್ಯದ ಸಾರವೂ ಈಗಾಗಲೇ ಕವಿಯ ಹೃದಯವನ್ನಾವರಿಸಿರುವಂತೆ ತೋರುವುದು.

ನಾಟಕದ ವಸ್ತುವಾದ ಊರ್ವಶೀ ಪುರೂರವರ ಕತೆಯು ಅನೇಕ ಗ್ರಂಥಗಳಲ್ಲಿ[1] ನಿರೂಪಿತವಾಗಿದ್ದರೂ ಒಂದೊಂದರಲ್ಲಿ ಒಂದೊಂದು ವಿಧವಾದ ಮಾರ್ಪಾಡನ್ನು ಹೊಂದಿದೆ. ಇವುಗಳಲ್ಲೆಲ್ಲ ಮತ್ಸ್ಯಪುರಾಣದ ಕತೆಯೇ ಕಾಳಿದಾಸನ ನಾಟಕದ ಕತೆಗೆ ಅತಿ ಸನ್ನಿಹಿತವಾಗಿರುವುದು. ಆದರೆ ಕಥಾವಸ್ತುವಿನ ಯಾವ ಭಾಗವು ಕವಿಕಲ್ಪಿತ, ರಂಗದೃಷ್ಟಿಯಿಂದಲೂ ರಸಭಾವಗಳ ದೃಷ್ಟಿಯಿಂದಲೂ ಅದರ ಪರಿಣಾಮವೇನು ? ಎಂಬ ವಿಷಯ

1. ಋಗ್ವೇದ, ಶತಪಥ ಬ್ರಾಹ್ಮಣ, ಮಹಾಭಾರತ, ವಿಷ್ಣುಪುರಾಣ, ಭಾಗವತ, ಪದ್ಮಪುರಾಣ, ಮತ್ಸ್ಯಪುರಾಣ, ಕಥಾಸರಿತ್ಸಾಗರದ ಮೂಲಗ್ರಂಥವಾದ ಬೃಹತ್ಕಥೆ ಮೊದಲಾದುವು. ಬೃಹತ್ಕಥೆಯು ಈಗ ಉಪಲಬ್ಧವಾಗಿಲ್ಲ. ಆದರೆ ಕಥಾಸರಿತ್ಸಾಗರದಲ್ಲಿ ಈ ಕತೆಯು ಸಿಕ್ಕುವುದರಿಂದ ಬೃಹತ್ಕಥೆಯಲ್ಲಿ ಇದ್ದಿರಬೇಕೆಂದು ಊಹಿಸಬಹುದು.

ಳನ್ನು ಪರಿಶೀಲಿಸಬೇಕಾದರೆ ಮೂಲಕಥೆಯ ಸ್ವರೂಪವನ್ನು ಸಂಕ್ಷೇಪವಾಗಿ ತಿಳಿಯುವುದು ಆವಶ್ಯಕ.

ಪ್ರಾಚೀನ ತಮವಾದ ಋಗ್ವೇದ (I-31-4)ದಲ್ಲಿ ಉರ್ವಶೀವಿರಹಿತನಾದ ಪುರೂರವನು[1] ಅವಳನ್ನು ಪುನಃ ಬರಹೇಳಿ ಅಂಗಲಾಚುವುದೂ ಅವಳು ಸಿಕ್ಕದೆ, ಸ್ವರ್ಗವನ್ನು ಸಂಪಾದಿಸಿದರೆ ತನ್ನನ್ನು ಹೊಂದಬಹುದೆಂದು ಹೇಳಿ ಹೊರಟುಹೋಗುವುದೂ ನಿರೂಪಿತವಾಗಿವೆ.[2] ಮಹಾಭಾರತದಲ್ಲಿ, ಪುರೂರವನು ಬ್ರಾಹ್ಮಣರೊಡನೆ ಜಗಳವಾಡಿ ಗಂಧರ್ವಲೋಕದಿಂದ ಬೆಂಕಿಯನ್ನು ತಂದ ವಿಚಾರ ಮಾತ್ರ ಹೇಳಲ್ಪಟ್ಟಿದೆ. ವಿಷ್ಣುಪುರಾಣದ ಕತೆಯು ಸಮಂಜಸವಾಗಿಯೂ ವಿಶದವಾಗಿಯೂ ಇರುವುದಾದರೂ ಪ್ರಕೃತನಾಟಕದ ಕತೆಗಿಂತ ಬಹಳಮಟ್ಟಿಗೆ ಭಿನ್ನವಾಗಿದೆ; ಇಂದ್ರಾಸ್ಥಾನದ ಅಪ್ಸರೆಯಾದ ಉರ್ವಶಿಯು ಮಿತ್ರಾವರುಣರ ಶಾಪದಿಂದ ಸ್ವರ್ಗಸುಖವನ್ನು ಕಳೆದುಕೊಂಡು ಭೂಲೋಕಕ್ಕೆ ಬರುವಳು. ಇವಳನ್ನು ಚಂದ್ರವಂಶದ ದೊರೆಯಾದ ಪುರೂರವನು ಕಾಮಿಸಿ ಅವಳು ಮುಂದಿಟ್ಟ ಎರಡು ನಿಯಮಗಳಿ[3]ಗೊಪ್ಪಿ ವರಿಸುವನು. ಆದರೆ ಉರ್ವಶಿಯು ಭೂಲೋಕಕ್ಕೆ ಬಂದಿದ್ದರಿಂದ ಸ್ವರ್ಗದಲ್ಲಿ ಸುಖವು ಕಡಿಮೆಯಾಗಲು ಅಲ್ಲಿನವರು ಸಂಚುಮಾಡಿ ಪುರೂರವನು ಎರಡು ನಿಯಮಗಳನ್ನೂ ಮೀರುವಂತೆ ಮಾಡುವರು. ಅನಂತರ ಊರ್ವಶಿಯು ಸ್ವರ್ಗಕ್ಕೆ ಹೋಗಲು ಪುರೂರವನು ವಿರಹದಿಂದ ಬಳಲುವನು. ಆದರೆ ಒಂದುಸಲ ಅವಳು ಇತರ ಅಪ್ಸರೆಯರೊಡನೆ ಕೊಳದಲ್ಲಿ ವಿಹರಿಸುತ್ತಿದ್ದಾಗ ಪುರೂರವನು ಅವಳನ್ನು ಗುರುತಿಸಿ ಹಿಂತಿರುಗೆಂದು ಕೇಳಿಕೊಳ್ಳುವನು. ಶಾಶ್ವತವಾಗಿ ನಿಲ್ಲಲು ಸಾಧ್ಯವಿಲ್ಲವೆಂದು ಹೇಳಿ ರಾಜಕಾರ್ಯವನ್ನು ಗಮನಿಸುವು

1. ಪುರೂರವನು ಇಳೆಯ ಮಗನೆಂದು ಋ. I. 31-18ರಲ್ಲಿ ಹೇಳಿದೆ. ಸಂಹಿತಾಯುಗದ ಸೂರ್ಯ ಉಷಸ್ಸುಗಳೇ ಪುರೂರವ ಉರ್ವಶಿಯರಾದರೆಂದು ಪ್ರೊ॥ ವಿಲ್ಸನ್‌ರವರ ಅಭಿಪ್ರಾಯ.

2. ಶತಪಥ ಬ್ರಾಹ್ಮಣದಲ್ಲಿ ಈ ಕತೆಯು ಸ್ಪಷ್ಟವಾಗಿಲ್ಲ.

3. ತನ್ನ ಎರಡು ಮುದ್ದು ಟಗರುಗಳನ್ನು ಕಾಪಾಡುವುದು, ಬೆತ್ತಲೆಯಾಗಿ ಕಾಣಿಸಿಕೊಳ್ಳದಿರುವುದು ಇವೇ ನಿಯಮಗಳು.

ದಾದರೆ ವರ್ಷಕ್ಕೊಂದುಸಲ ಬರುವುದಾಗಿ ಒಪ್ಪುವಳು. ಇವರಿಗೆ ಆಯುಸ್ ಮುಂತಾದ ಆರುಮಂದಿ ಮಕ್ಕಳು ಹುಟ್ಟುವರು. ಆದರೂ ಉರ್ವಶಿ ಯನ್ನು ತನ್ನಲ್ಲೇ ನಿಲ್ಲಿಸಿಕೊಳ್ಳಬೇಕೆಂಬ ಆಸೆಯಿಂದ ಪುರೂರವನು ಗಂಧರ್ವರ ಸಹಾಯದಿಂದ ಅನೇಕ ಯಾಗಗಳನ್ನು ಮಾಡಿ ತಾನೂ ಗಂಧರ್ವ ಪದವಿಯನ್ನು ಹೊಂದಿ ಅವಳನ್ನು ಸೇರುವನೆಂಬುದು ವಿಷ್ಣು ಪುರಾಣದ ಕತೆಯ ಸಂಗ್ರಹ.

ಕಥಾಸರಿತ್ಸಾಗರಕ್ಕನುಸಾರವಾಗಿ ಉರ್ವಶೀ ಪುರೂರವರ ಪರಸ್ಪರ ಪ್ರೀತಿಯು ವಿಷ್ಣುವಿಗೆ ತಿಳಿದು ಅವನ ಅನುಮತಿಯಿಂದಲೇ ನಾರದರು ಅವಳನ್ನು ಪುರೂರವನಿಗೊಪ್ಪಿಸುವರು. ಆದರೆ ಇವರ ಸುಖವಾದ ಜೀವನಕ್ಕೆ ವಿಘ್ನವೊದಗಿ ಇಬ್ಬರೂ ಸ್ವರ್ಗಕ್ಕೆ ತೆರಳಿರಲಾಗಿ ಅಲ್ಲಿ ಇಂದ್ರನ ವಿಜಯೋತ್ಸವವನ್ನು ನೆರವೇರಿಸುವುದಕ್ಕಾಗಿ ಸಂಗೀತ, ನಾಟಕ ಮೊದಲಾದ ವಿನೋದಗಳು ಏರ್ಪಾಡಾಗಿದ್ದುವಂತೆ. ಆಗ ನರ್ತನ ಮಾಡುತ್ತಿದ್ದ ರಂಭೆಯು ತಪ್ಪಿದ್ದನ್ನು ನೋಡಿ ಪುರೂರವನು ನಗಲು ತುಂಬುರುವಿನಿಂದ ಶಪಿತನಾಗಿ ಉರ್ವಶಿಯನ್ನು ಕಳೆದುಕೊಳ್ಳುವನು. ಅನಂತರ ಬದರಿಕಾಶ್ರಮದಲ್ಲಿ ವಿಷ್ಣುವನ್ನಾರಾಧಿಸಿ ಅವನ ಅನುಗ್ರಹದಿಂದ ಪುನಃ ಅವಳನ್ನು ಹೊಂದುವನಂತೆ.

ಮತ್ಸ್ಯಪುರಾಣದ ಕತೆಯು ಇನ್ನೂ ಸ್ವಲ್ಪ ಬೇರೆಯಾಗಿರುವುದು. ಇದಕ್ಕನುಸಾರವಾಗಿ ಪುರೂರವನು ಬುಧ ಮತ್ತು ಇಳೆ ಇವರ ಮಗ. ಬಹಳ ಧರ್ಮಿಷ್ಠ, ಅನೇಕ ಅಶ್ವಮೇಧ ಯಾಗಗಳನ್ನು ನೆರವೇರಿಸಿ, ಕೇಶಿ ಮುಂತಾದ ದೈತ್ಯರನ್ನು ಸೋಲಿಸಿ ಏಳು ದ್ವೀಪಕ್ಕೂ ಒಡೆಯನಾದನು. ಇವನ ಸೌಂದರ್ಯಕ್ಕೆ ಬೆರಗಾಗಿ ಉರ್ವಶಿಯು ಇವನನ್ನು ಮೋಹಿಸಿದಳಂತೆ. ಒಂದುಸಲ ಧರ್ಮ, ಅರ್ಥ, ಕಾಮಗಳು ಇವನಲ್ಲಿಗೆ ಬಂದು ತಮ್ಮಲ್ಲಿ ಯಾವುದು ಉತ್ಕೃಷ್ಟವೆಂದು ಕೇಳಲು ಇವನು ಧರ್ಮಪಕ್ಷಪಾತಿಯಾಗಿ ಮಾತಾಡಿದುದನ್ನು ಕೇಳಿ ಅರ್ಥ ಕಾಮಗಳು ಕೋಪಗೊಂಡುವಂತೆ. ಅವುಗಳ ಶಾಪ ಫಲವಾಗಿಯೇ ಇವನು ದುರಾಶೆಯಿಂದ ಕೂಡಿ ಗಂಧಮಾದನದಲ್ಲಿ ಹುಚ್ಚನಾಗಿ ಅಲೆಯಬೇಕಾಗಿ ಬಂದುದು. ಆದರೆ ಧರ್ಮದ ಅನುಗ್ರಹದಿಂದ ದೀರ್ಘಕಾಲ ಧರ್ಮಿಷ್ಠನಾಗಿ ಬಾಳುವ

ಸುಯೋಗವೂ ತನ್ನ ವಂಶವು ಆಚಂದ್ರಾರ್ಕವಾಗಿರುವಂತೆ ಮಾಡಿದ ಹೆಮ್ಮೆಯೂ ಇವನಿಗೆ ದೊರಕಿದುವು. ಹೀಗಿರುತ್ತಿರಲಾಗಿ ಒಂದು ದಿನ ಕೇಶಿಯೆಂಬ ದೈತ್ಯನು ಉರ್ವಶಿ ಚಿತ್ರಲೇಖೆಯರಿಬ್ಬರನ್ನೂ ಹೊತ್ತು ಕೊಂಡು ಹೋಗುತ್ತಿದ್ದಾಗ ಪುರೂರವನು ವಾಯುವ್ಯಾಸ್ತ್ರದಿಂದ ಅವನನ್ನು ಸಂಹರಿಸಿ ಇಬ್ಬರನ್ನೂ ರಕ್ಷಿಸುವನು. ಅದೂ ಅಲ್ಲದೆ ಇಂದ್ರನಿಗೆ ಕೇಶಿಯ ಹಾವಳಿಯು ತಪ್ಪಲಾಗಿ ಅವನೂ ಪ್ರೀತನಾಗಿ ಪುರೂರವನ ಸಂಪತ್ತನ್ನು ಹೆಚ್ಚಿಸುವನು.

ಈ ಮೈತ್ರಿಯಿಂದ ಯಾವುದೋ ಒಂದು ಉತ್ಸವದ ಸಂದರ್ಭದಲ್ಲಿ ಪುರೂರವನು ಇಂದ್ರನಲ್ಲಿಗೆ ಹೋಗಬೇಕಾಗಿ ಬರುವುದು. ಅಲ್ಲಿ 'ಲಕ್ಷ್ಮೀ ಸ್ವಯಂವರ' ವೆಂಬ ನಾಟಕವನ್ನು ಅಭಿನಯಿಸುತ್ತಿದ್ದಾಗ ಲಕ್ಷ್ಮೀಪಾತ್ರ ವನ್ನು ವಹಿಸಿದ್ದ ಉರ್ವಶಿಯೂ ಪುರೂರವನ ಮೇಲಿನ ಮೋಹದಿಂದ ಮೈಮರೆತು ತನ್ನ ಪಾತ್ರವನ್ನು ಸರಿಯಾಗಿ ನಿರ್ವಹಿಸಲಿಲ್ಲವಂತೆ. ಇದರಿಂದ ಭರತಮುನಿಗೆ ಕೋಪ ಬಂದು ಅವನ ಶಾಪದಿಂದ 55 ವರ್ಷ ಪುರೂರ ವನಿಂದ 'ವಿಯುಕ್ತಳಾಗಿ ಲತೆಯಾಗಿರಬೇಕಾಯಿತು. ಶಾಪಾಂತ್ಯದಲ್ಲಿ ಇವಳು ಪುರೂರವನನ್ನು ಮದುವೆಯಾಗಿ ಆಯುಸ್ ಮುಂತಾದ ಎಂಟು ಮಕ್ಕಳನ್ನು ಪಡೆಯುವಳು. ಇದು ಮತ್ಸ್ಯಪುರಾಣದ ಕತೆಯ ಸಾರಾಂಶ.

ಪ್ರಕೃತ ನಾಟಕದ ಕತೆಗೆ ಮೇಲೆ ಹೇಳಿದ ಕತೆಯು ಅತಿ ಸನ್ನಿಹಿತವಾಗಿ ದ್ದರೂ ಕಾಳಿದಾಸನು ಅಲ್ಲಿನ ಕತೆಯ ಆಧಾರದಿಂದಲೇ ನಾಟಕವನ್ನು ರಚಿಸಿದನೆಂದು ಹೇಳುವಂತಿಲ್ಲ. ಈ ವಿಚಾರದಲ್ಲಿ ಯಾವ ನಿರ್ಣಯಕ್ಕೂ ಆಧಾರ ಸಾಲದು. ಮತ್ಸ್ಯಪುರಾಣವೇ ಕಾಳಿದಾಸನ ನಾಟಕದ ಕತೆಯನ್ನ ನುಕರಿಸಿರಬಹುದೆಂದು ಡಾ|| ದೇಯವರ ಅಭಿಪ್ರಾಯ.[1] ಇದನ್ನೊಪ್ಪಿದರೆ ಈ ಕತೆಯಲ್ಲಿ ಕಾಳಿದಾಸನು ಮಾಡಿರುವ ಮಾರ್ಪಾಡುಗಳನ್ನು, ಮತ್ಸ್ಯ ಪುರಾಣವು ಅಂಗೀಕರಿಸದಿರುವುದಕ್ಕೆ ಸರಿಯಾದ ಕಾರಣಗಳನ್ನು ಕೊಡಲು ಸಾಧ್ಯವಿಲ್ಲದೇ ಹೋಗುವುದು. ಅಂತೂ ಹಿಂದಿನಿಂದ ನಾನಾ ವಿಧವಾಗಿ ತಿಳಿದು ಬಂದ ಉರ್ವಶಿ ಪುರೂರವರ ಕತೆಯನ್ನು ಸಮಂಜಸ

---

1. I. H. Q. XVI ii Part 1, p. 405.

ಗೊಳಿಸಿ ತನ್ನ ನಾಟಕಕ್ಕೆ ಹೊಂದುವಂತೆ ಮಾರ್ಪಡಿಸಿದ ಯಶಸ್ಸು ಕಾಳಿದಾಸನಿಗೇ ಸಲ್ಲುವುದು.

ನಾಟಕದ ಕತೆಯನ್ನು ಅನುವಾದಮಾಡುವ ಮುನ್ನ ಅದರ ರಸದ ವಿಚಾರವಾಗಿ ಒಂದೆರಡು ವಿಷಯಗಳನ್ನು ತಿಳಿಯುವುದು ಆವಶ್ಯಕ. ಮಾಲವಿಕಾಗ್ನಿ ಮಿತ್ರದಂತೆ ಇದೂ ಸಂಭೋಗ ಶೃಂಗಾರ ಪ್ರಧಾನವಾದ ನಾಟಕವೆಂದು ಹಿಂದೆಯೇ ತಿಳಿಸಿದೆ. ಆದರೆ ಅಲ್ಲಿನ ಶೃಂಗಾರಕ್ಕೂ ಇಲ್ಲಿನ ರಸಕ್ಕೂ ಇರುವ ತಾರತಮ್ಯವನ್ನು ವಿಶದಗೊಳಿಸುವುದು ಆವಶ್ಯಕ. ವಿಕ್ರ ಮೋರ್ವಶೀಯದ ಶೃಂಗಾರ ರಸದಲ್ಲಿ ವಿಪ್ರಲಂಭದ ಛಾಯೆಯು ಸ್ಪಷ್ಟ ವಾಗಿರುವುದೊಂದು ಅಂಶ. ಎರಡನೆಯದಾಗಿ ರಸಪರಿಪೋಷಕ್ಕೆ ಆಶ್ರಯ ರಾದ ನಾಯಕ ನಾಯಿಕೆಯರ ಸ್ವರೂಪದಿಂದ ರಸದ ಉತ್ಕರ್ಷಾಪಕರ್ಷ ಗಳನ್ನು ನಿರ್ಣಯಿಸಬಹುದಾದರೆ ವಿಕ್ರಮೋರ್ವಶೀಯದ ಸಂಭೋಗ ಶೃಂಗಾರವು ಹೆಚ್ಚು ಶುದ್ಧವಾದುದೆನ್ನಬಹುದು. ಅಂತಃಪುರದ ಒಳತಂತ್ರ ಗಳೊಡನೆ ಗೋಜಿಕೊಂಡಿರುವ ಆತಂಕ ಕೊರತೆಗಳಿಗೆ ಸಿಕ್ಕಿದ ಮಾಲವಿಕಾ ಗ್ನಿಮಿತ್ರದ ಪ್ರೇಮಕ್ಕೂ ಪ್ರಭಾವಶಾಲಿಗಳಾದ ದಿವ್ಯವ್ಯಕ್ತಿಗಳನ್ನಾಶ್ರಯಿ ಸಿದ ಮತ್ತು ದೇವತಾನುಗ್ರಹದಿಂದ ಸಾರ್ಥಕ್ಯ ಹೊಂದಿದ ವಿಕ್ರಮೋ ರ್ವಶೀಯದ ಪ್ರೇಮಕ್ಕೂ ಅಂತರವನ್ನು ತಿಳಿಯುವುದು ಸುಲಭ. ಮಾಲವಿಕೆ, ಅಗ್ನಿಮಿತ್ರ ಮತ್ತು ಊರ್ವಸಿ ಪೂರೂರವ ಇವರಿಗೆ ಇರುವ ಪರಸ್ಪರ ವ್ಯತ್ಯಾಸವೂ ಸುಲಭಗ್ರಾಹ್ಯ. ತನ್ನ ರಾಜ ಮರ್ಯಾದೆಗನು ಗುಣವಾದ ದಾಂಪತ್ಯ ಜೀವನವನ್ನು ಹೊಂದಿಯೂ ಅಂತಃಪುರದ ದಾಸಿಯಾದ ಮಾಲವಿಕೆಯನ್ನು ಕಾಮಿಸುವ ಕಾಮಲೋಲುಪನಾದ ಅಗ್ನಿಮಿತ್ರನೆಲ್ಲಿ? ಪುರೂರವನ ಪರಾಕ್ರಮವನ್ನು ಮೆಚ್ಚಿ, ಶಾಪದಿಂದ ವೇಶ್ಯೆಯಾಗಿ ಭೂಮಿಗಿಳಿದ ದಿವ್ಯಸ್ತ್ರೀಯನ್ನು ಮೋಹಿಸುವ ಸತ್ವಶಾಲಿಯೂ ಪ್ರಜಾನುರಾಗಕ್ಕೆ ಪಾತ್ರನೂ ಆದ ಪುರೂರವನೆಲ್ಲಿ? ಒಟ್ಟಿನಲ್ಲಿ ಈ ಎರಡು ನಾಟಕಗಳ ಸನ್ನಿವೇಶವನ್ನು ವಿಶದವಾಗಿ ಪರಿಶೀಲಿಸಿದಲ್ಲಿ ವಿಕ್ರಮೋರ್ವಶೀಯದಲ್ಲಿ ಕವಿಶಕ್ತಿಯು ಸ್ವಲ್ಪ ಮೇಲಿನ ಹಂತವನ್ನೇರಿ ಶಾಂತಿಸಂಯಮಗಳು ತಲೆದೋರಿರುವ ಶುದ್ಧ ಪ್ರೇಮವು ಚಿತ್ರಿತವಾಗಿದೆ ಯೆನ್ನಬಹುದು. ಈ ಆದರ್ಶವು ಶಾಕುಂತಲದಲ್ಲಿ ಸಂಪೂರ್ಣವಾಗಿ ಸಿದ್ಧಿ

ಹೊಂದುವುದನ್ನು ಮುಂದೆ ಮನಗಾಣಬಹುದು. ವಿರಹವು ಪ್ರಥಮ ಸಮಾಗಮಕ್ಕೆ ಕಾರಣವಾಗಿದ್ದ ವಿಷಯಾಸಕ್ತಿಯನ್ನು ದೂರಮಾಡಿ ಪಾರ್ಯಂತಿಕ ಶ್ರೇಯೋಲಾಭ ದೃಷ್ಟಿಯಿಂದಲೂ ಅಧರ್ಮ ಪರಿಹಾರದ ದೃಷ್ಟಿಯಿಂದಲೂ ಪುನಸ್ಸಮಾಗಮವು ನೆರವೇರುವ ಪವಿತ್ರ ಪ್ರೇಮವು ಚಿತ್ರಿತವಾಗಿರುವುದು ಶಾಕುಂತಲದ ಅಸಾಧಾರಣವಾದ ಮೇಲ್ಮೆ.

ಭಾಸನ ನಾಟಕಗಳಲ್ಲಿರುವಂತೆ ಸೂತ್ರಧಾರನ ಮಾತು ಮುಗಿಯು ವಷ್ಟರಲ್ಲೇ ವಿಕ್ರಮೋರ್ವಶೀಯ ಕತೆಯು ಪ್ರಾರಂಭವಾಗುವುದು. ಬಹುಶಃ ಚೈತ್ರ ಶುದ್ಧ ಪಾಡ್ಯ ಅಥವಾ ಬಿದಿಗೆಯಿರಬಹುದು. ಆಗ ಅಂತ ರಿಕ್ಷದಲ್ಲಿ "ಯಾರು ದೇವತೆಗಳ ಪಕ್ಷಕ್ಕೆ ಸೇರಿದವರೋ ಯಾರಿಗೆ ಗಗನದಲ್ಲಿ ಸಂಚರಿಸುವ ಶಕ್ತಿಯಿದೆಯೋ ಅವರು ರಕ್ಷಿಸಲಿ" ಎಂಬ ಅಪ್ಸರೆಯರ ಆರ್ತನಾದವು ಕೇಳಿಬರುವುದು. ಸೂರ್ಯಾರಾಧನೆಯನ್ನು ಮುಗಿಸಿ ಬರುತ್ತಿದ್ದ ಪುರೂರವನು ಅವರ ತೊಂದರೆಯನ್ನು ವಿಚಾರಿಸಲು ಚಿತ್ರ ಲೇಖೆಯೆಂಬುವಳು ತನ್ನ ಸಖಿಯಾದ ಊರ್ವಶಿಯ ಸೌಂದರ್ಯವನ್ನು ವರ್ಣಿಸಿ ಅವಳಿಗೊದಗಿದ್ದ ವಿಪತ್ತನ್ನು ತಿಳಿಸುವಳು. ಕೇಶಿಯೆಂಬ ರಾಕ್ಷಸನು ಊರ್ವಶಿಯನ್ನು ಸೆರೆಹಿಡಿದೊಯ್ದ ವಿಷಯವು ತಿಳಿದಕೂಡಲೆ ಪುರೂರವನು ರಥವನ್ನು ವೇಗವಾಗಿ ಓಡಿಸಿಕೊಂಡು ಅವನು ಹೋದ ದಿಕ್ಕಿಗೇ ಹೋಗುವನು. ಅಪ್ಸರೆಯರು ಹೇಮಕೂಟವೆಂಬಲ್ಲಿ ತಮ್ಮನ್ನು ಪುನಃ ಕಾಣಬಹುದೆಂದು ಪುರೂರವನಿಗೆ ತಿಳಿಸಿ ಹೊರಡುವರು. ಸ್ವಲ್ಪ ಹೊತ್ತಿನಲ್ಲೇ ಊರ್ವಶಿಯು ರಾಕ್ಷಸನ ಬಾಧೆಯಿಂದ ವಿಮುಕ್ತಳಾದರೂ ಮೂರ್ಛೆ ತಿಳಿದೇಳಲಿಲ್ಲ. ಚಿತ್ರಲೇಖೆಯು ಅವಳನ್ನು ಉಪಚರಿಸುತ್ತಲೇ ಇರುವಳು. ಆಗ ಪುರೂರವನು ವರ್ಣಿಸುವಂತೆ

ಆವಿರ್ಭೂತೇ ಶಶಿನಿ ತಮಸಾ ಮುಚ್ಯಮಾನೇವ ರಾತ್ರಿ-
ನೈಶಸ್ಯಾರ್ಚಿರ್ಹುತಭುಜ ಇವ ಚ್ಛಿನ್ನಭೂಯಿಷ್ಠಧೂಮಾ ।
ಮೋಹೇನಾನ್ತರ್ವರತನುರಿಯಂ ದೃಶ್ಯತೇ ಮುಕ್ತಕಲ್ಪಾ
ಗಂಗಾ ರೋಧಃಪತನಕಲುಷಾ ಗೃಹ್ಣತೀವ ಪ್ರಸಾದಮ್ ॥ (I-7)

"ಚಂದ್ರೋದಯವಾಗಲು ಕತ್ತಲೆಯಿಂದ ಬಿಡುಗಡೆ ಹೊಂದುವ ರಾತ್ರಿ

ಯಂತೆ, ದಟ್ಟವಾಗಿ ಮುಚ್ಚಿದ ಹೊಗೆಯಿಂದ ಬಿಡಲ್ಪಡುವ ರಾತ್ರಿಹೊತ್ತಿನ ಬೆಂಕಿಯ ಜ್ವಾಲೆಯಂತೆ, ದಡವು ಕೊಚ್ಚಿಹೋಗಿದ್ದು ಕದಡಿ ತಿಳಿಯಾಗುವ ಗಂಗೆಯಂತೆ" ಊರ್ವಶಿಯು ಕ್ರಮವಾಗಿ ಮೂರ್ಛೆ ತಿಳಿದೇಳುವಳು. ಸ್ವಲ್ಪ ಎಚ್ಚತ್ತಮೇಲೆ ಸಖಿಯಾದ ಚಿತ್ರಲೇಖೆಯಿಂದ ತಾವು ವಿಪತ್ತನ್ನು ನೀಗಿದ ಬಗೆಯನ್ನು ತಿಳಿದು ಎದುರಿಗಿದ್ದ ಪುರೂರವನನ್ನು ನೋಡುವಳು. ಆಗ ಅವಳಿಗೆ "ದಾನವರು ನನ್ನನ್ನು ಅಪಹರಿಸಿದುದೂ ಉಪಕಾರವೇ ಆಯಿತು" ಎನ್ನಿಸುವುದು, ದೊರೆಗೆ

ಅಸ್ಯಾಸ್ಸರ್ಗವಿಧೌ ಪ್ರಜಾಪತಿರಭೂಚ್ಚಂದ್ರೋ ನು ಕಾಂತಿಪ್ರದಃ
ಶೃಂಗಾರೈಕರಸಃ ಸ್ವಯಂ ನು ಮದನೋಮಾಸೋ ನು ಪುಷ್ಪಾಕರಃ।
ವೇದಾಭ್ಯಾಸಜಡಃಕಥಂ ನು ವಿಷಯವ್ಯಾವೃತ್ತಕೌತೂಹಲೋ
ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ
ಪುರಾಣೋ ಮುನಿಃ॥ (I-8)

ಕಾಂತಿಪ್ರದನಾದ ಚಂದ್ರನೋ, ಶೃಂಗಾರ ಪ್ರಧಾನನಾದ ಮನ್ಮಥನೋ, ಪುಷ್ಪಾಕರನಾದ ವಸಂತನೋ ಇವಳ ನಿರ್ಮಾತೃವಾಗಿರಬೇಕು. ವೇದಾಭ್ಯಾಸ ಜಡನೂ ವಿಷಯಾಸಕ್ತಿವಿಮುಖನೂ ಆದ ಬ್ರಹ್ಮನಿಗೆ ಇವಳನ್ನು ಸೃಷ್ಟಿಸುವ ಶಕ್ತಿಯೆಲ್ಲಿ?" ಎನ್ನಿಸುವುದು. ಹೀಗೆ ಪ್ರಥಮ ದರ್ಶನದಲ್ಲಿಯೇ ಇವರ ಪರಸ್ಪರ ಪ್ರೇಮವು ಮೊಳೆದೋರುವುದು. ಮೂವರೂ ರಥದಲ್ಲಿ ಹೇಮಕೂಟಕ್ಕೆ ಬರುವಾಗ ನೆಲದ ಹಳ್ಳತಿಟ್ಟುಗಳ ದೆಸೆಯಿಂದ ರಥವು ಕುಲುಕಲು ಪುರೂರವನಿಗೆ ಊರ್ವಶಿಯ ಭುಜಸ್ಪರ್ಶವುಂಟಾಗಿ ಅವನಲ್ಲಿ ಮೂಡಿದ್ದ ಪ್ರೇಮವು ಹೆಚ್ಚುವುದು. ಹೇಮಕೂಟದಲ್ಲಿದ್ದ ಅಪ್ಸರೆಯರು ದೊರೆಯನ್ನು ಅಭಿನಂದಿಸಿದ ಮೇಲೆ, ಗಂಧರ್ವರಾಜನಾದ ಚಿತ್ರರಥನೂ ಅಲ್ಲಿಗೆ ಬಂದು ಇವನನ್ನು ಗೌರವಿಸಿ, ಅಭಿನಂದಿಸಿ, ಇಂದ್ರನಲ್ಲಿಗೆ ಆಹ್ವಾನಿಸುವನು. ಇಂದ್ರನ ಬಳಿಗೆ ಬರಲು ಅದು ಸಮಯವಲ್ಲವೆಂದು ಹೇಳಿ ದೊರೆಯು ಊರ್ವಶಿಯನ್ನು ಕರೆದುಕೊಂಡು ಹೋಗಬಹುದೆಂದು ಚಿತ್ರರಥನಿಗೊಪ್ಪಿಸುವನು. ಊರ್ವಶಿಗೆ ಏನು ಹೇಳಲೂ ತೋಚದೆ ಕಡೆಗೆ ಚಿತ್ರಲೇಖೆಯ ಕೈಯಲ್ಲಿ, ಸುರಲೋಕಕ್ಕೆ ತಾನು ಅವನ ಕೀರ್ತಿಯನ್ನು ಮುಟ್ಟಿಸುವುದಾಗಿ ಪುರೂರವನಿಗೆ ಹೇಳಿಸುವಳು. ಎರಡು ಹೆಜ್ಜೆ

ಹೋಗುವುದರೊಳಗಾಗಿ ಎಡವಿದುದರಿಂದ ಅವಳ ಮುತ್ತಿನ ಹಾರವು ಬಳ್ಳಿಗೆ ಸಿಕ್ಕಿಕೊಂಡು ಪುನಃ ಹಿಂತಿರುಗಿ ದೊರೆಯನ್ನು ನೋಡುವ ಸುಯೋಗವು ದೊರಕುವುದು. ಹಾರವನ್ನು ಬಿಡಿಸೆಂದು ಚಿತ್ರಲೇಖೆಗೆ ಹೇಳುವಳು. ಆದರೆ ಬಲವಾಗಿ ಸಿಕ್ಕಿಕೊಂಡಿದ್ದ ಅದನ್ನು ಬಿಡಿಸಲು ಚಿತ್ರಲೇಖೆಗೂ ಶ್ರಮ! ಈ ವಿಧವಾದ ಅವಳ ಪರಿಹಾಸ್ಯದ ಇಂಗಿತವನ್ನು ತಿಳಿದು ಉರ್ವಶಿಯು ಸಂತೋಷ ಹೊಂದುವಳು. ದೊರೆಯು, ಇನ್ನು ಸ್ವಲ್ಪಕಾಲ ಉರ್ವಶಿಯ ನೋಟವನ್ನು ದೊರಕಿಸಿದ ಲತೆಯನ್ನೂ ತನ್ನಲ್ಲೇ ಕೃತಜ್ಞತೆಯಿಂದ ಭಾವಿಸುವನು. ರಾಜಹಂಸೆಯು ತಾವರೆ ದಂಟಿನ ಎಳೆಯನ್ನು ಸೆಳೆಯುವಂತೆ ಉರ್ವಶಿಯೂ ಪುರೂರವನ ಮನಸ್ಸನ್ನು ತನ್ನ ಕಡೆಗೇ ಸೆಳೆಯುವಳು.

[1] ಎರಡನೆಯ ಅಂಕದ ಕೊನೆಯಲ್ಲಿ ಉರ್ವಶೀ ಪುರೂರವರ ಸಮಾಗಮವು ನೆರವೇರುವುದು. ಅದಕ್ಕೆ ಮೊದಲು, ಪ್ರವೇಶಕದಲ್ಲಿ ಪುರೂರವನ ರಾಣಿ ಔಶೀನರಿಯು ತನ್ನ ಪ್ರಿಯನು ಕೆಲವು ದಿನಗಳಿಂದ ಶೂನ್ಯಹೃದಯನಾಗಿದ್ದುದಕ್ಕೆ ಕಾರಣವನ್ನು ತಿಳಿಯಲು ತವಕಪಡುವುದೂ ಇದಕ್ಕಾಗಿ ನಿಪುಣಿಕೆಯೆಂಬ ಚೇಟಿಯನ್ನು ನಿಯಮಿಸುವುದೂ ಮತ್ತು ನಿಪುಣಿಕೆ ವಿದೂಷಕರ ಸಂವಾದದಿಂದ ರಾಜನ ಉರ್ವಶೀಪ್ರಣಯ ರಹಸ್ಯವು ಹೊರಬೀಳುವುದೂ ವರ್ಣಿತವಾಗಿವೆ.

ಅನಂತರ, ಉರ್ವಶಿಯನ್ನು ಹೊಂದಲಾಗದೆ ಖಿನ್ನನಾಗಿದ್ದ ರಾಜನಿಗೆ ವಿದೂಷಕನ ಸಹವಾಸವು ಏರ್ಪಡುವುದು. ಸುರಲೋಕ ಸುಂದರಿಯು ರಾಜನ ಹೃದಯವನ್ನು ಹೊಕ್ಕು ಅವನಿಗೆ ಯಾವ ವಿನೋದವೂ ಬೇಡವಾಗಿರುವುದು. ಆದರೂ ವಿನೋದಪ್ರಿಯನಾದ ವಿದೂಷಕನ ಜೊತೆಯಲ್ಲಿ ತನ್ನ ಕೊರಗನ್ನು ಮರೆಮಾಚಿಕೊಂಡು "ಎಲ್ಲಿ ವಿನೋದಿಸೋಣ" ಎಂದರೆ ಅವನು ತಟ್ಟನೆ 'ಅಡಿಗೆ ಮನೆಯಲ್ಲಿ' ಎನ್ನುವನು. ಅಂತು ದೊರೆಗೆ ಸ್ವಲ್ಪ ವಿನೋದವು ಸಿಕ್ಕಿದರೂ ಉರ್ವಶಿಯು ಮಾತ್ರ ಸಿಕ್ಕುವಂತಿಲ್ಲ. ಉರ್ವಶಿಯು

1. ಮೊದಲನೆಯ ಅಂಕದ ಸಂಗತಿಗಳು ನಡೆದ ಸುಮಾರು 15 ದಿವಸಗಳ ಮೇಲೆ. ಎರಡನೆಯ ಅಂಕದ ಕತೆಯು ಪ್ರಾರಂಭವಾಗುವುದು.

ದುರ್ಲಭಳೆಂದು ಅವನು ಭಗ್ನಾಶನಾಗುವಷ್ಟರಲ್ಲಿ ಮಧ್ಯೆಮಧ್ಯೆ ವಿದೂಷಕನು ಅವನನ್ನು ಪ್ರೋತ್ಸಾಹಿಸುವನು. ಪುರೂರವನು ಪ್ರೇಯಸಿಯ ವರ್ಣನೆಯಲ್ಲಿ ತೊಡಗಿ 'ಅವಳು ಆಭರಣಕ್ಕೇ ಆಭರಣ' ಎಂದು ಮುಂತಾಗಿ ವರ್ಣಿಸಿದರೆ ವಿದೂಷಕನು "ನಾನು ಕುರೂಪಿಗಳಲ್ಲಿ ಕುರೂಪಿಯಾಗಿರುವಂತೆ ಅವಳು ರೂಪವತಿಯರಲ್ಲಿ ರೂಪವತಿಯೆ?" ಎನ್ನುತ್ತ ಅವನನ್ನು ವಿನೋದಪಡಿಸುವನು. ಹೀಗೆ ಮಾತನಾಡುತ್ತ ಇಬ್ಬರೂ ಪ್ರಮದವನಕ್ಕೆ ಬರುವರು. ವಿನೋದಕ್ಕೆ ಸರಿಯಾದ ಸ್ಥಾನವೆಂದು ಅಲ್ಲಿಗೆ ಬಂದರೂ "(ಸ್ರೋತಸೇವೋಹ್ಯಮಾನಸ್ಯ ಪ್ರತೀಪತರಣಂಮಹತ್)" ಕೊಚ್ಚಿಕೊಂಡು ಒಯ್ಯುತ್ತಿರುವ ಪ್ರವಾಹಕ್ಕೆದುರಾಗಿ ಈಜಿ ತಪ್ಪಿಸಿಕೊಳ್ಳಲು ಬಯಸುವಂತೆ ತಾಪಶಾಂತಿಯಾಗದೆ ದೊರೆಯ ವಿರಹವ್ಯಥೆಯು ಮತ್ತೂ ಹೆಚ್ಚುವುದು. ಇಬ್ಬರೂ ಅತಿಮುಕ್ತಲತಾಮಂಟಪದಲ್ಲಿ ಕುಳಿತು ಉರ್ವಶಿಯನ್ನು ಸಂಪಾದಿಸಲು ಸರಿಯಾದ ಉಪಾಯವನ್ನು ಯೋಚಿಸುವಷ್ಟರಲ್ಲಿ ದೊರೆಗೆ ಶುಭಶಕುನಗಳು ತೋರಲು ಇಷ್ಟಾರ್ಥ ಸಿದ್ಧಿಸುವುದೆಂದು ಸಮಾಧಾನ ಹೊಂದುವನು.

ಈ ವೇಳೆಗೆ ಉರ್ವಶೀ ಚಿತ್ರಲೇಖೆಯರು ಅಂತರಿಕ್ಷಮಾರ್ಗವಾಗಿ ಬರುವರು. ಉರ್ವಶಿಯು ತನ ನಾಚುಕೆಯನ್ನು ದೂರಮಾಡಿ ತನಗೆ ಪುರೂರವನ ಮೇಲಿದ್ದ ಗಾಢವಾದ ಪ್ರೇಮವನ್ನೂ ಅವನನ್ನು ಕಾಣಲು ತಾನು ಪ್ರತಿಷ್ಠಾನಕ್ಕೆ ಹೊರಟಿರುವುದನ್ನೂ ಸಖಿಗೆ ತಿಳಿಸುವಳು. ಬೇರೊಂದು ಸ್ವರ್ಗದಂತಿದ್ದ ಪುರೂರವನ ಅರಮನೆಗೆ ಬಂದು ಅಲ್ಲಿ ಅವನನ್ನು ಕಾಣದೆ ಪ್ರಮದವನದಲ್ಲಿ ತಂಗಿರಬೇಕೆಂದು ನಿಶ್ಚಯಿಸಿ ಅಲ್ಲಿಗೆ ತೆರಳುವರು. ಆಗ ದೊರೆಯೂ ವಿದೂಷಕನೂ ಅವರ ಕಣ್ಣಿಗೆ ಬೀಳುವರು. ತಿರಸ್ಕರಿಣೀ ವಿದ್ಯೆಯ ಬಲದಿಂದ ಅವನಿಗೆ ಕಾಣಿಸಿಕೊಳ್ಳದೆಯೇ ಉರ್ವಶಿಯು ಪುರೂರವನ ಪಕ್ಕದಲ್ಲಿ ನಿಲ್ಲುವಳು. ದೊರೆ ಮತ್ತು ವಿದೂಷಕರ ಸಂವಾದವು ನಡೆಯುತ್ತಲೇ ಇರುವುದು.

ವಿದೂಷಕ:—'ಮಿತ್ರ, ಇಗೋ ಹೇಳುತ್ತಿದ್ದೇನೆ; ದುರ್ಲಭಳಾದ ಪ್ರೇಯಸಿಯನ್ನು ಹೊಂದುವ ಉಪಾಯವನ್ನು ಆಲೋಚಿಸಿದ್ದೇನೆಂದು' (ನೀನು ಕೇಳುತ್ತಲೇ ಇಲ್ಲವಲ್ಲ ಎಂದು ಅಭಿಪ್ರಾಯ).

ದೊರೆ :—'ಹೇಳು ಮಿತ್ರ'.

ವಿದೂಷಕ :—'ಸ್ವಪ್ನದಲ್ಲಿ ಸಮಾಗಮವನ್ನುಂಟುಮಾಡುವ ನಿದ್ರೆಯನ್ನನುಭವಿಸು; ಅಥವಾ ಅವಳ ಚಿತ್ರವನ್ನು ಬರೆದು ನೋಡುತ್ತ ವಿನೋದಪಡು.'

ಇದು ಕೇವಲ ದಡ್ಡತನವೆಂದು ರಾಜನಿಗೆ ತಿಳಿದರೂ ವಿದೂಷಕನಿಗೆ ಸಮರ್ಪಕವಾದ ಜವಾಬನ್ನು ಕೊಡಬೇಕಾಗುವುದು. ಮನ್ಮಥನ ಕೂರಂಬುಗಳು ಹೃದಯವನ್ನು ಪ್ರವೇಶಿಸಿರುವಲ್ಲಿ ನಿದ್ರೆಯು ಹೇಗೆ ಬರುವುದೆಂದೂ ಚಿತ್ರವನ್ನು ಬರೆಯುವುದಕ್ಕೆ ಕುಳಿತಲ್ಲಿ ಅದು ಮುಗಿಯುವುದರೊಳಗೆ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುವುದೆಂದೂ ಹೇಳಿ ವಿದೂಷಕನ ಉಪಾಯಗಳ ನಿಷ್ಫಲತೆಯನ್ನು ವ್ಯಕ್ತಗೊಳಿಸುವನು. ಹೀಗೆ ತನಗಾಗಿಯೇ ಹಂಬಲಿಸುತ್ತಿರುವನೆಂಬುದು ಉರ್ವಶಿಗೆ ತಿಳಿಯಲಾಗಿ ಅವಳು ಪ್ರಭಾವದಿಂದ ನಿರ್ಮಿಸಿಕೊಂಡ ಒಂದು ಭೂರ್ಜಪತ್ರದಲ್ಲಿ ಅವನ ವಿರಹಪ್ರಲಾಪರೂಪವಾದ ಪ್ರಶ್ನೆಗಳಿಗೆ ಉತ್ತರಗಳನ್ನು ಗುರುತಿಸಿ ಎಸೆಯುವಳು. ಮುಂದೆ ಬಿದ್ದ ಆ ಎಲೆಯನ್ನು ತೆಗೆದುಕೊಂಡು ದೊರೆಯು ಓದಿದೊಡನೆ ಅವನಿಗೆ ಪರಸ್ಪರ ಸಮಾಗಮವೇ ಆದಷ್ಟು ಸಂತೋಷವಾಗುವುದು. ಅನಂತರ ಚಿತ್ರಲೇಖೆಯನ್ನು ಮೊದಲು ಕಣ್ಣಿಗೆ ಬೀಳುವಂತೆ ಮಾಡಿ ತಾನೂ ದೊರೆಗೆ ಕಾಣಿಸಿಕೊಳ್ಳುವಳು. ಆದರೆ ಸ್ವಲ್ಪ ಹೊತ್ತಿನಲ್ಲೇ ಉರ್ವಶಿಯು ನಾಟಕಾಭಿನಯಕ್ಕಾಗಿ ಸ್ವರ್ಗಕ್ಕೆ ಹೋಗಬೇಕಾಗಿ ಬಂದು ಪುರೂರವನನ್ನು ದುಃಖದಲ್ಲಿ ಮುಳುಗಿಸಿ ಅಗಲುವಳು. ಅವಳ ರಮ್ಯವಾದ ಪತ್ರವೂ ಕಳೆದುಹೋಗಿ ದೊರೆಯನ್ನು ಸಮಾಧಾನಗೊಳಿಸಲು ಯಾವುದೂ ಇಲ್ಲವಾಗುವುದು. ಇಷ್ಟು ಹೊತ್ತಿಗೆ ಆ ಭೂರ್ಜಪತ್ರವು ರಾಣಿ ಔಶೀನರಿಯ ಕೈ ಸೇರಿ ಅವಳು ಅದನ್ನೋದಿ ಸಿಟ್ಟಿನಿಂದ ದೊರೆಯನ್ನು ನೋಡಲು ಬರುವಳು. ಗೋಳಿಡುತ್ತಿದ್ದ ದೊರೆಯ ಮುಂದೆ ಆ ಪತ್ರವನ್ನು ನೀಡಿ "ಆರ್ಯಪುತ್ರ, ಶೋಕಿಸಬೇಡಿ, ಇಗೋ ಭೂರ್ಜಪತ್ರ" ಎನ್ನುವಳು. ಅವಳ ಹಂಗಿಸುವ ಮಾತನ್ನು ಕೇಳಿ ದೊರೆಗೂ ವಿದೂಷಕನಿಗೂ ಭಯವೊಂದು ಕಡೆ ವಿಸ್ಮಯವೊಂದು ಕಡೆ. ಅಂತು ರಾಣಿಯು

ಕೋಪಗೊಂಡು ದೊರೆಯು ನಮಸ್ಕರಿಸಿದರೂ ಸಮಾಧಾನಗೊಳ್ಳದೆ ಪರಿವಾರದೊಡನೆ ಹೊರಟುಹೋಗುವಳು. ದೊರೆಗೆ ಕಡುದುಃಖ. ಆದರೆ ನಮಸ್ಕರಿಸಿದರೂ ಪ್ರಸನ್ನಳಾಗದ ಇವಳ ವಿಷಯದಲ್ಲಿ ತಾನು ಧೀರ ನಾಗಿಯೇ ಇರಬೇಕೆಂದೂ ಸಂಕಲ್ಪಿಸುವನು.

ನಾಟಕಾಭಿನಯಕ್ಕೆಂದು ಸ್ವರ್ಗಕ್ಕೆ ಹೋದ ಊರ್ವಶಿಯು ಭರತ ಮುನಿಯ ಆಶ್ರಮದಲ್ಲಿ ನಾಟಕವನ್ನು ಅಭಿನಯಿಸುತ್ತಿದ್ದಾಗ ಮನಸ್ಸು ಪುರೂರವನಲ್ಲೇ ನಟ್ಟಿದ್ದುದರಿಂದ ಬಾಯಿತಪ್ಪಿ 'ಪುರುಷೋತ್ತಮ' ನೆನ್ನುವುದಕ್ಕೆ ಬದಲಾಗಿ 'ಪುರೂರವನೆನ್ನುವಳು.' ಮುನಿಯು ಕೋಪ ಗೊಂಡು ಸ್ವರ್ಗಚ್ಯುತಿಯಾಗಲೆಂದು ಶಾಪಕೊಡುವನು. ಇಂದ್ರನು ಮಾತ್ರ ಕನಿಕರಗೊಂಡು ಮಗನನ್ನು ಕಾಣುವವರೆಗೆ ಮಾತ್ರ ಅವಳು ಭೂಮಿಯಲ್ಲಿರಲೆಂದು ಶಾಪದ ತೀವ್ರತೆಯನ್ನು ಸ್ವಲ್ಪ ಕಡಿಮೆಮಾಡುವನು. ಇಬ್ಬರು ಶಿಷ್ಯರ ಸಂವಾದ ರೂಪವಾದ ಮೂರನೆಯ ಅಂಕದ ವಿಷ್ಕಂಭಕ ದಿಂದ ಇದು ಗೊತ್ತಾಗುವುದು.

ಅಂಕದ ಸಂಗತಿಗಳು ನಡೆಯುವುದು ಮಣಿಹರ್ಮ್ಯದ ಬಿಸಿಲು ಮಹಡಿಯಲ್ಲಿ 'ಖಂಡ ಮೋದಕ' ದಂತೆ ಚಂದ್ರನು ಉದಯಿಸುವ ಚೈತ್ರ ಕೃಷ್ಣ ಚತುರ್ಥಿಯಿರಬಹುದು. ಸಂಧ್ಯಾಕಾಲ ಅಥವಾ ರಾತ್ರಿವೇಳೆ.

ಸರ್ವಃ ಕಲ್ಯೇ ವಯಸಿ ಯತತೇ ಲಬ್ಧುಮರ್ಥಾನ್ ಕುಟುಂಬೀ
ಪಶ್ಚಾತ್ಪುತ್ರೈರಪಹೃತಭರಃ ಕಲ್ಪತೇ ವಿಶ್ರಮಾಯ ।
ಅಸ್ಮಾಕಂ ತು ಪ್ರತಿದಿನಮಿಯಂ ಸಾದಯಂತೀ ಶರೀರಂ
ಸೇವಾಕಾರಾ ಪರಿಣತಿರಹೋ ಸ್ತ್ರೀಷು ಕಷ್ಟೋಽಧಿಕಾರಃ ॥

(III-1)

"ಪೂರ್ವ ವಯಸ್ಸಿನಲ್ಲಿ ಸಂಸಾರಿಗಳು ಹಣವನ್ನು ಸಂಪಾದಿಸುವುದಕ್ಕಾಗಿ ದುಡಿಯುವರು. ಅನಂತರ ಮಕ್ಕಳಿಗೆ ಈ ಭಾರವನ್ನು ಹೊರಿಸಿ ವಿಶ್ರಾಂತಿ ಹೊಂದುವರು. ನಮಗಾದರೋ ಪ್ರತಿದಿನವೂ ದೇಹವನ್ನು ಸವೆಸುವ ಸೇವಾರೂಪವಾದ ಮುಪ್ಪೇ. ಹೆಂಗಸರ ಎಡೆಯಲ್ಲಿ ಕೆಲಸಮಾಡುವುದು ಬಹಳ ಕಷ್ಟ" ಎಂದು ಗೊಣಗುಟ್ಟುತ್ತ ಕಂಚುಕಿಯು ಹೊರಟಿರುವನು.

ರಾಣಿಯ ಅಪ್ಪಣೆಯಂತೆ ಅವಳಾಚರಿಸುತ್ತಿದ್ದ ವ್ರತಕ್ಕೆ ದಯಮಾಡಿಸ ಬೇಕೆಂದು ದೊರೆಗೆ ಅರಿಕೆ ಮಾಡಬೇಕು. ಇದೇ ಅವನ ಕೆಲಸ. ದೊರೆಯು ಸಂಧ್ಯಾವಂದನಾದಿಗಳನ್ನು ಮುಗಿಸಿದಮೇಲೆ ಅವನನ್ನು ಕಾಣಬಹುದೆಂದು ಕಾದಿರುವನು. ಆ ವೇಳೆಗೆ ದೊರೆಯೂ ವಿದೂಷಕ ನೊಡನೆ ಆ ಕಡೆಗೇ ಬರುವನು. ಕಂಚುಕಿಯು ತನ್ನ ಕೆಲಸವನ್ನು ನೆರವೇರಿಸಿ ಹೊರಡುವನು.

ರಾಣಿಯ ವ್ರತವು ವಾಸ್ತವವಾಗಿ ದೇವತಾಭಕ್ತಿಮೂಲವಲ್ಲವೆಂದೂ, ತನ್ನ ನಮಸ್ಕಾರವನ್ನು ತಿರಸ್ಕರಿಸಿದುದಕ್ಕಾಗಿ ಪಶ್ಚಾತ್ತಾಪಗೊಂಡು ಆ ದೋಷವನ್ನಳಿಸುವುದಕ್ಕೆ ಹೂಡಿದ ನೆಪವೆಂದೂ ದೊರೆಯು ಸಿದ್ಧಾಂತಿ ಸುವನು. ವಿದೂಷಕನ ಪ್ರತಿಭೆಗೆ ಮುಕ್ಕಾದ ಕಡುಬಿನಂತೆ ಗೋಚರ ವಾಗುವ ಚಂದ್ರನು ಉದಯಿಸಲಾಗಿ ದೊರೆಯು ಅವನನ್ನು ಸ್ತುತಿಸಿ ನಮಸ್ಕರಿಸುವನು. ರಾಣಿಯು ಬರಲು ಸ್ವಲ್ಪ ವಿರಾಮವಿದ್ದುದರಿಂದ ಅಷ್ಟರಲ್ಲೇ ದೊರೆಯು ರಹಸ್ಯವಾಗಿ ತನ್ನ ವಿರಹಶೋಕವನ್ನು ವಿದೂಷಕ ನೊಡನೆ ಹೇಳಿಕೊಳ್ಳುವನು. ವಿದೂಷಕನು ಬಹಳಮಟ್ಟಿನ ಅನುಕಂಪ ದಿಂದ ಹೆಚ್ಚು ವಿಲಂಬವಿಲ್ಲದೆ ಸಮಾಗಮವಾಗುವುದೆಂದು ಹೇಳುವನು. ಶುಭಶಕುನಗಳಾಗಿ ಬ್ರಾಹ್ಮಣ ವಚನವು ಸತ್ಯವೆನ್ನಿಸುವುದು.

ಇಷ್ಟರಲ್ಲಿ ಅಭಿಸಾರಿಕೆಯ ವೇಷವನ್ನು ಧರಿಸಿದ ಉರ್ವಶಿಯು ಚಿತ್ರಲೇಖೆಯೊಡನೆ ಅಂತರಿಕ್ಷಮಾರ್ಗವಾಗಿ ಬರುವಳು. ಅವಳ ಸೌಂದ ರ್ಯವನ್ನು ನೋಡಿ ಚಿತ್ರಲೇಖೆಗೆ ತಾನೇ ಪುರೂರವನಾಗಬೇಕೆನ್ನಿಸು ವುದು. ಉರ್ವಶಿಯು ಪುರೂರವನನ್ನು ಸೇರಲು ತ್ವರೆಪಡುವಳು. ಕೊಂಚ ಹೊತ್ತಿನಲ್ಲಿ ರಾಜಧಾನಿಗೆ ಬಂದು ಪುರೂರವನು ಮಣಿಹರ್ಮ್ಯ ದಲ್ಲಿರುವುದನ್ನು ಪ್ರಭಾವದಿಂದ ತಿಳಿದುಕೊಳ್ಳುವರು. ಮನಸ್ಸು ಉರ್ವಶಿ ಯಲ್ಲೇ ತೊಳಲುತ್ತಿದ್ದುದರಿಂದ ದೊರೆಯು ಅವಳೊಡನೆ ಭಾವ ಮೂಲಕ ವಾಗಿ ಸಂಪಾದಿಸಿದ ಸಮಾಗಮವನ್ನನುಭವಿಸುತ್ತಿರುವುದೂ ಅವರಿಗೆ ಗೊತ್ತಾಗುವುದು. ಪುರೂರವನ ಸ್ವಭಾವವು ಚೆನ್ನಾಗಿ ತಿಳಿಯದಿದ್ದುದರಿಂದ, ಅವನ ಬಳಿಗೆ ಹೋಗಲು ಇದು ಸುಸಮಯವೆಂದು ಚಿತ್ರಲೇಖೆಯು

ಸೂಚಿಸಿದರೂ, ಉರ್ವಶಿಯು ಒಡಂಬಡುವುದಿಲ್ಲ. ಮದನಬಾಧೆಯು ರಾತ್ರಿಯೊಂದಿಗೆ ಹೋರುತ್ತಿರುವುದೆಂದು ಪುರೂರವನು ಹೇಳಿದರೂ ಅವಳ ಸಂದೇಹವು ಹೋಗುವುದಿಲ್ಲ. ಆದುದರಿಂದ ಮರೆಯಲ್ಲಿ ನಿಂತು ಅವನಾಡುವ ಮಾತುಗಳನ್ನು ಕೇಳಲಿಚ್ಛಿಸುವಳು. ಕಡೆಗೆ "ರಥವು ಅಲುಗಿದಾಗ ನನ್ನ ಈ ತೋಳು ಅವಳ ತೋಳಿಗೆ ಸೋಕಿತು. ನನ್ನ ದೇಹದ ಈ ಒಂದು ಅಂಗವೇ ಧನ್ಯ. ಉಳಿದುದೆಲ್ಲ ಹೊರೆಮಾತ್ರ [1] ವೆಂದು ಪುರೂರವನು ಹೇಳಿದೊಡನೆ ಉರ್ವಶಿಯ ಸಂಶಯವು ಮಾಯವಾಗುವುದು. ತಟ್ಟನೆ ಅವನ ಮುಂದೆ ನಿಲ್ಲುವಳು. ಸ್ವಲ್ಪ ಗಾಬರಿಗೊಂಡ ಪುರೂರವನು ಅವಳನ್ನು ಗುರುತಿಸದಿರಲು ಪುನಃ ಅವಳಿಗೆ ಸಂದೇಹವುಂಟಾಗುವುದು. ಇಷ್ಟುಹೊತ್ತಿಗೆ ಉಪವಾಸ ನಿಯಮವೇಷವನ್ನು ಧರಿಸಿದ ರಾಣಿ ಔಶೀನರಿಯು ಬರುವಳು. ಉರ್ವಶಿಗೆ "ಇವಳು ಶಚಿಗೇನೂ ಕಡಿಮೆಯಿಲ್ಲ ; ಆದುದರಿಂದ ರಾಣಿಯ ಸ್ಥಾನಕ್ಕೆ ಅರ್ಹಳು" ಎನ್ನಿಸುವುದು. 'ಪ್ರಿಯಾನುಪ್ರಸಾದನ' ವ್ರತವನ್ನು ಆಚರಿಸಲು ಬಂದ ಅವಳನ್ನು ದೊರೆಯು ಯಥೋಚಿತವಾಗಿ ಗೌರವಿಸಲು ಉರ್ವಶಿಯ ಮನಸ್ಸು ಕಾತರಗೊಳ್ಳುವುದು. ತನ್ನಮೇಲೆ ದೊರೆಗೆ ನಿಜವಾದ ಪ್ರೇಮವಿದ್ದಲ್ಲಿ ಅದು ರಾಣಿಯನ್ನು ಗೌರವಿಸಲು ಅವಕಾಶ ಕೊಡಲಾರದೆಂದು ಅವಳ ನಂಬಿಕೆ. ನಾಗರಿಕರು ಬೇರೆ ಹೆಂಗಸರನ್ನು ಕಾಮಿಸಿದಾಗ ತಮ್ಮ ಹೆಂಡತಿಯರನ್ನು ವಿಶೇಷವಾಗಿ ಗೌರವಿಸುವುದು ವಾಡಿಕೆಯೆಂದು ಹೇಳಿ ಚಿತ್ರಲೇಖೆಯು ಸಮಾಧಾನಪಡಿಸುವಳು. ರೋಹಿಣೀ ಸಹಿತನಾದ ಚಂದ್ರನನ್ನು ಪೂಜಿಸಿದ ನಂತರ ರಾಣಿಯು ವಿದೂಷಕನಿಗೆ ಭಕ್ಷ್ಯಗಳಿಂದ ಕೂಡಿದ ಬಾಗಿನವನ್ನು ಕೊಟ್ಟು ರಾಜನನ್ನು ಪೂಜಿಸುವಳು. ಕಡೆಯಲ್ಲಿ ಅವನಿಗೆ ನಮಸ್ಕರಿಸಿ ಕೈಜೋಡಿಸಿ ನಿಂತು ರೋಹಿಣೀ ಚಂದ್ರಸಾಕ್ಷಿಯಾಗಿ 'ಇಂದಿನಿಂದ ಆರ್ಯಪುತ್ರನು ಬೇರೆ ಯಾವ ಸ್ತ್ರೀಯಲ್ಲನುರಕ್ತನಾದರೂ ಅಥವಾ ಇನ್ನಾವಳಾದರೂ ಅವನನ್ನು ಕಾಮಿಸಿದರೂ ಸರಿ, ಅಂತಹವಳೊಂದಿಗೆ ನಾನು ಪ್ರೀತಿಯಿಂದ ವರ್ತಿಸುವೆನು' ಎಂದು ಪ್ರತಿಜ್ಞೆ ಮಾಡುವಳು. ಇದರಿಂದ ಉರ್ವಶಿಗೆ ಧೈರ್ಯ ಬಂದು ಪುನಸ್ಸಮಾಗಮವು

---

1. ಇದಂ ತಯಾ ರಥಕ್ಷೋಭಾದಂಗೇನಾಂಗಂ ನಿಪೀಡಿತಮ್ ।
ಏಕಂ ಕೃತಿ ಶರೀರೇಸ್ಮಿನ್ ಶೇಷಮಂಗಂ ಭುವೋ ಭರಃ ॥ (III-11)

ನಿರ್ವಿಘ್ನವೆನಿಸುವುದು. ರಾಣಿಯು ಹೊರಟುಹೋದ ಕೂಡಲೆ ಇತ್ತ ದೊರೆಗೆ ಪುನಃ ಉರ್ವಶಿಯ ಹಂಬಲವು ಪ್ರಾರಂಭವಾಗುವುದು.

ದೊರೆ:—ಗೂಢಂ ನೂಪುರ ಶಬ್ದಮಾತ್ರಮಪಿ ಮೇ ಕಾಂತಂ ಶ್ರುತೌ ಪಾತಯೇತ್
ಪಶ್ಚಾದೇತ್ಯ ಶನೈಃ ಕರೋತ್ಪಲವೃತೆ ಕುರ್ವೀತ ವಾ ಲೋಚನೆ ।
ಹರ್ಮ್ಯೇಽಸ್ಮಿನ್ನವತೀರ್ಯ ಸಾಧ್ವಸವಶಾನ್ಮಂದಾಯಮಾನಾ ಬಲಾ-
ದಾನೀಯೇತ ಪದಾತ್ಪದಂ ಚತುರಯಾ ಸಖ್ಯಾ ಮಮೋ ಪಾಂತಿಕಂ ॥

"(ಉರ್ವಶಿಯು) ಅವಿತುಕೊಂಡಾದರೂ ನನ್ನ ಕಿವಿಯಮೇಲೆ ಅವಳ ಇಂಪಾದ ಗೊಲಸಿನ ಶಬ್ದವನ್ನು ಬೀಳಿಸಬಾರದೆ? ಹಿಂದಿನಿಂದ ಬಂದು ತನ್ನ ಕೋಮಲವಾದ ಕೈಗಳಿಂದ ಕಣ್ಣನ್ನಾದರೂ ಮುಚ್ಚಬಾರದೆ? ಬೆದರಿದ ಮೆಲ್ನಡೆಯಿಂದ ಕೂಡಿ ಈ ಬಿಸಿಲು ಮಹಡಿಯ ಮೇಲಕ್ಕೆ ಇಳಿದು ಸಖಿಯೊಡನೆ ನನ್ನಲ್ಲಿಗೆ ಬರಬಾರದೆ?"

ಚಿತ್ರಲೇಖೆ:—ಸಖಿ, ಉರ್ವಶಿ, ಈ ಮನೋರಥವನ್ನು ನೆರವೇರಿಸು.

ಉರ್ವಶಿ:—ಸ್ವಲ್ಪ ವಿನೋದಿಸುವೆನು.

ಹೀಗೆಂದು ಹಿಂದಿನಿಂದ ಬಂದು ಉರ್ವಶಿಯು ಅವನ ಕಣ್ಣುಗಳನ್ನು ಮುಚ್ಚುವಳು. ದೊರೆಯು ಸ್ಪರ್ಶಸುಖದ ಆಧಾರದಮೇಲೆಯೇ ಇವಳು ಉರ್ವಶಿಯೆಂದು ನಿರ್ಧರಿಸುವನು. ಪರಸ್ಪರ ಕುಶಲಪ್ರಶ್ನೆಗಳಾದಮೇಲೆ.

ಉರ್ವಶಿ:—(ಚಿತ್ರಲೇಖೆಯನ್ನು ಕುರಿತು) ಸಖಿ, ರಾಣಿಯು ಈಗ ಮಹಾರಾಜನನ್ನು ನನಗೆ ಒಪ್ಪಿಸಿರುವುದರಿಂದ ಪ್ರಣಯವತಿಯಂತೆ ಅವನ ಶರೀರ ಸಂಪರ್ಕವನ್ನು ಮಾಡಿಕೊಳ್ಳುವೆನು. ನಾನು ಇವನನ್ನು ವರಿಸುವುದು ಅವಳ ನ್ಯೂನತೆಯನ್ನು ಮನಗಂಡವಳಂತಲ್ಲ. (ಹೀಗೆಂದು ಹೇಳಿ ದೊರೆಯ ಒತ್ತಿನಲ್ಲೇ ಏಕಾಸನದಲ್ಲಿ ಕುಳಿತುಕೊಳ್ಳುವಳು.)

* * *

ದೊರೆ:—ದೇವ್ಯಾ ದತ್ತ ಇತಿ ಯದಿ ವ್ಯಾಪಾರಂ ವ್ರಜಸಿ ಮೇ ಶರೀರೇಸ್ಮಿನ್ ।
ಪ್ರಥಮಂ ಕಸ್ಯಾನುಮತೇ ಚೋರಿತಮಯಿ ಮೇ ತ್ವಯಾ ಹೃದಯಮ್ ॥

"ರಾಣಿಯು ಒಪ್ಪಿಸಿದಳೆಂದು ಈಗ ನನ್ನ ಶರೀರ ಸಂಪರ್ಕವನ್ನು ಮಾಡಿಕೊಂಡರೆ, ಮೊದಲು ನನ್ನ ಹೃದಯವನ್ನು ಯಾರ ಅಪ್ಪಣೆಯ ಮೇಲೆ ಕಸುಕೊಂಡೆ ?"

ಚಿತ್ರಲೇಖೆ:—(ಸೂರ್ಯಾರಾಧನಕ್ಕಾಗಿ ಹೊರಡುವಳಾಗಿ ದೊರೆಯನ್ನು ಕುರಿತು) ನನ್ನ ಸಖಿಯು ತಿರುಗಿ ಸ್ವರ್ಗವನ್ನೆಳಸದಂತೆ ನೋಡಿಕೊಳ್ಳುವುದು ಮಿತ್ರನ ಕರ್ತವ್ಯ.

ವಿದೂಷಕ:—ಸ್ವರ್ಗವನ್ನೆಳಸುವುದಕ್ಕೆ ಅಲ್ಲೇನಿದೆ ? ತಿಂಡಿಯೇ ?; ತೀರ್ಥವೆ ?; ಸುಮ್ಮನೆ ಕಣ್ಣನ್ನೂ ಮಿಟಿಕಿಸದೆ ಮೀನುಗಳನ್ನಣಕಿಸುವುದು ಮಾತ್ರ.

* * *

ದೊರೆ:—ಸಾಮಂತಮೌಲಿಮಣಿರಂಜಿತಪಾದಪೀಠ
ಮೇಕಾತಪತ್ರಮವನೇ ರ್ನ ತಥಾ ಪ್ರಭುತ್ವಮ್ ।
ಅಸ್ಯಾಸ್ಸಖೆ ಚರಣಯೋರಹಮದ್ಯ ಕಾಂತ
ಮಾಜ್ಞಾಕರತ್ವಮಧಿಗಮ್ಯ ಯಥಾ ಕೃತಾರ್ಥಃ ॥

"ಈಗ ಇವಳ ಚರಣದಾಸನಾಗಿ ಹೊಂದಿರುವಷ್ಟು ಸುಖವನ್ನು ನಾನು ಏಕಾತಪತ್ರವಾದ ಪ್ರಭುತ್ವವನ್ನು ಹೊಂದಿಯೂ ಅನುಭವಿಸಲಿಲ್ಲ." [1]

ಉರ್ವಶಿ:—ಬರುವುದಕ್ಕೆ ತಡಮಾಡಿ ತಪ್ಪುಮಾಡಿದ್ದೇನೆ. (ಕ್ಷಮಿಸಬೇಕು.)

ದೊರೆ:—ಸುಂದರಿ ; ಇಲ್ಲ, ಇಲ್ಲ. ಕಷ್ಟಪಟ್ಟಮೇಲೆ ಬರುವ ಸುಖವೇ ಹೆಚ್ಚು ರುಚಿಕರ. ಮರದ ನೆರಳು ಎಲ್ಲರನ್ನೂ ತಣಿಸಿದರೂ ಬಳಲಿದವರಿಗೆ ಹೆಚ್ಚು ಸುಖಕರ.

---

1. ಶ್ಲೋಕದ ಮುಖ್ಯ ತಾತ್ಪರ್ಯವನ್ನು ಮಾತ್ರ ಕೊಡಲಾಗಿದೆ.

ಹೀಗೆ ಸಮಾಗಮಹೊಂದಿದ ಪ್ರಣಯಿಗಳು ಬಹಳಕಾಲ[1] ದಾಂಪತ್ಯ ಸುಖವನ್ನು ಅನುಭವಿಸಿದರೂ ಕವಿಯ ದೃಷ್ಟಿಯಿಂದ ಅದಷ್ಟು ಮುಖ್ಯವಲ್ಲ. ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿಯೋ ಎಂಬಂತೆ ಈ ಅವಧಿಯು ಕಳೆದುಹೋಗಿ, ನಾಲ್ಕನೆಯ ಅಂಕದಲ್ಲಿ ಪುನಃ ಇವರನ್ನು ಕಾಣುವುದು ಬಹಳ ಮಟ್ಟಿಗೆ ಬದಲಾವಣೆ ಹೊಂದಿದ ಪರಿಸ್ಥಿತಿಯಲ್ಲಿ. ಸುಖಮಯವಾಗಿ ಕೊನೆಗಂಡ ಮೂರನೆಯ ಅಂಕದ ಪರಿಸ್ಥಿತಿಯು ನಂಬುವುದಕ್ಕೇ ಸಾಧ್ಯವಿಲ್ಲವೆನ್ನುವಷ್ಟು ಬದಲಾವಣೆ ಹೊಂದುವುದು. ಆದರೆ ಇದಕ್ಕೆ ಒಂದು ಸಣ್ಣ ಪ್ರವೇಶಕವು ಪೀಠಿಕೆಯನ್ನಿಟ್ಟು ಕಥೆಯ ಮುಂದೋಟವು ಸ್ವಾಭಾವಿಕವಾಗಿ ತೋರುವಂತೆ ಮಾಡುವುದು. ಉರ್ವಶಿಯನ್ನಗಲಿ ಸ್ವರ್ಗಕ್ಕೆ ತೆರಳಿದ ಚಿತ್ರಲೇಖೆಗೆ ಒಂದು ದಿನ ಸಖಿಯ ನೆನಪು ಬರುವುದು. ಧ್ಯಾನಶಕ್ತಿಯಿಂದ ಅವಳ ವರ್ತಮಾನವನ್ನು ಕಂಡು ಹಿಡಿಯಲಾಗಿ, ಪುರೂರವನು ಪ್ರೇಯಸಿಯೊಡನೆ ವಿಹರಿಸುವುದಕ್ಕಾಗಿ ಗಂಧಮಾಧನಕ್ಕೆ ಹೋದುದು ; ಅಲ್ಲಿ ವಿಹರಿಸುತ್ತಿದ್ದ ವಿದ್ಯಾಧರ ಕನ್ಯೆಯೊಬ್ಬಳನ್ನು ಇವನು ನೋಡಿದನೆಂದು ಕೋಪಗೊಂಡು ಉರ್ವಶಿಯು ಏನಾದರೂ ಸಮಾಧಾನಗೊಳ್ಳದೆ ಹೆಂಗಸರು ಪ್ರವೇಶಿಸಕೂಡದಾದ ಕುಮಾರ ವನಕ್ಕೆ ಹೋದುದು; ತತ್ಪರಿಣಾಮವಾಗಿ ಲತೆಯಾಗಿ ಮಾರ್ಪಟ್ಟು ಪುರೂರವನನ್ನು ಹುಚ್ಚನಾಗಿ ಅಲೆಯುವಂತೆ ಮಾಡಿದುದು ; ಇದೆಲ್ಲ ಅವಳ ಗಮನಕ್ಕೆ ಬರುವುದು. ಪ್ರಿಯಸಖಿಗೆ ಒದಗಿದ ದುಃಖದಿಂದ ಬಹಳ ಮಟ್ಟಿಗೆ ಖಿನ್ನಳಾಗಿ ಈ ವಿಚಾರವನ್ನು ಜೊತೆಯಲ್ಲಿದ್ದ ಸಹಜನ್ಯೆಗೆ ತಿಳಿಸುವಳು. ಅವಳು "ಅಂತಹ ವ್ಯಕ್ತಿಗಳನ್ನು ದುಃಖವು ಹೆಚ್ಚುಕಾಲ ಪೀಡಿಸದು ; ದೈವಾನುಗ್ರಹದಿಂದ ಪುನಸ್ಸಮಾಗಮವಾಗುವುದು" ಎಂದು ಹೇಳಿ ಸಮಾಧಾನಗೊಳಿಸುವಳು.

ಅಂಕದ ಸಂಗತಿಗಳು ನಡೆಯುವುದು ಗಂಧಮಾದನದ ಕುಮಾರ ವನವೆಂಬಲ್ಲಿ. ಸುಖಿಗಳಲ್ಲಿ ಪರಮಸುಖಿಯಾಗಿದ್ದ ಪುರೂರವನು ಉರ್ವಶೀ

---

1. 'ಸುಮಾರು 12—13 ವರ್ಷಗಳಾದರೂ' ಎನ್ನಬಹುದು. ಇದರಿಂದ ನಾಲ್ಕನೆಯ ಅಂಕದ ಕತೆಗೂ ಐದನೆಯ ಅಂಕದ ಕತೆಗೂ ನಡುವೆ ಸುಮಾರು 13 ವರ್ಷಗಳ ಅವಧಿಯಾದರೂ ಇರಬೇಕೆಂದು ತೋರುತ್ತದೆ.

ವಿರಹದಿಂದ ಉನ್ಮತ್ತನಾಗಿ ಪ್ರಲಪಿಸುತ್ತಿರುವನು. ಅವನ ಜೀವನದಲ್ಲಿ ಉಂಟಾಗಿರುವ ಮಹತ್ತರವಾದ ಅಧಃಪಾತವು ಚಿತ್ರಲೇಖೆ ಸಹಜನ್ಯೆಯರ ಸಂವಾದದ ಮೂಲಕ ಮೊದಲೇ ತಿಳಿದಿದ್ದರೂ ಅವನ ಸ್ಥಿತಿಯನ್ನು ಸಾಕ್ಷಾತ್ತಾಗಿ ನೋಡುವಾಗ ಯಾರಿಗಾದರೂ ದುಃಖವಾಗದಿರದು. ಅಂಕವೆಲ್ಲ ಅವನ ಉನ್ಮತ್ತ ಪ್ರಲಾಪದಿಂದ ತುಂಬಿಹೋಗಿರುವುದು. ಒಮ್ಮೆ ಭ್ರಮೆ, ಒಮ್ಮೆ ಕೋಪ, ಅದರಲ್ಲೂ ಅಚೇತನ ವಸ್ತುಗಳ ವಿಷಯದಲ್ಲಿ ಸಿಟ್ಟು; ಪುನಃ ಅವುಗಳನ್ನೇ ಕುರಿತು ಪ್ರಶ್ನೆ, ಉತ್ತರ ಬರದಿದ್ದಲ್ಲಿ ತಿರಸ್ಕಾರ, ಮಗದೊಮ್ಮೆ ಇದೆಲ್ಲವನ್ನೂ ಮರೆತು ಅವುಗಳ ವಿಷಯದಲ್ಲೇ ಆದರ ಮತ್ತು ಸ್ನೇಹ........ಹೀಗೆ ಮಿಂಚಿನ ವೇಗದಿಂದ ಅವನ ಮನಸ್ಸಿನಲ್ಲಿ ಸುಳಿದಾಡುತ್ತಿದ್ದ ನಾನಾವಿಧವಾದ ಭಾವನೆಗಳು ಚಮತ್ಕಾರವಾಗಿಯೂ ಸ್ವಾಭಾವಿಕವಾಗಿ ತೋರುವಂತೆಯೂ ಚಿತ್ರಿತವಾಗಿವೆ. ಉನ್ಮತ್ತಾವಸ್ಥೆಗೆ ಸಹಜವಾಗಿ ಮಾತುಗಳಲ್ಲಿ ಪರಸ್ಪರ ವಿರೋಧ, ಅಸಾಮಂಜಸ್ಯಗಳೂ, ಮಧ್ಯೆ ಮಧ್ಯೆ ಜ್ಞಾನೋದಯ ವಿವೇಕ ಬುದ್ಧಿ, ಧೈರ್ಯಹೊಂದುವ ಪ್ರಯತ್ನ, ನಿರಾಶೆ ಇವೇ ಮೊದಲಾದುವೂ ಪುರೂರವನಲ್ಲಿ ಚೆನ್ನಾಗಿ ಗೋಚರವಾಗುವುವು. ಹುಚ್ಚರ ಮಾತಿನಲ್ಲಿ ಹುಚ್ಚಿಗೆ ಕಾರಣವು ಅಡಗಿರುತ್ತದೆಯೆಂದು ಹೇಳುವುದುಂಟು. ಹಾಗೆ ಪುರೂರವನ ಉನ್ಮತ್ತ ಪ್ರಲಾಪದಲ್ಲೂ ಅದಕ್ಕೆ ಕಾರಣವಾದ ಉರ್ವಶೀವಿರಹವ್ಯಥೆಯು ಜೀವ ಸ್ವರದಂತೆ ಮಿಡಿಯುವುದು. ಕವಿಯ ಪ್ರತಿಭೆಯು ಇಲ್ಲಿ ಬಹಳ ಮೇಲಿನ ಮಟ್ಟದಲ್ಲಿ ಕೆಲಸ ಮಾಡಿರುವಂತೆ ತೋರುವುದು.

ಇಲ್ಲಿನ ಸನ್ನಿವೇಶಗಳಲ್ಲಿ ಒಂದೊಂದನ್ನೂ ಅನುವಾದಮಾಡಿ ವರ್ಣಿಸುವುದು ಅಸಾಧ್ಯ. ಒಟ್ಟು ಚಮತ್ಕಾರವನ್ನು ಮೂಲದಿಂದಲೇ ಸವಿದರೆ ಲೇಸು. ಪ್ರಕೃತ ಕೆಲವು ಉದಾಹರಣೆಗಳನ್ನು ಮಾತ್ರ ಕೊಡಲಾಗಿದೆ. ಉರಿಯುವ ಗಾಯಕ್ಕೆ ಉಪ್ಪು ಸವರಿದಂತೆ ಪುರೂರವನ ವಿರಹದ ಜೊತೆಗೆ ವರ್ಷಾಕಾಲವು ಪ್ರಾಪ್ತವಾಗಿದೆ. ಆಗಿನ ಮೇಘವೊಂದನ್ನು ನೋಡಿ ರಾಕ್ಷಸನೆಂದು ಭ್ರಮಿಸಿ ಪುರೂರವನು " ರಾಕ್ಷಸ, ದುರಾತ್ಮ, ನಿಲ್ಲು ನಿಲ್ಲು" ಎಂದು ಗದರಿಸುವನು. ಕಾಮನಬಿಲ್ಲು ಧನುಸ್ಸಿನಂತೆ ಕಾಣುವುದು. ಮಳೆ ಹನಿಗಳು ಬಾಣಗಳಂತೆ; ಮಿಂಚು ಉರ್ವಶಿಯಂತೆ....ಕೇಶಿಯು ಉರ್ವಶಿ

ಯನ್ನು ಅಪಹರಿಸಿದ್ದ ಸನ್ನಿವೇಶವು ಕಳೆದುಹೋಗಿದ್ದರೂ ಪುನಃ ಒದಗಿ ಬಂದಂತೆ ತೋರುವುದು. ಆದರೆ ಕೋಪವು ತಣಿದಮೇಲೆ ಇಂದ್ರಜಾಲ ವಿದ್ಯೆಯಿಂದಲೋ ಎಂಬಂತೆ ಎಲ್ಲ ಬದಲಾಯಿಸುವುದು. ಜ್ಞಾನೋದಯ ವಾದ ಮೇಲೆ, ಊರ್ವಶಿಯು ಕೋಪಿಸಿಕೊಂಡು ರೂಪನ್ನು ಮರೆಸಿಕೊಂಡಿರ ಬಹುದೆ? ಎಂಬ ಪ್ರಶ್ನೆಯು ಏಳುವುದು. ಕೂಡಲೇ ಇಷ್ಟುಕಾಲ ಕೋಪಿಸಿಕೊಂಡಿರಲಿಕ್ಕಿಲ್ಲವೆನ್ನಿಸುವುದು — ಸ್ವರ್ಗಕ್ಕೇ ಹೊರಟುಹೋಗಿರ ಬಹುದೇ? ಎಂದುಕೊಳ್ಳುವನು....ಅದೂ ಇಲ್ಲ, ತನ್ನಲ್ಲೇ ಅವಳ ಮನಸ್ಸು ನಟ್ಟಿರುವುದೆಂಬುದೂ ಜ್ಞಾಪಕಕ್ಕೆ ಬರುವುದು — ಹೀಗೆ ಭಾವನಾತರಂಗ ಗಳು ಒಂದಾದ ಮೇಲೊಂದು ಬಂದು ಅಸಹಾಯನಾದ ಪುರೂರವನ ಮೇಲೆ ತಮ್ಮ ಪ್ರಭಾವವನ್ನು ಬೀರಿ ನಾನಾವಿಧವಾದ ಪರಿಣಾಮಗಳ ನ್ನುಂಟುಮಾಡಿ ಶಾಂತಿಹೊಂದುವುದು ಅಂಕದ ಉದ್ದಕ್ಕೂ ಕಂಡುಬರು ವುದು. ಮೊದಲು ಉದ್ವೇಗಕ್ಕೆ ಕಾರಣವಾಗಿದ್ದ ವರ್ಷಾಕಾಲದ ಚಿಹ್ನೆಗಳು ಸ್ವಲ್ಪ ಹೊತ್ತಿನಮೇಲೆ ತನಗಾಗಿ ನಿರ್ಮಿತವಾಗಿದ್ದ ರಾಜೋಪಚಾರ ಗಳಂತೆ ತೋರುವುವು. ಬಿಳಿ ಮೋಡವು ಶ್ವೇತಚ್ಛತ್ರವಾಗುವುದು; ಕೇಕೆ ಹಾಕುವ ನವಿಲುಗಳು ಬಂದಿಗಳಾಗುವರು....ಇತ್ಯಾದಿ.

ಈ ಯೋಚನೆಗಳನ್ನೆಲ್ಲ ಬಿಟ್ಟು ಪ್ರಿಯತಮೆಯನ್ನು ಹುಡುಕಲು ಹೊರಟಾಗ ಮತ್ತೊಂದು ವಿಧವಾದ ಆಲೋಚನೆಗಳು ಅವನನ್ನು ಕಾಡು ವುವು. ಎದುರಿಗೆ ಕಾಣುವ ಒಂದೊಂದು ವಸ್ತುವೂ ತನ್ನ ಪ್ರಿಯೆಯ ಒಂದೊಂದು ಗುಣವನ್ನೋ ರೂಪಲಾವಣ್ಯಗಳ ಅಂಶವನ್ನೋ ಮನಸ್ಸಿಗೆ ತರುವುದು.[1] ಈ ಸಾದೃಶ್ಯದಿಂದ ಎರಡು ವಿಧವಾದ ಪರಿಣಾಮಗಳು ಉಂಟಾಗುವುವು. ಮೊದಲನೆಯದು ಆಯಾ ವಸ್ತುಗಳ ವಿಷಯದಲ್ಲೇ ಉಂಟಾಗುವ ಆದರ, ತಿರಸ್ಕಾರ ಇವುಗಳಿಗೆ ಸಂಬಂಧಪಟ್ಟದ್ದು. ಎರಡನೆ ಯದು ತನ್ನ ಪ್ರಿಯೆಯಾದ ಊರ್ವಶಿಯಿಂದ ಈ ವಸ್ತುಗಳೆಲ್ಲ ಕೆಲವು

---

1. ಸುತ್ತ ಕೆಂಪಗಿದ್ದು ನೀರು ತುಂಬಿಕೊಂಡಿದ್ದ 'ನಾಯಿ ಕೊಡೆ'(ಕಂದಲಿ) ಗಳು ಕೋಪದಿಂದ ನೀರು ತುಂಬಿದ ಅವಳ ಕಣ್ಣುಗಳನ್ನೂ, ಇಂದ್ರಗೋಪ ಹುಳುಗಳಿಂದ ಕೂಡಿದ ಹೊಸ ಗರಿಕೆಯು ಕಣ್ಣೀರಿನಿಂದಳಿದ ತುಟಿಯ ಬಣ್ಣದಿಂದ ನೆನೆದ ಅವಳ ಗಿಣಿಹಸುರು ರವಿಕೆಯನ್ನೂ ಸ್ಮರಣೆಗೆ ತರುವುವು.

ಗುಣಗಳನ್ನು ಕದ್ದಿರಬೇಕೆಂದೂ ಆದುದರಿಂದ ಅವುಗಳಿಗೆ ಅವಳ ಪ್ರಕೃತ ಸ್ಥಿತಿಯು ತಿಳಿದಿರಬೇಕೆಂದೂ ತೋರಿಬರುವುದು. ಇದರಿಂದಲೇ ಅವನು ದಾರಿಯುದ್ದಕ್ಕೂ ಸಿಕ್ಕುವ ನವಿಲು, ಕೋಗಿಲೆ, ರಾಜಹಂಸ, ಜಿಂಕೆ, ಗಿರಿ, ನದಿ ಇವುಗಳನ್ನೂ ಕೂಡ ಪ್ರಶ್ನೆಮಾಡುವುದು. ಅವನ ಹುಚ್ಚುಮನಸ್ಸಿಗೆ ಕೆಲವು ವಸ್ತುಗಳು ಉತ್ತರವನ್ನು ಹೇಳಿದಂತೆಯೂ ಮತ್ತೆ ಕೆಲವು ಉತ್ತರ ವನ್ನು ಹೇಳದಂತೆಯೂ ಭಾಸವಾಗುವುದು. ಉತ್ತರ ಹೇಳಿದಂತೆ ತೋರಿ ದಾಗ ಒಂದು ವಿಧವಾದ ಆಲೋಚನೆಗಳೂ ಹೇಳದಂತೆ ಕಂಡಾಗ ಮತ್ತೊಂದು ವಿಧವಾದ ಭಾವನೆಗಳೂ ಮನಸ್ಸಿನಲ್ಲಿ ತಲೆದೋರುವುವು. ಕುಣಿಯುವ ಕೋಗಿಲೆಯ ವಿಷಯದಲ್ಲಿ 'ನನಗೆ ಮರುಮಾತಾಡದೆ ಕುಣಿಯುವುದಲ್ಲಾ!.... ಈಗ ನನ್ನ ಪ್ರಿಯೆಯಿಲ್ಲದಿರಲು ಇದರ ದಟ್ಟವಾದ ಗರಿಗೆ ಸಮನೇ ಇಲ್ಲದಂತಾಯಿತು. ಆ ಸುಕೇಶಿಯ ಹೂಮುಡಿದ ಜಡೆ ಯಿದ್ದಿದ್ದರೆ ಇದೇನು ಮಾಡಬಹುದಿತ್ತು? ಅಂತೂ ಇತರರು ದುಃಖಿಸುವು ದನ್ನು ನೋಡಿ ಹರ್ಷಗೊಳ್ಳುವ ಇದನ್ನು ಪ್ರಶ್ನೆಮಾಡಬಹುದೇ? ಎನ್ನಿಸುವುದು. ಕೋಗಿಲೆಯೂ ಇದೇ ರೀತಿ ಆಚರಿಸಿದರೂ ಪ್ರಿಯೆ ಯಂತೆ ಅದು ಮಧುರ ಕಂಠಿಯಾದುದರಿಂದ ಅದರ ವಿಷಯದಲ್ಲಿ ಅವನಿಗೆ ಕೋಪ ಬರುವುದಿಲ್ಲ. ರಾಜಹಂಸವೇನೋ ತನ್ನ ಪ್ರಶ್ನೆಗೆ ಉತ್ತರ ಕೊಟ್ಟಂತೆಯೇ ಆದರೂ ಅದರ ಕಳ್ಳತನವು ಇವನ ಗಮನಕ್ಕೆ ಬರುವುದು. ಪ್ರಿಯೆಯ ಪಾದವಿಕ್ಷೇಪವೆಂಬ ಒಂದು ಕಳವುಮಾಲು "ರಾಜಹಂಸನಲ್ಲಿ ಸಿಕ್ಕಿದ್ದರಿಂದ ಮಿಕ್ಕ ಎಲ್ಲಕ್ಕೂ ಅವನೇ ಹೊಣೆಯಾಗುವನು. ರಾಜ ಹಂಸವು ಹಾರಿಹೋದಾಗ ನಾನು ಕಳ್ಳರನ್ನು ಶಿಕ್ಷಿಸುವ ದೊರೆಯೆಂದು ಹೆದರಿ ಹಾರಿಹೋಗಿರುವುದೆ" ಎಂದು ದೊರೆಗೆ ಸಮಾಧಾನವಾಗುವುದು. ಮಧುಕರ (ದುಂಬಿ) ನನ್ನು ನೋಡಿ "ಅವಳ ಮುಖೋಚ್ಛ್ವಾಸವನ್ನನು ಭವಿಸಿದ್ದರೆ ನಿನಗೆ ಇತರ ಕಮಲಗಳಲ್ಲಿ ಆಸೆಯಿರುತ್ತಿರಲಿಲ್ಲ" ಎನ್ನು ವನು. ಸ್ವಲ್ಪ ದೂರದಲ್ಲೇ ನಿಂತಿದ್ದ ಸಲಗನನ್ನು ನೋಡಿ ಪ್ರಶ್ನೆ ಮಾಡಿದಾಗ ತನಗೂ ಅದಕ್ಕೂ ಇದ್ದ ಸಾಮ್ಯದಿಂದ ಅದರ ವಿಷಯದಲ್ಲಿ ಪ್ರೀತಿಯುಂಟಾಗುವುದು. ಸುರಭಿಕಂದವೆಂಬ ಬೆಟ್ಟವು ಸಿಕ್ಕಲಾಗಿ, ಅಪ್ಸರೆಯರ ವಿಹಾರಸ್ಥಾನವಾದ ಅದರ ತಪ್ಪಲಲ್ಲಿ ಉರ್ವಶಿಯು ಸಿಕ್ಕ

ಬಹುದೆನ್ನಿಸುವುದು. ಆದರೆ ಅಲ್ಲೂ ಆ ಸುತನುವು ದೊರೆಯುವುದಿಲ್ಲ. ಬೆಟ್ಟದ ನದಿಯೊಂದು ಕಣ್ಣಿಗೆ ಬೀಳಲಾಗಿ 'ಉರ್ವಶಿಯೇ ಕೋಪ ಗೊಂಡು ನದಿಯರೂಪವನ್ನು ತಾಳಿರುವಳೇ ?" ಎನ್ನಿಸುವುದು. ನದಿಯು ಇವನ ಪ್ರಶ್ನೆಗೆ ಉತ್ತರ ಕೊಡದೆ ಇದ್ದುದರಿಂದ ಅದು ನಿಶ್ಚಯವಾಗಿಯೂ ನದಿಯೇ (ಉರ್ವಶಿಯಲ್ಲ) ಎಂದು ತೋರುವುದು. ಜಿಂಕೆಯೊಂದನ್ನು ಕುರಿತು "ನಿನ್ನ ಪ್ರಿಯೆಯ ಕಣ್ಣಿಗೆ ಸಮನಾದ ಕಣ್ಣುಗಳುಳ್ಳ ನನ್ನ ಪ್ರಿಯೆಯನ್ನು ನೋಡಿದೆಯಾ" ಎನ್ನುವನು. ಆದರೆ ಅದು ಇವನತ್ತ ತಿರುಗದು. "ಭಾಗ್ಯಹೀನರು ಹೀಗೆತಾನೆ ತಿರಸ್ಕಾರಕ್ಕೊಳಗಾಗುವುದು" ಎಂದುಕೊಳ್ಳುವನು. ಕಡೆಯಲ್ಲಿ ಬಂಡೆಗಳ ಮಧ್ಯದಲ್ಲಿ ಕೆಂಪಗಿದ್ದ ಮಣಿಯೊಂದು ಕಾಣಿಸುವುದು. ಅದರ ವಿಷಯದಲ್ಲಿ ನಾನಾ ವಿಧವಾದ ಭಾವನೆಗಳು ಮನಸ್ಸಿಗೆ ಬರುವುವು. ಕಡೆಗೆ "ಆವಳು ಇದನ್ನು ಮಂದಾರ ಪುಷ್ಪವಾಸನೆಯಿಂದ ಕೂಡಿದ ತನ್ನ ಜಡೆಯಲ್ಲಿ ಧರಿಸಬೇಕೋ ಅವಳೇ ಈಗ ದುರ್ಲಭಳು. ಇನ್ನು ಸುಮ್ಮನೆ ಇದನ್ನು ತೆಗೆದು ಕೊಂಡು ಏಕೆ ಕಣ್ಣೀರಿನಿಂದ ನೆನೆಸಲಿ" ಎಂದು ಗೋಳಿಡುವನು. ಅಷ್ಟರಲ್ಲಿ ಅಶರೀರವಾಣಿಯೊಂದರಿಂದ ಆ ಮಣಿಯು ಗೌರೀಪಾದರಾಗದಿಂದ ಹುಟ್ಟಿದ ಸಂಗಮನೀಯವೆಂಬುದೆಂದೂ ಅದರಿಂದ ಪ್ರಿಯಸಮಾಗಮ ವಾಗುವುದೆಂದೂ ತಿಳಿದುಬರಲು ದೊರೆಯು ಆದರದಿಂದ ಅದನ್ನು ಎತ್ತಿ ಕೊಳ್ಳುವನು. ಕೊಂಚ ದೂರ ಸರಿಯಲು ಒಂದು ಲತೆಯು ಇವನ ಮನಸ್ಸನ್ನು ಆಕರ್ಷಿಸುವುದು. ಅದು ಬಹಳ ಮಟ್ಟಿಗೆ ಉರ್ವಶಿಯೊಡನೆ ಹೋಲುವಂತೆ ತೋರುವುದು—

ತನ್ವೀ ಮೇಘಜಲಾರ್ದ್ರಪಲ್ಲವತಯಾ ಧೌತಾಧರೇವಾಶ್ರುಭಿಃ
ಶೂನ್ಯೇವಾಭರಣೈಃ ಸ್ವಕಾಲವಿರಹಾದ್ವಿಶ್ರಾಂತಪುಷ್ಪೋ
ದ್ಗಮಾ ।
ಚಿಂತಾಮೌನಮಿವಾಸ್ಥಿತಾ ಮಧುಲಿಹಾಂ ಶಬ್ದೈರ್ವಿನಾ ಲಕ್ಷ್ಯತೆ
ಚಂಡೀ ಮಾಮವಧೂಯ ಪಾದಪತಿತಂ ಜಾತಾನುತಾಪೇವ ಸಾ ॥
(IV-38)

"(ಇದೇ ನನ್ನ ಮನೋರಮೆಯಿರಬಹುದು) ಹಿಮದಿಂದ ತೊಯ್ದ ಇದರ ಚಿಗುರುಗಳು ಕಣ್ಣೀರಿನಿಂದ ಮಿಂದ ನನ್ನ ಪ್ರಿಯೆಯ ತುಟಿಗಳಂತಿರುವುವು; ಅಕಾಲವಾದಕಾರಣ ಹೂ ಬಿಡದಿರುವುದು ಅವಳೇ ಒಡವೆಗಳನ್ನು ತೆಗೆದಿಟ್ಟಂತಿರುವುದು; ದುಂಬಿಗಳ ಝೇಂಕಾರವು ಇಲ್ಲದಿರುವುದರಿಂದ, ಕೊರಗಿ ಮೌನವನ್ನಾಶ್ರಯಿಸಿರುವಂತೆ ಕಾಣುತ್ತದೆ; ಕಾಲಿಗೆಬಿದ್ದ ನನ್ನನ್ನು ತಿರಸ್ಕರಿಸಿದುದಕ್ಕಾಗಿ ಪ್ರಿಯೆಯು ಪಶ್ಚಾತ್ತಾಪಗೊಂಡಿರುವಂತಿರುವುದು." ಹೀಗೆ ಆ ಲತೆಯನ್ನು ಪ್ರಿಯೆಯೆಂದು ಭಾವಿಸಿ ಅಪ್ಪಿಕೊಳ್ಳುವನು. ಒಡನೆಯೇ ಲತೆಯಿದ್ದೆಡೆಯಲ್ಲಿ ಉರ್ವಶಿಯು ನಿಲ್ಲುವಳು. ಸ್ಪರ್ಶಸುಖದಿಂದ ಉರ್ವಶಿಯೇ ಎಂದೂ ದೊರೆಗೆ ತಿಳಿಯುವುದು. ಆದರೂ ಪ್ರಿಯೆಯನ್ನು ಕುರಿತು ನೆನೆದುದೆಲ್ಲ ಕನಸಾಗುತ್ತಿದ್ದುದರಿಂದ ಕಣ್ಣು ಬಿಟ್ಟು ನೋಡಿದರೆ ಏನಾಗುವುದೋ ಎಂದು ಮೊದಲು ಹೆದರುವನು. ಅದೃಷ್ಟವಶದಿಂದ ಅಂತಹುದೇನೂ ನಡೆಯದೆ ನಿಜವಾಗಿಯೂ ಉರ್ವಶಿಯು ಪುನಃ ಪ್ರಿಯನನ್ನು ಸೇರುವಳು. ಇದುವರೆಗೂ ಅವಳು ಲತೆಯರೂಪವನ್ನು ತಾಳಿದ್ದರೂ ತನ್ನ ಸೂಕ್ಷ್ಮೇಂದ್ರಿಯಗಳ ಸಹಾಯದಿಂದ ದೊರೆಯ ದುಃಖವನ್ನು ಮನಗಂಡಿದ್ದಳು. ಸ್ವಲ್ಪ ಹೊತ್ತು ಪರಸ್ಪರ ಸಂವಾದವಾದ ಮೇಲೆ ಎಲ್ಲ ವೃತ್ತಾಂತವನ್ನೂ ತಿಳಿದು, ತಮ್ಮ ಸಂಗಮಕ್ಕೆ ಕಾರಣವಾದ ಆ ಸಂಗಮನೀಯ ಮಣಿಯನ್ನು ಅತ್ಯಾದರದಿಂದ ಉರ್ವಶಿಯು ಜಡೆಯಲ್ಲಿ ಧರಿಸುವಳು. ಅನಂತರ ಅವಳ ಸೂಚನೆಗನುಸಾರವಾಗಿ ಇಬ್ಬರೂ ರಾಜಧಾನಿಗೆ ತೆರಳುವರು.

ಐದನೆಯ ಅಂಕದ ಸಂಗತಿಗಳು ಸ್ವಲ್ಪ ಕಾಲಾನಂತರ ಪುರೂರವನ ಅರಮನೆಯಲ್ಲಿ ನಡೆಯುವುವು. ಪುರೂರವನು ಪ್ರಜಾನುರಾಗಕ್ಕೆ ಪಾತ್ರನಾಗಿ ಪ್ರತಿಷ್ಠಾನದಲ್ಲಿ ರಾಜ್ಯಭಾರ ಮಾಡುತ್ತಿರುವನು. ಆದರೆ ಮಕ್ಕಳಿಲ್ಲವೆಂಬ ಕೊರತೆಯೊಂದು ಮಾತ್ರ ಅವನನ್ನು ಪೀಡಿಸುತ್ತಿರುವುದು. ಹೀಗಿರುವಲ್ಲಿ ಒಂದು ದಿನ ಅಕಸ್ಮಾತ್ತಾಗಿ ಸಂಗಮನೀಯ ಮಣಿಯನ್ನು ಮಾಂಸವೆಂಬ ಭ್ರಾಂತಿಯಿಂದ ಒಂದು ಹದ್ದು ಎತ್ತಿಕೊಂಡು ಹೋಗುವುದು. ವಿದೂಷಕನೇ ಮೊದಲಾಗಿ ಅರಮನೆಯ ಪರಿವಾರವೆಲ್ಲ ಗಾಬರಿಗೊಳ್ಳುವರು. ಪುರೂರವನು ಅದನ್ನು ಹೊಡೆಯುವಷ್ಟರಲ್ಲಿ ಅದು ಕಣ್ಮರೆಯಾಗುವುದು.

ಸಂಜೆಗೆ ಅದು ಗೂಡು ಕಟ್ಟಿಕೊಂಡಿರುವ ಮರದಲ್ಲಿ ಹುಡುಕಬೇಕೆಂದು ನಗರ ರಕ್ಷಕರಿಗೆ ಅಪ್ಪಣೆಮಾಡುವನು. ಅಷ್ಟರಲ್ಲಿ ಕಂಚುಕಿಯು ಬಾಣ ಸಹಿತವಾಗಿ ಸತ್ತ ಹದ್ದನ್ನು ತರುವನು. ಮಣಿಯು ಸಿಕ್ಕುವುದು. ಬಾಣ ವನ್ನು ಓದಲಾಗಿ ಹದ್ದನ್ನು ಕೊಂದವನು "ಐಲಪುತ್ರನಿಂದ ಉರ್ವಶಿಯಲ್ಲಿ ಹುಟ್ಟಿದ ಕುಮಾರ ಆಯುಸ್" ಎಂದು ವ್ಯಕ್ತವಾಗುವುದು. ದೊರೆ ಬಹಳ ಚಕಿತನಾಗುವನು. ನೈಮಿಶೇಯರ ಯಾಗಕಾಲದಲ್ಲಿ ಮಾತ್ರ ತಾನು ಉರ್ವಶೀ ವಿಯುಕ್ತನಾಗಿದ್ದುದೂ ಆಗ ಗರ್ಭಚಿಹ್ನೆಗಳು ಕಾಣಿಸದಿದ್ದುದೂ ದೊರೆಗೆ ಜ್ಞಾಪಕವಿತ್ತು. ಹೇಗೆಯಾದುದೇ ತಿಳಿಯದು. ಎಷ್ಟೆಷ್ಟು ಯೋಚಿಸಿದರೂ ಸರಿಯಾದ ಸಮಾಧಾನವು ದೊರಕದೆ ಉರ್ವಶಿಯ ನಡತೆ ಯಲ್ಲಿ ಸಂಶಯ ಹುಟ್ಟುವಷ್ಟರಲ್ಲಿ ವಿದೂಷಕನು ಅವನನ್ನು ಎಚ್ಚರಿಸಿ ಮಾನುಷೀಧರ್ಮವನ್ನು ದಿವ್ಯಸ್ತ್ರೀಯರಿಗೆ ಆರೋಪಿಸಕೂಡದೆಂದೂ ಅವರ ಅನೇಕ ನಡವಳಿಕೆಗಳಿಗೆ ಪ್ರಭಾವವೇ ಕಾರಣವಾಗುವುದೆಂದೂ ತಿಳಿಸು ವನು. ಆದರೂ, ಅವಳು ಮಗುವನ್ನು ಬಚ್ಚಿಟ್ಟುದೇಕೆಂಬ ಸಂದೇಹವು ಮಾತ್ರ ಹೋಗುವುದಿಲ್ಲ. ದೇವತಾರಹಸ್ಯವನ್ನು ಊಹಿಸಲು ಸಾಧ್ಯವಿಲ್ಲ ವೆಂದು ವಿದೂಷಕನು ಉತ್ತರಕೊಡುವನು.

ಇಷ್ಟು ಹೊತ್ತಿಗೆ ಚ್ಯವನಾಶ್ರಮದಿಂದ ತಾಪಸಿಯೊಬ್ಬಳು ಕುಮಾರ ನನ್ನು ಕರೆತರುವಳು. ಬಾಲಕನು ಪುರೂರವನನ್ನೇ ಹೋಲುವನು. ಅವನನ್ನು ನೋಡಿ ದೊರೆಯ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುವುದು. ಹೃದಯದಲ್ಲಿ ವಾತ್ಸಲ್ಯವೂ ಪ್ರಸನ್ನತೆಯೂ ಮೂಡುವುವು. ಆಯುವು ತಾಪಸಿಯ ಅಪ್ಪಣೆಯಂತೆ ತಂದೆಗೆ ನಮಸ್ಕರಿಸಿ—

ಯದಿ ಹಾರ್ದಮಿದಂ ಶ್ರುತ್ವಾ ಪಿತಾ ಮಮಾಯಂ ಸುತೋ ಹಮಸ್ಯೇತಿ ।
ಉತ್ಸಂಗೆ ವೃದ್ಧಾನಾಂ ಗುರುಷು ಭವೇತ್ಕೀದೃಶಃ ಸ್ನೇಹಃ ॥ (V-10)

"ಇವರು ನನ್ನ ತಂದೆಯೆಂದೂ ನಾನು ಇವರ ಮಗನೆಂದೂ ಕೇಳಿದ ಮಾತ್ರದಿಂದಲೇ ಇಷ್ಟು ಸಂತೋಷವಾದರೆ ತಮ್ಮ ತೊಡೆಯಮೇಲೆಯೇ (ಲಾಲಿಸಿ) ಬೆಳೆಸಿದ ಹಿರಿಯರಲ್ಲಿ ಮಕ್ಕಳಿಗೆ ಇನ್ನೆಷ್ಟು ಸ್ನೇಹವಿದ್ದೀತು?" ಎಂದುಕೊಂಡು ಹಿಗ್ಗುವನು. ತಾಪಸಿಯಿಂದ ಅನೇಕ ಮುಖ್ಯ ವಿಷಯ ಗಳು ದೊರೆಗೆ ತಿಳಿಯುವುವು. ಹುಟ್ಟಿದೊಡನೆಯೇ ಇವನನ್ನು ಉರ್ವಶಿಯು

ತಾಪಸಿಗೊಪ್ಪಿಸಿದ್ದಳೆಂದೂ ಚ್ಯವನಾಶ್ರಮದಲ್ಲೇ ಇವನಿಗೆ ಜಾತ ಕರ್ಮಾದಿ ಸಂಸ್ಕಾರಗಳೂ ಧನುರ್ವಿದ್ಯೆಯೂ ಲಭಿಸಿದುವೆಂದೂ ಈಗ ಆಶ್ರಮಧರ್ಮಕ್ಕೆ ವಿರುದ್ಧವಾಗಿ ಹದ್ದನ್ನು ಕೊಂದದ್ದರಿಂದ ಚ್ಯವನರು ಇವನನ್ನು ವಾಪಸು ಕಳುಹಿಸಬೇಕೆಂದು ಅಪ್ಪಣೆ ಮಾಡಿದರೆಂಬ ಸಂಗತಿ ಗಳೆಲ್ಲ ಹೊರಬೀಳುವುವು. ತಾಪಸಿಯು ಉರ್ವಶಿಯನ್ನು ನೋಡಬೇಕೆಂದು ಹೇಳಿದುದರಿಂದ ಅವಳೂ ಬರಮಾಡಲ್ಪಟ್ಟು, ಪರಸ್ಪರ ಕುಶಲಪ್ರಶ್ನೆಗಳಾದ ಮೇಲೆ, ಕುಮಾರನನ್ನು ಅವಳಿಗೆ ಒಪ್ಪಿಸಿ ತಾಪಸಿಯು ಹೊರಡುವಳು. ತಾನು ಇಂದ್ರನಿಗೆ ಸಮನೆಂದುಕೊಂಡು ಪುರೂರವನು ಹಿಗ್ಗುವನು. ಆದರೆ ಉರ್ವಶಿಯು ಏನನ್ನೋ ನೆನೆದುಕೊಂಡು ಅಳುವಳು. ಇಂದ್ರನ ಅಪ್ಪಣೆಯು ಅವಳ ನೆನಪಿಗೆ ಬಂದು ಅದಕ್ಕನುಸಾರವಾಗಿ ತಾನು ದೊರೆಯನ್ನಗಲ ಬೇಕಾಗಿದೆಯೆಂದು ಉರ್ವಶಿಯು ತಿಳಿಸಲು ಎಲ್ಲರೂ ವಿಷಾದಪಡುವರು. ಮಗನು ಬಂದನೆಂದು ಸಂತೋಷಗೊಂಡಿದ್ದ ದೊರೆಗೆ ಸಿಡಿಲು ಬಡಿ ದಂತಾಯಿತು. ಆಯುವಿಗೆ ಪಟ್ಟಕಟ್ಟಿ ತಾನು ವಾನಪ್ರಸ್ಥನಾಗಲು ಸಂಕಲ್ಪಿಸುವನು. ರಾಜ್ಯಭಾರವನ್ನು ಕುಮಾರನಿಗೆ ವಹಿಸುವ ವಿಚಾರದಲ್ಲಿ ಸ್ವಲ್ಪ ಚರ್ಚೆ ನಡೆಯುವುದು. ಮದ್ದಾನೆಯು ಮರಿಯಾದರೂ ಇತರ ಆನೆಗಳನ್ನು ಅಡಗಿಸಬಲ್ಲದು. ಹಾವಿನಮರಿಯ ವಿಷವೂ ವಿಪರೀತ ವೇಗವಾಗಿರುವುದು. ದೊರೆಯು ಚಿಕ್ಕವನಾದರೂ ಭೂಮಿಯನ್ನಾಳ ಬಲ್ಲನು ಎಂದು ಮೊದಲಾಗಿ ಹೇಳಿ ಪುರೂರವನು ತನ್ನ ಪುತ್ರನ ಪರಾಕ್ರಮ ದಲ್ಲೂ ಅರ್ಹತೆಯಲ್ಲೂ ನಂಬಿಕೆಯನ್ನು ವ್ಯಕ್ತಪಡಿಸುವನು ಅನಂತರ ಆಯುವಿನ ರಾಜ್ಯಾಭಿಷೇಕಕ್ಕೆ ಸಿದ್ಧಪಡಿಸುವಷ್ಟರಲ್ಲಿ ನಾರದರು ಸ್ವರ್ಗ ದಿಂದಿಳಿದು ಬಂದು "ನೀವು ವಿರಹಿತರಾಗದಿರಿ" ಎಂದು ಆಶೀರ್ವದಿಸುವರು. ಕೂಡಲೆ ಇಂದ್ರನ ಸಂದೇಶವೊಂದನ್ನು ಹೇಳಿ ಪುರೂರವನ ಸಹಾಯವು ಮುಂದೆ ದೇವಾಸುರಯುದ್ಧದಲ್ಲಿ ಬೇಕಾಗುವುದೆಂದೂ ಆದುದರಿಂದ ಅವನು ಶಸ್ತ್ರಸನ್ಯಾಸಮಾಡದೆ ಇರಬೇಕೆಂದೂ ತಿಳಿಸುವನು. ಉರ್ವಶಿಯು ಯಾವಜ್ಜೀವವೂ ಇವನ ಸಹಧರ್ಮಿಣಿಯಾಗಿರಲು ಇಂದ್ರನೂ ಸಮ್ಮತಿ ಸುವನು. ಹೀಗೆ ಆನಂದದಲ್ಲಿ ನಾಟಕವು ಮುಗಿಯುವುದು. ಇದರ ಭರತವಾಕ್ಯವೂ ಗಮನಾರ್ಹವಾಗಿದೆ. "ಪರಸ್ಪರ ವಿರೋಧಿನಿಯರಾದ

ಶ್ರೀ ಸರಸ್ವತಿಯರು ಸತ್ಪುರುಷರ ಕ್ಷೇಮಸಂಪತ್ತುಗಳಿಗಾಗಿ ಯಾವಾಗಲೂ ಕೂಡಿರಲಿ" ಎಂದು ಅದರ ಅರ್ಥ.

## ವಿಮರ್ಶೆ.

ಮೂಲಕಥೆಯಲ್ಲಿ ಕಾಳಿದಾಸನು ಯಾವ ಯಾವ ಮಾರ್ಪಾಡುಗಳನ್ನು ಮಾಡಿರುವನು ಮತ್ತು ಈ ಮಾರ್ಪಾಡುಗಳಿಂದ ಆಗಿರುವ ಪ್ರಯೋಜನವೇನು? ಎಂಬುದನ್ನು ಪರಿಶೀಲಿಸುವುದು ಆವಶ್ಯಕ. (1) ಔಶೀನರಿಯ ಪಾತ್ರವು ಪುರಾಣಾದಿಗಳಲ್ಲಿ ಎಲ್ಲೂ ಬಂದಿಲ್ಲ. ಉರ್ವಶಿಯೊಬ್ಬಳೇ ಪುರೂರವನ ಹೆಂಡತಿಯೆಂದು ಹರಿವಂಶದಲ್ಲಿ ಹೇಳಿದೆ. ಕಾಳಿದಾಸನು ಹೊಸದಾಗಿ ಈ ಪಾತ್ರವನ್ನು ನಿರ್ಮಿಸಿ ಅವಳು ಪುರೂರವನ ಮೊದಲನೆಯ ಹೆಂಡತಿಯೆಂದು ಕಲ್ಪಿಸಿ ಅಪೂರ್ವವಾದ ಚಮತ್ಕಾರವನ್ನುಂಟುಮಾಡಿರುವನು. ಎರಡು ಮತ್ತು ಮೂರನೆಯ ಅಂಕಗಳ ಕಥೆಯು ಔಶೀನರಿಯ ಅಸೂಯೆಯನ್ನೇ ಆಶ್ರಯಿಸಿರುವುದು. (2) ಉರ್ವಶಿಯನ್ನು ಭರತನು ಶಪಿಸಿದಾಗ ಇಂದ್ರನು ಕರುಣೆ ತೋರಿದನೆಂಬುದು ಕವಿಕಲ್ಪಿತ. ಇದರಿಂದ ನಾಯಕ ನಾಯಿಕೆಯರ ಪ್ರಣಯವು ಮುಂದುವರಿಯಲು ಅವಕಾಶವಾಗುವುದು. (3) ಪುರೂರವನೊಡನೆ ಉರ್ವಶಿಯು ನಿಲ್ಲಲು ಕಾಲಾವಧಿಯನ್ನು ಇಂದ್ರನು ಹೆಚ್ಚಿಸುವುದು; ಇದರ ಜೊತೆಗೆ ಸಂಗಮನೀಯಮಣಿ, ಚ್ಯವನಾಶ್ರಮ ಮುಂತಾದುವನ್ನು ಸೃಷ್ಟಿಸಿಕೊಂಡು ಉರ್ವಶಿಯು ಮಗನನ್ನೂ ಬಿಟ್ಟು ಪುರೂರವನಲ್ಲಿ ನಿಲ್ಲಲು ಯತ್ನಿಸಿದ್ದು ಮುಂತಾದ ಸಂಗತಿಗಳನ್ನೆಲ್ಲ ಜೋಡಿಸಿಕೊಂಡು ಕವಿಯು ಕತೆಯನ್ನು ಸಡಿಲದಂತೆ ಬಿಕ್ಕಟ್ಟಾಗಿ ಹೆಣೆದಿರುವನು. (4) ಮೊದಲನೆಯ ಅಂಕವು ವಸಂತ ಋತುವಿನಲ್ಲಿ ಪ್ರಾರಂಭವಾಗುವುದು. ಮೂರನೆಯ ಅಂಕದ ಕೊನೆಯಲ್ಲಿ ಚಿತ್ರಲೇಖೆಯು ವಸಂತವು ಕಳೆದ ಮೇಲೆ ತಾನು ಸರದಿಯ ಪ್ರಕಾರ ಸೂರ್ಯೋಪಸ್ಥಾನಕ್ಕೆ ಸಿದ್ಧಳಾಗಬೇಕೆಂದು ಹೊರಡುವಳು. ನಾಲ್ಕನೆಯ ಅಂಕದ ಕತೆಯು ವರ್ಷ ಋತುವಿನಲ್ಲಿ ನಡೆಯುವುದು. ಸಹಜನ್ಯೆಯು ಸೂಚಿಸುವಂತೆ ಪುರೂರವನ ವಿರಹವು ಅತಿ ದೀರ್ಘಕಾಲ ತಳ್ಳುವುದಿಲ್ಲ. ಆದುದರಿಂದ ಐದನೆಯ

ಅಂಕದ ಸಂಗತಿಗಳು ಶರತ್ಕಾಲದಲ್ಲಿ ನಡೆದಂತೆ ತೋರುವುದು. ಹೀಗೆ ನಾಟಕದ ವಸ್ತುವು ವಸಂತದಲ್ಲಾರಂಭವಾಗಿ ಅವಿಚ್ಛಿನ್ನವಾಗಿ ನಡೆದು ಕೊಂಡು ಬಂದು ಶರತ್ತಿನಲ್ಲಿ ಮುಗಿಯುವಂತೆ ತೋರುವುದು. ಕತೆಯ ಸನ್ನಿವೇಶಕ್ಕೆ ಕಾಲವನ್ನು ಸರಿಯಾಗಿ ಹೊಂದಿಸಿರುವುದೂ ಪುರೂರವನ ವಿರಹಪ್ರಲಾಪದ ವೇಳೆಗೆ ಸರಿಯಾಗಿ ವರ್ಷಾಕಾಲ ಪ್ರಾಪ್ತವಾಗುವುದ ರಿಂದ ಔಚಿತ್ಯದಿಂದ ಕೂಡಿ ಆದರಣೀಯವಾಗಿದೆ. ಮೂರು ಮತ್ತು ನಾಲ್ಕನೆಯ ಅಂಕಗಳ ನಡುವೆ ಇರಬೇಕಾದ ದೀರ್ಘ ಕಾಲಾವಧಿಯನ್ನು ಕವಿಯು ಚಿತ್ರಲೇಖೆಯ ಗ್ರೀಷ್ಮ ಕಾಲದ ಸೂರ್ಯೋಪಸ್ಥಾನದಿಂದಲೂ ನೈಮಿಶರ ಯಾಗದಿಂದಲೂ ಸೂಚಿಸಿರುವನು. ಇದೆಲ್ಲವೂ ನಾಟಕವನ್ನು ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಿದರೆ ಮಾತ್ರ ಗೋಚರವಾಗುವುದು. ರಂಗ ಸ್ಥಳದಲ್ಲಿ ಅದರ ಅಭಿನಯವನ್ನು ನೋಡುವಾಗ ಪ್ರೇಕ್ಷಕರು ವಂಚಿತ ರಾಗುವರು. ಇಲ್ಲಿ ಕವಿಯು ಗ್ರೀಕರ ಕಾಲೈಕ್ಯನಿಯಮವನ್ನುಲ್ಲಂಘಿಸಿ ಷೇಕ್ಸ್‌ಪಿಯರ್ ಕವಿಯಂತೆ 'ಎರಡು ಗಡಿಯಾರಗಳ' ಸಂವಿಧಾನವ ನ್ನುಪಯೋಗಿಸಿಕೊಂಡಿರುವನು.[1]

ಪಾತ್ರರಚನೆಯ ವಿಚಾರದಲ್ಲಿ ಇನ್ನೂ ಕೆಲವು ಮಾತುಗಳನ್ನು ಹೇಳ ಬಹುದು.[2] ಇಲ್ಲಿನ ನಾಯಕ ನಾಯಿಕೆಯರು ಮಾಲವಿಕಾಗ್ನಿಮಿತ್ರದ ನಾಯಕ ನಾಯಿಕೆಯರಿಗಿಂತ ಹೆಚ್ಚು ನಮ್ಮ ಪ್ರೀತಿಗೆ ಪಾತ್ರರಾದರೂ ದುಷ್ಯಂತ ಶಕುಂತಲೆಯರ ಮಟ್ಟಕ್ಕೇರುವುದಿಲ್ಲ. ಪುರೂರವನ ಪ್ರೇಮ ದಲ್ಲಿ ಗಾಢತೆಯಿದ್ದರೂ, ವಿರಹವು ತೀವ್ರವೆನ್ನಲು ಸ್ಪಷ್ಟವಾದ ಅನೇಕ ಆಧಾರಗಳು ಸಿಕ್ಕಿದರೂ ಅವನ ಪುನಸ್ಸಮಾಗಮಾಪೇಕ್ಷೆಯೂ ಕೂಡ ಕಾಮೋಪಭೋಗಕ್ಕಾಗಿಯೇ ಎಂದು ತೋರುವುದು. ಊರ್ವಶಿಯ ಪ್ರೇಮ ವೂ ಈ ರೀತಿಯದೇ; ಗಾಢತೆಯಿದ್ದರೂ ಸಂಯಮವೇನೂ ಕಾಣದು.

---

1. Cf. A. V. Jackson:—"We do not notice the inconsistency in the lapse or non-lapse of time until we study the play carefully and find out how we have been deceived."—J. A. O. S. XX. pp. 358.

2. ಈ ಮೊದಲೇ ಪುಟ 129 ರಲ್ಲಿ ಕೆಲವು ವಿಷಯಗಳನ್ನು ಗಮನಿಸಿಯಾಗಿದೆ.

ತಾನು ಪುರೂರವನೊಡನೆ ವಿಹರಿಸಲು ವಿಘಾತಮಾಡದೆ ಅನುಕೂಲಿಸಿದ ರಾಣಿಯೊಡನೆ ಅವಳು ಮೈತ್ರಿಯಿಂದ ವರ್ತಿಸುವುದೇನೂ ಆಶ್ಚರ್ಯವಲ್ಲ. ಪುರೂರವನು ವಿದ್ಯಾಧರ ಕನ್ಯೆಯನ್ನು ನೋಡಿದನೆಂದೇ ಇವಳಿಗೆ ಈರ್ಷ್ಯಾ ಕೋಪ. ಆದರೆ ಶಚಿಗೇನೂ ಕಡಿಮೆಯಿಲ್ಲದ ಔಶೀನರಿಯು ಇದ್ದಾಗ್ಯೂ ತಾನು ಇವನನ್ನು ಕಾಮಿಸಿದುದು ಮಾತ್ರ ತಪ್ಪಲ್ಲವೆಂದು ಇವಳ ಭಾವನೆ. ಇದು ಇವಳ ಸ್ವಾರ್ಥತೆಗೆ ಉದಾಹರಣೆ. ಇದಲ್ಲದೆ, ವಿಹಾರಕ್ಕೆ ವಿಚ್ಛೇದ ವಾಗುವುದೆಂಬ ಭಯದಿಂದ ತಾನು ಹೆತ್ತಮಗನನ್ನೇ ದೂರಮಾಡಿದುದು ಇವಳ ಅಮಾನುಷೀತ್ವದ ಮುಗಿಲು.[1] ಈ ಕಾರಣಗಳಿಂದ, ನಾಟಕದ ಬಣ್ಣವು ವಿಪ್ರಲಂಭಸಂಪರ್ಕದಿಂದ ಸ್ವಲ್ಪ ಮೇಲಿನದಾಗಿದ್ದರೂ, ಇಲ್ಲಿನ ವಿಪ್ರಲಂಭವು ಶಾಕುಂತಲದ ವಿಪ್ರಲಂಭದಷ್ಟು ಫಲಕಾರಿಯಾಗಿಲ್ಲ. ಪುರೂರವನ ವಿರಹವನ್ನು ಯಕ್ಷನ ವಿರಹದೊಡನೆ ಹೋಲಿಸಿದಲ್ಲಿ ಈ ವಿಷಯವು ಇನ್ನೂ ಸ್ಪಷ್ಟವಾಗುವುದು. ಯಕ್ಷನ ವಿರಹದಲ್ಲಿ ಹೆಚ್ಚು ಸಂಯಮವೂ, ಸಂದೇಶ ಕಳುಹಿಸುವ ಉದ್ದೇಶದಲ್ಲಿ ಉತ್ತಮವಾದ ಧ್ಯೇಯವೂ ಗೋಚರವಾಗುವುದು. ಪುರೂರವನ ವಿರಹದಲ್ಲಿ ಸಮಾಗಮ ನಿಶ್ಚಯವಿಲ್ಲದಿರುವುದು ಒಂದು ಮುಖ್ಯವಾದ ವಿಷಯ. ಅವನ ಗೋಳಾ ಟಕ್ಕೂ ಅಸಂಯಮಕ್ಕೂ ಇದು ತಕ್ಕಮಟ್ಟಿಗೆ ಕಾರಣವೆನ್ನಬಹುದು. ಆದುದರಿಂದಲೇ ಪುರೂರವನು ಷೇಕ್ಸ್‌ಪಿಯರ್ ಕವಿಯ ಲಿಯರ್ ಪಾತ್ರ ವನ್ನು ಹೋಲುವನೆಂದು ವಿಮರ್ಶಕರು ಹೇಳುವುದು. ಯಕ್ಷನು ಕಾಮಾ ರ್ತನಾದರೂ ಉನ್ಮತ್ತನಲ್ಲ. ಆದರೆ ಪುರೂರವ, ಲಿಯರ್ ಇವರಿಬ್ಬರೂ ಹುಚ್ಚು ಹಿಡಿದು, ಚಳಿ ಮಳೆ ಬಿಸಿಲುಗಳನ್ನು ಲೆಕ್ಕಿಸದೆ ಅಲೆಯುತ್ತ ಸಜೀವ ನಿರ್ಜೀವಗಳಿರುವ ಭೇದವನ್ನೂ ಮನಗಾಣದೆ ಹಂಬಲಿಸುವ ಸ್ವಭಾವದವರು. ಈ ಅವಸ್ಥೆಯಲ್ಲಿರುವಾಗ ಇವರಲ್ಲಿ ಅಸೂಯೆಯೂ

---

1. ಆದರೆ ರಾಜಧಾನಿಗೆ ಸಮೀಪದಲ್ಲಿದ್ದ ಚ್ಯವನಾಶ್ರಮದಲ್ಲಿ ಮಗನನ್ನು ಬಿಟ್ಟಿದ್ದು ದೊರೆಗೆ ತಿಳಿಯದಂತೆ ಮಗನನ್ನು ನೋಡಿಕೊಂಡು ಬರಬಹುದೆಂಬ ಉದ್ದೇಶದಿಂದಲೇ ಎಂದು ಹೇಳಿ ಮೇಲ್ಕಂಡ ಆಕ್ಷೇಪಣೆಯ ತೀವ್ರತೆಯನ್ನು ಸ್ವಲ್ಪ ಕಡಿಮೆ ಮಾಡುವುದುಂಟು. ಕಳಂಕವು ಪೂರ್ಣವಾಗಿ ಹೋಗುವಂತಿಲ್ಲ.

ಕ್ರೋಧವೂ ಕಾಣಿಸಿಕೊಳ್ಳುವುದು. ದುಃಖಸಹನಶಕ್ತಿಯು ಇವರಲ್ಲಿಲ್ಲ. ಸುಖಕ್ಕೆ ಮಾತ್ರ ಇಂತಹವರು ಅರ್ಹರು.

ಮಿಕ್ಕ ಪಾತ್ರಗಳಲ್ಲಿ ಔಶೀನರಿ, ಚಿತ್ರಲೇಖೆ, ಮತ್ತು ವಿದೂಷಕ ಇವರು ಮಾತ್ರ ಮುಖ್ಯರು. ಔಶೀನರಿಯ ಸೌಜನ್ಯ ಪಾತಿವ್ರತ್ಯಗಳೂ, ಚಿತ್ರಲೇಖೆಯ ಗಾಢಸ್ನೇಹವೂ ವಿದೂಷಕನ ಹಾಸ್ಯಪ್ರಿಯತೆ ಮತ್ತು ಭೋಜನಾಭಿಲಾಷೆಗಳೂ ಸ್ಪಷ್ಟವಾಗಿ ತೋರುವುವು.

ಕಥಾವಸ್ತುವನ್ನು ಮುಂದುವರಿಸಲು ಇಲ್ಲಿ ಪ್ರಯೋಗಿಸಿರುವ ಕೆಲವು ಸಂವಿಧಾನಗಳು ಶಾಕುಂತಲವನ್ನು ನೆನಪಿಗೆ ತರುವುವು. ಎರಡರಲ್ಲೂ ಋಷಿಶಾಪವೇ ಕಥಾವಸ್ತುವು ನಿಜವಾಗಿ ಸಾಗುವುದಕ್ಕೆ ಕಾರಣವಾಗುವುದು; ಅಕಸ್ಮಾತ್ ಕಣ್ಣಿಗೆ ಬಿದ್ದ ಪುತ್ರನೇ ಅದರ ಪರ್ಯವಸಾನಕ್ಕೂ ಕಾರಣ. ವಿಯುಕ್ತರಾದ ನಾಯಕ ನಾಯಿಕೆಯರ ಸಮಾಗಮಕ್ಕೆ ಉಭಯತ್ರ ಆಭರಣವೇ ಕಾರಣವಾಗುವುದು. ಎರಡೂ ಪುರಾಣದಿಂದ ಆರಿಸಿದ ಕತೆಗಳು. ಮಾನುಷಲೋಕದವನಾದರೂ ಅತಿಮಾನುಷ ಶಕ್ತಿಯುಳ್ಳ ನಾಯಕ. ನಾಯಿಕೆಯು ಒಂದರಲ್ಲಿ ಅಪ್ಸರೆ; ಇನ್ನೊಂದರಲ್ಲಿ ಅಪ್ಸರೆಯ ಮಗಳು; ಎರಡರಲ್ಲೂ ನಾಟಕದ ಕ್ರಿಯೆಯು ಸ್ವರ್ಗ ಭೂಮಿಗಳ ಎಲ್ಲೆಯನ್ನು ಅಳಿಸಿರುವುದು.[1] ಇದಲ್ಲದೆ ಸೀರೆ (ಶಾಕುಂತಲದಲ್ಲಿ) ಏಕಾವಳಿ (ವಿಕ್ರಮೋರ್ವಶೀಯದಲ್ಲಿ) ಗಳು ಬಳ್ಳಿಯಲ್ಲಿ ಸಿಕ್ಕಿಕೊಳ್ಳುವುದರಿಂದ ನಾಯಿಕೆಯು ನಾಯಕನನ್ನು ಹಿಂದಿರುಗಿ ನೋಡುವುದು, ಪ್ರಣಯಪತ್ರಲೇಖನ ಮುಂತಾದ ಸಣ್ಣ ಅಂಶಗಳಲ್ಲೂ ಸಾಮ್ಯವಿದೆ. ವರ್ಣನೆಗಳ ಸಜೀವತೆ, ಭಾವಗಳ ಆರ್ದ್ರತೆ, ಆಶಯಗಳನ್ನು ಹೊರಗೆಡಹುವುದರಲ್ಲಿರುವ ಸೊಬಗು ಎಲ್ಲವೂ ಎರಡಕ್ಕೂ ಸಮ. ಆದರೂ ಇವುಗಳಿಗಿರುವ ಮುಖ್ಯವಾದ ಭೇದವನ್ನು ಹಿಂದೆ ಗಮನಿಸಿಯಾಗಿದೆ. ಇದಲ್ಲದೆ ಇಲ್ಲಿನ ಪಾತ್ರಗಳು ಶಾಕುಂತಲದ ಪಾತ್ರಗಳಷ್ಟು ಮನೋರಂಜಕವಾಗಿಲ್ಲ. ಕಥಾವಸ್ತುವು ಮುಂದುವರಿಯಲು ಯಾವ ಪಾತ್ರದಿಂದಲೂ ಸಹಾಯವಾಗುವುದಿಲ್ಲ. ಇದು ನಾಯಕನ ಪಾತ್ರಕ್ಕೂ ಅನ್ವಯಿಸುತ್ತದೆ.

---

1. ಶಾಕುಂತಲದಲ್ಲಿ ಇದು ಗುರ್ತಿಸಲಾಗದಷ್ಟು ಚೆನ್ನಾಗಿ ನಡೆದಿದೆ.

ಇವನು ಅದನ್ನು ನಡೆಸುವುದಕ್ಕಿಂತ ಅದು ಎಳೆದುಕೊಂಡು ಹೋದ ದಾರಿಯಲ್ಲೇ ತಾನು ಹೋಗುವಂತೆ ತೋರುವುದು. ನಾಯಕನ ಪ್ರಾಮುಖ್ಯವು ಕುಗ್ಗಿರುವುದು. ಆದರೆ ಈ ನ್ಯೂನತೆಯನ್ನು ಸರಿಪಡಿಸುವಷ್ಟು ಉತ್ಕರ್ಷವು ನಾಯಿಕೆಯಲ್ಲಿಲ್ಲ. ಅತಿಮಾನುಷ ಘಟನೆಗಳು ಶಾಕುಂತಲಕ್ಕಿಂತ ಇಲ್ಲಿ ಹೆಚ್ಚಾಗಿ ಬರುವುದೂ ಒಂದು ನ್ಯೂನತೆ. ರಸಭಾವಗಳ ದೃಷ್ಟಿಯಿಂದ ಇನ್ನೂ ಕೆಲವು ಕುಂದುಕೊರತೆಗಳು ಇದರಲ್ಲಿ ಗುರ್ತಿಸಲ್ಪಟ್ಟಿವೆ. ನಾಲ್ಕನೆಯ ಅಂಕದಲ್ಲಿ ಒಂದೇ ಪಾತ್ರವು ಪ್ರೇಕ್ಷಕರೆದುರಿಗೆ ದೀರ್ಘಕಾಲ ನಿಲ್ಲುವುದೂ, ಅಲ್ಲಿ ಅಂಗಾಭಿನಯಕ್ಕೆ ಅವಕಾಶವೇ ಇಲ್ಲದಿರುವುದೂ ದೋಷವೆಂದು ಕೆಲವರು ಅಭಿಪ್ರಾಯಪಡುತ್ತಾರೆ.[1] ಇದು ಎಲ್ಲ ಸಂದರ್ಭಗಳಲ್ಲಿಯೂ ಸರಿಯೆನ್ನುವಂತಿಲ್ಲ. ಒಂದು ಅಂಕದಲ್ಲಿ ಅಂಗಾಭಿನಯವು ಕಡಿಮೆಯಾದರೆ ದೃಶ್ಯಕಾವ್ಯವು ಕೆಡುವುದೆಂದು ಹೇಳಲು ಸಾಧ್ಯವಿಲ್ಲ. ಸನ್ನಿವೇಶದಲ್ಲಿ ಸಜೀವತೆಯೂ, ಆಕರ್ಷಕ ಶಕ್ತಿಯೂ ಇದ್ದಲ್ಲಿ ಒಂದೇ ಪಾತ್ರವು ಎದುರಿಗಿದ್ದರೂ ಸಹೃದಯರಿಗೆ ಬೇಸರವಾಗುವುದಿಲ್ಲ. ಪ್ರಕೃತ ವಿಕ್ರಮೋರ್ವಶೀಯದಲ್ಲಿ ಪುರೂರವನ ವಿರಹೋನ್ಮಾದವರ್ಣನೆಯು ಅವನ ಪ್ರಣಯವೃತ್ತಾಂತಕ್ಕನುಗುಣವಾಗಿಯೂ ಸನ್ನಿವೇಶವು ಸ್ವಾಭಾವಿಕವಾಗಿಯೂ ಇರುವುದು. ಹುಚ್ಚು ಪ್ರಲಾಪದಲ್ಲಿ ವಿರಹವ್ಯಥೆಯು ಜೀವಸ್ವರದಂತೆ ಅಡಗಿರುವುದು. ಮತ್ತು ಸಮಾಗಮ ನಿಶ್ಚಯವಿಲ್ಲದಿರುವುದರಿಂದ ರಂಗಸ್ಥಳಕ್ಕೆ ಬೇಕಾದ ಸಜೀವತೆಯೂ ಇರುವುದು. ಆದುದರಿಂದ ಡಾ॥ ವಿಂಟರ್‌ನಿಟ್ಸ್‌ರವರ ವಿಮರ್ಶೆಯನ್ನು ಪೂರ್ಣವಾಗಿ ಒಪ್ಪುವಂತಿಲ್ಲ. ನಾಲ್ಕನೆಯ ಅಂಕವು ಬಹಳ ದೊಡ್ಡದಾಗಿ ತೋರುವುದೇನೋ ನಿಜ. ಇದರಲ್ಲಿ ಸ್ವಲ್ಪ ಭಾಗವನ್ನು ಕಿತ್ತುಹಾಕಿ, ಉರ್ವಶಿಯು ಲಕ್ಷ್ಮೀಸ್ವಯಂವರದಲ್ಲಿ ಬಾಯಿತಪ್ಪಿ ಪುರೂರವನ ಹೆಸರನ್ನು ಹೇಳುವುದನ್ನು ಗರ್ಭಾಂಕವನ್ನಾಗಿ ಮಾಡಿ, ನಾಯಕನಾಯಿಕೆಯರ ಈರ್ಷ್ಯಾಕಲಹವನ್ನು ಪ್ರವೇಶಕದಲ್ಲಿ ಸೇರಿಸದೆ ಸ್ವತಂತ್ರ ದೃಶ್ಯವಾಗಿಟ್ಟಿದ್ದರೆ ನಾಟಕವು ಇನ್ನೂ ಕಳೆಹೊಂದುವುದೆಂದು ಹೇಳ

1. Winternitz—Gesh. Ind. Lit. III. p. 221.

ಬಹುದು.[1] ಪರಮಮೂಲದಲ್ಲಿ ದುರಂತವಾಗಿದ್ದ ಕತೆಯನ್ನು ಶುಭಾಂತವನ್ನಾಗಿ ಮಾಡಿ ಕಾಳಿದಾಸನು ಕೆಡಿಸಿರುವನೆಂದು ಇನ್ನೊಂದು ಆಕ್ಷೇಪಣೆ.[2] ಇದಕ್ಕೆ ಸ್ವಲ್ಪ ಆಧಾರವೂ ಇದೆ. ವಿಯೋಗವು ಪುನಃ ಪುನಃ ಆವೃತ್ತವಾಗುವುದಾದರೂ ಸಮಾಗಮ ಸಾಮಗ್ರಿಗಳು ಮೊದಲೇ ಸೂಚಿತವಾಗಿ ಸಿದ್ಧವಾಗಿಲ್ಲದಿರುವುದು ನ್ಯೂನತೆಗೆ ಅವಕಾಶಕೊಟ್ಟಿದೆ. ಆಕಸ್ಮಿಕ ಘಟನೆಗಳು ಹೆಚ್ಚಾಗಿವೆ. ಆದುದರಿಂದ ಋಕ್ಸಂಹಿತೆಯ ದೃಷ್ಟಿಯಿಂದ ಈ ಆಕ್ಷೇಪಕ್ಕೆ ಅವಕಾಶವಿದೆ. ಆದರೆ ಹಿಂದಿನ ಪೌರಾಣಿಕ ಕತೆಗಳೆಲ್ಲ ಮಂಗಳಾಂತವಾಗಿರುವುದರಿಂದ ಲಕ್ಷಣಕಾರರ ಕಟ್ಟುಪಾಡಿಗೊಳಪಟ್ಟು ಕಾಳಿದಾಸನು ಮಂಗಳವನ್ನು ಹಾಡಿರುವನೆನ್ನುವುದು ಸರಿಯಾಗದು. ರಸ, ಭಾವ, ಪಾತ್ರಪರಿಪೋಷ ಮುಂತಾದುವನ್ನೇ ಗಮನಿಸಿ ಬರೆಯುತ್ತಿದ್ದ ಕಾಳಿದಾಸನ ಪ್ರತಿಭೆಯು ಲಕ್ಷಣಕಾರರ ಸಂಕೋಲೆಗೆ ಸಿಕ್ಕಿದ್ದಿರಲಾರದು.[3]

---

1. ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರು ಪ್ರಬುದ್ಧಕರ್ಣಾಟಕ. ಸಂ. 15, ಪು. 17 ff. ರಲ್ಲಿ ಈ ಅಭಿಪ್ರಾಯವನ್ನು ಸೂಚಿಸುತ್ತಾರೆ. ನಾಟಕದ ನಾಲ್ಕನೆಯ ಅಂಕದ ಪ್ರಾಕೃತ ಗೀತಗಳು ಪ್ರಾಮಾಣಿಕವಲ್ಲವೆಂದು ಅಭಿಪ್ರಾಯ ಪೊಂದಿರುವುದರಿಂದ ಅದನ್ನು ಕಿತ್ತುಹಾಕಿ ಅಂಕವನ್ನು ಸಂಗ್ರಹಗೊಳಿಸುವುದು ಇನ್ನೂ ಸುಲಭವಾಗುವುದು. ಈ ಪ್ರಾಕೃತ ಗೀತಭಾಗದಿಂದ ಕತೆಗೇನೂ ಉಪಯೋಗವಿಲ್ಲವೆಂಬುದು ನಿರ್ವಿವಾದ. ನಾಟಕಕ್ಕೆ ಎರಡು ಪಾಠಗಳಿರುವುದರಿಂದಲೂ ಒಂದರಲ್ಲಿ ಮಾತ್ರ ಈ ಭಾಗವು ಸಿಕ್ಕುವುದರಿಂದಲೂ ರಂಗಸೌಕರ್ಯಕ್ಕಾಗಿ ಈ ಗೀತಭಾಗವು ಕಲ್ಪಿತವಾಗಿ ಪ್ರಕ್ಷಿಪ್ತವಾಗಿರಬೇಕೆಂದು ಹೇಳಬಹುದು.

2. A. W. Ryder. Everymans's Library Series. Translations of Kālidāsa, p. 119, S. K. De., I. H. Q. XVI. ii. p. 406. ತೀ. ನಂ. ಶ್ರೀ. ಪ್ರಬುದ್ಧಕರ್ಣಾಟಕ ಸಂ. 15, ಪುಟ 27.

3. Cf. S. K. De—" In the choice of theme, character, situation, Kālidāsa essentially follows the poetic bent of his genius "—I. H. Q. XVI. ii. p. 402.

# ಕುಮಾರ ಸಂಭವ[1]

ಕುಮಾರ ಸಂಭವವು ಕಾಳಿದಾಸನ ಮೊಟ್ಟಮೊದಲಿನ ಮಹಾಕಾವ್ಯ. 'ಕುಮಾರ ಸಂಭವ' ಎಂದರೆ ಕುಮಾರನ ಅಥವ ಷಣ್ಮುಖನ ಜನನ ವೆಂದರ್ಥ. ದೇವತೆಗಳ ಬೇಡಿಕೆಯನ್ನು ಸಲ್ಲಿಸುವುದಕ್ಕಾಗಿ ತಾಪಸಾಗ್ರೇಸರನಾದ ಶಿವನೂ ಸಂಸಾರಿಯಾಗಲೊಪ್ಪುವನು; ತನ್ನಂತೆಯೇ ತಪಶ್ಚರ್ಯೆಯಿಂದ ಶುದ್ಧಳಾದ ಪಾರ್ವತಿಯನ್ನು ವರಿಸಿ ದಾಂಪತ್ಯ ಜೀವನವನ್ನಾಶ್ರಯಿಸುವನು. ಹೀಗೆ ಲೋಕಕಲ್ಯಾಣಕ್ಕಾಗಿ ಜಗನ್ಮಾತಾಪಿತೃಗಳಿಗೆ ಮಗನಾಗಲೆಂದು ದೇವತೆಗಳೆಲ್ಲರೂ ಆಶಿಸಿ ಹುಟ್ಟಿದ ಮಗು 'ಕುಮಾರ' ಇಂತಹ ಪುತ್ರೋತ್ಸವದ ಕತೆಯು ಶಿವ, ಸ್ಕಾಂದ, ಮುಂತಾದ ಪುರಾಣಗಳಲ್ಲಿ ನಿರೂಪಿತವಾಗಿದ್ದರೂ ಇವನ್ನು ಆಧಾರವಾಗಿಟ್ಟುಕೊಂಡು ಮೊಟ್ಟಮೊದಲು ಮಹಾಕಾವ್ಯವನ್ನು ನಿರ್ಮಿಸಿದವನು ಕಾಳಿದಾಸನೇ ಎಂದು ತೋರುತ್ತದೆ.

ಕಾವ್ಯದಲ್ಲಿ ಒಟ್ಟು 1096 ಶ್ಲೋಕಗಳಿವೆ; ಹದಿನೇಳು ಸರ್ಗಗಳಿವೆ. ಒಂದೊಂದರಲ್ಲೂ ಸುಮಾರು 45ಕ್ಕೆ ಕಡಿಮೆಯಿಲ್ಲದೆ 95 ಕ್ಕೆ ಹೆಚ್ಚಿಲ್ಲದೆ ಶ್ಲೋಕಗಳನ್ನು ಕೂಡಿಸಲಾಗಿದೆ. ಮಹಾಕಾವ್ಯದಲ್ಲಿ ವರ್ಣನೆಗೆ ಪ್ರಾಧಾನ್ಯ ಹೆಚ್ಚು. ಕತೆ ಸಾಗುವುದು ಬಹಳ ತಡ. ಆದರೂ ಕವಿಪ್ರತಿಭೆಯ ಸಾಮರ್ಥ್ಯದಿಂದ ಪಾಠಕರಿಗೆ ಸ್ವಲ್ಪವೂ ಬೇಸರ ಹುಟ್ಟುವುದಿಲ್ಲ. ವಸ್ತುತಃ ಈ ವಿಧವಾದ ಕಾವ್ಯದಲ್ಲೇ ಕವಿಕೌಶಲಕ್ಕೆ ಹೆಚ್ಚು ಅವಕಾಶವಿರುವುದೆಂದು ಹೇಳಬಹುದು. ಇಲ್ಲಿ ಮಾತ್ರ ಅವನ ಪ್ರತಿಭೆಯು ನಿರಂಕುಶವಾಗಿ ಕೆಲಸ ಮಾಡಬಹುದು; ಮನಸ್ಸಿನ ಭಾವನೆಗಳಲ್ಲಿ ಒಂದೊಂದೂ ವಿಶದವಾಗಿ

---

1. ಈ ಕಾವ್ಯದ ಕತೆಯು ಇದೇ ಹೆಸರಿನಿಂದ ರಾಮಾಯಣದಲ್ಲಿ ನಿರ್ದಿಷ್ಟ ವಾಗಿದೆ (ರಾ; ಬಾ. 37·3[illegible]) ಸಂಸ್ಕೃತ ವಾಙ್ಮಯದಲ್ಲಿ ಈ ಹೆಸರಿನ ಇನ್ನೂ ಕೆಲವು ಗ್ರಂಥಗಳಿವೆ. ಅವುಗಳಲ್ಲಿ ಉದ್ಭಟನದು ಕಾಳಿದಾಸ ಕೃತಿಯಂತೆ ಉತ್ತಮವಾದ ಮಹಾಕಾವ್ಯವೆಂದು ತೋರುವುದು. ತನ್ನ ಕಾವ್ಯಾಲಂಕಾರ ಸಂಗ್ರಹದಲ್ಲಿ ಉದಾಹರಿಸುವ ಕೆಲವು ಶ್ಲೋಕಗಳು ಹೊರತು ಈ ಕಾವ್ಯದ ಇತರ ಭಾಗಗಳು ಈಗ ಸಿಕ್ಕುವುದಿಲ್ಲ. ಶ್ರೀ. ಎಂ. ಕೃಷ್ಣಮಾಚಾರ್ಯರು ಈ ಹೆಸರಿನ ಇನ್ನೊಂದು ಮಹಾಕಾವ್ಯವನ್ನೂ ಒಂದು ಚಂಪುವನ್ನೂ ನಿರ್ದೇಶಿಸಿರುವರು.

ಚಿತ್ರಿತವಾಗಬಹುದು. ಹೀಗಿರುವುದರಿಂದ ಮಹಾಕಾವ್ಯವು ನಾಟಕಾದಿಗಳಿಗಿಂತ ಬಹಳ ವಿಲಕ್ಷಣವಾದದ್ದು. ಇದರ ಸೌಂದರ್ಯವೇ ಒಂದು ವಿಧವಾದದ್ದು. ತಾಳ್ಮೆಯಿಂದ ಓದಿ ಪುನಃ ಪುನಃ ಚರ್ವಿಸುವ ಸಹೃದಯರಿಗೆ ಇಲ್ಲಿನ ಒಂದೊಂದು ಶ್ಲೋಕವೂ ಒಂದೊಂದು ಕಾವ್ಯವಾಗಲು ಸಾಧ್ಯ. ಆದುದರಿಂದ ಕಾಳಿದಾಸನ ಪ್ರತಿಭೆಯನ್ನು ಮನಗಾಣಬೇಕಾದರೆ ಅವನ ಮಹಾಕಾವ್ಯಗಳ ಅರಿವು ಬಹಳ ಮುಖ್ಯ. ರೂಪಕಜಾತಿಗಿರುವಂತೆ ಮಹಾಕಾವ್ಯಜಾತಿಗೂ ಅವನ ಲೇಖನಗಳ ಸಹಾಯವು ಅತಿಶಯವಾಗಿಯೇ ಇದೆ.

ಬಹಳಕಾಲ ಈ ಕಾವ್ಯದ ಏಳು ಸರ್ಗಗಳು ಮಾತ್ರ ಸಿಕ್ಕುತ್ತಿದ್ದುವು. ಕತೆಯು ಪಾರ್ವತಿ ಪರಮೇಶ್ವರರ ಮದುವೆಯಲ್ಲಿ ಮುಗಿಯುತ್ತಿತ್ತು. ಕೊಂಚಕಾಲದ ಮೇಲೆ ಎಂಟನೆಯ ಸರ್ಗವು ಸಿಕ್ಕಿದರೂ ಕಾವ್ಯದ ಹೆಸರನ್ನು ಸಾರ್ಥಕಗೊಳಿಸುವಷ್ಟು ಕತೆ ಮುಂದುವರಿಯಲಿಲ್ಲ. ಅನಂತರ ಮುಂದಿನ ಒಂಬತ್ತು ಸರ್ಗಗಳು ಸಿಕ್ಕಿದುವು.[1] ಆದರೆ ಈಚೆಗೆ ಸಿಕ್ಕಿದ ಸರ್ಗಗಳ ಕರ್ತೃತ್ವವು ಇನ್ನೂ ಸಂದೇಹಾಸ್ಪದ. ಎಂಟನೆಯ ಸರ್ಗದಲ್ಲಿ ಶಿವ ಗೌರಿಯರ ಸುರತೋತ್ಸವವು ವರ್ಣಿತವಾಗಿದೆ. ಕಾಳಿದಾಸನ ಬೇರೆ ಯಾವ ಕಾವ್ಯದಲ್ಲೂ ಇಂತಹ ವಿಷಯ ಬಂದಿಲ್ಲದಿರುವುದರಿಂದಲೂ ಮತ್ತು ಕಥಾವಸ್ತುವನ್ನು ಮುಂದುವರಿಸದೆ ಇದು ಸ್ವಲ್ಪಮಟ್ಟಿನ ಅಸಭ್ಯತೆಗೆ ಅವಕಾಶ ಕೊಡುವುದರಿಂದಲೂ[2] ಕಾಳಿದಾಸನ ಕೃತಿಯಾಗಿರಲಾರದೆಂದು ಅನೇಕರ ಆಶಯ. ಆದರೆ ಈ ಭಾಗವು ಭಾರವಿ, ಮಾಘ, ಕುಮಾರದಾಸ ಮೊದಲಾದ

---

1. ಇವನ್ನು ಶ್ರೀ. ವಿಟ್ಠಲಶಾಸ್ತ್ರಿಗಳು 'ಪಂಡಿತ್' ಪತ್ರಿಕೆಯಲ್ಲಿ ಮೊದಲು ಅಚ್ಚುಹಾಕಿಸಿದರು. ಬಲಿದ್ವೀಪದಲ್ಲೂ ಇದರ ಹದಿನೇಳು ಸರ್ಗಗಳು ಸಿಕ್ಕಿರುವುದಾಗಿ ಎ. ಹಿಲ್ಲೆಬ್ರಾಂಟ್ ಅವರು ಹೇಳಿರುವರು. (Kālidāsa, p. 33.)

2. ಇದು ಸರ್ಗಕ್ಕೆ ಪೂರ್ತಿ ಅನ್ವಯಿಸುವುದಿಲ್ಲ. ಮೊದಲಿನ ಇಪ್ಪತ್ತೇಳು ಶ್ಲೋಕಗಳಲ್ಲೂ ಕಡೆಯ ಹದಿನಾರು ಶ್ಲೋಕಗಳಲ್ಲೂ ಅಸಭ್ಯತೆಯು ಕಂಡುಬರುವುದು. ಮಧ್ಯದಲ್ಲಿ (ಶ್ಲೋ. 29-75) ಹರನು ಪಾರ್ವತಿಗೆ ಗಂಧಮಾದನದ ಪ್ರಕೃತಿ ಸೌಂದರ್ಯವನ್ನು ಮೇಘಸಂದೇಶದಲ್ಲಿರುವಂತೆ ಶೃಂಗಾರವನ್ನು ಹಿನ್ನೆಲೆಯಾಗಿಟ್ಟುಕೊಂಡು ವರ್ಣಿಸಿರುವನು. ಇಲ್ಲಿ ಅಂತಹ ಅಸಭ್ಯತೆಯಿಲ್ಲ. ಗಂಧಮಾದನವು ಕವಿಗೆ ಅಚ್ಚುಮೆಚ್ಚೆಂದು ಅವನ ಇತರ ಗ್ರಂಥಗಳಿಂದಲೂ ಕಂಡುಬರುವುದು.

ಈಚಿನ ಕವಿಗಳಿಗೆ ಪರಿಚಿತವಾಗಿರುವುದರಿಂದಲೂ ಆಲಂಕಾರಿಕರು ಇಲ್ಲಿನ ಶ್ಲೋಕಗಳನ್ನುದ್ಧರಿಸಿ ವಿಮರ್ಶೆ ಮಾಡಿರುವುದರಿಂದಲೂ ಈ ಸರ್ಗವೂ ಕಾಳಿದಾಸಕೃತವೆಂದು ಒಪ್ಪಬೇಕು. ಇದರ ಕಾವ್ಯಗುಣವು ಇತರ ಕಾವ್ಯಗಳ ಗುಣಕ್ಕಿಂತ ಕಡಿಮೆಯಾಗಿಲ್ಲ.[1] ಕಡೆಯ ಒಂಬತ್ತು ಸರ್ಗಗಳಿಗೆ ಇದು ಅನ್ವಯಿಸುವುದಿಲ್ಲ. ಅವು ಕಾಳಿದಾಸ ರಚಿತವಲ್ಲವೆಂದು ಖಂಡಿತ ಹೇಳಬಹುದಾಗಿದೆ.[2] ಕಾವ್ಯದ ಅಸಂಪೂರ್ಣತೆಗೆ ಕಾರಣವನ್ನು ನಿರ್ಧರವಾಗಿ ಹೇಳುವಂತಿಲ್ಲ. ಅಕಸ್ಮಾತ್ ಸಂಭವಿಸಿದ ಅನಾಹುತದಿಂದಲೋ ಅಕಾಲಮೃತ್ಯುವಿನ ದೆಸೆಯಿಂದಲೋ ಕವಿಗೆ ಇದನ್ನು ಮುಗಿಸುವುದಕ್ಕಾಗದೆ ಇದ್ದಿರಬಹುದೆಂದು ಒಬ್ಬರ ಅಭಿಪ್ರಾಯ.[3] ಅದನ್ನು

---

1. Cf Winternitz—Gesh. Ind. Lit. III. p. 57.

2. ಈ ಭಾಗವೂ ಕಾಳಿದಾಸರಚಿತವೆಂದು ಸಮರ್ಥಿಸಲು ಶ್ರೀ. ಕೆ. ಎಸ್. ರಾಮಸ್ವಾಮಿ ಶಾಸ್ತ್ರಿ ( Kālidāsa, his period, personality and poetry, pp. 151-2 ) ಮತ್ತು ರೈಡರ್ Translations from Kālidāsa. Ev. Lib. pp. 179-80 ) ಇವರು ಕೊಟ್ಟಿರುವ ಆಧಾರಗಳು ತೃಪ್ತಿಕರವಾಗಿಲ್ಲ. ಮೊದಲಿನ ಎಂಟು ಸರ್ಗಗಳು ಸ್ಕಾಂದಪುರಾಣದ ಶಂಕರಸಂಹಿತೆಯ ಕಥಾಭಾಗಕ್ಕೆ ಮೂಲವಾಗಿವೆ. ಆದರೆ ಕೊನೆಯ ಒಂಬತ್ತು ಸರ್ಗಗಳು ಶಂಕರಸಂಹಿತೆಯನ್ನೇ ಅನುಕರಿಸುವುವು. (Cf. Dr. Jacobi—Orientaliosten Kongresse. Vol. V. ii. 2. pp. 133ff.) ಇದರಿಂದ ಅವು ಈಚಿನವೆಂದೂ ಕಾಳಿದಾಸ ರಚಿತವಲ್ಲವೆಂದೂ ಊಹಿಸಬಹುದು. ಕಡೆಯ ಭಾಗದಲ್ಲಿ ಛಂದಸ್ಸು ಅನೇಕ ಕಡೆ ಆಕ್ಷೇಪಣೀಯವಾಗಿದೆ. ಸು, ಸದ್ಯಃ ಅಲಂ ಮುಂತಾದ ಪದಗಳನ್ನು ಕೇವಲ ಪಾದಪೂರಣಕ್ಕಾಗಿ ಉಪಯೋಗಿಸಿದೆ. ಇದು ಕವಿಯ ಅಸಾಮರ್ಥ್ಯದ ಕುರುಹು. ಇದಲ್ಲದೆ ಆಶಯಗಳ ಮತ್ತು ಶಬ್ದಗಳ ಪುನರುಕ್ತಿ, ಆಮ್ ಪ್ರತ್ಯಯಾಂತವಾದ ಲಿಟ್ ರೂಪಗಳು ಅವ್ಯಯೀಭಾವಸಮಾಸ ಮತ್ತು ಭಾವೆಪ್ರಯೋಗಗಳ ಆಧಿಕ್ಯ ಇವೆಲ್ಲವೂ ಪ್ರಸಕ್ತ ಗ್ರಂಥಭಾಗದ ಅಪಕರ್ಷವನ್ನು ಸೂಚಿಸುವುವು. ವ್ಯಾಖ್ಯಾನಕಾರರೂ ಆಲಂಕಾರಿಕರೂ ಈ ಭಾಗದ ಶ್ಲೋಕಗಳನ್ನು ಉದಾಹರಿಸುವುದಿಲ್ಲ. ಮಲ್ಲಿನಾಥನು ಇದಕ್ಕೆ ವ್ಯಾಖ್ಯಾನವನ್ನು ರಚಿಸಿಯೂ ಇಲ್ಲ. ಇಷ್ಟು ಕೆಳಮಟ್ಟದ ಕವಿತ್ವವು ಕಾಳಿದಾಸನ ಇತರ ಕಾವ್ಯಗಳಲ್ಲಿ ಎಲ್ಲೂ ಕಂಡುಬರದೆ ಇರುವುದರಿಂದ ಈ ಭಾಗವು ಕಾಳಿದಾಸನದಲ್ಲವೆಂದು ತೀರ್ಮಾನಿಸಿದೆ. (Cf. Keith. Hist. Skt. Lit. p. 89) also.

3. Dr. Jacobi ಅವರದು.

ಬರೆದಿದ್ದ ಮಾತೃಕೆಯ ಕಡೆಯ ಪತ್ರಗಳು ಕಳೆದುಹೋಗಿ ಹೀಗಾಗಿರ ಬಹುದೆಂದು ಮತ್ತೊಬ್ಬರ ಊಹೆ.[1] ಕೆಲವು ಶ್ಲೋಕಗಳೋ ಅಥವಾ ಒಂದು ಸರ್ಗ ಮಾತ್ರವೋ ಕೈತಪ್ಪಿರಬಹುದೆಂದೂ ಆ ಭಾಗದಲ್ಲಿ ಕುಮಾ ರೋತ್ಪತ್ತಿಯು ಸಂಗ್ರಹವಾಗಿ ನಿರೂಪಿತವಾಗಿದ್ದಿರಬೇಕೆಂದೂ ಇವರು ವಾದಿಸುತ್ತಾರೆ. ಒಂದು ಸರ್ಗ ಪೂರ್ತಿ ಲುಪ್ತವಾಗುವುದು ಅಸಂಭಾವಿತ. ಏಕೆಂದರೆ ಎಂಟನೆಯ ಸರ್ಗವನ್ನೇ ಎಲ್ಲ ವ್ಯಾಖ್ಯಾನಕಾರರೂ ಕೊನೆಯ ದೆಂದು ವ್ಯವಹರಿಸಿರುತ್ತಾರೆ. ತಾರಕವಧದವರೆಗೂ ಕತೆಯನ್ನು ಮುಂದು ವರಿಸುವ ಕೆಲವು ಶ್ಲೋಕಗಳು ಎಂಟನೆಯ ಸರ್ಗದ ಕೊನೆಯಲ್ಲಿದ್ದುವೆನ್ನ ಬಹುದು. ಆದರೂ ವ್ಯಾಖ್ಯಾನಕಾರರು ಎತ್ತಿರುವ ಅಸಭ್ಯತೆಯ ಆಕ್ಷೇಪ ಣೆಯು ಕವಿಯ ಕಾಲದಲ್ಲೇ ಇದ್ದು ಈ ಕಾರಣದಿಂದಲೇ ಕವಿಯು ಕತೆಯನ್ನು ಅಸಮಗ್ರವಾಗಿ ಬಿಟ್ಟನೆನ್ನುವುದು ಸೂಕ್ತತರವೆಂದು ತೋರು ವುದು. ಇದು ಹೆಚ್ಚು ಸಂಭಾವಿತವೆನ್ನುವುದರಲ್ಲಿ ಸಂದೇಹವಿಲ್ಲ.

ಇನ್ನು ಕತೆಯ ಸಾರಾಂಶವನ್ನು ಗಮನಿಸಬಹುದು. ಮೊದಲನೆಯ ಸರ್ಗದಲ್ಲಿ ಹಿಮಾಲಯದ ವರ್ಣನೆ, ಪಾರ್ವತಿಯ ಜನನ, ಬಾಲ್ಯ ಮತ್ತು ಯೌವನ ದಶೆಗಳು ಮತ್ತು ಅವಳು ತಪೋನಿರತನಾಗಿದ್ದ ಶಿವನ ಶುಶ್ರೂಷೆಗೆ ನಿಯಮಿಸಲ್ಪಡುವುದು. ಇವು ಮುಖ್ಯವಾದುವು. ಪ್ರಕೃತಿಯ ವಿಚಾರದಲ್ಲಿ ಕವಿಯ ಮನೋಭಾವವನ್ನು ಈಗಾಗಲೆ ಸ್ವಲ್ಪಮಟ್ಟಿಗೆ ಗಮನಿಸಿಯಾಗಿದೆ. ಕುಮಾರಸಂಭವದಲ್ಲಿ ಬರುವ ಹಿಮಾಲಯವರ್ಣ ನೆಯು ಇದನ್ನು ದೃಢಪಡಿಸುವುದು. ಹಿಮಾಲಯ ಬೆಟ್ಟವನ್ನು ದೇವ ಪದವಿಗೂ ರಾಜಪದವಿಗೂ ಏರಿಸಿ ಕವಿಯು ಅದಕ್ಕೆ ಉನ್ನತವಾದ ವ್ಯಾಪಾರವನ್ನು ಆರೋಪಿಸಿರುವನು ; ಮನುಷ್ಯರು, ದೇವತೆಗಳು, ಸ್ಥಾವರ ರಾಶಿಗಳಿಗಿರುವ ವಿಭಾಜಕರೇಖೆಯನ್ನು ಅಳಿಸಿ ಮಾನುಷ ಪ್ರಪಂಚವನ್ನು ವಿಸ್ತಾರಗೊಳಿಸಿರುವನು. ಭರತಖಂಡದ ಉತ್ತರದಿಕ್ಕಿನಲ್ಲಿರುವ ಹಿಮಾ ಲಯ ಪರ್ವತವು ಕಾಳಿದಾಸನ ಭಾವನೆಯಲ್ಲಿ ದೇವತಾಸ್ವರೂಪ. ಪೂರ್ವ

1. Dr. Winternitz ಮತ್ತು Harichand Cf. Gesh Ind. Lit. III. p. 58 and Kālidāsa et l'art. p. 236.

ಪಶ್ಚಿಮುಸಮುದ್ರಗಳೊಳಕ್ಕೂ ಚಾಚಿ ಭೂಮಿಯನ್ನು ಅಳತೆ ಮಾಡುವ ಅಳತೆ ಕಡ್ಡಿಯಂತಿದೆ. ಇದೊಂದು ಕಲ್ಪನಾಚಿತ್ರ. ಹಿಮಾಲಯವು ಕರುವಂತೆ; ಮೇರುಪರ್ವತವು ಗೊಲ್ಲನಂತೆ; ಭೂಮಾತೆಯೆಂಬ ಹಸುವನ್ನು ಇವನು ಕರೆಯಲಾಗಿ ಅನೇಕ ರತ್ನಗಳೂ ಔಷಧಿಗಳೂ ಸಿಕ್ಕಿದುವಂತೆ. ಇದಿನ್ನೊಂದು ಚಿತ್ರ. ಹೀಗೆ ಸುಮಾರು ಹದಿನೇಳು ಶ್ಲೋಕಗಳಲ್ಲಿ ಕವಿಯ ಪ್ರತಿಭಾವಿಲಾಸವನ್ನು ಕಾಣಬಹುದು. ಶಿಖರದಲ್ಲಿ ಹಿಮ ತುಂಬಿದ್ದರೂ ಇದರ (ಹಿಮಾಲಯದ) ಕಾಂತಿಯು ಸ್ವಲ್ಪವೂ ಕಡಿಮೆಯಾಗಿಲ್ಲ. ಚಂದ್ರಕಿರಣಗಳ ಬೆಳಕಿನಲ್ಲಿ ಕಳಂಕದಂತೆ ಗುಣರಾಶಿಯ ಮಧ್ಯದಲ್ಲಿ ಏಕಮಾತ್ರ ದೋಷವು ಕಾಣುವುದೆ? ಇದರ ಶಿಖರದಲ್ಲಿ ಸಿಕ್ಕುವ ಗೈರಿಕಾದಿಗಳನ್ನು ಅಪ್ಸರೆಯರು ಅಲಂಕಾರಕ್ಕಾಗಿ ಉಪಯೋಗಿಸಿಕೊಳ್ಳುವರು. ತಪ್ಪಲು ಪ್ರದೇಶದಲ್ಲಿ ವಾಸಿಸುವ ಸಿಂಹಗಳು ಆನೆಗಳ ಕುಂಭಗಳನ್ನು ಬಗೆಯುವುದರಿಂದ ಎಲ್ಲೆಲ್ಲೂ ಮುತ್ತುಗಳು ಚೆಲ್ಲಿರುವುವು. ಇಲ್ಲಿ ಸಿಕ್ಕುವ ಭೂರ್ಜಪತ್ರಗಳನ್ನು ವಿದ್ಯಾಧರೆಯರು ಪ್ರಣಯಪತ್ರಗಳಿಗಾಗಿ ಉಪಯೋಗಿಸುವರು. ಇಲ್ಲಿನ ಗುಹೆಗಳಲ್ಲಿ ವನಿತೆಯರೊಡನೆ ವಿಹರಿಸುವ ವನಚರರಿಗೆ ತೃಣಜ್ಯೋತಿಗಳು ಬೆಳಕನ್ನೊದಗಿಸುವುವು. ಚಮರೀಮೃಗಗಳು ತಮ್ಮ ಬಾಲಗಳನ್ನು ಅತ್ತಿತ್ತ ತಿರುಗಿಸಲಾಗಿ ಈ ಪರ್ವತ ರಾಜನಿಗೆ ಚಾಮರಮರ್ಯಾದೆ ನಡೆಯುವುದು. ಭಾಗೀರಥಿಯ ತುಂತುರುಗಳೊಡನೆ ಬೆರೆತ ತಂಗಾಳಿಯು ಬೀಸುತ್ತ ಮೃಗಗಳನ್ನಟ್ಟಿಕೊಂಡು ಹೋಗುವ ಕಿರಾತರ ಶ್ರಮವನ್ನು ಪರಿಹರಿಸುವುದು. ಇದರ ಶಿಖರದ ಕೊಳಗಳಲ್ಲಿ ಬೆಳೆಯುವ ಕಮಲಗಳನ್ನು ಸಪ್ತರ್ಷಿಗಳು ಪೂಜೆಗಾಗಿ ಕೊಯ್ದೊಯ್ಯುವರು. ಯಜ್ಞಕ್ಕೆ ಬೇಕಾದ ಸೋಮಾದಿಲತೆಗಳೂ ಇಲ್ಲಿ ಸಿಕ್ಕುವುವು. ಭೂಮಿಯನ್ನು ಹೊರುವ ಅಸಾಧಾರಣಶಕ್ತಿ ಈ ಪರ್ವತ ರಾಜನಿಗಿರುವುದು. ಆದುದರಿಂದಲೇ ಬ್ರಹ್ಮನು ಇವನಿಗೆ ಪರ್ವತರಾಜನೆಂದು ಪಟ್ಟಕಟ್ಟಿರುವುದು.

ಹೀಗೆ ಪ್ರಖ್ಯಾತನಾದ ಹಿಮವಂತನು ವಂಶಾಭಿವೃದ್ಧಿಗಾಗಿ ಸತ್ಕುಲ ಪ್ರಸೂತೆಯೂ ಶೀಲವತಿಯೂ ಆದ ಮೇನಕಾದೇವಿಯನ್ನು ಮದುವೆ ಮಾಡಿಕೊಂಡನು. ಮೇನಕೆಯ ಮೊದಲನೆಯ ಮಗ ಮೈನಾಕ.

ಎರಡನೆಯ ಮಗಳು ಪಾರ್ವತಿ. ದಾಕ್ಷಾಯಣಿಯು ಪುನಃ ಜನ್ಮವೆತ್ತಲು ಮೇನಕೆಯ ಗರ್ಭವನ್ನು ಪ್ರವೇಶಿಸಿದಳಂತೆ. ನೀತಿಯೂ ಉತ್ಸಾಹವೂ ಐಕಮತ್ಯದಿಂದ ಪ್ರವರ್ತಿಸಲು ಸಂಪತ್ತು ಹುಟ್ಟಿದಂತೆ ಆಗ ಪಾರ್ವತಿ ಹುಟ್ಟಿದಳು. ಹುಡುಗಿಯು ಕ್ರಮೇಣ ಬೆಳೆಯುತ್ತ ಲಾವಣ್ಯವತಿಯಾದಳು. ಹಿಮವಂತನಿಗೆ ಇವಳಲ್ಲೂ ಬಹಳ ಪ್ರೀತಿ. ಕ್ರೀಡಾರಸವನ್ನೇ ರುಚಿನೋಡು ತ್ತಿದ್ದವಳಂತೆ ಇವಳು ಮಂದಾಕಿನಿಯ ಮರಳಿನಲ್ಲಿ ಜಗುಲಿಗಳನ್ನು ಕಟ್ಟು ವುದು, ಚೆಂಡಾಟ, ಬೊಂಬೆಯಾಟಗಳನ್ನು ಆಡುತ್ತ ಬೆಳೆದಳು. ಕಾಲ ಕ್ರಮದಲ್ಲಿ ಹಿಂದಿನ ಜನ್ಮದಲ್ಲಿ ಕಲಿತಿದ್ದ ವಿದ್ಯೆಗಳೂ ಸ್ಮರಣೆಗೆ ಬಂದುವು.

ಯುವಮೋಹಕವಾದ ತಾರುಣ್ಯವೂ ತಲೆದೋರಿತು. ಅಂಗಗಳೆಲ್ಲ ಪುಷ್ಟಿಹೊಂದಿದುವು. ಹೆಜ್ಜೆಯಿಡುವಾಗ ಕಮಲದಂತಿದ್ದ ಕಾಲುಗಳಿಂದ ಬಣ್ಣವು ಚಿಮ್ಮುವಂತಿತ್ತು. ರಾಜಹಂಸಗಳ ಲೀಲಾಗಮನ ಇವಳನ್ನು ಸೇರಿತು. ನೈದಿಲೆಗಿಂತ ಮೃದುವಾಗಿದ್ದುವು ಇವಳ ತೋಳುಗಳು. ಉಮೆಯ ಮುಖವನ್ನು ಸೇರಿದ ಲಾವಣ್ಯಾಭಿಮಾನದೇವತೆಗೆ ಪದ್ಮದ ಪರಿಮಳವೂ ಚಂದ್ರನ ಕಾಂತಿಯೂ ಒಂದೇ ಸಲಕ್ಕೆ ಸಿಕ್ಕಿದಂತಾಯಿತು. ಅಮೃತಮಯವಾದ ಇವಳ ಧ್ವನಿಯನ್ನು ಕೇಳಿದವರಿಗೆ ಕೋಗಿಲೆಯ ಕೂಗೂ ಕರ್ಣಕಠೋರವಾಗುತ್ತಿತ್ತು. ಬಿರುಗಾಳಿಗೆ ಅದಿರುವ ನೀಲೋ ತ್ಪಲದಂತಿದ್ದ ಚಕಿತಪ್ರೇಕ್ಷಣವನ್ನು ಇವಳಿಗೆ ಹರಿಣಿಗಳು ಕಲಿಸಿದ್ದುವೋ ಅವೇ ಇವಳಿಂದ ಕಲಿತಿದ್ದುವೋ ಹೇಳಲಸಾಧ್ಯ. ಒಟ್ಟಿನಲ್ಲಿ ಸೌಂದರ್ಯದ ಪೂರ್ಣಸ್ವರೂಪವನ್ನು ನೋಡಬೇಕೆಂದು ಎಲ್ಲ ಆದರ್ಶವಸ್ತುಗಳನ್ನೂ ಜಾಗರೂಕತೆಯಿಂದ ಜೋಡಿಸಿ ಪ್ರಯತ್ನಪೂರ್ವಕವಾಗಿ ಬ್ರಹ್ಮನು ಅವಳ ದೇಹವನ್ನು ನಿರ್ಮಿಸಿದ್ದಂತಿತ್ತು.

ಒಂದು ದಿನ ನಾರದರು ಸ್ವೇಚ್ಛೆಯಾಗಿ ಸಂಚರಿಸುತ್ತ ತಂದೆಯ ಹತ್ತಿರ ಆಡುತ್ತಿದ್ದ ಇವಳನ್ನು ನೋಡಿ "ಇವಳು ಹರನ ಪ್ರೇಮಕ್ಕೆ ಪಾತ್ರ ಳಾಗಿ ಅವನ ಶರೀರದ ಅರ್ಧವನ್ನೇ ಅಪಹರಿಸುವಳು" ಎಂದು ಹೇಳಿದ ರಂತೆ. ಇದನ್ನು ಕೇಳಿದಂದಿನಿಂದ ಹಿಮವಂತನಿಗೆ ತನ್ನ ಮಗಳನ್ನು ಹರನಿಗೆ ಹೊರತು ಮತ್ತಾರಿಗೂ ಕೊಡಲು ಇಷ್ಟಬರದೆಹೋಯಿತು. ಆದರೆ ಅವನೇ

ಅಪೇಕ್ಷಿಸದಿದ್ದರೆ ಒಪ್ಪಿಸುವುದು ಸಾಧ್ಯವಿಲ್ಲವೆಂದೂ, ತಾನಾಗಿಯೇ ಕೇಳಿದರೆ ಅವನು ನಿರಾಕರಿಸಬಹುದೆಂದೂ ಸಂಶಯಗೊಂಡು ಹಿಮವಂತನು ಉದಾಸೀನನಾಗಿಯೇ ನಿರೀಕ್ಷಿಸುತ್ತಿದ್ದನು. ದಕ್ಷಕನ್ಯೆಯು ಶರೀರತ್ಯಾಗಮಾಡಿದಂದಿನಿಂದ ಹರನೂ ವಿರಕ್ತನಾಗಿ ಹಿಮವತ್ಪ್ರದೇಶದಲ್ಲಿ ತಪಸ್ವಿಗಾಗಿ ಕುಳಿತಿದ್ದನು. ಇತರರಿಗೆ ತಪಃಫಲವನ್ನು ಕೊಡುವ ಹರನು ತಾನೇ ಏನನ್ನೋ ಆಶಿಸಿ ತಪಸ್ಸನ್ನಾಚರಿಸುವುದು ಅತಿಶಯವಲ್ಲವೆ? ಗಿರಿರಾಜನು ದೇವದೇವನನ್ನು ಅರ್ಘ್ಯಾದಿಗಳಿಂದ ಸತ್ಕರಿಸಿ ಸಖಿಸಮೇತಳಾದ ಮಗಳಿಗೆ ಇವನ ಶುಶ್ರೂಷೆಯ ಕೆಲಸವನ್ನು ವಹಿಸಿದನು. ಚಿತ್ತೈಕಾಗ್ರತೆಗೆ ಇವಳು ಪ್ರತಿಬಂಧಕವೆಂದು ತಿಳಿದಿದ್ದರೂ ಹರನು ಪಾರ್ವತಿಯ ಸೇವೆಯನ್ನು ನಿರಾಕರಿಸಲಿಲ್ಲ. ಮನಸ್ಸನ್ನು ಕದಡುವ ಸಾಮಗ್ರಿಯಿರುವಾಗ ಮನಸ್ಸನ್ನು ಬಿಗಿಹಿಡಿಯುವವರೇ ಧೀರರು.[1] ಪೂಜೆಗೆ ಹೂಗಳನ್ನು ಕೊಯ್ದು ತರುವುದು, ವೇದಿಯನ್ನು ಗುಡಿಸಿ ಶುದ್ಧಮಾಡುವುದು, ಶುದ್ಧೋದಕವನ್ನು ತರುವುದು ಮುಂತಾದ ಸೇವೆಗಳನ್ನು ಸಲ್ಲಿಸುತ್ತಿದ್ದ ಪಾರ್ವತಿಯ ಶ್ರಮವನ್ನು ಹರನತಲೆಯ ಮೇಲಿನ ಚಂದ್ರಕಿರಣಗಳೇ ಪರಿಹರಿಸುತ್ತಿದ್ದುವಂತೆ!

---

## ಎರಡನೆಯ ಸರ್ಗ

ಈ ಸಮಯಕ್ಕೆ ಸರಿಯಾಗಿ ತಾರಕಾಸುರನಿಂದ ಪೀಡಿತರಾದ ದೇವತೆಗಳು ಇಂದ್ರನನ್ನು ಮುಂದಿಟ್ಟುಕೊಂಡು ಬ್ರಹ್ಮನನ್ನು ಮರೆಹೋಗುವರು. ಬ್ರಹ್ಮನ ಸ್ತೋತ್ರವು ಭಾವಾವೇಶಪೂರಿತವಾಗಿ ರಮ್ಯವಾಗಿದೆ. ಇದರಿಂದ ಬ್ರಹ್ಮನು ಪ್ರಸನ್ನನಾಗಿ ದೇವತೆಗಳ ತೊಂದರೆಯನ್ನು ಕುರಿತು ಪ್ರಸ್ತಾಪಿಸುವನು. ಕಡೆಗೆ "ಮೇಲಿನ ಪದವಿಗಳಲ್ಲಿದ್ದ ನಿಮ್ಮನ್ನು ಇನ್ನೂ ಹೆಚ್ಚುಪರಾಕ್ರಮವುಳ್ಳವರು ಮೆಟ್ಟಿರುವರೆ? ಹಾಗಿದ್ದಲ್ಲಿ ನನ್ನಿಂದ ಇನ್ನೇನಾಗತಕ್ಕದ್ದಿದೆ? ಲೋಕಸೃಷ್ಟಿಯು ನನ್ನ ಕೆಲಸ; ಅದರ ರಕ್ಷಣೆ ನಿಮ್ಮನ್ನು ಸೇರಿರುವುದು" ಎಂದು ಹೇಳುವನು. ಆಗ

---

1. ವಿಕಾರಹೇತೌ ಸತಿ ವಿಕ್ರಿಯನ್ತೇ ಯೇಷಾಂ ನ ಚೇತಾಂಸಿ ತ ಏವ ಧೀರಾಃ. I.

ಇಂದ್ರನು ಸಂಜ್ಞೆಮಾಡಲು ಬೃಹಸ್ಪತಿಯು ಎಲ್ಲರ ಪರವಾಗಿ ಹೇಳುವನು. "ನಮಗೆ ಅಧಿಕಾರಚ್ಯುತಿಯಾಗಿರಬಹುದೆಂದು ನೀನು ಊಹಿಸಿದುದು ಸತ್ಯ. ನಿನ್ನಿಂದ ವರವನ್ನು ಪಡೆದು ಗರ್ವಿತನಾದ ತಾರಕನೆಂಬ ರಾಕ್ಷಸನು ಲೋಕಪೀಡೆಯನ್ನು ಸೂಚಿಸುವ ಬಾಲಚುಕ್ಕೆಯಂತೆ ತಲೆಯೆತ್ತುತ್ತಿರುವನು. ಸೂರ್ಯ, ಚಂದ್ರ, ವಾಯು, ಋತುಗಳು, ಸಮುದ್ರ, ವಾಸುಕಿ, ಇಂದ್ರ ಮುಂತಾದವರೆಲ್ಲ ಸೇವೆ ಸಲ್ಲಿಸುತ್ತಿದ್ದರೂ ಅವನು ಮೂರು ಲೋಕಗಳನ್ನೂ ಪೀಡಿಸುತ್ತಿರುವನು. ದುರ್ಜನರು ಉಪಕಾರದಿಂದ ವಶರಾಗರು; ಅವರ ಹಮ್ಮು ಪ್ರತ್ಯಪಕಾರದಿಂದ ಮಾತ್ರ ಮುರಿಯುವುದು. ಇವನನ್ನು ನಿಗ್ರಹಿಸಲು ನಮ್ಮ ಉಪಾಯಗಳೆಲ್ಲ ನಿಷ್ಫಲವಾದುವು. ವಿಜಯದ ಆಸೆಗೆ ಆಧಾರವಾದ ವಿಷ್ಣುಚಕ್ರವೇ ಇವನ ಕಂಠಾಭರಣವಾಗಿರುವುದು. ಮುಮುಕ್ಷುಗಳಿಗೆ ಸಂಸಾರ ಕ್ಲೇಶವನ್ನು ದೂರಮಾಡುವ ನಿವೃತ್ತಿಮಾರ್ಗ ಬೇಕಾಗುವಂತೆ ನಮಗೆ ಈಗ ಇವನನ್ನು ನಿಗ್ರಹಿಸಬಲ್ಲ ಸೇನಾಪತಿ ಬೇಕಾಗಿರುವನು" ಎಂದು ಹೇಳಲಾಗಿ ಬ್ರಹ್ಮನು "ನಿಮ್ಮ ಇಷ್ಟವು ಕೈಗೂಡುವುದು. ಕೊಂಚಕಾಲ ನಿರೀಕ್ಷಿಸಿರಿ. ನನ್ನಿಂದಲೇ ಅನುಗ್ರಹವನ್ನು ಪಡೆದ ದೈತ್ಯನ ನಾಶವನ್ನು ನಾನೇ ಮಾಡಲೊಲ್ಲೆ. ವಿಷವೃಕ್ಷವಾದರೂ ತಾನೇ ಬೆಳಸಿದುದನ್ನು ಕಡಿಯುವುದು ಸರಿಯಲ್ಲ.[1] ದೇವತೆಗಳು ತನ್ನನ್ನು ಕೊಲ್ಲದಿರಲೆಂದು ಅವನು ಅಪೇಕ್ಷಿಸಿದ ವರವನ್ನೇ ಕೊಟ್ಟಿರುವೆನು. ಆದ್ದರಿಂದ ಶಿವಾಂಶವಲ್ಲದೆ ಬೇರೆ ಯಾವುದೂ ಅವನನ್ನು ಜಯಿಸಲಾರದು. ಧ್ಯಾನಮಗ್ನನಾದ ಶಿವನ ಮನಸ್ಸನ್ನು ಉಮೆಯ ಸೌಂದರ್ಯದಿಂದ ಆಕರ್ಷಿಸಿರಿ. ಅವಳೊಬ್ಬಳೇ ಶಿವಾಂಶವನ್ನು ಧರಿಸಲರ್ಹಳು. ಇವರ ಮಗನು ಸೇನಾಧಿಪತಿಯಾಗಿ ದೇವವನಿತೆಯರನ್ನು ಸೆರೆಯಿಂದ ಬಿಡಿಸುವನು" ಎಂದು ಉತ್ತರ ಕೊಡುವನು. ದೇವತೆಗಳು ಧೈರ್ಯಹೊಂದಿ ಮುಂದಿನ ಕೆಲಸ ನಡೆಸುವುದಕ್ಕಾಗಿ ಹಿಂತಿರುಗುವರು. ಇಂದ್ರನು ಮನ್ಮಥನನ್ನು ಸ್ಮರಿಸಿಕೊಳ್ಳಲು ಅವನು ತನ್ನ ಪುಷ್ಪಧನುಸ್ಸನ್ನು ಹಿಡಿದು ವಸಂತಮಿತ್ರನೊಡನೆ ಕೈ ಮುಗಿದು ನಿಲ್ಲುವನು.

---

1. ವಿಷವೃಕ್ಷೋಽಪಿ ಸಂವರ್ಧ್ಯಸ್ಸ್ವಯಂ ಛೇತ್ತುಮಸಾಂಪ್ರತಂ.

## ಮೂರನೆಯ ಸರ್ಗ

ಮನ್ಮಥನು ಇಂದ್ರನ ಅಪ್ಪಣೆಯನ್ನು ಪಡೆದು ಶಿವಾಶ್ರಮಕ್ಕೆ ಹೊರಡುವುದು; ಶಿವಾಶ್ರಮದಲ್ಲಿ ಇವನು ತನ್ನ ಪ್ರಭಾವ ಬೀರುವುದು; ಆ ಸಮಯಕ್ಕೆ ಸರಿಯಾಗಿ ಪಾರ್ವತಿಯು ತನ್ನ ನಿತ್ಯಚರ್ಯೆಯ ನಿಮಿತ್ತ ಅಲ್ಲಿಗೆ ಬರಲಾಗಿ ಮನ್ಮಥನು ತಪೋನಿರತನಾದ ಶಿವನ ಮನಸ್ಸನ್ನು ಸೆಳೆಯಲು ಯತ್ನಿಸುವುದು ; ಶಿವನು ಎಚ್ಚರಗೊಂಡು ಇವನನ್ನು ಸುಟ್ಟು ಬೂದಿಮಾಡುವುದು ; ಈ ವಿಷಯಗಳು ಈ ಸರ್ಗದಲ್ಲಿ ವರ್ಣಿತವಾಗಿವೆ. ಇಲ್ಲಿನ ಅನೇಕ ಭಾಗಗಳು ಬಹಳ ಉತ್ತಮವಾಗಿವೆ. ಇಂದ್ರಕಾಮ ಸಂವಾದವು ಬಹಳ ಸಜೀವವಾಗಿಯೂ ಸ್ವಾಭಾವಿಕವಾಗಿಯೂ ಕಾಣುವುದು. ವಸಂತನು ಅವತರಿಸಿದಾಗ ಶಿವಾಶ್ರಮಕ್ಕೂ ಇತರ ಪ್ರದೇಶಗಳಿಗೂ ಇರುವ ತಾರತಮ್ಯದ ಚಿತ್ರವು ಮನೋರಂಜಕವಾಗಿರುವುದು. ಈ ಚಿತ್ರಕ್ಕೆ ರಾಮಾಯಣದ ಕಿಷ್ಕಿಂಧಾಕಾಂಡದ ಮೊದಲನೆಯ ಸರ್ಗವು ಸ್ಫೂರ್ತಿಯನ್ನೊದಗಿಸಿರಬಹುದು. ಹರನ ಆಶ್ರಮದ ಮತ್ತು ಅಲ್ಲಿನ ದೇವತಾಪಸನ ಕ್ರೂರ ಗಂಭೀರ ವ್ಯಕ್ತಿತ್ವದ ವರ್ಣನೆಯೂ ಬಹಳ ರಮ್ಯವಾಗಿದೆ. ಕಥಾಭಾಗದ ವಿವರಗಳು ಈ ರೀತಿ ಜರುಗುವುವು.

ಇಂದ್ರನು ಮನ್ಮಥನನ್ನು ವಿಶೇಷವಾಗಿ ಗೌರವಿಸುವನು. ಪ್ರಭುಗಳು ತಮ್ಮ ಕೆಲಸವಾಗಬೇಕಾದ ಸಮಯದಲ್ಲಿ ಆಶ್ರಿತರಲ್ಲಿ ಹೀಗೆ ಹೆಚ್ಚು ಗೌರವವನ್ನು ತೋರಿಸುವುದು ಸ್ವಾಭಾವಿಕವಷ್ಟೆ! ಮನ್ಮಥನು ತಲೆಬಾಗಿ "ಪ್ರಭುವೆ, ಸ್ಮರಿಸಿಕೊಂಡು ಮಾಡಿರುವ ನನ್ನ ಮೇಲಿನ ಅನುಗ್ರಹವನ್ನು ಆಜ್ಞೆಯಿಂದ ಮುಂದುವರಿಸು" ಎಂದು ಹೇಳಿ ಅನೇಕ ಐಹಿಕ ಫಲಗಳನ್ನು ಕುರಿತು ಪ್ರಸ್ತಾಪಿಸುವನು. ಕಡೆಗೆ "ಕುಸುಮಾಯುಧನಾದರೂ ನಿನ್ನನುಗ್ರಹದಿಂದ ವಸಂತಮಿತ್ರನೊಬ್ಬನ ಸಹಾಯವನ್ನು ಪಡೆದು ಹರನಿಗೂ ಮನೋವಿಕಾರವನ್ನು ಉಂಟುಮಾಡಬಲ್ಲೆ. ಇತರರು ನನಗೆ ಲಕ್ಷ್ಯವೇನು ?" ಎಂದು ಜಂಭಕೊಚ್ಚುವನು.

ಇದನ್ನು ಕೇಳಿ ಇಂದ್ರನು ಸಂತೋಷಗೊಂಡು "ಮಿತ್ರ, ಇದೆಲ್ಲವೂ ನಿನಗೆ ಸಾಧ್ಯ, ನನಗೆ ವಜ್ರ, ನೀನು ಇಬ್ಬರೇ ಆಯುಧಗಳು. ವಜ್ರವು

ತಪೋನಿಷ್ಠರಮೇಲೆ ಸಗ್ಗದು. ನೀನು ಮಾತ್ರ ಎಲ್ಲರನ್ನೂ ಕೆಡಹಬಲ್ಲೆ. ಇದನ್ನು ತಿಳಿದೇ ಆತ್ಮಸಮನಾದ ನಿನಗೆ ಈ ಮಹಾಕಾರ್ಯವನ್ನು ವಹಿಸುವೆನು. ಈಗ ದೇವತೆಗಳಿಗೆ ಶಿವಾಂಶದಿಂದ ಹುಟ್ಟಿದ ಸೇನಾಪತಿ ಬೇಕು. ಅದಕ್ಕಾಗಿ ತತ್ತ್ವಧ್ಯಾನಾಸಕ್ತನಾದ ಹರನು ಹಿಮವಂತನ ಮಗಳನ್ನು ಕಾಮಿಸುವಂತೆ ಮಾಡು. ಮುಂದೆ ಎಲ್ಲವೂ ಸರಿಹೋಗುವುದು" ಎಂದು ಹೇಳಿ ಅವನನ್ನು ಬೆನ್ನುತಟ್ಟಿ ಕಳುಹಿಸಿಕೊಡುವನು.

ಮನ್ಮಥನ ಮಿತ್ರ 'ವಸಂತ'ನು ಶಿವಾಶ್ರಮದಲ್ಲಿ ಕಾಮವನ್ನು ದ್ರೇಕಿಸುವ ಸ್ವರೂಪ ತಾಳಿ ವಿಜೃಂಭಿಸುವನು. ಇತರ ಕಡೆಗಳಲ್ಲಿಲ್ಲದಿದ್ದರೂ ಅಲ್ಲಿ ಉತ್ತರಾಯಣವು ಪ್ರಾರಂಭವಾಗಿ ಮಲಯ ಮಾರುತ ಬೀಸುವುದು. ಅಶೋಕ, ಕರ್ಣಿಕಾರ, ತಿಲಕ ಮೊದಲಾದ ಗಿಡಗಳು 'ದೋಹದ' ವಿಲ್ಲ ದೆಯೇ ಹೂ ಬಿಡುವುವು. ಕೋಗಿಲೆಯ ಕೂಗನ್ನು ಕೇಳಿ ಮನಸ್ವಿನಿಯರು ಪ್ರಿಯರ ಮೇಲಿನ ಕೋಪವನ್ನು ಬಿಡುವರು. ಆ ಕಾಲದಲ್ಲಿ ತಲೆದೋರಿದ ವಸಂತ ಲಕ್ಷಣಗಳನ್ನು ನೋಡಿ ಆಶ್ರಮದ ಮುನಿಗಳು ತಮ್ಮ ಮನಸ್ಸನ್ನು ಪ್ರಯತ್ನಪೂರ್ವಕವಾಗಿ ಬಿಗಿಹಿಡಿಯುವರು.

ರತಿವಸಂತರೊಡನೆ ಕಾಮನು ಅಲ್ಲಿಗೆ ಬರಲು ಪಶುಪಕ್ಷಿದ್ವಂದ್ವ ಗಳೂ ತಮ್ಮ ಪ್ರೇಮೋತ್ಕರ್ಷವನ್ನು ಚೇಷ್ಟೆಗಳಿಂದಲೇ ಹೊರಗೆಡಹುವುವು. ಪ್ರಿಯೆಯು ಕುಡಿದು ಮಿಕ್ಕ ಮಕರಂದವನ್ನು ಗಂಡು ದುಂಬಿಯು ಅದೇ ಹೂಪಾತ್ರೆಯಿಂದ ಕುಡಿಯುವುದು. ಕರಿಣಿಯು ತಾವರೆಯ ಪರಾಗದಿಂದ ಕೂಡಿದ ನೀರನ್ನು 'ಪ್ರಿಯ'ನಿಗೆ ಕುಡಿಸುವುದು. ಚಕ್ರ ವಾಕವು ಅರ್ಧ ಕಡಿದ ತಾವರೆಯ ದಂಟನ್ನು ಸಹಚರಿಗೆ ತಿನ್ನಿಸುವುದು. ಪುಷ್ಪಮಧ್ಯವನ್ನು ಕುಡಿದು ಮದಿಸಿ ಹಾಡುತ್ತಿದ್ದ ಪ್ರಿಯೆಯ ಮುಖ ವನ್ನು ಕಿನ್ನರನು ಚುಂಬಿಸುವನು. ಲತೆಗಳು ತಮ್ಮ ಕುಡಿಗಳಿಂದ ಗಿಡಗಳನ್ನಪ್ಪಿಕೊಂಡುವು.

ಅಪ್ಸರೆಯರ ಗಾನವೂ ಪ್ರಾರಂಭವಾಯಿತು. ಆದರೂ ಹರನು ಧ್ಯಾನದಲ್ಲೇ ಮಗ್ನನಾಗಿದ್ದಾನೆ. ದೃಢಮನಸ್ಕರನ್ನು ವಿಘ್ನಗಳು ಸಮಾಧಿಯಿಂದ ಎಚ್ಚರಗೊಳಿಸುವುವೆ? ಗಣಗಳು ದಾರಿ ತಪ್ಪದಂತೆ

ನಂದಿಯು ಎಚ್ಚರಿಸುತ್ತಿದ್ದಾನೆ. ಇವನಿಗೆ ಹೆದರಿ ಸಮೀಪದಲ್ಲಿದ್ದ ಪಶು ಪಕ್ಷ್ಯಾದಿಗಳೂ ಸ್ತಬ್ಧವಾಗಿವೆ. ಆ ಸಮಯದಲ್ಲಿ ಮೇರುಗಳ ಮಧ್ಯ ದಲ್ಲಿ ಜಾಗರೂಕತೆಯಿಂದ ಸಂಚರಿಸುತ್ತ ಹರನ ಕಣ್ಣೆದುರಿಗೆ ಬಾರದೆ ಕಾಮನು ಮೆಲ್ಲಗೆ ಆಶ್ರಮವನ್ನು ಪ್ರವೇಶಿಸುವನು.

ದೇವದಾರುವೇದಿಕೆಯ ಮೇಲೆ ಹುಲಿಯ ಚರ್ಮ ಹಾಸಿದೆ. ಅಲ್ಲಿ ಪರ್ಯಂಕಾಸನದಲ್ಲಿ ಶಿವಯೋಗಿಯು ಕುಳಿತಿರುವನು. ಅವನ ಜಡೆಯನ್ನು ಹಾವುಗಳು ಬಿಗಿದಿವೆ. ಕಿವಿಯಿಂದ ಎರಡೆಳೆಯ ರುದ್ರಾಕ್ಷ ಮಾಲೆ ಜೋಲಾಡುತ್ತಿದೆ. ಹೊದೆದಿದ್ದ ಕಪ್ಪು ಚರ್ಮವು ಕತ್ತಿನ ಬಣ್ಣ ದೊಡನೆ ಬೆರತು ಮತ್ತೂ ಕಪ್ಪಾಗಿ ಕಾಣುತ್ತಿದೆ. ಹುಬ್ಬುಗಳು ಚಲಿಸದೆ ನೇರವಾಗಿವೆ. ರೆಪ್ಪೆಗಳೂ ಅಲುಗವು. ದೃಷ್ಟಿಯು ಮೂಗಿನ ತುದಿಯ ಮೇಲೆ ನೆಟ್ಟಿದೆ. ಶರೀರದೊಳಗಿನ ವಾಯುಗಳನ್ನೆಲ್ಲ ನಿರೋಧಿಸಿ ಅವನು ಅಲೆಗಳಿಲ್ಲದ ಜಲಾಶಯದಂತೆಯೂ ಗಾಳಿಯಿಲ್ಲದ ಕಡೆ ಇರುವ ದೀಪ ದಂತೆಯೂ ನಿಶ್ಚಲನಾಗಿದ್ದಾನೆ. ನೆತ್ತಿಯಿಂದ ಹೊರಟ ತಾಪವು ತಲೆ ಯಲ್ಲಿ ಧರಿಸಿದ್ದ ಸುಕುಮಾರನಾದ ಬಾಲಚಂದ್ರನನ್ನು ಬಾಡಿಸುತ್ತಿದೆ. ಬಾಹ್ಯವಸ್ತುಗಳಿಂದ ಮನಸ್ಸನ್ನು ಸೆಳೆದು ತಾನೇ ಅಕ್ಷರತತ್ತ್ವವೆಂದು ಶಿವನು ಸಾಕ್ಷಾತ್ಕರಿಸುತ್ತಿದ್ದಾನೆ. ಮನಸ್ಸಿಗೂ ಗ್ರಾಹ್ಯನಲ್ಲದ ಇಂಥವ ನನ್ನು ನೋಡಿದೊಡನೆಯೇ ಕಾಮನ ಕೈಗಳು ಭಯದಿಂದ ನಡುಗಿದುವು. ಧನುರ್ಬಾಣಗಳು ಕೆಳಗೆ ಬಿದ್ದವು........ಅಷ್ಟರಲ್ಲಿ ವನದೇವತೆಯರೊಡನೆ ಪಾರ್ವತಿಯು ಅಲ್ಲಿಗೆ ಬರಲಾಗಿ ಮೃತಪ್ರಾಯವಾಗಿದ್ದ ಇವನ ಶರೀರಕ್ಕೆ ಅವಳ ಶರೀರ ಸೌಂದರ್ಯವು ಜೀವಕಳೆ ತುಂಬಿದಂತಾಯಿತು.

ಪದ್ಮರಾಗಕ್ಕಿಂತ ಕಾಂತಿಯುಕ್ತವಾದ ಅಶೋಕ, ಚಿನ್ನವನ್ನು ಮೀರಿ ಸುವ ಕರ್ಣಿಕಾರ, ಮುತ್ತಿನಂತೆ ಪೋಣಿಸಿದ್ದ ಸಿಂಧುವಾರ ಮೊದಲಾದ ವಸಂತಪುಷ್ಪಗಳನ್ನು ಧರಿಸಿದ್ದಾಳೆ ಪಾರ್ವತಿ. ಎಳೆಬಿಸಿಲಿನಂತಿರುವ ಸೀರೆಯನ್ನುಟ್ಟು ಸ್ವಲ್ಪ ಬಗ್ಗಿ ಬಳುಕುತ್ತ ಚಿಗುರಿ ಸಂಚರಿಸುವ ಲತೆಯಂತೆ ಶೋಭಿಸುತ್ತಿದ್ದಾಳೆ. ಕೆಂದುಟಿಗಳ ಸುವಾಸನೆಯನ್ನೆಳಸಿ ಮುತ್ತುತ್ತಿದ್ದ ದುಂಬಿಗಳನ್ನು ಅತ್ತಿತ್ತ ನೋಡುತ್ತ ಲೀಲಾಕಮಲದಿಂದ ಚೆದರಿಸುತ್ತಾಳೆ.

ರತಿಯೂ ನಾಚುವಷ್ಟು ಲಾವಣ್ಯವತಿಯಾದ ಇವಳನ್ನು ಕಂಡೊಡನೆ ಮನ್ಮಥನಿಗೆ ಶೂಲಿಯನ್ನು ವಶಪಡಿಸಿಕೊಳ್ಳಬಹುದೆಂಬ ಧೈರ್ಯ ಹುಟ್ಟು ವುದು. ಶಿವನ ಸಮಾಧಿಯು ಮುಗಿಯುವುದಕ್ಕೂ ಪಾರ್ವತಿಯು ಆಶ್ರಮದ ಬಾಗಿಲಿಗೆ ಬರುವುದಕ್ಕೂ ಸರಿಹೋಗುವುದು. ನಂದಿಯ ಅಪ್ಪಣೆಯನ್ನು ಪಡೆದು ಪಾರ್ವತಿಯು ಸಖಿಯರೊಡನೆ ಪ್ರವೇಶಿಸುವಳು. ತಳಿರು ಮಿಶ್ರವಾದ ಹೂಗಳನ್ನು ಅವನ ಪಾದಗಳಿಗರ್ಪಿಸಿ ನಮಸ್ಕರಿಸುವಳು. 'ಬೇರೊಬ್ಬಳನ್ನೂ ಎಳಸದ ಗಂಡನನ್ನು ಸೇರು' ಎಂದು ಶಿವನು ಆಶೀರ್ವದಿಸುವನು.

ಇದು ಬಾಣವನ್ನು ಬಿಡಲು ಸರಿಯಾದ ಸಮಯವೆಂದು ಬೆಂಕಿಗೆ ಬಿದ್ದು ಸಾಯುವ ಹುಳುವಿನಂತೆ ಕಾಮನು ಹರನಲ್ಲಿ ಗುರಿಯಿಟ್ಟು ಬಿಲ್ಲಿನ ಹೆದೆಯನ್ನು ಹಿಡಿಯುವನು. ಆಗ ಗೌರಿಯು ಮಂದಾಕಿನೀಕಮಲಗಳ ಒಣಗಿದ ಬೀಜಗಳಿಂದ ಕಟ್ಟಿದ್ದ ಮಾಲಿಕೆಯನ್ನು ಶಿವನ ಮುಂದೆ ಹಿಡಿಯುವಳು. ಅದನ್ನು ಸ್ವೀಕರಿಸಬೇಕೆಂದು ಹರನು ಕೈನೀಡುವ ವೇಳೆಗೆ ಮನ್ಮಥನೂ ತನ್ನ ಸಮ್ಮೋಹನಾಸ್ತ್ರವನ್ನು ಬಿಲ್ಲಿಗೇರಿಸುವನು. ಸಮ್ಮೋಹನವು ಕಾಮನ ಪ್ರಬಲತಮವಾದ ಅಸ್ತ್ರ! ಕೂಡಲೆ ಚಂದ್ರೋದಯದಲ್ಲಿ ಉಬ್ಬುವ ಸಮುದ್ರದಂತೆ ಹರನ ಮನಸ್ಸು ಕಲಕಿತು. ಅವನ ಕಣ್ಣುಗಳು ಪಾರ್ವತಿಯ ಮುಖವನ್ನು ಈಕ್ಷಿಸಿದುವು. ಶೈಲಸುತೆಯು ಪುಲಕಿತವಾದ ಅಂಗಗಳಿಂದಲೇ ತನ್ನ ಭಾವವನ್ನು ಸೂಚಿಸಿ ನಾಚಿಕೆಯಿಂದ ತಲೆಬಾಗಿ ನಿಲ್ಲುವಳು. ವಶಿಯಾದ ಹರನು ಈ ಚಿತ್ತಕ್ಷೋಭವನ್ನು ನಿಗ್ರಹಿಸಿ ಇದಕ್ಕೆ ಕಾರಣವನ್ನು ತಿಳಿಯಲು ಸುತ್ತಲೂ ನೋಡುವನು. ಎಡಮುಂಡಿಯನ್ನೂರಿ ಬಾಣಬಿಡಲು ಸಿದ್ಧನಾಗಿದ್ದ ಕಾಮನು ಕಣ್ಣಿಗೆ ಬೀಳುವನು. ಹರನ ಹುಬ್ಬುಗಳು ಗಂಟಿಕ್ಕುವುವು. ಅವನ ಮೂರನೆಯ ಕಣ್ಣಿನಿಂದ ಹೊರಟ ಉರಿಯು "ಪ್ರಭೋ, ಸೈರಿಸು, ಸೈರಿಸು" ಎಂದು ದೇವತೆಗಳು ಬೇಡುತ್ತಿರುವಾಗಲೇ ಮನ್ಮಥನನ್ನು ಸುಟ್ಟು ಬೂದಿಮಾಡುವುದು. ರತಿಯು ಮೂರ್ಛೆ ಹೋಗುವಳು. ತಪಸ್ಸಿಗೆ ಅಡ್ಡಿಬರುವ ಸ್ತ್ರೀ ಸಹವಾಸವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಶಿವನು ಭೂತಗಣಗಳೊಡನೆ ಕಣ್ಮರೆಯಾಗುವನು. ತಂದೆಯ ಹೆಬ್ಬಯಕೆಯನ್ನೂ ತನ್ನ ಸೌಂದರ್ಯ

ವನ್ನೂ ನಿಷ್ಫಲವೆಂದು ಭಾವಿಸಿ ನಾಚಿಕೆಗೊಂಡು ಪಾರ್ವತಿಯು ನಿರಾಶಳಾಗಿ ಹಿಂತಿರುಗುವಳು. ಹರನ ಕೋಪದಿಂದ ಹೆದರಿದ್ದ ಮಗಳನ್ನು ಹಿಮವಂತನು ಸಂತೈಸುವನು.

## ನಾಲ್ಕನೆಯ ಸರ್ಗ

ಸರ್ಗಪೂರ್ತಿ ರತಿವಿಲಾಪದಿಂದ ತುಂಬಿದೆ. ಒಂದು ದೃಷ್ಟಿಯಿಂದ ಇದು ಅಸಾಧಾರಣವೆನ್ನಬಹುದು. ಹೆಂಗಸಿನ ವಿರಹದುಃಖವನ್ನು ಮೇಘಸಂದೇಶದಲ್ಲಿ ಗಂಡನು ಊಹಿಸಿಕೊಳ್ಳುವಂತೆ ಚಿತ್ರಿಸಿದೆ. ಇಲ್ಲಿ ಅವಳ ದುಃಖವಿಲಾಪಗಳು ಸಾಕ್ಷಾತ್ತಾಗಿಯೇ ಬರುವುವು. ಯಾವುದನ್ನು ಕಂಡರೂ ರಮಣನ ಸ್ಮರಣೆ, ಸಮಾಗತರಾಗಿದ್ದಾಗ ಪಟ್ಟ ಸುಖದ ಸ್ಮರಣೆ, ವಿರಹದಿಂದ ಉಂಟಾದ ತೀವ್ರವೇದನೆ; ಆತ್ಮ ದೂಷಣೆ, ಲೋಕಾಂತರದಲ್ಲಿ ಸಮಾಗಮಕ್ಕಾಗಿ ಉಪಾಯ ಚಿಂತೆ, ಅಷ್ಟರಲ್ಲಿ ಪತಿಯು ದಿವ್ಯಸ್ತ್ರೀವಶನಾಗುವನೋ ಎಂಬ ಭಯಶಂಕೆಗಳು, ಎಲ್ಲವೂ ವಿಶದವಾಗಿ ಇಲ್ಲಿ ನಿರೂಪಿತವಾಗಿವೆ. ವಿರಹಿಣಿಯ ಮನಸ್ಸಿನ ಭಾವನೆಗಳಿಗೆ ಸರಿಯಾದ 'ವಿಯೋಗಿನೀ' ವೃತ್ತವನ್ನು ಉಪಯೋಗಿಸಿದೆ. ಇಲ್ಲಿ ವಿರಹದುಃಖವು ಅತಿಯಾಗಿ ವರ್ಣಿತವಾಗಿ 'ಪುನಃಪುನರ್ದೀಪ್ತಿ' ಯೆಂಬ ದೋಷಕ್ಕೆ ಅವಕಾಶವಾಗಿದೆಯೆಂದು ವಿಮರ್ಶಕರು ಹೇಳುವುದುಂಟು. ಇದು ಸರಿಯಲ್ಲ. ಸಾಮಾನ್ಯರಾದ ಪತಿಪತ್ನಿಯರ ಪರಸ್ಪರ ವಿಲಾಪವೇ ದುಃಸಹವಾಗಿರುವಲ್ಲಿ ರತಿಮನ್ಮಥರಂತಹ ಆದರ್ಶಪತಿಪತ್ನಿಯರ ಪ್ರೇಮಕ್ಕೆ ಭಂಗ ಬಂದಾಗ ವಿಲಾಪವು ಆವೃತ್ತವಾಗುವುದರಲ್ಲಿ ಅತಿಶಯವೇನಿದೆ? ಸನ್ನಿವೇಶವು ಇನ್ನೂ ಹೆಚ್ಚು ಸ್ವಾಭಾವಿಕತೆಯಿಂದ ಕೂಡಿದೆಯೆಂದು ಹೇಳಬಹುದು.

ಮೂರ್ಛೆ ಹೊಂದಿದ್ದ ರತಿಯನ್ನು ಅವಳ ದುರ್ದೈವವು "ತೀವ್ರವಾದ ವೈಧವ್ಯ ದುಃಖವನ್ನು ಅನುಭವಿಸಲಿ" ಎನ್ನುವಂತೆ ಎಚ್ಚರಗೊಳಿಸಿತು. ಕಣ್ಣುಗಳನ್ನು ತೆರೆದು ನೋಡಲು ಅವನ್ನು ತಣಿಸುವ ಪ್ರಿಯನನ್ನು ತಿರುಗಿ ಕಾಣಲಸಾಧ್ಯವೆಂದು ಅವಳಿಗೆ ಗೊತ್ತಾಗಲಿಲ್ಲ. ಎದುರಿಗೆ ಬೂದಿಯ ಗುಡ್ಡೆ ಮಾತ್ರ ಕಾಣಿಸಿತು. ನಡೆದುದೆಲ್ಲ ಆಗ ಸ್ಮರಣೆಗೆ ಬಂದು ಅವಳು

ಗೋಳಾಡುವುದಕ್ಕೆ ತೊಡಗಿದಳು. ತಲೆ ಕೆದರಿಕೊಂಡು ನೆಲದ ಮೇಲೆ ಬಿದ್ದು ಹೊರಳುತ್ತ ಪ್ರಲಾಪಿಸಲಾಗಿ ಅವಳೊಡನೆ ಆ ಪ್ರದೇಶವೆಲ್ಲ ಶೋಕಿಸಿತು. "ಸುಂದರತಮವಾಗಿ ವಿಲಾಸಿಗಳಿಗೆ ಆದರ್ಶಪ್ರಾಯವಾಗಿದ್ದ ನಿನ್ನ ದೇಹವು ಬೂದಿಯಾದುದನ್ನು ನೋಡಿಯೂ ಬದುಕಿರುವೆನಲ್ಲ! ಹೆಂಗಸರು ಎಷ್ಟು ಕಠಿನೆಯರು!..................ನೀನು ನನಗೆ ಯಾವ ಕೆಡಕನ್ನೂ ಮಾಡಿಲ್ಲ; ನಾನು ನಿನ್ನನ್ನು ಯಾವ ಬಗೆಯಲ್ಲೂ ಪೀಡಿಸಿಲ್ಲ; ಗೋಳಿಡುತ್ತಿದ್ದರೂ ನಿಷ್ಕಾರಣವಾಗಿ ಏಕೆ ಕಣ್ಮರೆಯಾಗಿರುವೆ?........... '(ನೀನು) ಹೃದಯದಲ್ಲೇ ಇರುವೆ' ಎಂದು ನೀನು ಹೇಳಿದ್ದು ಸುಳ್ಳು; ಅದು ನನ್ನ ತೃಪ್ತಿಗಾಗಿ ಮಾತ್ರ ಇದ್ದಿರಬೇಕು. ಅದು ಉಪಚಾರದ ಮಾತಲ್ಲದೆ ನಿಜವಾಗಿದ್ದರೆ ನೀನು ಸತ್ತೂ ರತಿಯು ಬದುಕಿರುವುದುಂಟೆ?...............ಈಗತಾನೆ ಪರಲೋಕಕ್ಕೆ ಹೊರಟಿರುವ ನಿನ್ನ ಹೆಜ್ಜೆಯನ್ನು ಹಿಡಿಯುವೆನು. ವಿಧಿಯು ನನ್ನನ್ನು (ಮೂರ್ಛೆಗೊಳಿಸಿ) ಮೋಸಗೊಳಿಸಿತು...........ಪ್ರಾಣಿಗಳ ಸೌಖ್ಯವು ನಿನ್ನ ಆಧೀನವಲ್ಲವೆ? ಗುಡುಗು ಸಿಡಿಲುಗಳಿಗೆ ಬೆದರುವ ಅಭಿಸಾರಿಕೆಯರನ್ನು ಮಾರ್ಗದಲ್ಲೆಲ್ಲ ಕಗ್ಗತ್ತಲೆ ಕವಿದಿರುವಾಗಲೂ ರಮಣ ವಸತಿಗಳಿಗೆ ನೀನಲ್ಲದೆ ಮತ್ತಾರು ಕರೆದುಕೊಂಡು ಹೋದಾರು?...............ಮದ್ಯಪಾನದಿಂದ ಕೆಂಪಾದ ಕಣ್ಣುಗುಡ್ಡೆಗಳನ್ನು ಅತ್ತಿತ್ತ ತಿರುಗಿಸುತ್ತ ತಪ್ಪುಮಾತನಾಡುವ ಪ್ರಮದೆಯರ ಮದವು ನೀನಿಲ್ಲದಿರುವಾಗ ವಿಡಂಬನ ಮಾತ್ರ!....... .......ಮಿತ್ರನಾದ ನೀನು ಕಥಾವಶೇಷನಾಗಲು ಚಂದ್ರನು (ಬಹುಳ ಪಕ್ಷ ಕಳೆದರೂ) ವೃದ್ಧಿಗೊಳ್ಳದೆ ದುಃಖಿಸುವನು........ಎಳೆಮಾವಿನ ಚಿಗುರನ್ನು ಈಗಾರು ಬಾಣವಾಗಿ ಉಪಯೋಗಿಸುವರು?....... .... ...ರತಿಕುಶಲನಾದ ನೀನು ಮಾಡಿದ ವಸಂತಕುಸುಮಾಲಂಕಾರವು ನನ್ನ ದೇಹದ ಮೇಲಿನ್ನೂ ಅಚ್ಚಳಿಯದಿದ್ದರೂ ನಿನ್ನ ಸುಂದರವಾದ ದೇಹವೇಕೆ ಕಾಣದಿರುವುದು? ............ಚತುರೆಯರಾದ ದೇವವನಿತೆಯರು ನಿನ್ನನ್ನು ವಶಪಡಿಸಿಕೊಳ್ಳುವುದಕ್ಕೆ ಮುಂಚೆಯೇ ಅಗ್ನಿಪ್ರವೇಶಮಾಡಿ ನಾನು ನಿನ್ನ ತೊಡೆಯನ್ನೇರುವೆನು.... .......ನಿನ್ನ ಶವಕ್ಕೂ ಅಲಂಕಾರಮಾಡಲು ನನಗೆ ಸಾಧ್ಯವಿಲ್ಲವಾಗಿದೆ. ಪ್ರಾಣಹೋದುದು ಮಾತ್ರವಲ್ಲದೆ ನಿನ್ನ ದೇಹವೂ ಬೇರೆ

ರೂಪವನ್ನು ತಾಳಿದೆ........ಹೂ ಬಿಲ್ಲನ್ನು ಸಿದ್ಧಪಡಿಸುವ ಆ ನಿನ್ನ ಪ್ರಿಯ ಮಿತ್ರ ವಸಂತನೆಲ್ಲಿ? ಉಗ್ರಕೋಪನಾದ ಪಿನಾಕಿಯು ಅವನನ್ನೂ ಸುಡಲಿಲ್ಲವಷ್ಟೆ!" ಹೀಗೆಲ್ಲ ಪ್ರಲಪಿಸುತ್ತಿರುವಷ್ಟರಲ್ಲಿ ಅವಳನ್ನು ಸಮಾಧಾನಪಡಿಸುವುದಕ್ಕಾಗಿ ವಸಂತನು ಬರುವನು. ಅವನನ್ನು ಕಂಡೊಡನೆ ರತಿಯ ಶೋಕ ಮತ್ತಷ್ಟು ಹೆಚ್ಚುವುದು. ನೆಂಟರೆದುರಿಗೆ ಬಂದಾಗ ಅದುವರೆಗೆ ಶ್ರಮಪಟ್ಟು ತಡೆದಿದ್ದ ದುಃಖವೂ ರಭಸದಿಂದ ಉಕ್ಕುವುದು.[1] "ವಸಂತ! ನೋಡು, ನಿನ್ನ ಸೇಹಿತನಿಗೆ ಎಂತಹ ಸ್ಥಿತಿ ಬಂದಿರುವುದು! ಪಾರಿವಾಳದಂತೆ ಬೆಳ್ಳಗಿರುವ ಅವನ ಬೂದಿಯು ಧೂಳಾಗಿ ಗಾಳಿಯಲ್ಲಿ ತೂರಿ ಹೋಗುತ್ತಿದೆ" ಎಂದು ಪುನಃ ಅಳುವುದಕ್ಕೆ ಪ್ರಾರಂಭಿಸುವಳು. "ಪ್ರಿಯ! ಮದನ! ಈಗ ಕಾಣಿಸಿಕೊ; ವಸಂತನು ನಿನ್ನನ್ನು ನೋಡಲು ತ್ವರೆಪಡುತ್ತಿರುವನು. ಗಂಡಸರ ಪ್ರೀತಿಯು ಹೆಂಡಿರ ವಿಷಯದಲ್ಲಿ ಸ್ಥಿರವಲ್ಲದಿದ್ದರೂ ಮಿತ್ರರ ವಿಷಯದಲ್ಲಿ ಚಂಚಲವಲ್ಲ. ತಾವರೆದಂಟಿನ ಹೆದೆಯನ್ನೆಳೆದು ನೀನು ಹೂವಿನ ಬಾಣಗಳನ್ನೇರಿಸುವ ಬಿಲ್ಲಿಗೆ ದೇವಾಸುರರೂ ಸೋತಿರುವುದು ಈ ಸಹಚರನ ಪ್ರಭಾವದಿಂದ" ಎಂದು ಒಮ್ಮೆ ಪ್ರಿಯನನ್ನೂ ಮತ್ತೊಮ್ಮೆ ವಸಂತನನ್ನೂ ಕುರಿತು ನಾನಾವಿಧವಾಗಿ ಪ್ರಲಪಿಸುವಳು. "ಆರುವ ದೀಪದಂತೆ ನಿನ್ನ ಸ್ನೇಹಿತನು ಹೊರಟೇ ಹೋದನು. ಇನ್ನವನು ಹಿಂದಿರುಗನು. ಬತ್ತಿಯಂತಿರುವ ನನ್ನನ್ನು ದುಃಖವೆಂಬ ಹೊಗೆ ಸುತ್ತಿಕೊಂಡಿರುವುದು............ಕಾಮನನ್ನು ಕೊಂದು ನನ್ನನ್ನುಳಿಸಿದ ವಿಧಿಯು ಅರ್ಧವನ್ನು ಮಾತ್ರ ಕೊಂದಂತಾಯಿತು............ ಆದರೂ ಆಶ್ರಯವಾಗಿದ್ದ ಮರವು ಮುರಿದು ಬೀಳಲಾಗಿ ಲತೆಯು ತಾನಾಗಿಯೇ ಕೆಳಗೆ ಬೀಳುವುದು. ಚಂದ್ರಿಕೆಯು ಚಂದ್ರನೊಡನೆಯೇ ಮರೆಯಾಗುವುದು. ಸೌದಾಮಿನಿ (ಮಿಂಚು) ಯು ಮೋಡದೊಡನೆಯೇ ಲಯಹೊಂದುವುದು. ಪ್ರಮದೆಯರು ಪತಿಯ ಮಾರ್ಗವನ್ನೇ ಅನುಸರಿಸುವುದು ಅಚೇತನಗಳಲ್ಲೂ ಇರುವ ನಿಯಮ. ಎದುರಿಗಿರುವ ಬೂದಿಯನ್ನೇ ಮೈಗೆ ಹಚ್ಚಿಕೊಂಡು ಎಳಚಿಗುರಿನ ಹಾಸಿಗೆಯ ಮೇಲೆ ಮಲಗುವಂತೆ ಸಂತೋಷವಾಗಿಯೇ ಅಗ್ನಿಯನ್ನು ಪ್ರವೇಶಿಸುವೆನು. ಬೇಗ

1. ಸ್ವಜನಸ್ಯ ಹಿ ದುಃಖಮಗ್ರತೋ ವಿವೃತದ್ವಾರಮಿವೋಪಜಾಯತೆ IV.

ಚಿತೆಯನ್ನು ಸಿದ್ಧಪಡಿಸು. ಮನ್ಮಥನು ಕ್ಷಣಮಾತ್ರವೂ ನನ್ನನ್ನು ಬಿಟ್ಟಿರಲಾರನೆಂಬುದು ನಿನಗೆ ಗೊತ್ತಿದೆಯಷ್ಟೆ! ನಮ್ಮಿಬ್ಬರಿಗೂ ಒಂದೇ ಜಲಾಂಜಲಿಯನ್ನರ್ಪಿಸು" ಎಂದು ವಸಂತನನ್ನು ಕುರಿತು ಹೇಳುವಳು. ಹೀಗೆ ಸಾಯಲುದ್ಯುಕ್ತಳಾದ ರತಿಯನ್ನು ಆಕಾಶವಾಣಿಯೊಂದು ಸಂತೈಸಿತು. "ರತಿ! ನಿನ್ನ ಗಂಡನು ಮಡಿದಿರುವುದು ಬ್ರಹ್ಮಶಾಪದಿಂದ. ಮುಂದೆ ಕೃಪೆಮಾಡಿ ಶಿವಪಾರ್ವತಿಯರ ಸಮಾಗಮವನ್ನು ಶಾಪಕ್ಕೆ ಅವಧಿಯನ್ನಾಗಿ ಗೊತ್ತು ಮಾಡಿರುವನು. ಮೋಡಗಳು ಸಿಡಿಲನ್ನು ಹೊರಡಿಸುವಂತೆ ಸಂಯಮಿಗಳು ಕೋಪಗೊಂಡು ನಿಗ್ರಹಿಸಿದರೂ ಅಮೃತವನ್ನು ಸುರಿಸುವಂತೆ ದಯೆಯನ್ನೂ ನೀಡುವರು. ಆದುದರಿಂದ ಕಲ್ಯಾಣಿ! ಮುಂದೆ ಪತಿಸಮಾಗಮವು ತಪ್ಪದೆ ಆಗುವುದರಿಂದ ನಿನ್ನ ಶರೀರವನ್ನು ಳಿಸಿಕೊ" ಎಂದು ಅದು ಹೇಳಿ ಇವಳ ಮರಣಸಂಕಲ್ಪವನ್ನು ಹಿಂದು ಮಾಡಿತು. ರತಿಯು ಗೋಳಾಡುತ್ತಲೇ ಶೋಕದ ಕೊನೆಯನ್ನು ನಿರೀಕ್ಷಿಸುತ್ತಿರುವಳು.

## ಐದನೆಯ ಸರ್ಗ

ಉಮೆಯು ತನ್ನ ಬಾಹ್ಯಸೌಂದರ್ಯವನ್ನು ದೂಷಿಸುತ್ತ ತಪಸ್ಸಿಗೆ ರಗಿದುದು; ಅವಳ ಮನೋದಾರ್ಢ್ಯ; ಇವಳಿಗೂ ರೂಪನ್ನು ಮರೆಸಿಕೊಂಡಿದ್ದ ಹರನಿಗೂ ನಡೆಯುವ ಸಂವಾದ; ರೂಪಿಗೆ ಸೋಲದ ಹರನನ್ನು ಪಾರ್ವತಿಯು ತಪಸ್ಸಿನಿಂದ ವಶಪಡಿಸಿಕೊಂಡುದು ಈ ಸನ್ನಿವೇಶಗಳು ಈ ಸರ್ಗದಲ್ಲಿ ವರ್ಣಿತವಾಗಿವೆ. ಉಮಾಹರರ ಸಂವಾದದಲ್ಲಿ ಗಂಭೀರವಾದ ಹಾಸ್ಯವಡಗಿದೆ. ಉದ್ದಕ್ಕೂ ದೃಶ್ಯಕಾವ್ಯದ ಸೊಬಗನ್ನೂ ಮನಗಾಣಬಹುದು.

ಕಾಮದಹನದಿಂದ ಹತಾಶಳಾದ ಪಾರ್ವತಿಯು ತನ್ನ ರೂಪಲಾವಣ್ಯಗಳನ್ನು ನಿಂದಿಸುವಳು. ಪ್ರಿಯನನ್ನಾಕರ್ಷಿಸದ ಸೌಂದರ್ಯವಿದ್ದೇನು ಫಲವೆಂದು ತನ್ನ ರೂಪದ ವಿಷಯದಲ್ಲಿದ್ದ ವಿಶ್ವಾಸವನ್ನು ತೊರೆಯುವಳು. ತಪಸ್ಸನ್ನು ಮಾಡಿಯಾದರೂ ಗೆಲ್ಲಬೇಕೆಂದು ಇಚ್ಛಿಸುವಳು. ಇಲ್ಲದಿದ್ದರೆ ಗಂಡನ ಶರೀರಾರ್ಧವನ್ನೇ ವಶಪಡಿಸಿಕೊಳ್ಳುವಷ್ಟು ಗಾಢ

ಪ್ರೇಮವೂ ಅಂತಹ ಗಂಡದೂ ಹೇಗೆ ಸಿಕ್ಕಬೇಕು ? ಇದನ್ನು ತಿಳಿದೊಡನೆ ತಾಯಿ ಮೇನಕೆಯು "ತಪಸ್ಸೆಲ್ಲಿ? ನಿನ್ನ ಈ ದೇಹವೆಲ್ಲಿ?" ಎಂದು ಮಗಳನ್ನು ತಡೆಯುವಳು. ಆದರೆ ದೃಢಸಂಕಲ್ಪವುಳ್ಳ ಮನಸ್ಸನ್ನೂ ಹಳ್ಳಕ್ಕೆ ಹರಿಯುವ ನೀರನ್ನೂ ತಡೆಯಲು ಯಾರಿಗೆ ಸಾಧ್ಯ? ಅವಳ ಯತ್ನವು ವಿಫಲವಾಗುವುದು. ತಂದೆಯ ಅಪ್ಪಣೆಯನ್ನು ಪಡೆದು ಪಾರ್ವತಿಯು ಗೌರೀಶಿಖರವೆಂದು ಹೆಸರುಗೊಂಡಿರುವ ಪ್ರದೇಶಕ್ಕೆ ಹೊರಡುವಳು. ತಂದೆಯ ಅಭಿಪ್ರಾಯದಲ್ಲಿ ಇವಳ ಉದ್ಯಮವು ಶ್ಲಾಘ್ಯವೇ ಆಗುವುದು.

ಪಾರ್ವತಿಯು ತಪಸ್ಸನ್ನು ಪ್ರಾರಂಭಿಸುವಳು. ಚಂದನ, ಹಾರ, ಮೊದಲಾದುವನ್ನೆಲ್ಲ ದೂರಮಾಡಿ ಎಳೆಬಿಸಿಲಿನಂತೆ ಹೊಂಬಣ್ಣದಿಂದ ಕೂಡಿದ ನಾರುಡೆಯನ್ನುಟ್ಟಿದ್ದಾಳೆ. ನಡುವಿಗೆ ಮೂರೆಳೆಯ ಮೌಂಜಿ; ಕೇಶಪಾಶವು ಸಂಸ್ಕಾರವಿಲ್ಲದೆ ಜಡೆಗಟ್ಟಿಕೊಂಡ ಮೇಲೂ ಅವಳ ಮುಖ ಸುಂದರವಾಗಿ ಕಾಣುವುದು; ಕಮಲವು ಭ್ರಮರ ಪಙ್ಕ್ತಿಗಳಿದ್ದಾಗ ಮಾತ್ರ ವಲ್ಲದೆ ಸುತ್ತ ಪಾಚಿ ಬೆಳದಿರುವಾಗಲೂ ಹೇಗೆ ರಮ್ಯವಾಗಿಯೇ ಇರುವುದೋ ಹಾಗೆ. ಈಗವಳ ಕೈಗಳು ಮೊದಲಿನಂತೆ ಕೆಂದುಟಿಗಳನ್ನು ಮುಟ್ಟವು; ಚೆಂಡನ್ನು ಹಿಡಿಯವು. ಅದಕ್ಕೆ ಬದಲು ಈಗವು ಜಪಮಾಲೆಯನ್ನು ಹಿಡಿದಿವೆ. ದರ್ಭೆಯ ಚಿಗುರುಗಳಿಂದ ಬೆರಳುಗಳು ಗಾಯಗೊಂಡಿವೆ! ಹಾಸಿಗೆಯಲ್ಲಿ ಉದುರಿದ ಹೂತಗುಲಿ ಕಂದುತ್ತಿದ್ದ ಅವಳ ಕೋಮಲ ದೇಹಕ್ಕೆ ಈಗ ನೆಲವೇ ಹಾಸಿಗೆ; ತೋಳುಗಳೇ ತಲೆದಿಂಬು! ಈಗವಳು ತನ್ನ ವಿಲಾಸವನ್ನೆಲ್ಲ ಬಳ್ಳಿಗಳಲ್ಲೂ ಚಂಚಲದೃಷ್ಟಿಯುಳ್ಳ ಹರಿಣಿಗಳಲ್ಲೂ ಮುಡುಪಾಗಿಟ್ಟಿರುವಂತೆ ಕಾಣುವಳು. ಗಿಡಗಳಿಗೆ ತಾನೇ ಪುತ್ರವಾತ್ಸಲ್ಯದಿಂದ ನೀರೆರೆಯುವಳು. ಜಿಂಕೆಗಳಿಗೆ ಧಾನ್ಯಗಳನ್ನು ತಿನ್ನಿಸುವಳು. ಸ್ನಾನಮಾಡಿ ಅಗ್ನಿಗೆ ಆಹುತಿಯನ್ನು ಅರ್ಪಿಸಿ ಚರ್ಮದ ಉತ್ತರೀಯವನ್ನು ಧರಿಸಿ ಸ್ತೋತ್ರಪಾಠಗಳನ್ನು ಹೇಳುತ್ತಿರಲಾಗಿ ಅವಳನ್ನು ನೋಡಲೆಳಸಿ ಋಷಿಗಳೂ ಬರುವರು. ಧರ್ಮವೃದ್ಧರಲ್ಲಿ ವಯಸ್ಸಿನ ಎಣಿಕೆಯೇ? ಮೃಗಗಳು ವೈರವನ್ನು ಬಿಟ್ಟವು; ಗಿಡಗಳು ಬೇಕಾದ್ದನ್ನು ಕೊಡುತ್ತ ಅತಿಥಿಗಳನ್ನು ತಣಿಸುತ್ತಿದ್ದುವು; ಹೀಗೆ ಉಮೆಯು ತಪೋನಿರತಳಾಗಿದ್ದಾಗ ತಪೋವನವೆಲ್ಲ ಪವಿತ್ರಗೊಂಡಿದೆ.

ಇಷ್ಟಕೂ ತೃಪ್ತಿಗೊಳ್ಳದೆ ಸ್ವಲ್ಪಕಾಲದ ಮೇಲೆ ಪಾರ್ವತಿಯು ಮಹಾತಪಸ್ಸಿಗೆರಗುವಳು. ಉಗ್ರವಾದ ಗ್ರೀಷ್ಮಋತುವಿನಲ್ಲಿ ಅಗ್ನಿಗಳ ಮಧ್ಯೆ ಕುಳಿತು ತನ್ನ ಕಣ್ಣುಗಳ ಕಾಂತಿಯನ್ನು ಮೀರಿಸುವ ಸೂರ್ಯನನ್ನು ಎವೆಯಿಕ್ಕದೆ ನೋಡುವಳು. ತನ್ನ ಶರೀರದ ಕೋಮಲತೆಯನ್ನು ಸ್ವಲ್ಪವೂ ಲೆಕ್ಕಿಸಳು. ಮಳೆಯ ನೀರು, ಚಂದ್ರನ ಕಿರಣಗಳು ಇವೇ ಜೀವನಾಧಾರ. ಅನಂತರ ವರ್ಷ ಋತುವಿನಲ್ಲಿ ಗುಡುಗು, ಮಿಂಚು, ಸಿಡಿಲುಗಳಿಂದ ಕೂಡಿ ಮಳೆ ಸುರಿಯುವಾಗ ಕೂಡ ಕಲ್ಲುಬಂಡೆಗಳ ಮೇಲೆ ಮಲಗುವಳು. ಮಂಜುಬಿದ್ದು ನಡುಗಿಸುವ ಚಳಿಯುಳ್ಳ ಪುಷ್ಯಮಾಸದ ರಾತ್ರಿಗಳನ್ನೂ ಹೀಗೆಯೇ ಕಳೆಯುವಳು. ಹೀಗೆ ಹಗಲಿರುಳೂ ತನ್ನ ಸುಕುಮಾರವಾದ ಶರೀರವನ್ನು ತಪಸ್ಸಿನಿಂದ ಬಾಡಿಸುತ್ತ ಉಮೆಯು ದೃಢಾಂಗರಾದವರ ತಪಸ್ಸನ್ನೂ ಮೀರಿಸುವಳು.

ಕೊನೆಗೆ ಮೂರ್ತಿವೆತ್ತ ಬ್ರಹ್ಮಚರ್ಯಾಶ್ರಮದಂತೆ ದಂಡಾಜಿನ ಗಳನ್ನು ಧರಿಸಿ ತೇಜಸ್ವಿಯಾದ ಜಟಾಧಾರಿಯೊಬ್ಬನು ಅವಳ ಬಳಿಗೆ ಬರುವನು. ಪಾರ್ವತಿಯು ಭಕ್ತಿಯಿಂದ ಅವನನ್ನು ಸತ್ಕರಿಸುವಳು. ಆಗವನು ವಿಶೇಷ ಗೌರವದಿಂದ ಕುಶಲ ಪ್ರಶ್ನೆಮಾಡುತ್ತ "ಸಾಧನಗಳೆಲ್ಲ ಸಿಕ್ಕಿ ತಪಸ್ಸು ನಿರ್ವಿಘ್ನವಾಗಿ ನಡೆಯುತ್ತಿದೆಯೆ?" ಎಂದು ಮಾತಿಗೆ ಪ್ರಾರಂಭಿಸುವನು. "ಸೌಂದರ್ಯವು ದುರ್ವೃತ್ತವನ್ನಾಶ್ರಯಿಸದೆಂಬ ಮಾತು ಸತ್ಯ. ನಿನ್ನ ಶೀಲವು ತಪಸ್ವಿಗಳಿಗೂ ಮೇಲ್ಪಂಕ್ತಿಯಾಗುವಂತಿದೆ. ನಿನ್ನ ಪವಿತ್ರ ತಪಸ್ಸು ಈ ಪರ್ವತವನ್ನು ಶುದ್ಧಿಗೊಳಿಸಿರುವುದು. ಅರ್ಥ ಕಾಮಗಳನ್ನು ದೂರಮಾಡಿ ನೀನೀಗ ಧರ್ಮವೊಂದನ್ನೇ ಪರಿಗ್ರಹಿಸಿರುವು ದರಿಂದ ಅದು ತ್ರಿವರ್ಗಗಳಲ್ಲಿ ಶ್ರೇಷ್ಠವೆಂದು ನಾನು ಮನಗಂಡಿರುವೆನು. ನಿನ್ನ ಸತ್ಕಾರವನ್ನು ಸ್ವೀಕರಿಸಿ ಈಗಾಗಲೇ ನಾನು ಪರಿಚಿತನಾಗಿದ್ದೇನೆ. ಆದುದರಿಂದ ತಪೋಧನೆ! ನಿನ್ನನ್ನೊಂದು ಪ್ರಶ್ನೆ ಕೇಳುವೆನು. ಗೋಪ್ಯ ವಲ್ಲದಿದ್ದರೆ ಪ್ರತ್ಯುತ್ತರ ಕೊಡು" ಎಂದು ಅವಳ ಮದುವೆಯ ವಿಚಾರ ಪ್ರಸ್ತಾಪಿಸಲು ಪೀಠಿಕೆಯನ್ನು ರಚಿಸಿಕೊಳ್ಳುವನು. "ಹಿರಣ್ಯಗರ್ಭನ ವಂಶದಲ್ಲಿ ಜನನ; ಮೂರುಲೋಕದ ಸೌಂದರ್ಯವೂ ರಾಶಿಯಾದಂತಿ ರುವ ದೇಹ; ಅಪಾರವಾದ ಐಶ್ವರ್ಯ; ಉಕ್ಕುತ್ತಿರುವ ಪ್ರಾಯ; ಹೀಗಿರು-

ವಲ್ಲಿ ತಪಸ್ಸಿನಿಂದ ಗಳಿಸಬೇಕಾದುದೇನಿದೆ? ನಿನ್ನಂತಹ ಚೆಲುವೆಗೆ ಎಲ್ಲೂ ಶೋಕಕ್ಕವಕಾಶವಿಲ್ಲ. ಯೌವನದಲ್ಲಿದ್ದರೂ ಒಡವೆ ವಸ್ತುಗಳನ್ನು ತೆಗೆದಿಟ್ಟು ಮುದುಕರಿಗೊಪ್ಪುವ ನಾರುಡೆಯನ್ನೇಕೆ ತೊಟ್ಟಿರುವೆ? ನಕ್ಷತ್ರೋದಯವಾದ ಬೆಳದಿಂಗಳ ರಾತ್ರಿಗೂ ಅರುಣನಿಗೂ ಸಂಘಟನೆಯಾಗುವುದೆ? ಸ್ವರ್ಗಕ್ಕಾಗಿ ಈ ಪ್ರಯತ್ನವೆಂದರೂ ಸರಿಹೋಗದು. ನಿನ್ನ ತಂದೆಗೆ ಸೇರಿದ ಈ ಪ್ರದೇಶಗಳೆಲ್ಲ ದೇವಭೂಮಿಗಳು. ಗಂಡನನ್ನೆಳಸುವೆಯಾದರೆ ಇದಕ್ಕೆ ತಪಸ್ಸೇಕೆ? ರತ್ನವು ತೊಡುವವರನ್ನು ಹುಡುಕಿಕೊಂಡು ಹೋಗುವುದೆ? ನೀನು ವರಾಭಿಲಾಷಿಣಿಯೆಂಬ ಸೂಚನೆಯನ್ನು ನಿನ್ನ ನಿಟ್ಟುಸಿರೇ ಕೊಟ್ಟಿದೆಯಾದರೂ ನನಗೇಕೋ ಸಂದೇಹ. ನೀನೆಳಸಬೇಕಾದ ವರನಾರೂ ಇಲ್ಲವೇ ಇಲ್ಲ. ಇನ್ನು ಎಳಸಿಯೂ ಸಿಕ್ಕದಿರುವದುಂಟೆ? ಹಾಗಿದ್ದಲ್ಲಿ ನಿನಗೆ ಬೇಕಾದ ವರನು ಕಠಿನ ಹೃದಯನಾಗಿರಬೇಕು. ಇಲ್ಲದಿದ್ದರೆ ಇಷ್ಟು ದೀರ್ಘಕಾಲದಿಂದಲೂ ಕಣ್ಣಿಗೆ ಕಾಣಿಸದ ಆ ಪ್ರಿಯನು ತಾನೇ ಸುಂದರನೆಂದು ಗರ್ವಿತನಾಗಿರಬೇಕು. ಗೌರಿ! ಇನ್ನೆಷ್ಟುಕಾಲ ಹೀಗೆ ಶ್ರಮಿಸುವೆ? ನಾನೂ ಬ್ರಹ್ಮಚರ್ಯಾಶ್ರಮದಲ್ಲಿ ಸ್ವಲ್ಪ ತಪಸ್ಸನ್ನು ಗಳಿಸಿರುವೆನು. ಅದನ್ನುಪಯೋಗಿಸಿಕೊಂಡು ನಿನಗೆ ಬೇಕಾದ ವರವನ್ನು ಹೊಂದು" ಹೀಗೆಂದು ಬ್ರಹ್ಮಚಾರಿಯು ಸಲಹೆ ಕೊಡುವನು. ಬ್ರಾಹ್ಮಣನಿಗೆ ತಾನೇ ಇಂಗಿತವನ್ನು ಹೇಳಲಾರದೆ ಪಾರ್ವತಿಯು ಮಗ್ಗುಲಲ್ಲಿದ್ದ ಸಖಿಗೆ ಸನ್ನೆಮಾಡುವಳು. ಸಖಿಯು ಎಲ್ಲವನ್ನೂ ವಿವರಿಸುವಳು. "ಎಷ್ಟು ಯೋಚಿಸಿದರೂ ಶಿವನನ್ನು ಪಡೆಯಲು ಬೇರೊಂದು ಉಪಾಯವನ್ನೂ ಕಾಣದೆ ಹೀಗೆ ತಪಸ್ಸನ್ನಾಚರಿಸುತ್ತಿರುವಳು. ಇವಳೇ ನೆಟ್ಟ ಗಿಡಗಳು ಇವಳ ತಪಸ್ಸಿಗೆ ಸಾಕ್ಷಿಯಾಗಿದ್ದು ಫಲವನ್ನೂ ಬಿಟ್ಟಿರುವುವು. ಇವಳ ಮನಸ್ಸಿನಲ್ಲಿ ನೆಟ್ಟಿರುವ ಈಶನನ್ನು ಕುರಿತ ಅಭಿಲಾಷೆಯು ಮಾತ್ರ ಇನ್ನೂ ಮೊಳೆತೇ ಇಲ್ಲವಲ್ಲ! ಸಖಿಯು ಯಾವಾಗಲೂ ಕಂಬನಿ ಸುರಿಸುತ್ತ ನೋಡುತ್ತಿರುವ ತಪಃಕೃಶಳಾದ ಪಾರ್ವತಿಯನ್ನು ಎಂದಿಗೆ ಆ ಶಿವನು ಅನುಗ್ರಹಿಸುವನೋ ನಾನರಿಯೆ." ಸಖಿಯ ಮಾತನ್ನು ಕೇಳಿ ಸಂತೋಷವಾದರೂ ಅದನ್ನು ಮರೆಸಿಕೊಂಡು ಬಹ್ಮಚಾರಿಯು ಪುನಃ ಗೌರಿಯನ್ನು ಕುರಿತು "ಇದೇನು ಹಾಸ್ಯಾಸ್ಪದವಾದ ಸೋಜಿಗ" ಎನ್ನುವನು.

ಗೌರಿಯು ಹೆಚ್ಚು ಲಂಬಿಸದೆ "ವೇದಜ್ಞಾನಿಯೆ! ನಾನು ಶಿವನೆಂಬ ಉತ್ತಮವರನನ್ನೆಳಸುತ್ತಿರುವುದು ನಿನಗೆ ಗೊತ್ತಿದೆ. ಈ ತಪಸ್ಸು ಅದಕ್ಕೆ ಸಾಧನವಲ್ಲದಿರಬಹುದು ಆದರೆ ಆಶೆಗೆ ಪಾರವೆಲ್ಲಿ?" ಎಂದು ಹೇಳುವಳು. ಬ್ರಹ್ಮಚಾರಿಯು ಪುನಃ ಹೇಳತೊಡಗುವನು. "ಮಹೇಶ್ವರನನ್ನು ನಾನು ಬಲ್ಲೆ; ಅವನು ಅಮಂಗಳಕರವಾದ ಕರ್ಮಗಳಲ್ಲಿ ಆಸಕ್ತನೆಂಬುದನ್ನು ತಿಳಿದಿರುವುದರಿಂದ ಈ ನಿನ್ನ ಆಶೆಯನ್ನು ನಾನು ಅನುಮೋದಿಸುವುದಿಲ್ಲ. ಪಾರ್ವತಿ! ನೀನು ತುಚ್ಛವಸ್ತುವನ್ನು ಪಡೆಯಲು ಹಟ ಮಾಡುತ್ತಿರುವೆ. ವಿವಾಹ ಕಂಕಣವನ್ನು ಕಟ್ಟಿಕೊಳ್ಳುವ ಈ ನಿನ್ನ ಕೈ ಹಾವಿನಬಳೆಯನ್ನು ತೊಟ್ಟ ಹರನ ಕೈಯೊಡನೆ ಸೇರುವುದು ಹೇಗೆ? ಕಲಹಂಸದಂತೆ ಮೃದುವಾದ ಪಟ್ಟೆಯ ಸಂಕಲಿಕೆ ಸೀರೆಗೂ ರಕ್ತತೊಟ್ಟುವ ಆನೆಯ ಚರ್ಮಕ್ಕೂ ಸಂಬಂಧವು ಒಪ್ಪುವುದೆ? ಅರಮನೆಯಲ್ಲಿ ಚೆಲ್ಲಿದ ಹೂಗಳ ಮೇಲೆ ನಡೆಯುವ ನಿನ್ನ ಪಾದಗಳು ಶ್ಮಶಾನದಲ್ಲಿ ಸಂಚರಿಸುವುದನ್ನು ಯಾರು ತಾನೆ ಒಪ್ಪಿಯಾರು? ಅವನು ಚಿತೆಯ ಬೂದಿಯನ್ನು ಬಳಿದುಕೊಂಡಿರುವನು. ನೀನು ಹರಿಚಂದನವನ್ನು ಲೇಪಿಸಿಕೊಂಡಿರುವೆ. ಇದೆಲ್ಲಕ್ಕಿಂತ ಹೆಚ್ಚಾಗಿ ಮೊಟ್ಟಮೊದಲೇ ನಿನಗೊಂದು ಅಪಮಾನವು ಕಾದಿರುವುದು. ಮದುವೆಯ ಮೆರವಣಿಗೆಯಲ್ಲಿ ನೀನು ಅನೆಯಮೇಲೆ ಅಂಬಾರಿಯಲ್ಲಿ ಕುಳಿತು ಬರುವೆಯೆಂದು ನಿರೀಕ್ಷಿಸುವ ಪುರಜನರು ನೀನು ಮುದಿಗೂಳಿಯ ಮೇಲೆ ಬಂದರೆ ನಗುವರು. ಕಪಾಲಿಯನ್ನು ಸೇರಬೇಕೆಂದು ನೀನಾಶಿಸುತ್ತಿರುವುದರಿಂದ ಅಂತರಿಕ್ಷದ ಚಂದ್ರಕಲೆ, ಮತ್ತು ಭೂಲೋಕದ ಚಂದ್ರಿಕೆಯಾದ ನೀನು ಈ ಎರಡಕ್ಕೂ ಈಗ ದುರವಸ್ಥೆ ಬಂದಂತಾಯಿತು. ಹರನ ಕಣ್ಣೊ ಕುರೂಪು; ಅವನ ವಂಶವೇ ಗೊತ್ತಿಲ್ಲ, ದಿಗಂಬರನಾಗಿರುವುದೇ ಅವನ ಐಶ್ವರ್ಯಕ್ಕೆ ಚಿಹ್ನೆ. ಹೀಗೆ ವರನಿಗಿರಬೇಕಾದ ಗುಣಗಳಲ್ಲಿ ಒಂದಾದರೂ ತ್ರಿಲೋಚನನಿಗಿರುವುದೇ? ಈ ಅಸದ್ವಸ್ತುವನ್ನಾಶಿಸಬೇಡ. ಹರನೆಲ್ಲಿ? ಪುಣ್ಯಲಕ್ಷಣೆಯಾದ ನೀನೆಲ್ಲಿ?" ಹೀಗೆಂದು ಅವನು ಉಪದೇಶಿಸುವನು.

ಇದನ್ನು ಕೇಳಿ ಪಾರ್ವತಿಯು ಕೋಪಗೊಳ್ಳುವಳು. ಕಣ್ಣುಗಳು ಕೆಂಪೇರಿ ತುಟಿಗಳು ಅಲುಗಲಾರಂಭಿಸುವುವು. "ಹರನ ವಾಸ್ತವ

ಸ್ವರೂಪವನ್ನು ನೀನರಿಯೆ. ಆದ್ದರಿಂದಲೇ ನೀನು ಹೀಗೆನ್ನುತ್ತಿರುವುದು. ಮಂದರಿಗೆ ಮಹಾತ್ಮರ ನಡವಳಿಕೆ ರುಚಿಸದು. ವಿಪತ್ತಿನಿಂದ ಪಾರಾಗುವುದಕ್ಕೂ ಮಂಗಳವನ್ನು ಹೊಂದುವುದಕ್ಕೂ ಮಂಗಳಕರವಾದ ಕರ್ಮವನ್ನು ನಡೆಸಬೇಕು. ಆಶೆಯಿಲ್ಲದ ಲೋಕರಕ್ಷಕನಿಗೆ ಆಶಾಪೀಡಿತರ ವರ್ತನದಿಂದೇನಾಗಬೇಕು? ನಿರ್ಗತಿಕನಾಗಿದ್ದರೂ ಅವನು ಸಂಪತ್ತಿಗೆ ಮೂಲ. ತ್ರಿಲೋಕನಾಥನಾಗಿದ್ದೇ ಶ್ಮಶಾನದಲ್ಲಿ ಕಾಣಿಸಿಕೊಳ್ಳುವನು. ಭಯಂಕರನಾಗಿದ್ದರೂ ಅವನು ಮಂಗಳಕರನೇ. ಅವನು ಒಡವೆಯನ್ನು ತೊಟ್ಟಿರುವನೋ ಅಥವಾ ಹಾವುಗಳನ್ನು ಬಿಗಿದುಕೊಂಡಿರುವನೋ ಗಜಚರ್ಮವನ್ನು ಹೊದೆದಿರುವನೋ ಅಥವಾ ಪಟ್ಟೆಯ ಮಡಿಯನ್ನೇ ಧರಿಸಿರುವನೋ, ತಲೆಯಮೇಲೆ ರುಂಡಗಳನ್ನು ಹೊತ್ತಿರುವನೋ ಅಥವಾ ಚಂದ್ರನನ್ನು ಧರಿಸಿರುವನೋ— ವಿಶ್ವಮೂರ್ತಿಯ ಶರೀರ ಇಂತಹುದೆಂದು ನಿಶ್ಚಯಿಸಲು ಸಾಧ್ಯವಿಲ್ಲ. ಹರನಲ್ಲಿರುವ ದೋಷಗಳನ್ನೇ ಹೇಳಹೊರಟರೂ ನೀನಾಡಿದ ಒಂದು ಮಾತು ನಿಜ. ಬ್ರಹ್ಮನಿಗೂ ಕಾರಣನಾದವನ ವಂಶವನ್ನು ತಿಳಿಯುವುದು ಹೇಗೆ? ನಿನ್ನ ಸಂಗಡ ಕಲಹವು ಸಾಕು. ಹರನು ನೀನು ವರ್ಣಿಸಿದಂತೆಯೇ ಇದ್ದರೂ ನನ್ನ ಮನಸ್ಸೇನೋ ಅವನಲ್ಲೇ ನೆಟ್ಟಿರುವುದು. ಸ್ವೇಚ್ಛಾಚಾರಿಗಳು ಲೋಕಾಪವಾದವನ್ನು ಲಕ್ಷ್ಯಮಾಡರು." ಹೀಗೆಂದು ಹೇಳಿ ಪಾರ್ವತಿಯು ಸಖಿಯನ್ನು ಕುರಿತು "ಸಖಿ, ಇವನ ತುಟಿಗಳು ಅಲುಗುತ್ತಿರುವುದನ್ನು ನೋಡಿದರೆ ಈ ವಟುವು ಇನ್ನೂ ಏನನ್ನೋ ಹರಟುವಂತಿದೆ. ದೊಡ್ಡವರನ್ನು ದೂಷಿಸಿದವರು ಮಾತ್ರವಲ್ಲದೆ ದೂಷಣೆ ಕೇಳಿದವರೂ ಪಾಪಕ್ಕೆ ಗುರಿಯಾಗುವರು, ಇವನನ್ನು ಮಾತನಾಡದಂತೆ ತಡೆ. ಇಲ್ಲದಿದ್ದಲ್ಲಿ ನಾನೇ ಇಲ್ಲಿಂದ ಬೇರೆ ಕಡೆಗೆ ಹೊರಡುವೆನು" ಎನ್ನುವಳು.

ಹೀಗೆಂದು ಹೊರಡುವಷ್ಟರಲ್ಲಿ ಹರನು ತನ್ನ ನಿಜವಾದ ರೂಪವನ್ನು ಹೊಂದಿ ನಗುತ್ತ ಪಾರ್ವತಿಯ ಕೈಯನ್ನು ಹಿಡಿದುಕೊಳ್ಳುವನು. ಪಾರ್ವತಿಯ ಮೈ ಬೆವರುವುದು; ನಡುಗುವುದು; ಬೆಟ್ಟವು ಅಡ್ಡಗಟ್ಟಿದ ನದಿಯಂತೆ ಅವಳು ಮುಂದೆ ಹೋಗಲೂ ಆರಳು; ಅಲ್ಲೇ ನಿಲ್ಲಲೂ ಆರಳು. ಆಗ ಶಿವನು ಇವಳನ್ನು ಕುರಿತು "ಸುಂದರಿ, ಇದು ಮೊದಲು

ನೀನು ತಪಸ್ಸಿನಿಂದ ಕೊಂಡ ದಾಸನು ನಾನು" ಎಂದು ಹೇಳಲಾಗಿ ಪಾರ್ವತಿಯ ವ್ರತಶ್ರಮವೆಲ್ಲ ಮಾಯವಾಗುವುದು. ಕೆಲಸವು ಕೈಗೂಡಿದರೆ ಜೀವವು ಕಳೆಗೊಳ್ಳುವುದಷ್ಟೆ!

## ಆರನೆಯ ಸರ್ಗ

ಪಾರ್ವತೀಪರಮೇಶ್ವರರು ದೇವತೆಗಳಾದರೂ ಸ್ವತಂತ್ರವಾಗಿ ವರ್ತಿಸದೆ ಲೋಕಾಚಾರಕ್ಕೆ ತಕ್ಕಂತೆ ಗುರುಹಿರಿಯರ ಅನುಮತಿ ಆಶೀರ್ವಾದಗಳನ್ನು ಪಡೆದು ದಾಂಪತ್ಯಜೀವನ ನಡೆಸುವುದು ಆರು ಮತ್ತು ಏಳನೆಯ ಸರ್ಗಗಳಲ್ಲಿ ವರ್ಣಿತವಾಗಿದೆ. ಇದರಿಂದ ಉಮಾಹರರ ದಾಂಪತ್ಯವು ಕೇವಲ ಕಾಮಮೂಲವಲ್ಲವೆಂದೂ ಧರ್ಮಯುತವಾದುದೆಂದೂ ತಿಳಿದುಬರುವುದು. ಲೌಕಿಕವಾದ ಮದುವೆಮನೆಯ ವಿಜೃಂಭಣೆ ಈ ಮದುವೆಯಲ್ಲೂ ಇಲ್ಲದೆ ಇಲ್ಲ. ಸಪ್ತಮಾತೃಕೆಯರು, ಸಪ್ತರ್ಷಿಗಳು, ಪರಮರ್ಷಿಗಳು, ಪ್ರಮಥ ಗಣಗಳು—ಎಲ್ಲರೂ ರತ್ನಾಭರಣಗಳನ್ನೂ ಪಟ್ಟೆಮಡಿಗಳನ್ನೂ ಧರಿಸುವರು. ಇಂದಿಗೂ ವಿವಾಹ ಕಾಲದ ಸಡಗರ ಸಂತೋಷಗಳೆಲ್ಲ ಕಣ್ಣಿಗೆ ಕಟ್ಟಿದಂತಾಗುವುದು. ಇದನ್ನೆಲ್ಲ ನೋಡಿದರೆ ಕಾವ್ಯವು ಪುರಾಣದ ಕತೆಯ ಅನುವಾದ ಮಾತ್ರವಲ್ಲವೆಂದು ಸ್ಪಷ್ಟವಾಗಿ ಗೋಚರವಾಗುವುದು. ಭಾವತೀವ್ರತೆ, ಕಲಾಕೌಶಲ ಮತ್ತು ಪ್ರತಿಭೆ ಇವುಗಳನ್ನುಳ್ಳ ಕವಿಶ್ರೇಷ್ಠನು ಸೌಂದರ್ಯ ಸಜೀವತೆಗಳನ್ನು ಹದವಾಗಿ ಬೆರಸಿ ನಿರ್ಮಿಸಿರುವ ಚಿತ್ರಗಳು ಇಲ್ಲಿ ಮನಸ್ಸನ್ನು ಸೂರೆಗೊಳ್ಳುವಂತೆ ಕಾಣುತ್ತದೆ. ಈ ದೈವಚಿತ್ರವು ಮಾನುಷತೆಯು ತುಂಬಿರುವುದರಿಂದ ಮತ್ತೂ ಆಕರ್ಷಕವಾಗಿ ಪರಿಣಮಿಸಿದೆ.

ತನ್ನನ್ನು ಕೊಡುವ ಭಾರ ತನ್ನ ತಂದೆಯದೆಂದು ಸಖಿಯ ಮೂಲಕ ಪಾರ್ವತಿಯು ಸಂದೇಶ ಕಳಿಸಲಾಗಿ ಹರನು ಕನ್ಯೆಯನ್ನು ಬೇಡುವ ಕೆಲಸವನ್ನು ಸಪ್ತರ್ಷಿಗಳಿಗೆ ವಹಿಸಬೇಕೆಂದು ಅವರನ್ನು ನೆನೆಯುವನು. ಸ್ಮರಿಸಿದ ಕೂಡಲೆ ಅರುಂಧತೀಸಮೇತರಾಗಿ, ಸಂಚರಿಸುವ ಕಲ್ಪವೃಕ್ಷಗಳಂತೆ, ಅವರು ಬರುವರು. ಶಿವನು ಎಲ್ಲರನ್ನೂ ಗೌರವಿಸುವನು. ಸಾಧ್ವಿ ಅರುಂಧತಿಗೂ ಸಮಾನವಾದ ಗೌರವ ಸಲ್ಲುವುದು. ಅವಳನ್ನು

ನೋಡಿದೊಡನೆ ಹರನಿಗೂ ಗೃಹಸ್ಥನಾಗಬೇಕೆಂಬ ಆಸೆ ತೀವ್ರವಾಗುವುದು. ಹಿಂದೆ ಹರನ ಕೋಪಕ್ಕೀಡಾಗಿದ್ದ ಕಾಮನಿಗೆ ಈಗ ಧೈರ್ಯ ಬರುವುದು. ಋಷಿಗಳು ಹರನನ್ನು ಸ್ತುತಿಸಿ ಅಪ್ಪಣೆಯನ್ನು ನಿರೀಕ್ಷಿಸುವರು. ಹರನು ಮಂದಹಾಸದಿಂದ ತನ್ನ ಅಭಿಪ್ರಾಯವನ್ನು ವಿವರಿಸುವನು. ತನ್ನ ಯಾವ ಕೆಲಸವೂ ಸ್ವಾರ್ಥಕ್ಕಾಗಿ ಅಲ್ಲವೆಂಬುದನ್ನೂ ಈಗ ಪಾರ್ವತಿಯನ್ನು ಪರಿಗ್ರಹಿಸಬೇಕೆಂದಿರುವುದೂ ದೇವತೆಗಳ ಬೇಡಿಕೆಯನ್ನು ಸಲ್ಲಿಸುವುದಕ್ಕೆಂದೂ ಸ್ಪಷ್ಟಪಡಿಸುವನು. ಅನಂತರ ಹಿಮವಂತನ ಬಳಿಗೆ ಹೋಗಿ ಪಾರ್ವತಿಯನ್ನು ತನಗಾಗಿ ಬೇಡುವ ಕೆಲಸವನ್ನು ಇವರಿಗೆ ವಹಿಸುವನು. ಸಪ್ತರ್ಷಿಗಳಿಗೆ ಲೋಕಾಚಾರವನ್ನು ಹೇಳಿಕೊಡಬೇಕೆ? ಅವರು ಎಲ್ಲವನ್ನೂ ಬಲ್ಲವರು. ಜೊತೆಗೆ ಅರುಂಧತಿಯೂ ಇರುವಳು, ಮತ್ತು ಇಂತಹ ಕೆಲಸಗಳಲ್ಲಿ ಹೆಂಗಸರೇ ಮುಂದಾಳುಗಳಾಗಬೇಕೆಂದು ಭಾವಿಸಿ ಹರನು ಹೆಚ್ಚು ಹೇಳದೆ ಅವರನ್ನು ಕಳುಹಿಸಿ ಕೊಡುವನು. ಹೀಗೆ ತಾಪಸಾಗ್ರೇಸರನಾದ ಹರನೇ ಮದುವೆಯನ್ನು ಬಯಸಲಾಗಿ ಸಪತ್ನೀಕರಾಗಿದ್ದ ಇತರ ಋಷಿಗಳ ಆ ನಿಮಿತ್ತವಾದ ನಾಚಿಕೆ ಸ್ವಲ್ಪ ಕಡಿಮೆಯಾಯಿತು.

ಋಷಿಗಳು ಹಿಮವಂತನ ರಾಜಧಾನಿಗೆ ಬರುವರು. ಹಿಮವಂತನು ಅವರನ್ನು ಯಥಾವತ್ತಾಗಿ ಗೌರವಿಸಿ ತನ್ನ ಕೃತಜ್ಞತೆ ಸಂತೋಷಗಳನ್ನು ವ್ಯಕ್ತಗೊಳಿಸುವನು. ಅನಂತರ ತನ್ನಿಂದೇನಾಗಬೇಕೆಂದು ಕೇಳುವನು. ಋಷಿಗಳ ಪರವಾಗಿ ಅಂಗಿರಸನು ಮಾತನಾಡಿ ಹಿಮವಂತನ ಸಾಹಸ ಔದಾರ್ಯಗಳನ್ನು ಕೊಂಡಾಡಿ ಹರನ ಅಭಿಲಾಷೆಯನ್ನೂ ಅದನ್ನು ನೆರವೇರಿಸುವುದರಿಂದ ಲೋಕಕ್ಕೆ ಆಗುವ ಮಂಗಳವನ್ನೂ ಕುರಿತು ಪ್ರಸ್ತಾಪಿಸುವನು. ದೇವರ್ಷಿಯಾಡಿದ ಮಾತನ್ನು ಕೇಳಿ ತಂದೆಯ ಪಕ್ಕದಲ್ಲಿ ನಿಂತಿದ್ದ ಪಾರ್ವತಿಯು ನಾಚುವಳು; ತಲೆಯನ್ನು ಬಗ್ಗಿಸಿ ಕೈಯಲ್ಲಿದ್ದ ಆಟದ ಕಮಲದ ದಳಗಳನ್ನು ಎಣಿಸತೊಡಗುವಳು. ತನಗೆ ಈ ಸಂಬಂಧವು ಒಪ್ಪಿತೆಂದು ಹಿಮವಂತನು ಸೂಚಿಸಿ ಹೆಂಡತಿಯ ಅಭಿಪ್ರಾಯವನ್ನು ನಿರೀಕ್ಷಿಸುವನು. ಅವಳೂ ಒಪ್ಪುವಳು. ಹೆಣ್ಣುಮಕ್ಕಳ ವಿಷಯದಲ್ಲಿ ಗೃಹಸ್ಥರು ಹೆಂಡಿರ ಇಷ್ಟವನ್ನು ಅನುಸರಿಸುವುದು ವಾಡಿಕೆ.

ಆದರೆ ಪತಿವ್ರತೆಯಾದ ಮೇನೆಯು ಗಂಡನ ಇಷ್ಟವನ್ನು ವಿರೋಧಿಸಲು ಇಷ್ಟಪಡದೆ ಅವನನ್ನೇ ಅನುಮೋದಿಸುವಳು. ತಂದೆಯು ಹೇಳಿದಂತೆ ಪಾರ್ವತಿಯು ಋಷಿಗಳಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಪಡೆಯುವಳು. ಅರುಂಧತಿಯು ನಾಚಿಕೆಗೊಂಡಿದ್ದ ಪಾರ್ವತಿಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಕಣ್ಣೀರಿಡುತ್ತಿದ್ದ ಮೇನಕೆಯನ್ನು ಸಮಾಧಾನಪಡಿಸುತ್ತ ಲೋಕೋತ್ತರಗುಣಶಾಲಿಯಾದ ವರನು ಸಿಕ್ಕಿದ ಕಾರಣ ದುಃಖಪಡಬೇಕಾಗಿಲ್ಲವೆಂದು ಹೇಳುವಳು. ಮೂರು ದಿನಗಳು ಕಳೆದನಂತರ ವಿವಾಹವು ನಡೆಯಬೇಕೆಂದು ಗೊತ್ತುಮಾಡಿ ಋಷಿಗಳು ಶಿವನನ್ನು ಕಂಡು ಎಲ್ಲವನ್ನೂ ತಿಳಿಸುವುದಕ್ಕಾಗಿ ಹೊರಡುವರು. ಹರನಿಗೆ ಇಷ್ಟು ಅಲ್ಪಕಾಲವನ್ನು ಕಳೆಯುವುದೂ ಕಷ್ಟವಾಗುವುದು. ಇನ್ನಿತರರ ಪಾಡೇನು?

## ಏಳನೆಯ ಸರ್ಗ

ಶುಕ್ಲಪಕ್ಷದ ಶುಭ ದಿವಸದಲ್ಲಿ ಹಿಮವಂತನು ಮದುವೆಯ ಕೆಲಸಗಳನ್ನು ಪ್ರಾರಂಭಿಸುವನು. ಓಷಧಿಪ್ರಸ್ಥದ ಪ್ರತಿಯೊಂದು ಮನೆಯಲ್ಲೂ ಮದುವೆಯ ಸಡಗರ. ದೊರೆಯ ಅಂತಃಪುರಕ್ಕೂ ಊರಿಗೂ ಭೇದವೇ ಇಲ್ಲದಂತಾಗಿದೆ. ಬೀದಿಗಳಲ್ಲೆಲ್ಲ ಮಂದಾರಪುಷ್ಪ ಚೆಲ್ಲಿದೆ. ಚೀನಾಂಶುಕದ ಬಾವುಟಗಳೂ ಚಿನ್ನದ ತೋರಣಗಳೂ ಎಲ್ಲೆಲ್ಲೂ ರಾಜಿಸುತ್ತಿವೆ. ಗಂಡನ ಮನೆಗೆ ಹೊರಡುವವಳಾಗಿದ್ದುದರಿಂದ ಪಾರ್ವತಿಯು ಬಂಧುಗಳ ಅತಿಶಯಪ್ರೀತಿಗೆ ಪಾತ್ರಳಾದಳು. ನೆಂಟರೊಬ್ಬೊಬ್ಬರೂ ಅವಳನ್ನು ತೊಡೆಯಮೇಲೆ ಕೂರಿಸಿಕೊಂಡು ಮುದ್ದಿಸಿ ಆಶೀರ್ವದಿಸುತ್ತ ಮೇಲೆ ಮೇಲೆ ಒಡವೆಗಳನ್ನು ತೊಡಿಸುವರು. ಮದುವೆಯ ದಿವಸ ಸುಮಂಗಲಿಯರು ಕಾಲಕ್ಕೆ ಸರಿಯಾಗಿ ವಧುವಿಗೆ ಮಂಗಳಸ್ನಾನ ಮಾಡಿಸಿ, ಅಲಂಕರಿಸಿ ವಿವಾಹ ಮಂಟಪಕ್ಕೆ ಕರೆತರುವರು. ಮನೆದೇವರ ಪೂಜೆ ಮುಂತಾದ ಶುಭಕಾರ್ಯಗಳು ನಡೆದಮೇಲೆ ಅಲ್ಲಿ ನೆರೆದಿದ್ದ ನೆಂಟರು "ಗಂಡನ ಪೂರ್ಣ ಪ್ರೀತಿಗೆ ಪಾತ್ರಳಾಗು" ಎಂದು ಪಾರ್ವತಿಯನ್ನಾಶೀರ್ವದಿಸುವರು. ಇದಕ್ಕಿಂತ ಹೆಚ್ಚಾಗಿ ಮುಂದೆ ಅವಳು ಅವನ ಶರೀರಾರ್ಧವನ್ನೇ ಆಕ್ರಮಿಸುವಳು. ಅಂತು ತನ್ನ ಪ್ರೀತಿ ವೈಭವಗಳಿಗನು

ಗುಣವಾಗಿ ಎಲ್ಲವನ್ನೂ ಸಿದ್ಧಪಡಿಸಿಕೊಂಡು ಗಿರಿರಾಜನು ಹರನನ್ನು ನಿರೀಕ್ಷಿಸುತ್ತ ಸಭೆಯಲ್ಲಿ ಕುಳಿತುಕೊಳ್ಳುವನು.

ಈ ವೇಳೆಗೆ ಕೈಲಾಸದಲ್ಲಿ ಬ್ರಾಹ್ಮೀ, ಮಾಹೇಶ್ವರೀ ಮೊದಲಾದ ದೇವಮಾತೃಗಳು ಶಿವನಿಗೆ ವರಾಲಂಕಾರಗಳನ್ನೊಪ್ಪಿಸಿದ್ದರು. ಭಸ್ಮವು ಅಂಗರಾಗವಾಯಿತು; ಕಪಾಲವು ಶಿರೋಭೂಷಣವಾಯಿತು; ಗಜಚರ್ಮವು ಗೋರೋಚನದಿಂದ ಚಿತ್ರಿಸಿದ ಪಟ್ಟೆಮಡಿಯಾಯಿತು. ಮೂರನೆಯ ಕಣ್ಣೇ ತಿಲಕವಾಯಿತು. ಹಾವುಗಳು ಆಭರಣಗಳಾದುವು. ಹೀಗೆ ತನ್ನ ಮಹಿಮೆಯಿಂದಲೇ ರೂಪನ್ನು ಮಾರ್ಪಡಿಸಿಕೊಂಡು ಅಲಂಕೃತವಾದ ನಂದಿಯನ್ನೇರಿ ಹರನು ಎಲ್ಲರೊಡನೆ ಹೊರಡುವನು. ಮಂಗಳವಾದ್ಯಗಳು ಮೊಳಗುವುವು. ಸೂರ್ಯನು ವಿಶ್ವಕರ್ಮನಿರ್ಮಿತವಾದ ಛತ್ರವನ್ನು ಹಿಡಿಯುವನು. ಗಂಗಾಯಮುನೆಯರು ಚಾಮರ ಬೀಸುವರು. ಬ್ರಹ್ಮವಿಷ್ಣುಗಳು ಜಯಕಾರಮಾಡುತ್ತ ಎದುರಿಗೆ ಬರುವರು. ಇವರು ಮೂವರೂ ಒಂದೇ ಮೂರ್ತಿಯ ಬೇರೆಬೇರೆ ಆಕಾರಗಳು. ಒಂದೊಂದು ವೇಳೆ ಒಬ್ಬೊಬ್ಬರು ಮೇಲಾಗಿ ತೋರುವರು. ಸ್ವಭಾವತಃ ಹಿರಿತನ ಕಿರಿತನಗಳಿಲ್ಲ. ಇಂದ್ರಾದಿ ದೇವತೆಗಳು ವಿನೀತವೇಷರಾಗಿ ಹರನಿಗೆ ನಮಸ್ಕರಿಸುವರು. ಅವರವರ ಅಂತಸ್ತಿಗೆ ತಕ್ಕಂತೆ ಹರನು ಎಲ್ಲರನ್ನೂ ಗುರ್ತಿಸಿ ಅಭಿನಂದಿಸುವನು.

ಮೊಟ್ಟಮೊದಲು ಸಪ್ತರ್ಷಿಗಳು ಜಯಾಶೀರ್ವಾದವನ್ನು ಮಾಡಲು ಹರನು ಅವರನ್ನು ಮೊದಲೇ ಹೇಳಿದ್ದಂತೆ ವಿವಾಹದಲ್ಲಿ ಋತ್ವಿಕ್ಕುಗಳಾಗಿರಬೇಕೆಂದು ಕೋರುವನು. ಹೀಗೆ ಆಕಾಶಮಾರ್ಗದಲ್ಲಿ ಪ್ರಯಾಣಮಾಡಿ ಓಷಧಿಪ್ರಸ್ಥದ ಬಾಗಿಲಿನಲ್ಲಿಳಿಯಲು ಪೌರರು ಕುತೂಹಲದಿಂದ ಅವನನ್ನು ನೋಡುವರು. ಹರಾಗಮನದಿಂದ ಸಂತೋಷಗೊಂಡ ಗಿರಿಚಕ್ರವರ್ತಿಯು ನೆಂಟರೊಡನೆ ಮುಂದೆ ಬಂದು ಅವನನ್ನು ಸ್ವಾಗತಿಸುವನು. ಒಂದು ಕಡೆ ದೇವತೆಗಳ ಗುಂಪು. ಇನ್ನೊಂದು ಕಡೆ ಪರ್ವತಗಳ ಗುಂಪು. ತ್ರೈಲೋಕ್ಯವಂದ್ಯನಾದ ಹರನು ತನಗೆ ನಮಸ್ಕರಿಸಲು ಹಿಮವಂತನು ನಾಚಿಕೆಗೊಳ್ಳುವನು. ತಾನೇ ಅವನ ಮಹಿಮೆಗೆ ತಲೆಬಾಗಿದ್ದುದು ಆಗ

ಅವನ ನೆನಪಿಗೆ ಬರಲಿಲ್ಲ. ಸಂತೋಷದಿಂದ ಅವನ ಮುಖ ಅರಳಿದೆ. ಹೆಜ್ಜೆ ಮುಳುಗುವಷ್ಟು ಹೂ ಚೆಲ್ಲಿದ್ದ ರಾಜಮಾರ್ಗದಲ್ಲಿ ಬರುತ್ತ ಅಳಿಯನನ್ನು ರಮಣೀಯವಾದ ಅರಮನೆಯೊಂದರಲ್ಲಿ ಬಿಡಾರ ಮಾಡಿಸುವುದಕ್ಕಾಗಿ ಕರೆತರುವನು. ಪುರಸ್ತ್ರೀಯರು ಈಶನನ್ನು ನೋಡುವ ಆತುರದಲ್ಲಿ ಯಾವುದನ್ನೂ ಗಮನಿಸದೆ ಓಡೋಡಿ ಬರುವರು. ಜಡೆ ಬಿಚ್ಚಿಹೋಗಿ ಮುಡಿದಿದ್ದ ಹೂವು ಜೋಲಾಡುತ್ತಿದ್ದರೂ ಅದನ್ನು ಹಾಗೆಯೇ ಹಿಡಿದು ಕೊಂಡು ಒಬ್ಬಳು ಬಂದಿರುವಳು. ಹೆಜ್ಜೆಗೆ ಹಚ್ಚಿದ್ದ ಅರಗು ಆರುವುದಕ್ಕೆ ಮುಂಚೆಯೇ ಓಡಿಬಂದು ಮತ್ತೊಬ್ಬಳು ಕಿಟಕಿಯವರೆಗೂ ಬಣ್ಣದ ಗುರುತನ್ನು ಮಾಡಿರುವಳು. ಇನ್ನೊಬ್ಬಳು ಒಂದು ಕಣ್ಣಿಗೆ ಕಾಡಿಗೆ ಹಚ್ಚಿಕೊಂಡು ಶಲಾಕೆ ಹಿಡಿದೇ ಓಡಿ ಬಂದಿರುವಳು. ಅವಸರದಿಂದ ಬರುವಾಗ ಬಿಚ್ಚಿದ್ದ ಸೀರೆಯನ್ನೂ ಹಾಗೆಯೇ ಹಿಡಿದು ಬಂದಿರುವ ಳೊಬ್ಬಳು. ಇನ್ನೊಬ್ಬಳ ಡಾಬಿನ ರತ್ನಗಳೆಲ್ಲ ಹೆಜ್ಜೆ ಹೆಜ್ಜೆಗೂ ಸಡಲಿ ಕಡೆಗೆ ದಾರವು ಮಾತ್ರ ಉಳಿದಿದೆ. ಒಟ್ಟಿನಲ್ಲಿ ಈ ಚಂಚಲ ನೇತ್ರೆಯರು ಕಿಟಕಿಗಳ ಬಳಿಗೆ ಬಂದಾಗ ದುಂಬಿಗಳು ಮುತ್ತಿದ್ದ ಕಮಲಗಳು ಕಿಟಕಿ ಯನ್ನಲಂಕರಿಸಿದಂತಿತ್ತು. ಎತ್ತರವಾದ ತೋರಣ, ಬಾವುಟಗಳಿಂದ ಲಂಕೃತವಾದ ರಾಜಮಾರ್ಗದಲ್ಲಿ ಹರನು ಬರುತ್ತಿರುವಾಗ ತಲೆಯ ಮೇಲಿನ ಚಂದ್ರಕಿರಣದಿಂದ ಉಪ್ಪರಿಗೆಗಳ ಕಾಂತಿ ಒಂದಕ್ಕೆರಡರಷ್ಟು ಹೆಚ್ಚಿತು. ಅಲ್ಲಿನ ಹೆಂಗಸರ ಎಲ್ಲ ಇಂದ್ರಿಯಗಳ ವ್ಯಾಪಾರವೂ ಕಣ್ಣು ಗಳನ್ನೇ ಸೇರಿದಂತಾಗಿ ಅವು ಹರನಲ್ಲಿ ನೆಟ್ಟಿದ್ದುವು. ಈ ವೈಭವವನ್ನನು ಭವಿಸುತ್ತ ಅಕ್ಕಪಕ್ಕದ ಉಪ್ಪರಿಗೆಗಳ ವನಿತೆಯರ ಪ್ರಿಯವಾದ ಮಾತು ಗಳನ್ನಾಲಿಸುತ್ತ ಹರನು ಹಿಮವಂತನ ಅರಮನೆಗೆ ಬರುವನು. "ಸುಕುಮಾರ ಳಾದರೂ ಪಾರ್ವತಿಯು ಇವನಿಗಾಗಿ ಉಗ್ರತಪಸ್ಸನ್ನು ಮಾಡಿದುದು ಯುಕ್ತವಾಯಿತು...........ಇವನ ದಾಸಿಯಾದವಳೇ ಕೃತಾರ್ಥಳೆಂದ ಮೇಲೆ ಪತ್ನಿಯಾದವಳ ಸೌಭಾಗ್ಯವೆಷ್ಟು? ................ಸುಂದರರಾದ ಇವರಿಬ್ಬರನ್ನೂ ಒಟ್ಟುಗೂಡಿಸದೆ ಇದ್ದಿದ್ದರೆ ಇಷ್ಟು ಸುಂದರವಾದ ರೂಪು ಗಳನ್ನು ನಿರ್ಮಿಸಿದುದೇ ವ್ಯರ್ಥವಾಗುತ್ತಿತ್ತು...............ಇವನು ಕೋಪ ಗೊಂಡು ಮನ್ಮಥ ಶರೀರವನ್ನು ಸುಟ್ಟಿರಲಾರ; ಮನ್ಮಥನು ಇವನನ್ನು

ನೋಡಿ ನಾಚಿ ತಾನೇ ಪ್ರಾಣಬಿಟ್ಟಿರಬೇಕು...............ಸರಿ, ಇನ್ನೇನು ಈಗಾಗಲೇ ಹೆಮ್ಮೆಯಿಂದ ಮೇಲಕ್ಕೇರಿರುವ ಶೈಲರಾಜನ ತಲೆ ಇನ್ನೂ ಮೇಲೆ ಹೋಗುವುದು" ಎಂದು ನಾನಾವಿಧವಾಗಿ ಅವರು ಮಾತನಾಡುತ್ತಿರುವರು.

ಅರಮನೆಯ ಬಾಗಿಲಲ್ಲಿ ಅಚ್ಯುತನ ಕೈಹಿಡಿದು ಹರನು ವೃಷಭದಿಂದಿಳಿಯುವನು. ಬ್ರಹ್ಮನು ಅಂತಃಪುರಕ್ಕೆ ದಾರಿತೋರಿಸುವನು. ಹಿಂದೆ ಇಂದ್ರಾದಿ ದೇವತೆಗಳೂ ಸಪ್ತರ್ಷಿಗಳೇ ಮೊದಲಾದವರೂ ಬರುವರು. ಆಸನದಲ್ಲಿ ಮಂಡಿಸಿ ಹರನು ಹಿಮವಂತನು ಅರ್ಪಿಸಿದ ಅರ್ಘ್ಯ, ಮಧುಪರ್ಕಾದಿಗಳನ್ನು ಸ್ವೀಕರಿಸುವನು. ಆನಂತರ ಇವನನ್ನು ವಧುವಿನ ಬಳಿಗೆ ಕರೆದೊಯ್ಯುವರು. ನೈದಿಲೆಯಂತೆ ಅರಳಿದ ಕಣ್ಣುಳ್ಳ ಹರನ ಮನಸ್ಸು ಪೂರ್ಣಚಂದ್ರಕಾಂತಿಯುಳ್ಳ ಪಾರ್ವತಿಯೊಡಗೂಡಲಾಗಿ ಪ್ರಸನ್ನವಾಗುವುದು. ನಾಚಿಕೆಯಿಂದ ಒಬ್ಬರನ್ನೊಬ್ಬರು ಕದ್ದು ನೋಡುವರು. ಹಿಮವಂತನು ನೀಡಿದ ಅವಳ ಕೈಯನ್ನು ಹರನು ಹಿಡಿಯಲಾಗಿ ಉಮೆಗೆ ರೋಮಾಂಚವಾಗುವುದು; ಈಶ್ವರನ ಬೆರಳುಗಳು ಬೆವರುವುವು; ಹೀಗಾಗಿ ಮನ್ಮಥವಿಕಾರವು ಇಬ್ಬರಲ್ಲೂ ಸಮವಾಗಿ ಹಂಚಿಕೊಳ್ಳುವುದು. ವಧೂವರರು ಜ್ವಲಿಸುತ್ತಿದ್ದ ವಿವಾಹಾಗ್ನಿಯನ್ನು ಪ್ರದಕ್ಷಿಣೆ ಮಾಡುವಾಗ ಮೇರು ಸಮೀಪದಲ್ಲಿ ಹಗಲು ರಾತ್ರಿಗಳು ಸೇರಿದಂತೆ ಕಾಣುತ್ತಿತ್ತು. ಲಾಜಹೋಮವಾದಮೇಲೆ ಪುರೋಹಿತರು "ಅಮ್ಮ! ಹುಡುಗಿ, ಈ ಅಗ್ನಿಯು ನಿಮ್ಮ ವಿವಾಹ ಕರ್ಮದ ಸಾಕ್ಷಿ. ನೀನು ಶಿವನೆಂಬ ಪತಿಯೊಡನೆ ನಿಶ್ಶಂಕಳಾಗಿ ಧರ್ಮವನ್ನಾಚರಿಸು" ಎಂದು ಹೇಳಿದುದನ್ನು ಭವಾನಿಯು ಶ್ರದ್ಧೆಯಿಂದ ಗಮನಿಸುವಳು. ಅನಂತರ ಧ್ರುವದರ್ಶನವೂ ನೆರವೇರುವುದು. ಹೀಗೆ ಲೋಕಮಾತಾಪಿತೃಗಳು ಶಾಸ್ತ್ರೋಕ್ತ ವಿವಾಹವನ್ನು ನಡೆಸಿಕೊಂಡು ಪದ್ಮದಲ್ಲಿ ಕುಳಿತಿದ್ದ ಪಿತಾಮಹನಿಗೆ ನಮಸ್ಕರಿಸುವರು. ಅವನು "ಸರ್ವಮಂಗಳೆ! ವೀರಮಾತೆಯಾಗು" ಎಂದು ವಧುವನ್ನಾಶೀರ್ವದಿಸುವನು. ಶಿವನಿಗೆ ಯಾವ ಆಶೀರ್ವಾದವೂ ತೋರುವುದಿಲ್ಲ. ಇದಾದಮೇಲೆ ವಧೂವರರನ್ನು ವೇದಿಕೆಯ ಮೇಲೆ ಕುಳ್ಳಿರಿಸಿ 'ಆರ್ದ್ರಾಕ್ಷತಾರೋಪಣ' ವನ್ನು ನಡೆಸುವರು. ಲಕ್ಷ್ಮಿಯು ಮುತ್ತುಗಳಂತಿದ್ದ

ತುಂತುರುಗಳಿಂದ ಕೂಡಿದ ಕಮಲವನ್ನು ವಧೂವರರ ಮೇಲೆ ಹಿಡಿಯು ವಳು. ಸರಸ್ವತಿಯು ವರನನ್ನು ಸಂಸ್ಕೃತ ವಾಕ್ಯದಿಂದಲೂ ವಧುವನ್ನು ಸುಖ ಗ್ರಾಹ್ಯವಾದ ಭಾಷೆಯುಲ್ಲೂ ಸ್ತುತಿಸುವಳು. ಅನಂತರ ಅಪ್ಸರೆಯರ ನಾಟಕಾಭಿನಯ ನಡೆಯುವುದು. ಕಡೆಯುಲ್ಲಿ ದೇವತೆಗಳು ಹರನಿಗೆ ನಮಸ್ಕರಿಸಿ ಮನ್ಮಥನ ಸೇವೆಗೆ ಅವಕಾಶಕೊಡಬೇಕೆಂದು ಪ್ರಾರ್ಥಿಸುವರು. ಆ ವೇಳೆಗೆ ಮನ್ಮಥನಿಗೂ ಶಾಪದ ಅವಧಿ ಮುಗಿದು ಶರೀರವು ಕೂಡಿತ್ತು. ಶಾಂತನಾಗಿದ್ದ ಹರನು ತನ್ನಮೇಲೂ ಬಾಣವನ್ನು ಪ್ರಯೋಗಿಸಬಹು ದೆಂದು ಕಾಮನಿಗೆ ಅನುಮತಿ ಕೊಡುವನು. ಆಮೇಲೆ ದೇವತೆಗಳನ್ನು ಬೀಳ್ಕೊಂಡು ಪಾರ್ವತಿಯೊಡನೆ ಹರನು ಶಯ್ಯಾಗೃಹಕ್ಕೆ ತೆರಳುವನು.

## ಎಂಟನೆಯ ಸರ್ಗ

ಶಿವಪಾರ್ವತಿಯರ ಸುರತವು ಈ ಸರ್ಗದಲ್ಲಿ ವರ್ಣಿತವಾಗಿದೆ. ಮೊದಮೊದಲು ಪಾರ್ವತಿಯು ಲಜ್ಜಾನ್ವಿತಳಾಗಿರುವುದೂ ಅನಂತರ ಕ್ರಮ ವಾಗಿ ಅದನ್ನು ತೊರೆದು ಈಶ್ವರನೊಡನೆ ನಾನಾವಿಧವಾಗಿ ರಮಿಸುವುದೂ ಗಂಧಮಾದನಕ್ಕೆ ಹೋದಾಗ ಈಶ್ವರನು ಅಲ್ಲಿನ ಸೌಂದರ್ಯವನ್ನು ಪಾರ್ವತಿಗೆ ವರ್ಣಿಸಿ ಹೇಳುವುದೂ ಈ ಭಾಗದ ಮುಖ್ಯ ಕಥಾಂಶ.

ಇಲ್ಲಿಗೆ ಕಾಳಿದಾಸನಿಂದ ರಚಿತವಾದ ಗ್ರಂಥಭಾಗ ಮುಗಿಯುವುದು. ತಾರಕವಧವನ್ನು ವರ್ಣಿಸುವುದು ನ್ಯಾಯುವಾದ ಉದ್ದೇಶವಾಗಿರುವಲ್ಲಿ ಕವಿಯು ಇಲ್ಲಿಗೇ ಗ್ರಂಥವನ್ನು ಮುಗಿಸಿದುದನ್ನು ಕುರಿತು ವ್ಯಾಖ್ಯಾನ ಕಾರರು ಅನೇಕ ವಿಧವಾಗಿ ಹೇಳಿರುತ್ತಾರೆ. 'ಕುಮಾರ ಸಂಭವ' ವೇ ಕಾವ್ಯದ ಉದ್ದೇಶ. ಅದಕ್ಕೆ ಮುಖ್ಯವಾದ ಸಾಧನ ಶಿವ ಪಾರ್ವತಿಯರ ಮದುವೆ. ಆದುದರಿಂದ ಇದೇ ಕಾವ್ಯದ ನ್ಯಾಯುವಾದ ಕೊನೆಯೆಂದು ಪುತ್ರೋತ್ಸವವು ಅರ್ಥಾತ್ ಸಿದ್ಧವಾಗುವುದೆಂದೂ ಒಂದು ಉಪಪತ್ತಿ.[1]

---

1. ಇದು ನಾರಾಯಣ ಪಂಡಿತನೆಂಬ ವ್ಯಾಖ್ಯಾನಕಾರನದು. "ಉಮಾ ರೂಪೇಣ ತೇ ಯೂಯಂ" (II. 59), 'ಅದ್ಯಪ್ರಭೃತ್ಯವನತಾಂಗಿ' (V. 95) "ಸಮದಿವಸನಿಶೀಥಂ" (VII-91) ಎಂಬ ಶ್ಲೋಕಗಳೇ ಈ ಉಪಪತ್ತಿಗೆ ಆಧಾರ.



ತಾರಕವಧದವರೆಗೂ ಕಾವ್ಯವನ್ನು ಮುಂದುವರಿಸಬೇಕೆಂಬುದೇ ಕವಿಯ ಆಶಯವಾಗಿತ್ತು. ಆದರೆ ದೇವಿಯು ತನ್ನ ಸುರತಕ್ರೀಡಾವರ್ಣನೆಯಿಂದ ಕೋಪಗೊಂಡು ಶಪಿಸಿದ ಕಾವ್ಯವು ಅಲ್ಲಿಗೇ ನಿಂತಿತೆಂದು ಇನ್ನೊಂದು ಅಭಿಪ್ರಾಯ. ಈ ವಿಚಾರದಲ್ಲಿ ನಿರ್ಣಯವನ್ನು ಹಿಂದೆ ಸ್ಪಷ್ಟಪಡಿಸಿದೆ. ಪ್ರಕೃತ, ಈ ಸರ್ಗದ ಉಮಾಸುರತವರ್ಣನದ ಔಚಿತ್ಯವನ್ನು ಕುರಿತು ಬಹಳ ದೊಡ್ಡ ಚರ್ಚೆ ನಡೆದಿದೆ. ದಕ್ಷಿಣಾವರ್ತನೆಂಬ ವ್ಯಾಖ್ಯಾನಕಾರನು ತನ್ನ ವ್ಯಾಖ್ಯಾನದಲ್ಲಿ 'ಈ ಪ್ರಕರಣವು ಗೌರೀಶಂಕರ ಸಂಭೋಗವನ್ನು ಕುರಿತುದಾದ್ದರಿಂದ ರಸಭಾವಗಳನ್ನು ವಿವರಿಸಲು ಭಯಪಡುತ್ತೇನೆ. ಅನ್ವಯವನ್ನು ಮಾತ್ರ ತಿಳಿಸುತ್ತೇನೆ' ಎಂದು ಹೇಳಿರುವನು. ಇದರಿಂದ ಈ ವಿವರವು ಅವನಿಗೆ ರುಚಿಸದಿದ್ದರೂ ಮಹಾಕವಿಪ್ರಯೋಗದ ವಿಚಾರದಲ್ಲಿ ಕಟುವಾದ ಟೀಕೆಯನ್ನು ಮಾಡಲೊಲ್ಲದೆ ಈ ರೀತಿ ನುಡಿದಿರುವನೆಂದು ವ್ಯಕ್ತವಾಗುವುದು. ಅರುಣಗಿರಿನಾಥ ಮತ್ತು ನಾರಾಯಣ ಇವರಿಬ್ಬರೂ ಪ್ರಕೃತ ವರ್ಣನೆಯ ಔಚಿತ್ಯವನ್ನು ಸ್ಥಾಪಿಸುವುದಕ್ಕೇ ಪ್ರಯತ್ನಿಸಿರುತ್ತಾರೆ. ಮಹಾನಟರಾದ ಪಾರ್ವತೀಪರಮೇಶ್ವರರು ಲೌಕಿಕ ನಾಯಕ ನಾಯಿಕೆಯರ ವ್ಯವಹಾರವನ್ನನುಸರಿಸುವುದು ಲೀಲಾಮಾತ್ರವಾದ್ದರಿಂದ ಅದು ಪರಮಾರ್ಥವೆಂಬ ಬುದ್ಧಿಯುಳ್ಳವರಿಗೆ ಮಾತ್ರ ಇಂತಹ ಭಯ; ಆ ಭಾವನೆಯನ್ನು ಬಿಟ್ಟು ಅದನ್ನು ವಿವರಿಸಿದರೆ ಈಶ್ವರನ ಸ್ತುತಿ ಮಾಡಿದಂತೆಯೇ ಆಗುವದೆಂದು ಅರುಣಗಿರಿನಾಥನ ವಾದ. ಪಾರ್ವತೀಪರಮೇಶ್ವರರು ಶರೀರಗ್ರಹಣ ಮಾಡಿರುವುದೇ ಲೋಕಾನುಗ್ರಹಾರ್ಥವಾಗಿ.[1] ಭಗವಂತನ ಈ ವಿಧವಾದ ವ್ಯಾಪಾರಗಳಿಂದ ಮುಕ್ತರು, ಮುಮುಕ್ಷುಗಳು, ಸಕ್ತರು ಎಂಬ ಮೂರು ವಿಧವಾದ ಜನರೂ ಉಪಯೋಗ ಹೊಂದಬಹುದು. ನಮ್ಮೆಲ್ಲನೇಕರು ಸಕ್ತರು. ಕೆಲವರು ಮಾತ್ರ ಮುಮುಕ್ಷುಗಳಿರಬಹುದು. ಲೀಲಾರೂಪವಾದ ಭಗವದ್ವ್ಯಾಪಾರಗಳನ್ನು ಕುರಿತು ಆಲೋಚಿಸುವುದರಿಂದ ಮುಮುಕ್ಷುಗಳ ಅಂತಃಕರಣ ಶುದ್ಧಿ ಹೊಂದುವುದು. ಸಕ್ತರು ಕಾಮಿಗಳಾದ್ದರಿಂದ ಆ ವಿಧವಾಗಿಯೇ ಅವರ

1. Cf. ವಿದಿತಂ ವೋ ಯಥಾ ಸ್ವಾರ್ಥಾ ನ ಮೇ ಕಾಶ್ಚಿತ್ಪ್ರವೃತ್ತಯಃ (VI-26

ಚಿತ್ತವನ್ನು ಪರಮಾತ್ಮನ ಕಡೆಗೆಳೆಯುಬೇಕು. ಇದಕ್ಕಾಗಿಯೇ ಜಗನ್ಮಾತಾಪಿತೃಗಳ ಸುರತವರ್ಣನೆಯೆಂದು ನಾರಾಯಣನ ಯುಕ್ತಿ.[1]

ವಿಮರ್ಶಕರಲ್ಲಿ ಪ್ರಸಿದ್ಧನಾದ ಆನಂದವರ್ಧನನು ಇದನ್ನು ದೋಷವೆಂದೇ ತೀರ್ಮಾನಿಸಿದ್ದರೂ ಪ್ರತಿಭೆಯು ಬಲದಿಂದ ದೋಷವು ಸ್ಪಷ್ಟವಾಗಿ ತೋರುವುದಿಲ್ಲವೆಂದು ಹೇಳಿರುವನು. ದೋಷಕ್ಕೆ ಕಾರಣ ಅವ್ಯುತ್ಪತ್ತಿ.[2] ಕವಿಯು ವರ್ಣಿಸಿರುವ ಸಂಭೋಗವು ಪೌರ್ವಾಪರ್ಯಪರಾಮರ್ಶಕ್ಕೆ ಅವಕಾಶಕೊಡುವುದಿಲ್ಲ. ಇದು ಪಿತೃ ಸಂಭೋಗವೆಂಬ ಜ್ಞಾನವು ಬಂದಿದ್ದರೆ ಲಜ್ಜಾತಂಕಾದಿಗಳಿಂದ ಚಮತ್ಕಾರ ವಿಘಾತವಾಗುತ್ತಿತ್ತು. ಆದರೆ ಇಲ್ಲಿ ಪಾಠಕರ ಹೃದಯವು ಸನ್ನಿವೇಶದಲ್ಲೇ ವಿಶ್ರಾಂತವಾಗುವುದರಿಂದ ಚಮತ್ಕಾರ ವಿಘಾತವಿಲ್ಲವೆಂದು ಅಭಿನವ ಗುಪ್ತನ ವಾದ.[3] ಮಮ್ಮಟನು ಮಾತ್ರ ಪ್ರಕೃತವರ್ಣನೆಯು ತಪ್ಪೆಂದು ಸ್ಪಷ್ಟವಾಗಿ ಖಂಡಿಸಿರುವನು.[4]

ಆಧುನಿಕ ಕವಿವಿಮರ್ಶಕ ಡಾ|| ರವೀಂದ್ರನಾಥ ಟಾಗೂರರು ಶಾಕುಂತಲದ ಆಂತರಾರ್ಥವನ್ನು ವಿವರಿಸಿರುವಂತೆ ಇದರ ಅರ್ಥವನ್ನೂ

---

1. 'ಕಾಮಂ ಕ್ರೋಧಂ ಭಯಂ ಸ್ನೇಹಮೈಕ್ಯಂ ಸೌಹೃದಮೇವ ವಾ ।
ನಿತ್ಯಂ ಹತಾವಿದಧತೋ ಯಾಂತಿ ತನ್ಮಯತಾಂ ಹಿತೇ ॥
ಎಂಬ ಭಾಗವತದ ಶ್ಲೋಕವು ಇದಕ್ಕೆ ಆಧಾರವನ್ನೊದಗಿಸುವುದೆಂದೂ ನಾರಾಯಣನು ಹೇಳಿರುವನು.

2. "ಮಹಾಕವೀನಾಮುಪ್ಯುತ್ತಮದೇವತಾವಿಷಯಪ್ರಸಿದ್ಧಸಂಭೋಗಶೃಂಗಾರನಿಬಂಧನಾದ್ಯನೌಚಿತ್ಯಂ ಶಕ್ತಿತಿರಸ್ಕೃತತ್ವಾದ್ಗ್ರಾಮ್ಯತ್ವೇನ ನ ಪ್ರತಿಭಾಸತೇ" — ಧ್ವನ್ಯಾಲೋಕ. (ನಿರ್ಣಯಸಾಗರ ಪ್ರತಿ, + ಪುಟ 137.) 'ಯತ್ತ್ವೇವಂವಿಧೇ ವಿಷಯೇ ಮಹಾಕವೀನಾಮಪ್ಯಸಮೀಕ್ಷ್ಯಕಾರಿತಾ ಲಕ್ಷ್ಯೇ ದೃಶ್ಯತೇ ಸ ದೋಷ ಏವ. ಸತು ಶಕ್ತಿತಿರಸ್ಕೃತತ್ವಾತ್ತೇಷಾಂ ನ ಲಕ್ಷ್ಯತೇ.—(Op Cit. p. 147.)

3. ಲೋಚನ (ನಿರ್ಣಯ ಸಾಗರ ಪ್ರತಿ) p. 138. (—ಈ ಸಂದರ್ಭದಲ್ಲಿ ಆನಂದವರ್ಧನನು ಇತರರ ಮತವನ್ನು ಅನುವಾದ ಮಾಡಿರುವನೆಂದು ಡಾ॥ ಕೀತ್ ಅವರು ಹೇಳಿರುವುದು ಸರಿಯಲ್ಲ. (Cf. Hist. Skt. Lit. p. 87.)

4. ಕಾವ್ಯಪ್ರಕಾಶ. (Bombay Skt. Series) p. 443.

ವಿಶದಗೊಳಿಸಿರುವರು. ಧರ್ಮವು ಧರಿಸುವ ಸೌಂದರ್ಯವೇ ಸ್ಥಿರವಾದುದೆಂದೂ ಪ್ರೇಮದ ಶಾಂತಸಂಯುತ ಕಲ್ಯಾಣರೂಪವೇ ಶ್ರೇಷ್ಠವಾದ ರೂಪವೆಂದೂ ಉಚ್ಛೃಂಖಲತೆಯಲ್ಲಿ ಸೌಂದರ್ಯದ ಕ್ಷಿಪ್ರವಿಕಾರವೂ ಬಂಧನದಲ್ಲಿಯೇ ಯಥಾರ್ಥವಾದ ಮಂಗಳವೂ ಇರುವುದೆಂದು ಕವಿಯು ತೋರಿಸಿರುವನೆಂದು ಇವರ ಅಭಿಪ್ರಾಯ.[1] ಇದರಂತೆ ಶ್ರೀ ಅರವಿಂದ ಘೋಷ್ ಅವರೂ ಈ ಕಾವ್ಯದ ಆಧ್ಯಾತ್ಮಿಕತೆಯನ್ನು ಹೀಗೆ ವಿವರಿಸಿರುವರು. ಜೀವ ಪರಮಾತ್ಮರ ಸಂಬಂಧವು ಕಾಮಿನಿಯು ನಾಯಕನನ್ನು ಸೇರಲು ಉತ್ಸುಕಪಡುವಂಥದೆಂದು ಬೋಧಿಸುವ ವೈಷ್ಣವ ಪುರಾಣಗಳ ಭಾವಪ್ರಾಧಾನ್ಯವಾದವು ಆಗಲೇ (ಕಾಳಿದಾಸನ ಕಾಲದಲ್ಲೇ) ತಲೆಯೆತ್ತಿತ್ತು. ಪ್ರಕೃತಿಪುರುಷ ಸಂಬಂಧದ ಬಾಹ್ಯಾಕಾರ ಈಶ್ವರಶಕ್ತಿ ಸಂಬಂಧವೆಂದೂ ಹೇಳಿದೆ. ಇದೇ ಕಾಳಿದಾಸನ ಆಶಯಕ್ಕೆ ಮೂಲ. ಪ್ರಕೃತಿಯ ಅಂತರಾತ್ಮವು ಪರಮಾತ್ಮನನ್ನು ಸೇರಿ ತೃಪ್ತಿಹೊಂದುವುದೆಂಬ ಗಂಭೀರವಾದ ಭಾವವು ಪಾರ್ವತೀಪರಮೇಶ್ವರಕಥೆಯಲ್ಲಿ ಅಡಕವಾಗಿದೆಯೆಂದು ಶ್ರೀ ಅರವಿಂದಘೋಷ್ ಅವರ ವಾದದ ತಾತ್ಪರ್ಯ.[2]

ವಿಮರ್ಶಕರ ಅಭಿಪ್ರಾಯಗಳು ಹೀಗಿರುವಲ್ಲಿ ಈ ಸಮಸ್ಯೆಯನ್ನು ನಿರ್ವಿವಾದವಾಗಿ ತೀರ್ಮಾನಿಸುವುದು ಸಾಧ್ಯವಿಲ್ಲವೆಂದೇ ಹೇಳಬೇಕಾಗಿದೆ. ಈ ವಿಚಾರದಲ್ಲಿ ವಿಮರ್ಶೆಯೂ ಬುದ್ಧಿವನಿತೆಯ ಕೈಗೊಂಬೆಯಾಗಿದೆಯೆಂದು ಮಾತ್ರ ಹೇಳಬಹುದು. ಬುದ್ಧಿಯ ಚಾತುರ್ಯದಿಂದ ಯಾವುದಕ್ಕೂ ಉಪಪತ್ತಿಯನ್ನು ಕೊಡಬಹುದು. ಆದರೆ ಕಾವ್ಯದ ಆಸ್ವಾದದಲ್ಲಿ ಮಾತ್ರ ವೈಯುಕ್ತಿಕ ಸಹೃದಯತೆಯೇ ಪ್ರಮಾಣ.

ಮುಂದಿನ ಸರ್ಗಗಳು ಕಾಳಿದಾಸ ಕೃತವಲ್ಲವೆಂದು ತೀರ್ಮಾನಿಸಿರುವುದರಿಂದ ಅವುಗಳ ಸಂಕ್ಷಿಪ್ತ ವಿಷಯಸೂಚಿಕೆಯನ್ನು ಮಾತ್ರ ಕೊಡಲಾಗಿದೆ—

---

1. ಪ್ರಾಚೀನ ಸಾಹಿತ್ಯ—(ಕನ್ನಡ ಭಾಷಾಂತರ), ಪುಟ 15. Also P.C. Lahiri—Cultural Heritage of India III, p. 627.

2. ' Kālidāsa '—Aurobindo Ghosh.

## ಒಂಬತ್ತನೆಯ ಸರ್ಗ.

ಹರನು ಪಾರ್ವತಿಯೊಡನೆ ನೂರು ವರ್ಷ ಸುರತವನ್ನನುಭವಿಸು ವನು. ಆ ವೇಳೆಗೆ ತಾರಕನ ಪೀಡೆ ಅಧಿಕವಾಗಿ ದೇವತೆಗಳು ಇವನನ್ನು ಕಾಣಲು ಹಾತೊರೆದು ಅಗ್ನಿಯನ್ನು ಕಳುಹಿಸುವರು. ಅಗ್ನಿಯು ಪಾರಿವಾಳದ ವೇಷ ಧರಿಸಿ ಹರನ ಶಯ್ಯಾಗೃಹವನ್ನು ಪ್ರವೇಶಿಸುವನು. ಹರನು ಇವನನ್ನು ಗುರ್ತಿಸಿ ಕೋಪಗೊಳ್ಳಲು ಅಗ್ನಿಯು ದೇವತೆಗಳ ಸ್ಥಿತಿಯನ್ನು ವರ್ಣಿಸಿ ಶೀಘ್ರವಾಗಿ ಸೇನಾಪತಿಯೊಬ್ಬನನ್ನು ಕರುಣಿಸಬೇಕೆಂದು ಕೇಳುವನು. ಹರನು ಒಪ್ಪಿ ಅವನಲ್ಲೇ ತನ್ನ ತೇಜಸ್ಸನ್ನು ಇಡುವನು. ಪಾರ್ವತಿಯು ಅಸೂಯೆಗೊಂಡು ಅಗ್ನಿಯನ್ನು ಶಪಿಸುವಳು. ಶಿವನು ಇವಳನ್ನು ಸಮಾಧಾನಪಡಿಸಿ ಕೈಲಾಸಕ್ಕೆ ಕರೆದೊಯ್ಯುವನು.

## ಹತ್ತನೆಯ ಸರ್ಗ.

ಶಾಪದಿಂದ ಕುಷ್ಠರೋಗ ಹೊಂದಿ ಕುರೂಪಿಯಾಗಿದ್ದ ಅಗ್ನಿಯು ಇಂದ್ರಸಭೆಗೆ ಬಂದು ನಡೆದುದನ್ನೆಲ್ಲ ವಿವರಿಸುವನು. ಶಿವತೇಜಸ್ಸನ್ನು ಧರಿಸಲು ಅಸಾಧ್ಯವೆಂದು ಅಗ್ನಿಯು ಇಂದ್ರನ ಸಲಹೆಯಮೇರೆ ಗಂಗೆಯಲ್ಲಿ ಸ್ನಾನಮಾಡುವನು. ಗಂಗೆಗೆ ತಾಪ ಹೆಚ್ಚಾಗುವುದು. ಆರು ಕೃತ್ತಿಕೆಯರು ಅಲ್ಲಿ ಸ್ನಾನಮಾಡಿ, ಗರ್ಭಸೂಚನೆ ತೋರಲು ಪುನಃ ತೇಜಸ್ಸನ್ನು ಶರವಣದಲ್ಲಿ ಬಿಟ್ಟು ಒರುವರು. ಅದು ತನ್ನ ಆರು ಮುಖಗಳಿಂದ ಚತುರ್ಮುಖನನ್ನೇ ಅಲ್ಲಗಳೆಯುವುದು.

## ಹನ್ನೊಂದನೆಯ ಸರ್ಗ.

ಗಂಗೆಯು ಮಗುವನ್ನು ಪೋಷಿಸುವಳು. ಕಡೆಯಲ್ಲಿ ಮಗುವನ್ನು ಹೊಂದುವುದಕ್ಕಾಗಿ ಅಗ್ನಿ, ಗಂಗೆ, ಕೃತ್ತಿಕೆಯರಲ್ಲಿ ವಿವಾದ ಹುಟ್ಟುವುದು. ವಿಹಾರಕ್ಕಾಗಿ ಪಾರ್ವತೀ ಪರಮೇಶ್ವರರು ಬರುತ್ತಿದ್ದಾಗ ಈ ಮಗುವನ್ನು ಕಂಡೊಡನೆ ಅವರಲ್ಲಿ ಪ್ರೀತಿ ಹುಟ್ಟುವುದು. ದೇವತೆಗಳ ಕಲಹದ ತತ್ತ್ವವನ್ನು ವಿವರಿಸಿ ಹರನು ಮಗುವನ್ನು ಪಾರ್ವತಿಗೆ ಕೊಡು

ವನು. ಎಲ್ಲರೂ ಕೈಲಾಸಕ್ಕೆ ತೆರಳುವರು. ಶುಭಶಕುನಗಳು ಕಾಣಿಸಿ ಕೊಳ್ಳುವುವು. ಕುಮಾರನ ಬಾಲಕ್ರೀಡೆ.

## ಹನ್ನೆರಡನೆಯ ಸರ್ಗ.

ಕೆಲವು ಕಾಲದಮೇಲೆ ಇಂದ್ರನು ತಾರಕನ ಬೇಗೆಯನ್ನು ಸಹಿಸಲಾರದೆ ಹರನಿಗೆ ಶರಣುಹೋಗುವನು. ಶಿವನು ಮರುಕಪಟ್ಟು ಮಗನನ್ನು ದೇವಸೇನಾಪತಿಯಾಗಿ ನೇಮಿಸಿ ಆಶೀರ್ವಾದಪೂರ್ವಕವಾಗಿ ಕಳುಹಿಸಿ ಕೊಡುವನು.

## ಹದಿಮೂರನೆಯ ಸರ್ಗ.

ಕುಮಾರನು ದೇವತೆಗಳನ್ನು ಹುರಿದುಂಬಿಸುತ್ತ ತಾರಕನ ಹಾವಳಿಯ ಫಲಗಳನ್ನು ನೋಡಿ ಮರುಕಗೊಳ್ಳುತ್ತ ಸ್ವರ್ಗಕ್ಕೆ ತೆರಳುವನು. ಕುಮಾರನು ದೇವತೆಗಳಿಗೆ ನಮಸ್ಕರಿಸಿ ಅವರಿಂದ ಅಭಿಷೇಕಪೂರ್ವಕವಾಗಿ ಸೇನಾಧಿಪತ್ಯವನ್ನು ಪಡೆಯುವನು.

## ಹದಿನಾಲ್ಕನೆಯ ಸರ್ಗ.

ತಾರಕವಧಕ್ಕೆ ಸನ್ನಾಹ.

## ಹದಿನೈದನೆಯ ಸರ್ಗ.

ತಾರಕನ ಅಹಂಕಾರ; ದೇವತೆಗಳ ಸನ್ನಾಹವನ್ನು ಕೇಳಿ ದಾನವರ ಭಯ. ತಾರಕನ ಯುದ್ಧಸನ್ನಾಹ.

## ಹದಿನಾರು ಮತ್ತು ಹದಿನೇಳನೆಯ ಸರ್ಗಗಳು.

ದೇವದಾನವ ಯುದ್ಧ; ತಾರಕನ ವಧ. ಉಪಸಂಹಾರ.

---


ಮೇಘದೂತನ ಮಾರ್ಗ
ಕಾಶ್ಮೀರ
ಅಲಕಾ
ಕೈಲಾಸ ಶಿಖರ
ಮಾನಸ ಸರೋವರ
ಬ್ರಹ್ಮಪುತ್ರಾನದಿ
ಹರಿದ್ವಾರ
ಕನಖಲ
ಕುರುಕ್ಷೇತ್ರ
ಪರ್ವತಗಳು
ಸಿಂಧೂನದಿ
ಗಂಭೀರಾ
ಯಮುನಾ
ಗಂಗಾ
ಕಾಶಿ
ಚರ್ಮಣ್ವತಿ
ವೇತ್ರವತಿ
ಸರಸ್ವತಿ
ಅವಂತೀ
ದಶಪುರ
ವಿದಿಶಾ
ರೀವಾ
ರಾಮಗಿರಿ
ರೇವಾ
ವಿಂಧ್ಯ ಪರ್ವತಗಳು
ಮೇಖಲ ಶಿಖರ
ಅರಬ್ಬಿ ಸಮುದ್ರ
ಬಂಗಾಳಾ ಕೊಲ್ಲಿ

# ಮೇಘ ಸಂದೇಶ.[1]

"ಮೇಘ ಸಂದೇಶ" ವೆಂದರೆ ಮೋಡವು ತೆಗೆದುಕೊಂಡು ಹೋದ ವಾರ್ತೆ ಎಂದರ್ಥ. ಸ್ಥೂಲದೃಷ್ಟಿಯಿಂದ ಈ ಹೆಸರು ಸ್ವಲ್ಪ ವಿಚಿತ್ರವಾಗಿ ಕಂಡರೂ ಕಾವ್ಯದ ವಸ್ತುವನ್ನು ತಿಳಿದಲ್ಲಿ ಅದರ ಔಚಿತ್ಯವು ವ್ಯಕ್ತವಾಗುವುದು. ಕುಬೇರನ ಸೇವಕನಾದ ಯಕ್ಷನೊಬ್ಬನು ಏನೋ ತಪ್ಪು ಮಾಡಿದನಂತೆ; ಅದಕ್ಕಾಗಿ ಅವನ ಯಜಮಾನನು ಅವನಿಗೆ ಶಾಪ ಕೊಟ್ಟನಂತೆ; ಇದರಿಂದ ಮಹಿಮಾನ್ವಿತನಾಗಿದ್ದರೂ ಭೋಗಲಾಲಸನಾಗಿ ಕರ್ತವ್ಯ ಪರಾಙ್ಮುಖನಾದ ಯಕ್ಷನು ತನ್ನ ಮನೆ ಮಠ ಎಲ್ಲವನ್ನೂ ಬಿಟ್ಟು ಕುಬೇರನ ರಾಜ್ಯದ ಎಲ್ಲೆಯಿಂದಾಚೆ ಹೋಗಬೇಕಾಯಿತು. ಬಹುಶಃ ಯಕ್ಷನು ಕ್ಷಮೆಯನ್ನು ಪ್ರಾರ್ಥಿಸಿದುದರಿಂದಲೋ ಏನೋ ಕುಬೇರನು ಕನಿಕರಗೊಂಡು ಶಾಪಕ್ಕೆ ಒಂದೇ ವರ್ಷಕಾಲ ಅವಧಿಯನ್ನು ಗೊತ್ತುಮಾಡಿದನಂತೆ.[2] ಈ ಅವಧಿಯನ್ನು ಅವನು ಪವಿತ್ರವಾದ ರಾಮಗಿರ್ಯಾಶ್ರಮದಲ್ಲಿ[3] ಕಳೆಯಬೇಕಾಯಿತು. ಹೀಗೆ ರಾಜಧಾನಿಯಾದ ಅಲಕಾಪುರಿಯಲ್ಲಿ ಭೋಗಾನುಭವಕ್ಕಿದ್ದ ಅವಕಾಶ ಸೌಕರ್ಯಗಳನ್ನು ಕಳೆದುಕೊಂಡ ಯಕ್ಷನು ತನ್ನ ಪ್ರಿಯೆಯನ್ನಗಲಿ ರಾಮಗಿರಿಯಲ್ಲಿದ್ದಾಗ ಮಳೆಗಾಲವು ತಲೆದೋರಿತಂತೆ. ವರ್ಷಋತುವಿನ ಮೊದಲಲ್ಲಿ ಗೋಚರವಾಗುವ ಕಾರ್ಮೋಡವೊಂದನ್ನು ಕಂಡಕೂಡಲೆ ವಿರಹಿಯಾದ ಯಕ್ಷನು ಚಿಂತಿಸತೊಡಗಿ ಕೋಮಲ ಹೃದಯಳಾದ ತನ್ನ ಪ್ರಿಯೆಯು ಗತಿಯೇನಾಗಿರುವುದೋ ಎಂದು ಉತ್ಸುಕನಾದನಂತೆ.

---

1. ಕಾವ್ಯವನ್ನು "ಮೇಘದೂತ" ವೆಂದೂ ಕರೆಯುವುದುಂಟು.

2. "ಹಾಗಿಲ್ಲದೆ ಇದ್ದರೆ ಪರಸ್ಪರ ದೃಢಾನುರಕ್ತರಾದ ಯಕ್ಷಯಕ್ಷಪತ್ನಿಯರ ಹೃದಯಗಳು ಬಹುಶಃ ಆ ಕ್ಷಣವೇ ಸೀಳಿಹೋಗುತ್ತಿದ್ದುವು"— Cf. Vidyullatā "ಯದಿ ನಿಧಿಪತಿಃ ಅವಧಿಂ ಸ್ಫುಟಿತಮಭವಿಷ್ಯತ್" p. 22.

3. ಇದನ್ನು ಬಂದಲ್‌ಖಂಡದಲ್ಲಿರುವ ಚಿತ್ರಕೂಟವೆಂದು ಕೆಲವರೂ ನಾಗಪುರದ ಸಮೀಪದಲ್ಲಿರುವ ರಾಮಟೇಕ ಎಂಬ ಬೆಟ್ಟವೆಂದು ಇನ್ನು ಕೆಲವರೂ ಅಭಿಪ್ರಾಯಪಡುವರು. ಎರಡನೆಯ ಮತವೇ ಗ್ರಾಹ್ಯವೆಂದು ತೋರುತ್ತದೆ. ಈಚೆಗೆ ಶ್ರೀ ಎಸ್. ಎನ್. ವ್ಯಾಸ್‌ರವರು ಈಗಿನ ಸುವರ್ಣಗಿರಿಯೇ ಮೇಘಸಂದೇಶದ ಅಲಕೆಯೆಂದು ಗುರ್ತಿಸಿರುವರು. (Bhāratiyavidya—III-II-1942.)

ಕಾಮಿಗಳ ಮನಸ್ಸನ್ನೇ ಕಲಕುವ ವರ್ಷಾಕಾಲವು ತನ್ನ ಪ್ರೇಯಸಿಯ ಜೀವವನ್ನೇ ಅಪಹರಿಸಬಹುದೆಂದು ಕಾತರನಾದನಂತೆ. ಹೇಗೂ ತನಗಾಗಿ ಹಂಬಲಿಸುತ್ತಿದ್ದ ಅವಳನ್ನು ತಾನೇ ಸಂತೈಸಲು ಅಸಾಧ್ಯವಾಗಿದ್ದುದರಿಂದ ಒಂದು ಸಂದೇಶದಿಂದಲಾದರೂ ಅವಳು ಜೀವವನ್ನುಳಿಸಿಕೊಳ್ಳುವಂತೆ ಮಾಡಬೇಕೆಂದು ತೀರ್ಮಾನಿಸಿದನು. ಎದುರಿಗೆ ಕಾಣುತ್ತಿದ್ದ ಮೇಘವನ್ನೇ ಪ್ರಾರ್ಥಿಸಿ ತನ್ಮೂಲಕವೇ ತನ್ನ ಕ್ಷೇಮವಾರ್ತೆಯನ್ನು ಕಳುಹಿಸುವುದು ಸೂಕ್ತವೆಂದು ತೋರಿತು. ಕೂಡಲೆ ಆ ಮೇಘವನ್ನು ಹತ್ತಿರದಲ್ಲಿದ್ದ ಹೂವುಗಳಿಂದ ಪೂಜಿಸಿ ಬಾಯಿತುಂಬ ಹೊಗಳಿ, ತನ್ನ ಪ್ರಿಯೆಗೆ ಸಂದೇಶವನ್ನು ಒಯ್ಯಬೇಕೆಂದು ಕೇಳಿಕೊಂಡನು. ವಿರಹಿಯಾಗಿದ್ದ ಯಕ್ಷನಿಗೆ ಚೇತನಾಚೇತನ ವಿವೇಕವೆಲ್ಲಿ ಬರಬೇಕು? ತನ್ನ ಸಂದೇಶವನ್ನು ತೆಗೆದೊಯ್ಯಲು ಮೇಘವೇ ಸರಿಯಾದ ದೂತನೆಂದು ಭಾವಿಸಿದನು. ಈ ಮೇಘದೂತನಿಗೆ ತನ್ನ ಪ್ರಿಯೆಯಿರುವ ನಗರವನ್ನೂ ಅಲ್ಲಿಗೆ ಹೋಗುವುದಕ್ಕೆ ಸರಿಯಾದ ಮಾರ್ಗವನ್ನೂ ವರ್ಣಿಸಿ ಹೇಳಿದ ಯಕ್ಷನ ವಿರಹಾನುಭವ, ಸಂದೇಶ ಪ್ರೇಷಣೆಗಳೇ ಕಥಾವಸ್ತುವಾದುದರಿಂದ ಕಾವ್ಯಕ್ಕೆ ಈ ಹೆಸರು ಬಂದಿರುವುದು.

ಈ ಕಾವ್ಯವು ಪೂರ್ವಮೇಘ, ಉತ್ತರಮೇಘಗಳೆಂಬ ಎರಡು ಸರ್ಗಗಳಿಂದ ಕೂಡಿದೆ. ಪೂರ್ವಮೇಘದಲ್ಲಿ ಸುಮಾರು 63 ಶ್ಲೋಕಗಳೂ ಉತ್ತರ ಮೇಘದಲ್ಲಿ ಸುಮಾರು 52 ಶ್ಲೋಕಗಳೂ ಇವೆ.[1] ಮೊದಲನೆಯ ಸರ್ಗದಲ್ಲಿ ಅಲಕಾಪುರಿಯ ಮಾರ್ಗವೂ ಅಲ್ಲಿ ಸಿಕ್ಕುವ ನದಿ, ನಗರ, ಪರ್ವತಗಳೂ, ಕಡೆಯದರಲ್ಲಿ ಅಲಕಾಪುರಿಯ ಭೋಗಸಮೃದ್ಧಿಗಳೂ, ಯಕ್ಷನ ಪತಿಪರಾಯಣೆಯಾದ ಹೆಂಡತಿಯ ಸೌಂದರ್ಯಾತಿಶಯ, ಹರ್ಮ್ಯ, ಕ್ರೀಡಾಶೈಲ ಮೊದಲಾದ ಭೋಗಸಾಮಗ್ರಿಗಳೂ ವರ್ಣಿತ

---

1. ಕಾವ್ಯವು ಭಿನ್ನರುಚಿಗಳಾದ ಅನೇಕ ಸಹೃದಯರ ಮೆಚ್ಚುಗೆಯನ್ನು ಪಡೆದುದರಿಂದ ಇದರ ಪಾಠದಲ್ಲಿ ಅನೇಕ ವಿಶೇಷಗಳು ಗೋಚರವಾಗುವುವು. ಶ್ಲೋಕಗಳ ಒಟ್ಟು ಸಂಖ್ಯೆಯಲ್ಲಿ ಭೇದ, ಕ್ರಮಭೇದ, ಪಾಠಭೇದ ಮತ್ತು ಮೂಲ ಪಾಠವನ್ನು ನಿರ್ಧರಿಸಲು ಸಿಕ್ಕುವ ಸಹಾಯ ಈ ವಿಷಯಗಳನ್ನೆಲ್ಲ ಅಧ್ಯಾಯದ ಕೊನೆಯ ಅನುಬಂಧದಲ್ಲಿ ನಿರೂಪಿಸಲಾಗಿದೆ.

ವಾಗಿವೆ. ಒಟ್ಟು ಕಾವ್ಯವು ಮಂದಾಕ್ರಾಂತಾ[1] ವೃತ್ತದಲ್ಲಿ ರಚಿತವಾಗಿದೆ. ಯಕ್ಷನಿಗೆ ಯಾವ ಹೆಸರನ್ನೂ ಇಟ್ಟಿಲ್ಲ. ಮತ್ತು ಅವನ ಶಾಪಕ್ಕೆ ಕಾರಣ ವಾದ ಅಧಿಕಾರ ಪ್ರಮಾದವಾವುದೆಂದೂ ಕವಿಯು ನಿರ್ದೇಶಿಸಿಲ್ಲ.[2]

ಸಾಮಾನ್ಯವಾಗಿ ಒಬ್ಬರು ಮತ್ತೊಬ್ಬರಿಗೆ ಸುದ್ದಿಯನ್ನು ಕಳುಹಿಸು ವುದೂ, ವಿಶೇಷವಾಗಿ ನಲ್ಲನಲ್ಲೆಯರು ಒಬ್ಬರಿಗೊಬ್ಬರು ಪ್ರೀತಿಸಂದೇಶ ಗಳನ್ನು ಕಳುಹಿಸುವುದೂ ಭಾರತೀಯ ಸಾಹಿತ್ಯದಲ್ಲಿ ಕಾಳಿದಾಸನಿಗೆ ಹಿಂದಿ ನಿಂದಲೂ ಕಂಡುಬರುತ್ತದೆ.[3] ಕಾಳಿದಾಸನಿಗಿಂತ ಪ್ರಾಚೀನವಾದ ಕಾಮ ವಿಲಾಪ ಜಾತಕದಲ್ಲಿ ಯಾವುದೋ ವಿಪತ್ತಿಗೀಡಾಗಿದ್ದ ಗಂಡನು ಕಾಗೆಯ ಕೈಯಲ್ಲಿ ಪ್ರೇಯಸಿಗೆ ಸಂದೇಶವನ್ನು ಕಳುಹಿಸುವನು. ನಾಗಾರ್ಜುನನ ಪ್ರಜ್ಞಾಮೂಲಶಾಸ್ತ್ರಟೀಕೆಯಲ್ಲಿ ಒಬ್ಬ ಹೆಂಗಸು ಮೋಡವನ್ನು ಪ್ರಾರ್ಥಿಸಿ ತನ್ನ ಪ್ರಿಯನಿಗೆ ಸಂದೇಶವನ್ನು ಒಯ್ಯಬೇಕೆಂದು ಬೇಡುವಳು.[4]

---

1. ಭರತನು ಇದನ್ನು 'ಶ್ರೀಧರಾ' ಎಂದು ಕರೆದಿರುವನು.

2. ವ್ಯಾಖ್ಯಾನಕಾರರು ಮಾತ್ರ ಇದನ್ನು ಎರಡು ವಿಧವಾಗಿ ಕಲ್ಪಿಸಿಕೊಂಡಿ ರುವರು. ಕುಬೇರನ ಉಷಃಕಾಲದ ಶಿವಪೂಜೆಗೆ ಹೊಸ ಕಮಲಗಳನ್ನು ಕೊಯ್ದು ಸಿದ್ಧಪಡಿಸುವುದು ಯಕ್ಷನ ಕೆಲಸವಾಗಿತ್ತಂತೆ. ಆದರೆ ಯಕ್ಷನು ಉಷಃಕಾಲದಲ್ಲಿ ಪತ್ನಿಯನ್ನಗಲಿರಲಾರದೆ ಮರುದಿನದ ಪೂಜೆಗೆ ಬೇಕಾಗುವ ಕಮಲಗಳನ್ನು ಹಿಂದಿನ ದಿನವೇ ಕುಯ್ದಿಡುತ್ತಿದ್ದನಂತೆ. ಈ ಕಾರಣದಿಂದ ಯಾವುದೋ ಒಂದು ದಿನ ಒಂದು ಕಮಲದಲ್ಲಿ ರಸಾಸ್ವಾದಕ್ಕಾಗಿ ಸೇರಿದ್ದ ದುಂಬಿಯು ಪೂಜಾಕಾಲದಲ್ಲಿ ಕುಬೇರನ ಕೈಯನ್ನು ಕಚ್ಚಿತಂತೆ. ಇದರಿಂದ ಅವನ ಕೋಪವು ಕೆರಳಿ ಶಾಪವನ್ನು ಕೊಟ್ಟ ನೆಂದು ಒಂದು ಮತ. ಯಕ್ಷನಿಗೆ ಕುಬೇರನ ಉದ್ಯಾನದಲ್ಲಿ ಕಾವಲು ಕೆಲಸವಿತ್ತು. ಒಂದು ದಿನ ಐರಾವತವು ತೋಟದೊಳಕ್ಕೆ ನುಗ್ಗಿ ಅಲ್ಲಿದ್ದ ಗಿಡಬಳ್ಳಿಗಳನ್ನೆಲ್ಲಾ ಹಾಳುಮಾಡಿತು. ಇದು ಕಾವಲುಗಾರನ ಅಜಾಗರೂಕತೆಯಿಂದ ನಡೆಯಿತೆಂದು ಭಾವಿಸಿದ ಕುಬೇರನು ಅವನನ್ನು ಶಿಕ್ಷಿಸಿದನೆಂದು ಇನ್ನೊಂದು ಮತ. ದೇವತಾರಾಧ ನವೂ ವಿರಹಾನುಭವದ ಕಥೆಗೆ ಭಿತ್ತಿಯಾಗಿರುವುದರಿಂದ ಮೊದಲನೆಯ ಮತವೇ ಸ್ವರಸವಾಗಿದೆಯೆನ್ನಬಹುದು.

3. ಋಗ್ವೇದದಲ್ಲಿ (X. 108) ಸರಮೆಯೆಂಬ ನಾಯಿಯ ಕೈಯಲ್ಲಿ ಒಂದು ಸಂದೇಶವನ್ನು ಕಳುಹಿಸಿದುದಾಗಿ ನಿರೂಪಿತವಾಗಿದೆ. ಪುರಾಣಗಳಲ್ಲೂ ರಾಮಾ ಯಣದಲ್ಲೂ ರಾಮನು ಆಂಜನೇಯನ ಕೈಯಲ್ಲೂ, ಯುಧಿಷ್ಠಿರನು ಕೃಷ್ಣನ ಮೂಲ ಕವೂ, ನಳನು ಹಂಸದ ಮೂಲಕವೂ ಸಂದೇಶಗಳನ್ನು ಕಳುಹಿಸಿದರೆಂದು ಹೇಳಿದೆ.

4. I. H. Q. III pp. 273 ff.

ಘಟಕರ್ಪರ ಕವಿಯ ಅದೇ ಹೆಸರಿನ ಕಾವ್ಯದಲ್ಲಿ ಒಬ್ಬ ವಿರಹಿಣಿಯು ತನ್ನ ಶೋಚ್ಯಾವಸ್ಥೆಯನ್ನು ರಮಣನಿಗೆ ತಿಳಿಸಬೇಕೆಂದು ಬೆಳಗಿನ ಮೋಡವನ್ನು ಬೇಡುವುದು ಪ್ರತಿಪಾದಿತವಾಗಿದೆ.[1] ಅಂತೂ "ಸಂದೇಶ"ವನ್ನು ಕಳುಹಿಸುವುದೂ ಅದಕ್ಕಾಗಿ ಮೇಘವನ್ನೇ ಉಪಯೋಗಿಸಿಕೊಳ್ಳುವ ವಿಷಯವೂ ಕಾಳಿದಾಸನಿಗಿಂತ ಹಿಂದೆಯೇ ಇತ್ತೆಂದು ಸ್ಪಷ್ಟಪಡುವುದರಿಂದ ಕಾಳಿದಾಸನು ಹಿಂದಿನವರಿಂದ ಸ್ಫೂರ್ತಿಹೊಂದಿ ಈ ಕಾವ್ಯವನ್ನು ನಿರ್ಮಿಸಿರಬೇಕೆಂದು ತೋರುವುದು.[2] ಆದರೆ ಸಂದೇಶವೆಂಬ ತಡಿಕೆಯನ್ನಾಶ್ರಯಿಸಿ ಹೃದಯಂಗಮವಾದ ಒಂದು ಕಾವ್ಯರೂಪವನ್ನೇ ನಿರ್ಮಿಸಿದ ಕೀರ್ತಿಯು ಕಾಳಿದಾಸನನ್ನು ಬಿಟ್ಟು ಮತ್ತಾವಕವಿಗೂ ಸಲ್ಲದು.[3]

---

1. ಈ ಕವಿಯ ವ್ಯಕ್ತಿತ್ವವೂ ಕಾಲವೂ ಅನಿಶ್ಚಿತವಾಗಿರುವುದರಿಂದ ಇವನ ಕಾವ್ಯವು ಕಾಳಿದಾಸನಿಗೆ ಎಷ್ಟುಮಟ್ಟಿಗೆ ಸಹಾಯಮಾಡಿತೆಂದು ನಿರ್ಧರಿಸಲು ಸಾಧ್ಯವಿಲ್ಲ.

2. ಮೇಘಸಂದೇಶದಲ್ಲಿ ಹೆಚ್ಚುಸಾರಿ ರಾಮಕಥೆಗೆ ಸೂಚನೆಯು ಬರುವುದರಿಂದ (ಜನಕತನಯಾಸ್ನಾನಪುಣ್ಯೋದಕೇಷು I-1; ವಂದ್ಯೈಃ ಪುಂಸಾಂ ರಘುಪತಿ ಪದೈರಂಕಿತಂ ಮೇಖಲಾಸು I-12; ಇತ್ಯಾದಿ II-39.) ವಾಲ್ಮೀಕಿಯೇ ಕಾಳಿದಾಸನಿಗೆ ಈ ವಿಷಯದಲ್ಲಿ ಸ್ಫೂರ್ತಿದಾಯಕನಾಗಿದ್ದಿರಬಹುದೆಂಬ ಮಲ್ಲಿನಾಥನ ಆಶಯವೇ (ಮಲ್ಲಿನಾಥ ಸಂಜೀವಿನಿ I-1. "ಸೀತಾಂ ಪ್ರತಿ ರಾಮಸ್ಯ ಹನೂಮತ್ಸಂದೇಶಂ ಮನಸಿ ನಿಧಾಯ ಮೇಘಸಂದೇಶಂ ಕವಿಃ ಕೃತವಾನಿತ್ಯಾಹುಃ") ಉಚಿತವೆನ್ನಬಹುದು.

3. ಮೇಘಸಂದೇಶದ ನಿರ್ಮಾಣದ ವಿಷಯದಲ್ಲಿ ಅನೇಕ ಅಭಿಪ್ರಾಯಗಳಿವೆ. ಕೆಲವರು ಕಾಳಿದಾಸನೇ ಯಕ್ಷನೆಂದು ಭಾವಿಸಿ ಅವನ ಜೀವನದಲ್ಲಿ ಸಂಭವಿಸಿದ ಯಾವುದೋ ಒಂದು ಸನ್ನಿವೇಶವನ್ನೇ ಕಾವ್ಯದಲ್ಲಿ ಚಿತ್ರಿಸಲಾಗಿದೆಯೆನ್ನುವರು. (Cf. Hillebrandt 'Kālidāsa' p. 32; Keith Hist. of Skt. Lit. p. 86; Rangaswamisaraswati, Q. J. M. S. XV. pp. 27 ff; K. R. Pisharoti—I. H. Q. XVII iv. pp. 517) ಇನ್ನು ಕೆಲವರು ಕಾಳಿದಾಸನು ಪ್ರತ್ಯಭಿಜ್ಞಾಮತಾನುಯಾಯಿಯೆಂದು ಹೇಳಿ ಅವನಿಗೆ ಆ ಮತದಲ್ಲಿದ್ದ ದೃಢವಿಶ್ವಾಸವನ್ನೇ ಕವಿಯು ಈ ಕಾವ್ಯದಲ್ಲಿ ಆವಿಷ್ಕರಿಸಿರುವನೆಂದು ಹೇಳುವರು. (Cf. Lacchmidhar Kalla—" The Birth-place of Kalidasa—Evidence U. C. Megha").

ಋತುಸಂಹಾರದಂತೆಯೇ ಇಲ್ಲಿಯೂ ಕಥಾವಸ್ತುವು ಅತ್ಯಲ್ಪವೆಂದು ಈಗಾಗಲೇ ವಿಶದವಾಗಿರಬೇಕು. ಪ್ರೇಯಸಿಗೆ ಸಂದೇಶವನ್ನು ತಲಪಿಸುವುದಕ್ಕಾಗಿ ಮೇಘವನ್ನು ಪ್ರಾರ್ಥಿಸಿದ ಯಕ್ಷನು ತನ್ನ ಊರಾದ ಅಲಕಾಪುರಿಗೆ ಮಾರ್ಗವನ್ನು ವಿವರವಾಗಿ ತಿಳಿಸಬೇಕಾಯಿತು. ಈ ಸಂದರ್ಭವನ್ನು ಕಲ್ಪಿಸಿ ಕಾಳಿದಾಸನು ಪುನಃ ತನ್ನ ಪ್ರಕೃತಿ ಪ್ರೇಮವನ್ನು ವ್ಯಕ್ತಗೊಳಿಸುವ ಅವಕಾಶವನ್ನು ಹೊಂದಿರುವನು. ಋತುಸಂಹಾರದಲ್ಲಿ ಗೋಚರವಾಗುವ ಪ್ರಕೃತಿವರ್ಣನೆಯು ಮತ್ತೊಂದು ರೀತಿಯಲ್ಲಿ ಇಲ್ಲೂ ಗೋಚರವಾಗುವುದು. ನಾಮತಃ ಅನಿರ್ದಿಷ್ಟರಾದರೂ ಯಕ್ಷ, ಯಕ್ಷಿಣಿಯೆಂಬ ನಾಯಕ ನಾಯಿಕೆಯರು ಸ್ಪಷ್ಟವಾಗಿ ನಿರೂಪಿತರಾಗಿ ಕಥೆಗೆ ಸಂಭವತೆಯನ್ನು ಒದಗಿಸುತ್ತಾರೆ. ಸ್ವಲ್ಪವೂ ದುಃಖವನ್ನರಿಯದ ಯಕ್ಷರು ಅತಿಮಾನುಷವ್ಯಕ್ತಿಗಳು. ಆದುದರಿಂದಲೇ ಪುನಸ್ಸಮಾಗಮದಲ್ಲಿ ದೃಢವಾದ ನಂಬಿಕೆಯಿದ್ದರೂ ಕೂಡ ಮೇಘವನ್ನು ನೋಡಿದ ಕೂಡಲೇ ತವಕಪಡುವುದೂ ಪರಸ್ಪರ ಕ್ಷೇಮವಾರ್ತೆಯನ್ನು ತಿಳಿಯಲಪೇಕ್ಷಿಸಿ, ಚೇತನಾಚೇತನ ವಿವೇಕವಿಲ್ಲದೆ ಮೇಘದ ಮೂಲಕ ಸಂದೇಶವನ್ನು ಕಳುಹಿಸುವುದೂ ಸ್ವಾಭಾವಿಕವಾಗಿ ಪರಿಣಮಿಸುವುದು.[1]

ಮೇಘಸಂದೇಶವನ್ನು ಶೋಕರಸ ಪ್ರಧಾನವಾದ ಗೀತ (Elegy) ವೆಂದು ವಿಮರ್ಶಕರು ಕರೆಯುವುದುಂಟು.[2] ಪ್ರಿಯಾವಿರಹಿತನಾದ ಯಕ್ಷನು ವರ್ಷಾಕಾಲದ ಚಿಹ್ನೆಗಳಿಂದ ಅನ್ಯಮನಸ್ಕನಾಗಿ ಪ್ರಿಯೆಯ ಸಮಾಗಮಕ್ಕಾಗಿ ಗೋಳಿಡುವುದೇ ಕಾವ್ಯದ ವಸ್ತುವೆಂದು ಭಾವಿಸಿ ಹೀಗೆ ಹೇಳಲಾಗಿದೆ. ಆದರೆ ಭಾರತೀಯ ಸಂಪ್ರದಾಯಕ್ಕನುಸಾರವಾಗಿ ಕಾವ್ಯದ

---

1. ಇದರಿಂದ ಕಾವ್ಯದ ಕತೆಯು ಕೃತಕ ಮತ್ತು ಅಸಂಭವವೆನ್ನುವವರ ಅರಸಿಕತೆಯು ವ್ಯಕ್ತವಾಗುವುದು. (Cf. Hist. Skt. Lit. p 86.) ಮೇಘಸಂದೇಶದ ವಸ್ತು ರಸಗಳ ವಿಚಾರವಾಗಿ ಅನೇಕ ಅಭಿಪ್ರಾಯಗಳಿವೆ. ಅವುಗಳನ್ನು ವಿವರವಾಗಿ ಖಂಡಿಸುವುದು ಉದ್ದೇಶವಲ್ಲ. ಆದರೂ ಆಯಾ ವಿಚಾರಗಳನ್ನು ನಿರೂಪಿಸುವಾಗ ಈ ವಿಮರ್ಶೆಗಳನ್ನೂ ದೋಷಾರೋಪಣಗಳನ್ನೂ ಗಮನಿಸಲಾಗುವುದು.

2. Ryder's translation of Kalidasa's Works p. 186. cf. Ante—S. K. De. I. H. Q. XVI. ii—pp. 400-1.

ರಸಕ್ಕೆ ವಿಪ್ರಲಂಭ ಶೃಂಗಾರವೆಂದು ಹೆಸರು. ಹಿಂದೆ ಹೇಳಿದಂತೆ, ಯಕ್ಷನು ಮಹಿಮಾನ್ವಿತನು. ಭೋಗಾಸಕ್ತನಾದರೂ 'ಅಂತರ್ಬಾಷ್ಪ' ನಾಗಿ ತನ್ನ ದುಃಖವನ್ನು ನಿಗ್ರಹಿಸಿಕೊಳ್ಳಬಲ್ಲವನು. ಆದುದರಿಂದ ಪ್ರಿಯೆಯು ಸಮಾಗಮಕ್ಕಾಗಿ ಯಕ್ಷನು ಅತ್ತು ಕರೆದು ಗೋಳಿಡುವನೆಂದು ಭಾವಿಸುವಂತಿಲ್ಲ. ಅವನ ಆತಂಕವೆಲ್ಲಾ ಪ್ರೇಯಸೀ ಜೀವರಕ್ಷಣೆಗಾಗಿ, ಕುಸುಮ ಸದೃಶವಾದ ಅವಳ ಹೃದಯವು ಪ್ರಿಯನಾದ ತನ್ನ ಕ್ಷೇಮದ ವಿಚಾರದಲ್ಲಿ ಸಂಶಯಗೊಂಡು ಎಲ್ಲಿ ಒಡೆಯುವುದೋ ಎಂಬ ಭಯ ಮಾತ್ರ; ಇದಕ್ಕೂ ಅವರಿಬ್ಬರ ಅನ್ಯಾದೃಶವಾದ ಪ್ರೇಮವೇ ಮೂಲ. ಯಕ್ಷಯಕ್ಷಿಯರ ಪರಸ್ಪರಾನುರಾಗವು ಗಾಢ ಮತ್ತು ಅಚಂಚಲ. ಯಕ್ಷಿಯಲ್ಲಿ ಅವಳ ಪ್ರಿಯನಿಗೆ ಪೂರ್ಣ ಪ್ರೀತಿಯೆಂದೂ ಅವಳಿಗೆ ಇವನಲ್ಲಿ ಇದಕ್ಕೆ ಕಡಿಮೆಯಿಲ್ಲದ ಪ್ರೀತಿಯೆಂದೂ ಯಕ್ಷನ ಮಾತಿನಿಂದಲೇ ಗೊತ್ತಾಗುವುದು. ಇವರಿಬ್ಬರ ಪ್ರೇಮವೂ ಎಷ್ಟು ಉನ್ನತವೂ ಆದರ್ಶ ಪ್ರಾಯವೂ ಆಗಿದೆಯೆಂದರೆ, ವಿಯೋಗದಲ್ಲಿರುವಾಗ ಯಾರೊಬ್ಬರೂ ತಮ್ಮ ಕ್ಲೇಶಕ್ಕಾಗಿ ಗೋಳಿಡದೆ ಮತ್ತೊಬ್ಬರ ಕ್ಷೇಮ ಸ್ಥೈರ್ಯಗಳನ್ನು ಮಾತ್ರ ಕೋರುತ್ತಾರೆ. ಆದುದರಿಂದ ಯಕ್ಷನಾಗಲಿ ಯಕ್ಷಿಯಾಗಲಿ ಕೇವಲ ಕಾಮಪೀಡಿತರಾಗಿ ಉದ್ವೇಗಗೊಳ್ಳುವ ಸ್ವಭಾವದವರಲ್ಲ ಮತ್ತು ಕಾವ್ಯದ ರಸವು ಶೋಕವಲ್ಲ; ವಿಪ್ರಲಂಭ ಶೃಂಗಾರ.

ಕಾಳಿದಾಸನಿಗೆ ಸಂಭೋಗಶೃಂಗಾರಕ್ಕಿಂತ ವಿಪ್ರಲಂಭ ಶೃಂಗಾರದಲ್ಲಿ ಹೆಚ್ಚು ಪ್ರೀತಿ. ಯೌವನದಲ್ಲಿ ಮದಾಂಧರಾದ ಕಾಮುಕರಿಬ್ಬರು ಒಟ್ಟಿಗೆ ಸೇರಿ ಸುಖಪಡುವುದು ದಾಂಪತ್ಯದ ಪರಮಫಲವಲ್ಲ; ರೂಪು ಯೌವನ, ಐಶ್ವರ್ಯಗಳಿಂದ ಅವರು ತಾತ್ಕಾಲಿಕ ಸುಖವನ್ನನುಭವಿಸಬಹುದು. ಆದರೆ ಇವುಗಳಲ್ಲಿ ಯಾವುದು ಇಲ್ಲದಿದ್ದರೂ ಒಬ್ಬರನ್ನೊಬ್ಬರು ಬಿಡುವಂತಿಲ್ಲವೆನ್ನುವುದು ಗೊತ್ತಾಗಬೇಕಾದರೆ ವಿಯೋಗವೇ ಸರಿಯಾದ ಒರೆಗಲ್ಲು. ವಿಯೋಗದಲ್ಲನುಭವಿಸಿದ ಕ್ಲೇಶಗಳು ಪರಸ್ಪರಾನುರಾಗವನ್ನು ಹೆಚ್ಚಿಸಿ ಪ್ರೇಮವು ರಾಶಿಯಾಗುವಂತೆ ಮಾಡುವುವೆಂದು ಕವಿಯು ಹೇಳಿರುವನು. ಇದಲ್ಲದೆ, ಉತ್ತಮವಾದ ಪ್ರೇಮಕ್ಕೆ ಕಳಂಕಪ್ರಾಯವಾದ ಸ್ವಾರ್ಥತೆಯು ಹೋಗಿ ಅದು ಶುದ್ಧವಾಗಬೇಕಾದರೆ ವಿಯೋಗವೇ

ಸರಿಯಾದ ಉಪಾಯ. ಹೀಗೆ ವಿಯೋಗದಲ್ಲಿ ಶುದ್ಧಿಹೊಂದಿ ಪ್ರೇಮವು ಪವಿತ್ರವಾದ ಮೇಲೆಯೇ ನಾಯಕ ನಾಯಿಕೆಯರು ಸಮಾಗಮಕ್ಕೆ ಅರ್ಹರು. ಇಂತಹ ಸಮಾಗಮವೇ ಕಲ್ಯಾಣಪ್ರದ. ಇದಕ್ಕಾಗಿಯೇ ಎಲ್ಲರೂ ಆಶಿಸಬೇಕು ಎಂಬ ಗೂಢಾರ್ಥವು ಮೇಘಸಂದೇಶದಲ್ಲಿ ಮಾತ್ರವಲ್ಲದೆ ಕವಿಯ ಇತರ ಗ್ರಂಥಗಳಲ್ಲಿಯೂ ಗೋಚರವಾಗುತ್ತದೆ. "ತಪ್ತೇನ ತಪ್ತಮಯಸಾ ಘಟನಾಯ ಯೋಗ್ಯಂ" (ವಿಕ್ರ. II-16) ಎಂಬ ಉದಾತ್ತಧ್ಯೇಯವು ಕವಿಗೆ ಅಚ್ಚುಮೆಚ್ಚು. ಇದೆಲ್ಲವೂ ಲೋಕೋತ್ತರವಾದ ವಾತಾವರಣದಲ್ಲೇ ಸಾಧ್ಯ; ಆ ವಾತಾವರಣಕ್ಕೆ ಸರಿಯಾಗಿ ಹೊಂದುವಂತೆ ಉದಾತ್ತರೂ ಮಹಿಮಾನ್ವಿತರೂ ಆದ ನಾಯಕ ನಾಯಿಕೆಯರೇ ಆರಿಸಲ್ಪಟ್ಟಿದ್ದಾರೆ.

ವರ್ಣನಾಪ್ರಧಾನವಾದ ಈ ಪದ್ಯಕಾವ್ಯವನ್ನು ಗದ್ಯಶೈಲಿಯಲ್ಲಿ ಅನುವಾದ ಮಾಡುವುದು ಮಂದತೆಗೆಡೆಗೊಡುವುದು ಸ್ವಾಭಾವಿಕ. ಕಾವ್ಯದಲ್ಲಿ ಕತೆಯು ಅತ್ಯಲ್ಪವಾಗಿರುವುದರಿಂದ ರಚನಾಚಾತುರ್ಯವು ಪ್ರಧಾನವಾಗಿದೆ. ಇದನ್ನು ಸವಿಯಬೇಕಾದರೆ ಸಂಸ್ಕೃತದ ಮೂಲಗ್ರಂಥವನ್ನೋ ಭಾವಗ್ರಾಹಿಯಾದ ಭಾಷಾಂತರವನ್ನೋ ಓದದೆ ವಿಧಿಯಿಲ್ಲ. ಈ ದೃಷ್ಟಿಯಿಂದ, ಮುಂದೆ ಬರಲಿರುವ ಗದ್ಯಾನುವಾದವು ಮೂಲಗ್ರಂಥದ ಪ್ರವಚನಕ್ಕೆ ಪ್ರಚೋದಕವಾಗಲೆಂದು ಮಾತ್ರ ರಚಿತವಾಗಿದೆ.

ಕಾವ್ಯದ ವಸ್ತುವು ಹೇಗೆ ಪ್ರಾರಂಭವಾಗುವುದೆಂಬುದನ್ನು ಮೊದಲೇ ತಿಳಿಸಲಾಗಿದೆ.[1] ಪ್ರಿಯಾವಿರಹಿತನಾದ ಯಕ್ಷ, ವರ್ಷಾಕಾಲದ ಮೇಘ, ಇವರ ಸಂವಾದ ಯಕ್ಷನಿಗೆ ಮೇಘವು 'ಧೂಮಜ್ಯೋತಿಸ್ಸಲಿಲಮರುತಾಂ ಸನ್ನಿಪಾತ'[2] ಮಾತ್ರವಲ್ಲ. ಇದಕ್ಕೆ ಒಂದು ಮುಖ್ಯವಾದ ಕಾರಣವನ್ನು ಹಿಂದೆ ನಿರೂಪಿಸಲಾಗಿದೆ.[3] ಇದಲ್ಲದೆ, ಭರತಖಂಡದ ಪ್ರಕೃತಿವೈಭವವನ್ನರಿತವರಿಗೆ ಮೇಘವೂ ಸಚೇತನವಾಗಿ ಕಾಣುವುದರಲ್ಲಿ ಆಶ್ಚರ್ಯವಿಲ್ಲ.

---

1. ಈ ಅಧ್ಯಾಯದ ಮೊದಲನೇ ಪುಟ.

2. ಮೇ. ಸಂ. ಶ್ಲೋ. 5. "ಹೊಗೆ, ತೇಜಸ್ಸು, ನೀರು ಮತ್ತು ಗಾಳಿಗಳ ಸಮೂಹ" ಮಾತ್ರವಲ್ಲವೆಂದಸು.

3. ಪುಟ 2, "ಕಾಮಾರ್ತಾ ಹಿ ಪ್ರಕೃತಿಕೃಪಣಾಶ್ಚೇತನಾಚೇತನೇಷು." (ಮೇ. ಸಂ. 5) ಎಂಬುದು ಮೂಲಗ್ರಂಥದ ವಾಕ್ಯ.

ಪ್ರಕೃತಿಯ ದಯೆಯನ್ನೇ ನಿರೀಕ್ಷಿಸುವ ಭಾರತೀಯರ ಇಡಿಯ ಜೀವನದಲ್ಲೇ ಮೇಘಕ್ಕೆ ಒಂದು ಮುಖ್ಯಸ್ಥಾನವಿದೆ. ಅಷ್ಟೇಕೆ? ಜೀವನದ ಮೇಲೆ ಪರಿಣಾಮಕಾರಿಯಾದ ಪ್ರಭಾವಬೀರುವ ಪ್ರಕೃತಿಶಕ್ತಿ (Natural Forces) ಗಳೆಲ್ಲವೂ ಭಾರತೀಯ ವೇದಾದಿ ಗ್ರಂಥಗಳಲ್ಲಿ ದೇವತ್ವವನ್ನು ತಾಳಿವೆಯೆಂದೂ ಅಭಿಪ್ರಾಯವಿದೆ. ಎಲ್ಲಕ್ಕಿಂತ ಮಿಗಿಲಾಗಿ, ಮೋಡವು ಕಾಣಿಸಿಕೊಂಡರೆ ಸ್ತ್ರೀಪುರುಷರು ಕಾಮೋದ್ರೇಕವನ್ನನುಭವಿಸುವರು. ಹೀಗೆ ಕಾಮುಕರನ್ನು ಪ್ರೇರಿಸುವ ಮೋಡವು ನಿರ್ಜೀವವೆನ್ನಬಹುದೇ? ಆದುದರಿಂದಲೇ ಯಕ್ಷನು ಅದನ್ನು ಕುಟಜ ಪುಷ್ಪಗಳಿಂದ ಪೂಜಿಸಿ ಅನೇಕ ವಿಧವಾಗಿ ಹೊಗಳುವನು. ಮೊದಲಾಗಿ ದೊಡ್ಡವರಾದ ಪುಷ್ಕರ, ಆವರ್ತಕರ ವಂಶದಲ್ಲಿ ಜನಿಸಿದವನಂತೆ; ಇಂದ್ರನ ಆಸ್ಥಾನದಲ್ಲಿ ಅವನಿಗೆ ದೊಡ್ಡ ಹುದ್ದೆಯಿರುವುದಂತೆ; ಇಂತಹ ವಂಶಕ್ಕೆ ಅನುಗುಣವಾದ ಘನತೆ, ಪರೋಪಕಾರ ಬುದ್ಧಿ ಇವುಗಳ ವಿಷಯದಲ್ಲಂತೂ ಸಂದೇಹಪಡುವಂತೆಯೇ ಇಲ್ಲ. ಇಂತಹವನನ್ನು ಯಾಚಿಸುವುದೂ ಒಂದು ಘನತೆ. 'ನೀಚರನ್ನು ಬೇಡಿ ಇಷ್ಟಾರ್ಥವು ಸಿದ್ಧಿಸುವುದಕ್ಕಿಂತ ಶ್ರೀಮಂತರನ್ನು ಬೇಡಿ ವಿಫಲರಾಗುವುದು ಮೇಲು' ಎಂಬುದೇ ಯಕ್ಷನ ಅಭಿಪ್ರಾಯ.[1] ಇದರಿಂದ ಮೇಘದ ಘನತೆ ಮಾತ್ರವಲ್ಲದೆ ಯಕ್ಷನ ಕುಲೀನತೆಯೆಂತಹುದೆಂಬುದೂ ವ್ಯಕ್ತವಾಗುವುದು. ಅವನು ಅಲ್ಪ ಕಾರಣಗಳಿಗಾಗಿ ಪದೇಪದೇ ಸಹಾಯವನ್ನು ಬೇಡುವವನಲ್ಲ. ತನಗಿಂತ ಕೀಳಾದವರನ್ನೂ ಸಾಮಾನ್ಯರನ್ನೂ ಬೇಡುವ ಸ್ವಭಾವದವನಂತೂ ಅಲ್ಲವೇ ಅಲ್ಲ. ಶ್ರೀಮಂತನಿಗೆ ಶ್ರೀಮಂತನ ಸಹವಾಸವೇ ಬೇಕು. ಅದು ಸಿಕ್ಕಿದುದರಿಂದಲೇ ಮುಂದಿನ ಮಾತು. ಕುಬೇರನ ಶಾಪದಿಂದ ತಾನು ಬೇಯುತ್ತಿರುವ ಉತ್ಕಟ ಪರಿಸ್ಥಿತಿ, ಜೊತೆಗೆ ಪ್ರಿಯೆಯ ವಿರಹ, ವರ್ಷಾಕಾಲ ಪ್ರಾಪ್ತಿ; ಎಲ್ಲವೂ ಸೇರಿ ಉಂಟಾಗಿರುವ ತಾಪವನ್ನು ಹೋಗಲಾಡಿಸಲು ತಾಪಹಾರಿಯಾದ ನೀನೇ ಸಮರ್ಥನೆಂದು ಹೇಳಿ ಮೋಡವನ್ನು ಪ್ರಾರ್ಥಿಸುವನು. ತಾಪಕ್ಕೆ ಪ್ರತೀಕಾರ ಮತ್ತೇನೂ ಅಲ್ಲ; ಪ್ರಿಯೆಗೆ ಸಂದೇಶವನ್ನು ತಲಪಿಸುವುದು. ರಾಮಗಿರಿಯ ಗುಹೆಯಲ್ಲಿ ಬಂಧಿತನಾಗಿದ್ದ ಅವನಿಗೆ, ಸಂದೇಶಹಾರಕರಾಗಲು

1. ಯಾಚ್ಞಾ ಮೋಘಾ ವರಮಧಿಗುಣೇ ನಾಧಮೇ ಲಬ್ಧಕಾಮಾ. (ಮೇ. ಸಂ. 6.)

ಯೋಗ್ಯರಾದವರ ಸಹವಾಸವು ಕೂಡ ಇದುವರೆಗೆ ಲಭಿಸಿರಲಿಲ್ಲ. ಇಷ್ಟು ವಿಲಂಬವಾಗಿ ಆ ಅವಕಾಶವು ಸಿಕ್ಕಿದರೂ ಒಳ್ಳೆಯ ವರ್ಷಾಕಾಲದ ವೇಳೆಗೆ ಸರಿಯಾಗಿ ಸನ್ಮಿತ್ರನ ಮೂಲಕ ಸಂದೇಶವು ತಲಪುವಂತಾದುದು ಅವನಿಗೆ ಬಹಳ ಸಂತೋಷದ ವಿಚಾರ. ಇದಕ್ಕಿಂತ ಹೆಚ್ಚಾದ ತಾಪಶಾಂತಿ ಮತ್ತೇನು ಬೇಕು?

ಮೇಘವು ಸಂದೇಶವನ್ನು ತಲಪಿಸುವುದೋ ಇಲ್ಲವೋ ಅದಿರಲಿ; ಅವನನ್ನು ಪ್ರಾರ್ಥಿಸಿದುದು ತಪ್ಪಲ್ಲವೆಂದ ಮಾತ್ರಕ್ಕೆ ಮೇಘದೂತನ ಸೌಜನ್ಯ, ಸರಳತೆಗಳಲ್ಲಿ ಅಪನಂಬಿಕೆಯನ್ನು ವ್ಯಕ್ತಪಡಿಸಿದಂತಲ್ಲ. ಪರ ಹಿತಕ್ಕಾಗಿಯೇ ಶ್ರಮಿಸುವ ಮೇಘವು ಈ ಪ್ರಣಯಸಂದೇಶವನ್ನು ಕೊಂಡೊಯ್ಯುವುದೆಂದು ಯಕ್ಷನು ದೃಢವಾಗಿ ನಂಬಿರುತ್ತಾನೆ. ಶ್ರೀಮಂತನ ಗುಣದ ವಿಷಯದಲ್ಲಿ ಮತ್ತೊಬ್ಬ ಶ್ರೀಮಂತನು ಅಪನಂಬಿಕೆ ಪಡುತ್ತಾನೆಯೇ? ಆದರೂ, ಸಂದೇಶವನ್ನು ಕೊಂಡೊಯ್ಯುವುದರಿಂದ ಮಿತ್ರನಾದ ತನ್ನ ಪ್ರಾರ್ಥನೆಯನ್ನು ಈಡೇರಿಸುವುದಲ್ಲದೆ ಮತ್ತೊಂದು ಪ್ರಯೋಜನವೂ ಇದೆ ಯೆಂದು ಅವನು ತೋರ್ಪಡಿಸಲಿಚ್ಛಿಸುತ್ತಾನೆ. ಎಂದರೆ ಈ ಪ್ರಯೋಜನವು ಮಿತ್ರಕಾರ್ಯವನ್ನು ನೆರವೇರಿಸುವುದಕ್ಕೆ ಪ್ರತಿಫಲವಲ್ಲ. ಸ್ನೇಹಿತನ ಬೇಡಿಕೆ ಯನ್ನು ಸಲ್ಲಿಸುವುದೇ ಯಕ್ಷನ ದೃಷ್ಟಿಯಿಂದಲೂ ಮುಖ್ಯ.[1] ಮಾರ್ಗದಲ್ಲಿ ಸಿಕ್ಕುವ ನಗರ, ನದಿ, ಪರ್ವತಾದಿಗಳನ್ನು ನೋಡಿ ಸಂತೋಷಪಡುವುದು ಆನುಷಂಗಿಕವಾದ ಪ್ರಯೋಜನ ಮಾತ್ರ.

ಬಹಳ ದೂರದಲ್ಲಿರುವ ಅಲಕಾಪುರಿಗೆ ಹೋಗಬೇಕಾದರೂ ಅಧಿಕವಾದ ಶ್ರಮವೇನೂ ಆಗುವುದಿಲ್ಲವೆಂದು ಯಕ್ಷನು ತನ್ನ ದೂತನಿಗೆ ತಿಳಿಸು ತ್ತಾನೆ. ಹೋಗುವ ಕಡೆಗೇ ಬೀಸುವ ತಂಗಾಳಿ, ಸ್ನೇಹಿತನಾದ ಚಾತಕನ ಇಂಪಾದ ಕೂಗು; ಕಣ್ಣೆದುರಿಗೆ ಬರುವ ಬಲಾಕೆಗಳ ಸಾಲು ಇವೆಲ್ಲವೂ ಶುಭಶಕುನಗಳಾಗಿ ಮೇಘದ ಪ್ರಯಾಣಸೌಖ್ಯವನ್ನು ಸೂಚಿಸುವುವಂತೆ. ಇದಲ್ಲದೆ ಮೇಘದ ಗರ್ಜನೆಯನ್ನು ಕೇಳಿದೊಡನೆ ಮಾನಸ ಸರೋವರಕ್ಕೆ ಹೊರಡಲನುವಾದ ರಾಜಹಂಸಗಳು ತಾವರೆದಂಟಿನ ಬುತ್ತಿಗಳನ್ನು

---

1. ಮಂದಾಯಂತೇ ನ ಖಲು ಸುಹೃದಾಮಭ್ಯುಪೇತಾರ್ಥಕೃತ್ಯಾಃ ॥ (ಮೇ. ಸಂ. 38.)

ಕಟ್ಟಿಕೊಂಡು ಕೈಲಾಸ ಪರ್ವತದವರೆಗೂ ಜೊತೆಯಲ್ಲೇ ಬರುವುವಂತೆ ಇದರಿಂದ ಒಬ್ಬಂಟಿಗನಾಗಿ ಹೋಗಬೇಕಾದುದೂ ಇಲ್ಲವೆಂಬುದು ವ್ಯಕ್ತ ವಾಗುವುದು. ಅಂತು ದಾರಿಯುದ್ದಕ್ಕೂ ಶುಭಶಕುನಗಳು; ಸತ್ಸಹ ವಾಸ; ಹೋದ ಕಡೆಗಳಲ್ಲೆಲ್ಲ ಗೌರವ; ಮನೋಹರವಾದ ನೋಟಗಳು; ಇಂದ್ರಿಯಸುಖಾನುಭವ; ಪ್ರಣಯಸಂದೇಶವನ್ನೊಯ್ಯುವ ಸುಯೋಗ; ಇವೆಲ್ಲ ದೊರಕಿದಲ್ಲಿ ಯಾರುತಾನೆ ಸಂದೇಶವನ್ನು ಒಯ್ಯಲು ಒಪ್ಪು ವುದಿಲ್ಲ?

ಆದರೂ ಈ ಕೆಲಸವನ್ನು ಮೇಘಕ್ಕೆ ವಹಿಸಿದ ಯಕ್ಷನು ಬಹಳ ಕರುಣೆ ಯುಳ್ಳವನು. ಸುಮ್ಮನೆ ಮಾರ್ಗವನ್ನು ಮಾತ್ರ ತಿಳಿಸಿ ಹೋಗಬೇಕೆಂದು ಹೇಳುವವನಲ್ಲ. ಅವನ ಮಾರ್ಗವರ್ಣನೆಯು ಮುಖ್ಯವಾಗಿ ಮೇಘದ ಹಿತದೃಷ್ಟಿಯಿಂದಲೇ ಹೇಳಿದಹಾಗಿದೆ. ಎಲ್ಲಿ ಹೋದರೆ ಯಾವ ರೀತಿಯ ಸ್ವಾಗತ ಸಿಕ್ಕುತ್ತದೆ? ಮೇಘವನ್ನು ಕಂಡು ಕಾತರಗೊಳ್ಳುವವರು ಯಾರು? ಸಂತೋಷಗೊಂಡು ಸ್ವಾಗತಿಸುವರಾರು? ವಿಶ್ವಾಸ ಕೃತಜ್ಞತೆಗಳನ್ನು ಸೂಚಿಸುವರಾರು? ಸ್ನೇಹಿತರಂತೆ ವರ್ತಿಸುವರೆಷ್ಟುಮಂದಿ? ಪ್ರಿಯೆಯ ರಂತೆ ಆಚರಿಸಿ ಸಂತೋಷಗೊಳಿಸುವವರಾರು? ಎಲ್ಲೆಲ್ಲಿ ಹೋದಾಗ ಏನೇ ನನ್ನು ಗಮನಿಸಬೇಕು ಹೇಗೆಹೇಗೆ ಸಂತೋಷ ಹೊಂದಬೇಕು? ಆರಾರ ಸಂಸರ್ಗಸುಖ ದೊರಕುತ್ತದೆ; ಮತ್ತು ಆಯಾ ಕಡೆಗಳಲ್ಲಿ ಹೇಗೆ ವರ್ತಿಸಬೇಕು; ಎಲ್ಲಿ ಮಿಂಚು ಗುಡುಗುಗಳನ್ನು ಬಚ್ಚಿಡಬೇಕು? ಎಲ್ಲಿ ತೋರ್ಪಡಿಸಬೇಕು? ಕಡೆಯದಾಗಿ ಮಳೆಗರೆದು ಎಲ್ಲಿ ಲಘುವಾಗಬೇಕು; ಪುನಃ ಎಲ್ಲಿ ನೀರು ತುಂಬಿಕೊಂಡು ಮೆಲ್ಲಗೆ ಸಾಗಬೇಕು? ಇವೇ ಮೊದಲಾದ ವಿಷಯಗಳೇ ಯಕ್ಷನಿಂದ ವಿಶದವಾಗಿ ನಿರೂಪಿಸಲ್ಪಟ್ಟಿರುವುವು. ತನ್ನ ಕೆಲಸಕ್ಕಾಗಿ ಹೋಗಬೇಕಾದರೂ ಮೇಘವು ಪ್ರಯಾಣದ ಪೂರ್ಣ ಫಲವನ್ನು ಹೊಂದಬೇಕೆಂಬುದೇ ಯಕ್ಷನ ಆಸೆ. ಆದುದರಿಂದ, ಹತ್ತಿರದ ದಾರಿಯನ್ನು ಬಿಟ್ಟರೂ ಚಿಂತೆಯಿಲ್ಲ. ನೋಡಬೇಕಾದ ಸ್ಥಳಗಳನ್ನು ನೋಡದೆ ಮಾತ್ರ ಹೋಗಕೂಡದೆಂದು ಅವನ್ನು ಮೇಘಕ್ಕೆ ಉಪದೇಶ ಕೊಡುವುದು ವ್ಯಕ್ತವಾಗುತ್ತದೆ. "ದಾರಿಯಲ್ಲಿ ಸಿಕ್ಕದಿದ್ದರೂ ಉಜ್ಜಯಿ ನಿಯ ಉಪ್ಪರಿಗೆಗಳನ್ನು ಮಾತ್ರ ಪ್ರಣಯ ಪೂರ್ವಕವಾಗಿ ಆಶ್ರಯಿಸದಿರ

ಬೇಡ"[1] ವೆಂದು ಹೇಳಿಕೊಡುವುದು ಅವನ ಹಿತಾಕಾಂಕ್ಷಿತ್ವವನ್ನು ಸ್ಪಷ್ಟವಾಗಿ ತೋರ್ಪಡಿಸುವುದು. ಈ ಭಾವವು ನಿರೂಪಿತವಾಗಿರುವ ಶ್ಲೋಕವನ್ನೂ ಗಮನಿಸಬಹುದು.

ವಕ್ರಃ ಪಂಥಾ ಯದಪಿ ಭವತಃ ಪ್ರಸ್ಥಿತಸ್ಯೋತ್ತರಾಶಾಂ
ಸೌಧೋತ್ಸಂಗಪ್ರಣಯವಿಮುಖೋ ಮಾ ಸ್ಮ ಭೂರುಜ್ಜಯಿನ್ಯಾಃ ।
ವಿದ್ಯುದ್ದಾಮಸ್ಫುರಿತಚಕಿತೈಸ್ತತ್ರ ಪೌರಾಂಗನಾನಾಂ
ಲೋಲಾಪಾಂಗೈರ್ಯದಿ ನ ರಮಸೆ ಲೋಚನೈರ್ವಂಚಿತೋಽಸಿ ॥

(ಮೇ. ಸಂ. 27)

"ಮಿಂಚಿನ ಹೊಳಪಿಗೆ ಬೆದರಿರುವ ಅಲ್ಲಿನ ಪೌರಾಂಗನೆಯರ ಕಾಮಯುಕ್ತವಾದ ಕಡೆಗಣ್ಣಿನ ನೋಟವನ್ನನುಭವಿಸದಿದ್ದರೆ "ಕಣ್ಣುಗಳು ಇದ್ದೂ ನಿಷ್ಫಲ"[2] ವಂತೆ. ಹೀಗೆ ಮೇಘದ ಹಿತದೃಷ್ಟಿಯಿಂದಲೂ ಅತ್ಯಂತ ಉಪಯುಕ್ತವಾದ ಸಲಹೆಗಳನ್ನು ಕೊಡುವುದೇ ಯಕ್ಷನ ಉದ್ದೇಶ. ಆದುದರಿಂದ ಇವನ ಮಾರ್ಗವರ್ಣನೆಯು ಆದರ್ಶಮಾರ್ಗವರ್ಣನೆಯಾಗಿ ಪರಿಣಮಿಸಿದೆ.

ಮೊದಲಾಗಿ, ಮೇಘವು ಕಾಣಿಸಿಕೊಂಡ ಕೂಡಲೆ ಅದು ತಮ್ಮ ಪ್ರಿಯರನ್ನು ಬರಮಾಡುವುದೆಂದು ನಂಬಿ, ದಾರಿಗರ ಹೆಂಡಿರು ಅದನ್ನು ಕಾತರೆಯರಾಗಿ ನೋಡುವರಂತೆ. ಅನಂತರ, ವೇಗವಾಗಿ ಉತ್ತರದಿಕ್ಕಿಗೆ ಹೊರಟಾಗ ಉಂಟಾದ ಆ ಬಿರುಗಾಳಿಯು ಚಿತ್ರಕೂಟಪರ್ವತದ ಶಿಖರವನ್ನೇ ತೂರುವುದೋ ಏನೋ ಎಂದು ಹೆದರಿ, ಮುಗ್ಧೆಯರಾದ ಸಿದ್ಧಾಂಗನೆಯರು (ಮೇಘವನ್ನು) ಭಯಗೊಂಡು ನೋಡುವರಂತೆ. ಹೀಗೆ ಪ್ರಾರಂಭವಾಗುವ ಮಾರ್ಗವರ್ಣನೆಯ ಮಧ್ಯೆ ಅಲ್ಲಲ್ಲಿ ಮೇಘದ ವರ್ಣನೆಯೂ ಬರುತ್ತದೆ. ಸುಂದರವಾದ ಸನ್ನಿವೇಶಗಳನ್ನು ವರ್ಣಿಸುವಾಗ ಯಕ್ಷನು ಮೇಘದೂತನ ಸೌಂದರ್ಯವನ್ನೂ ಅವನು ಆಯಾ ಸನ್ನಿವೇಶಗಳಿಗೆ ನೀಡುವ ಅತಿಶಯವಾದ

---

1-2. ಆವರಣ ಚಿಹ್ನೆಗಳಲ್ಲಿರುವ ಭಾಗವನ್ನು ಶ್ಲೋಕದ ಭಾವಾನುವಾದವೆಂದು ಮಾತ್ರ ಸ್ವೀಕರಿಸಬೇಕು. ಸಂದರ್ಭಕ್ಕೆ ಅನುಕೂಲಿಸುವಂತೆ ಭಾವಾನುವಾದವು ಶ್ಲೋಕಕ್ಕೆ ಮೊದಲಲ್ಲಿ ಸ್ವಲ್ಪ, ಅನಂತರ ಸ್ವಲ್ಪ, ಹೀಗೆ ವಿಭಕ್ತವಾಗಿಯೂ ಬರಬಹುದು. ಉದ್ಧೃತವಾದ ಶ್ಲೋಕವನ್ನು ಪದಶಃ ಭಾಷಾಂತರ ಮಾಡಲು ಪ್ರಯತ್ನಿಸಿಲ್ಲ. ಮುಂದೆಯೂ ಇದೇ ಪದ್ಧತಿಯನ್ನು ಅನುಸರಿಸಲಾಗಿದೆ.

ಕಳೆಯನ್ನೂ ಗಮನಿಸದಿರನು. "ನೀನು ಹೀಗೆ ಕಾಣುವೆ; ನಿನ್ನ ಸೌಂದರ್ಯವು ಎಲ್ಲರನ್ನೂ ಈ ರೀತಿ ಭ್ರಾಂತಿಗೊಳಿಸುವುದು" ಎಂದು ಮೊದಲಾಗಿ ವರ್ಣಿಸಿ ಯಕ್ಷನು ಮೇಘವನ್ನು ಹೊಗಳುವುದಕ್ಕೆ ತೊಡಗುವುದೂ ಗೋಚರವಾಗುತ್ತದೆ. ಮಾರ್ಗವನ್ನು ವರ್ಣಿಸುವುದಕ್ಕೆ ಪ್ರಾರಂಭಿಸಿದ ಕೂಡಲೆ ಈ ವಿಧವಾದ ರಮ್ಯವಾದ ಒಂದು ವರ್ಣನೆಯು ಪಾಠಕರನ್ನಾಕರ್ಷಿಸುತ್ತದೆ.—

ರತ್ನಚ್ಛಾಯಾವ್ಯತಿಕರ ಇವ ಪ್ರೇಕ್ಷ್ಯಮೇತತ್ಪುರಸ್ತಾ
ದ್ವಲ್ಮೀಕಾಗ್ರಾತ್ಪ್ರಭವತಿ ಧನುಃಖಂಡಮಾಖಂಡಲಸ್ಯ ।
ಯೇನ ಶ್ಯಾಮಂ ವಪುರತಿತರಾಂ ಕಾಂತಿಮಾಪತ್ಸ್ಯತೇ ತೇ
ಬರ್ಹೇಣೇವ ಸ್ಫುರಿತರುಚಿನಾ ಗೋಪವೇಷಸ್ಯ ವಿಷ್ಣೋಃ ॥(I-15)

"(ಪದ್ಮರಾಗವೇ ಮೊದಲಾದ) ರತ್ನಗಳ ಕಾಂತಿಯು ಬೆರೆತಂತೆ ತೋರುವ ಕಾಮನ ಬಿಲ್ಲಿನೊಡನೆ ಕೂಡಿದ ಮೇಘದೂತನ ಕರಿಯ ದೇಹವು ನವಿಲುಗರಿಯಿಂದಲಂಕೃತನಾದ ಗೋಪವೇಷದ ವಿಷ್ಣುವನ್ನು ಹೋಲುವುದಂತೆ" ಇಂತಹ ಮನೋಹರವಾದ ರೂಪವನ್ನು ಹೊಂದಿ, ಪಶ್ಚಿಮ ದಿಕ್ಕಿಗೆ ತಿರುಗಿ, ಮಾಲವೆಂಬ ಪ್ರದೇಶಕ್ಕೆ ಹೋದರೆ ಅಲ್ಲಿನ ಗ್ರಾಮವನಿತೆಯರು ಕೃಷಿಫಲವನ್ನು ನೀಡುವ ಮೇಘವನ್ನು ವಿಶ್ವಾಸಕೃತಜ್ಞತೆಗಳಿಂದ ನೋಡುವರಂತೆ. ಎಷ್ಟಾದರೂ ಗ್ರಾಮವನಿತೆಯರವರು; ನಾಗರಸ್ತ್ರೀಯರಂತೆ ವಶಪಡಿಸಿಕೊಳ್ಳುವ ಭ್ರೂವಿಲಾಸಗಳನ್ನು ಅರಿಯರು. ಇನ್ನು ಸ್ವಲ್ಪ ಉತ್ತರಕ್ಕೆ ತಿರುಗಿ ಮಳೆಯನ್ನು ಸುರಿಸುತ್ತಾ ವೇಗವಾಗಿ ಹೊರಟರೆ ಆಮ್ರಕೂಟವು ಸಿಕ್ಕುವುದು. "ಅದೇ ನಿನ್ನ ಮೊದಲನೆಯ ಮಜಲು. ಮಳೆಯಿಂದ ಅಲ್ಲಿನ ಕಾಡುಕಿಚ್ಚುಗಳನ್ನಾರಿಸಿ ಶ್ರಮಗೊಂಡ ನಿನ್ನನ್ನು ಆಮ್ರಕೂಟವು ತನ್ನ ನೆತ್ತಿಗೇರಿಸಿ ಗೌರವಿಸುವುದು; ಮೊದಲೇ ಉಪಕಾರಮಾಡಿ ಬರುವ ಮಿತ್ರರನ್ನು ಕ್ಷುದ್ರಜನರೂ ಅನಾದರದಿಂದ ಕಾಣುವುದಿಲ್ಲ; ಉದಾತ್ತವಾದ ಆಮ್ರಕೂಟವು ನಿನ್ನನ್ನು ಹೇಗೆ ನಿರಾಕರಿಸೀತು?"[1] ಎಂದು ಹೇಳಿ ಯಕ್ಷನು ತನ್ನ ದೂತನ ಭವಿಷ್ಯವನ್ನು ಆಶಾಪೂರ್ಣ ಹೃದಯದಿಂದ ವಿವರಿಸುವನು. ವನ

1. I-17 ಶ್ಲೋಕದ ಉತ್ತರಾರ್ಧವು ಮತ್ತೂ ರಮ್ಯವಾಗಿದೆ.
"ನ ಕ್ಷುದ್ರೋಽಪಿ ಪ್ರಥಮ ಸುಕೃತಾಪೇಕ್ಷಯಾ ಸಂಶ್ರಯಾಯ
ಪ್ರಾಪ್ತೇ ಮಿತ್ರೇ ಭವತಿ ವಿಮುಖಃ ಕಿಂ ಪುನರ್ಯಸ್ತಥೋಚ್ಚೈಃ'

ಚರಿಯರಿಂದ ಕೂಡಿದ ಆಮ್ರಕೂಟದ ಲತಾಗೃಹಗಳಲ್ಲಿ ಕೊಂಚಕಾಲ ವಿಶ್ರಮಿಸಿಕೊಂಡು ಮಳೆಯನ್ನು ಸುರಿಸಬೇಕಂತೆ. ಅನಂತರ ಭಾರವನ್ನು ಕಡಿಮೆ ಮಾಡಿಕೊಂಡು ವೇಗದಿಂದ ಸ್ವಲ್ಪ ದೂರ ಹೋಗುವುದರಲ್ಲೇ ವಿಂಧ್ಯದ ತಪ್ಪಲಲ್ಲಿ ಸೀಳುಸೀಳಾಗಿ ಹರಿಯುವ ನರ್ಮದಾ ನದಿಯು ಸಿಕ್ಕುವುದಂತೆ. ನರ್ಮದೆಯ ಸೀಳುಗಳು ವಿಂಧ್ಯವೆಂಬ ಆನೆಯ ಮೇಲೆ ಎಳೆದ ವಿಭೂತಿಯ ಪಟ್ಟೆಗಳಂತೆ ಕಾಣುವುವಂತೆ. ನೇರಿಳೆಯ ತೋಪುಗಳಿಂದ ಅದರ ಪ್ರವಾಹದ ವೇಗವು ಕುಗ್ಗಿರುವುದರಿಂದ ಇಲ್ಲಿ ನೀರನ್ನು ಕುಡಿಯುವುದಕ್ಕೆ ಅನುಕೂಲವಾಗಿದೆ. ಮತ್ತು ಮಳೆ ಸುರಿಸಿ ಬರಿದಾಗಿರುವ ಮೇಘವೂ ಇನ್ನು ಹೆಚ್ಚು ಕಾಲ ಲಘುವಾಗಿರಲು ಸಾಧ್ಯವಿಲ್ಲ; ಹಾಗಿದ್ದರೆ ಗಾಳಿಯಿಂದ ತೂರಿ ಹೋಗಬೇಕಾಗಬಹುದು. ಆದುದರಿಂದ, ಕಾಡಾನೆಗಳ ಮದೋದಕದಿಂದ ಸುವಾಸಿತವಾಗಿರುವ ನರ್ಮದೆಯ ನೀರನ್ನು ಯಥೇಚ್ಛವಾಗಿ ಸೇವಿಸಿ ಸಾರವತ್ತಾದ ಮೇಲೆ ಗಾಳಿಯು ಚಲಿಸದಂತೆ ಗೌರವವನ್ನು ಹೊಂದಿ ಮುಂದೆ ಹೊರಡಬೇಕು. ಹೀಗೆ ಹೊರಟಲ್ಲಿ, ಮಳೆ ಬಿದ್ದಮೇಲೆ ಭೂಮಿಯಿಂದ ಹೊರಡುವ ಸುಗಂಧವನ್ನು ಸೇವಿಸುವ ಸಾರಂಗಗಳು ಮೇಘಕ್ಕೆ ದಾರಿಯನ್ನು ಸೂಚಿಸುವುವು. ಈ ಕಾಲದಲ್ಲಿ ಮಳೆಯ ಹನಿಗಳನ್ನು ಆಕಾಶದಲ್ಲೇ ಹೀರುವ ಚಾತಕಗಳನ್ನು ನೋಡುತ್ತಲೂ ಸಾಲು ಸಾಲಾಗಿ ಹಾರುವ ಬಲಾಕೆಗಳನ್ನು ಎಣಿಸುತ್ತಲೂ ಸಿದ್ಧರು ವಿನೋದ ಪಡುವರು. ಆಗ ಅಕಸ್ಮಾತ್ತಾಗಿ ಮೇಘದೂತನು ಗರ್ಜಿಸಿದ ಕೂಡಲೆ ಅವರು ತಮ್ಮ ಪ್ರಿಯೆಯರ ಆಲಿಂಗನಕ್ಕೆ ಆತುರಪಡುತ್ತಾ ಆ ಅವಕಾಶವನ್ನೊದಗಿಸಿದ ಅವನನ್ನು ಗೌರವಿಸುವರು. ಇಲ್ಲಿಯೂ ಪುನಃ ಮೇಘದೂತನಿಗೆ ಗೌರವ ಕೃತಜ್ಞತೆಗಳ ಸೂಚನೆಯು ತಪ್ಪುವಂತೆಯೇ ಇಲ್ಲ.

ಹೀಗೆ ಮಿತ್ರ ಕಾರ್ಯಕ್ಕಾಗಿ ಎಷ್ಟು ಬೇಗ ಸಂಚರಿಸಿದರೂ ಮೇಘದೂತನು ದಾರಿಯುದ್ದಕ್ಕೂ ಸಿಕ್ಕುವ ರಮ್ಯವಾದ ಗಿರಿಶಿಖರಗಳಲ್ಲಿ ನಿಲ್ಲಲೇಬೇಕಾಗಿ ಕಾಲಹರಣವಾಗುವುದೆಂದು ರಸಿಕನಾದ ಯಕ್ಷನು ಮನಗಂಡಿದ್ದನು. ಆದುದರಿಂದ, ವಿಲಂಬಕ್ಕೆ ಕಾರಣವಾದ ನವಿಲುಗಳ ಸ್ವಾಗತವನ್ನು ಲಕ್ಷಿಸದೆ ಈ ವಿನೋದಗಳನ್ನೆಲ್ಲ ಬಿಟ್ಟು ಮುಂದೆ ಸಾಗಬೇಕೆಂದು ಎಚ್ಚರಿಕೆಯನ್ನೂ ಕೊಡುವನು.

ಸ್ವಲ್ಪದೂರ ಹೋದರೆ ತುಹುವಿಕಾಸ ಹೊಂದಿದ ಕೇದಗೆಗಳಿಂದ ಬೆಳ್ಳಗಿರುವ ದಶಾರ್ಣದ ಉಪವನವು ಸಿಕ್ಕುವುದು. ಅದರ ವನಾಂತ ಪ್ರದೇಶಗಳು ಮಾಗಿದ ನೇರಿಳೆ ಹಣ್ಣುಗಳಿಂದ ಕಪ್ಪಗಿರುವುವು. ಈ ಪ್ರದೇಶದಲ್ಲಿ ಜೊತೆಗಾರರಾದ ರಾಜಹಂಸಗಳೂ ತಂಗುವುವಂತೆ. ಇಲ್ಲಿನ ರಾಜಧಾನಿಯಾದ ವಿದಿಶೆಗೆ ಹೋದರೆ ಮೇಘದೂತನಿಗೆ ಪೂರ್ಣಕಾಮೋಪಭೋಗವೇ ಆಗುವುದಂತೆ. ಇದನ್ನೂ ಯಕ್ಷನು ಚೆನ್ನಾಗಿ ಬಲ್ಲನು ಉಬ್ಬರ ವಿಳಿತಗಳೆಂಬ ಭ್ರೂಭಂಗಗಳಿಂದ ಕೂಡಿದ ವೇತ್ರವತಿ (ನದಿ) ಯು ಮೇಘದೂತನನ್ನು ಚುಂಬನಕ್ಕಾಗಿ ಆಹ್ವಾನಿಸುವಳು. ಅವಳ ಇಷ್ಟಾರ್ಥವನ್ನು ಸಲ್ಲಿಸಿ ಹತ್ತಿರದಲ್ಲಿರುವ ನೀಚೈಸ್ ಎಂಬ ಬೆಟ್ಟದಲ್ಲಿ ತಂಗಬೇಕಂತೆ ಆಗ ಸ್ನೇಹಿತನಾದ ನೀಚೈಸ್ ಪರ್ವತವು ಅನುಭವಿಸುವ ರೋಮಾಂಚವು ದಟ್ಟವಾಗಿ ಹೂಬಿಟ್ಟಿರುವ ಕದಂಬಗಳಿಂದ ವ್ಯಕ್ತವಾಗುವುದಂತೆ. ಇಲ್ಲಿನ ಗುಹೆಗಳಲ್ಲಿ ಯುವಕರು ವಾರಾಂಗನೆಯರೊಡನೆ ವಿಹರಿಸುವುದನ್ನು ನೋಡುತ್ತ, ಸ್ವಲ್ಪ ವಿಶ್ರಮಿಸಿಗೊಂಡು, ಕಾಡಿನಲ್ಲಿ ಹರಿಯುವ ನದೀತೀರದ ಮಾಧವೀತೋಟಗಳ ಮೇಲೆ ತುಂತುರು ಮಳೆಗರೆಯುತ್ತ ಮುಂದೆ ಹೋಗಬೇಕು. ಅನಂತರ ಹೂ ಕುಯ್ದು ದಣಿದು, ಬೆವರಸ್ನೊರಸಿಕೊಳ್ಳುತ್ತಿರುವ ಹೂವಾಡಿಗಿತ್ತಿಯರಿಗೆ ನೆರಳನ್ನು ಕೊಟ್ಟು ಒಂದು ಕ್ಷಣ ಅವರ ಪರಿಚಯವನ್ನು ಮಾಡಿಕೊಂಡರೆ ಆಯಾಸವು ತಗ್ಗುವುದಂತೆ.

ಅನಂತರ ಸಿಕ್ಕುವುದೇ ಪ್ರಸಿದ್ಧವಾದ ಉಜ್ಜಯಿನೀ ನಗರ. ಇದು ಬಹಳ ರಮ್ಯವಾಗಿ ವರ್ಣಿತವಾಗಿದೆ:—

ಪ್ರಾಪ್ಯಾವಂತೀನುದಯನಕಥಾಕೋವಿದಗ್ರಾಮವೃದ್ಧಾ
ನ್ಪೂರ್ವೋದ್ದಿಷ್ಟಾಮನುಸರ ಪುರೀಂ ಶ್ರೀವಿಶಾಲಾಂ ವಿಶಾಲಾಂ |
ಸ್ವಲ್ಪೀಭೂತೆ ಸುಚರಿತಫಲೆ ಸ್ವರ್ಗಿಣಾಂ ಗಾಂ ಗತಾನಾಂ
ಶೇಷೈಃ ಪುಣ್ಯೈರ್ಹೃತಮಿವ ದಿವಃ ಕಾಂತಿಮತ್ಖಂಡಮೇಕಮ್ ‖ (I.30)

“ಇದೊಂದು ಸ್ವರ್ಗದ ಖಂಡ ಅಥವಾ ಚೂರಂತೆ ಕಾಂತಿಯುಕ್ತವಾಗಿದೆ, ವಿಶಾಲವಾಗಿದೆ, ಮತ್ತು ಸಂಪತ್ಸಮೃದ್ಧವಾಗಿದೆ, ಹೆಚ್ಚಾದ ಪುಣ್ಯವನ್ನು ಗಳಿಸಿ ಸ್ವರ್ಗಕ್ಕೇರಿದ ಕರ್ಮದೇವತೆಗಳು ಉಳಿದಿರುವ ತಮ್ಮ ಸುಕೃತದ ಫಲವನ್ನನುಭವಿಸುವುದಕ್ಕಾಗಿ ಈ ನಗರವು ನಿರ್ಮಿತವಾಗಿದೆಯಂತೆ. ಮತ್ತು

ಉದಯನ ಕಥಾನಿಪುಣರಾದ ಗ್ರಾಮವೃದ್ಧರು ಈ ಪಟ್ಟಣವನ್ನೇ ಅಲಂಕರಿಸಿರುವರು." ಈ ಪಟ್ಟಣದ ಸೌಂದರ್ಯವನ್ನೂ ಸನ್ನಿವೇಶವನ್ನೂ ಎಷ್ಟು ವರ್ಣಿಸಿದರೂ ಸಾಲದು. ಬೆಳಗಿನ ಜಾವದಲ್ಲಿ ಬೀಸುವ ಇಲ್ಲಿನ ಶಿಪ್ರಾನದಿಯ ವಾತವು ಕಮಲಗಳ ಸೌರಭದಿಂದ ಕೂಡಿ ಅವ್ಯಕ್ತಮಧುರವಾದ ಸಾರಸಗಳ ಕೂಗನ್ನು ಹೆಚ್ಚಿಸುತ್ತ ಉಪಚಾರೋಕ್ತಿಗಳನ್ನು ಹೇಳುವ ಪ್ರಿಯತಮನಂತೆ ಸ್ತ್ರೀಯರ ಸುರತಶ್ರಮವನ್ನು ಪರಿಹರಿಸುವುದಂತೆ. "ಇಗೋ ಇಲ್ಲಿ ವತ್ಸರಾಜನು ಪ್ರದ್ಯೋತನ ಪುತ್ರಿಯನ್ನಪಹರಿಸಿದನು; ಇಲ್ಲಿಯೇ ಆ ದೊರೆಯ ಹೊಂಬಣ್ಣದ ತಾಳೆ ಮೆಳೆಯಿದ್ದುದು; ನಲಗಿರಿ (ಆನೆ) ಯು ಕಂಬವನ್ನು ಕಿತ್ತುಕೊಂಡು ಓಡಿಹೋದದ್ದೂ ಇಲ್ಲೀ" ಎಂದು ಮುಂತಾಗಿ ಹೇಳಿ ಇಲ್ಲಿನ ವಿದಗ್ಧರು ತಮ್ಮೂರಿಗೆ ಬಂದ ಬಂಧುಗಳನ್ನು ವಿನೋದಪಡಿಸುವರಂತೆ. ಮಹಡಿಯ ಕಿಟಕಿಗಳಿಂದ ಹೊರಡುವ ಸ್ತ್ರೀಯರ ಕೇಶಸಂಸ್ಕಾರಧೂಪವು ಮೇಘದೂತನ ದೇಹವನ್ನುಬ್ಬಿಸುವುದು. ಸಾಕಿದ ನವಿಲುಗಳು ಕುಣಿದು ಅವನನ್ನು ಪ್ರೀತಿಪೂರ್ವಕವಾಗಿ ಉಪಚರಿಸುವುವು. ಹೂಗಳಿಂದ ಸುವಾಸಿತವಾದ ಇಲ್ಲಿನ ಉಪ್ಪರಿಗೆಗಳಲ್ಲಿ ಅಲಕ್ತಕಾದಿಗಳಿಂದಲಂಕೃತವಾದ ರಮಣಿಯರ ಹೆಜ್ಜೆಯನ್ನು ನೋಡುತ್ತಿದ್ದರೆ ಅವನ ಮಾರ್ಗಾಯಾಸವೆಲ್ಲ ಮಾಯವಾಗುವಂತೆ" ಉತ್ಪಲಪರಾಗದಿಂದಲೂ ಜಲಕ್ರೀಡಾಸಕ್ತರಾದ ಯುವತಿಯರ ಸ್ನಾನಚೂರ್ಣಗಳಿಂದಲೂ ಸುರಭಿತವಾದ ಗಂಧವತೀ ನದಿಯ ವಾತವು ಇಲ್ಲಿನ ಉದ್ಯಾನ ವೃಕ್ಷಗಳ ಮೇಲೆ ಬೀಸುವುದು." ಎಂದ ಮೇಲೆ, ಇಲ್ಲಿನ ವೈಭವವೇನು, ಬೆಡಗೇನು ಎಂದು ಹೆಚ್ಚು ವಿವರಿಸಬೇಕಾಗಿಲ್ಲ. ಒಟ್ಟಿನಲ್ಲಿ, ಅಸದೃಶವಾದ ಸುಖಮಯ ಸನ್ನಿವೇಶವು ಉಜ್ಜಯಿನಿಯದೆನ್ನಬಹುದು. ಆದರೆ ಇದೆಲ್ಲಕ್ಕಿಂತ ಮುಖ್ಯವಾದುದು ಅಲ್ಲಿನ "ಚಂಡೀಶ್ವರ ದೇವಾಲಯ." "ಅಲ್ಲಿಗೆ ನೀನು ಅವಶ್ಯವಾಗಿ ಹೋಗಬೇಕೆಂದು" ಯಕ್ಷನು ಮೇಘದೂತನನ್ನು ಒತ್ತಾಯಪಡಿಸುವನು.—

ಭರ್ತುಃ ಕಂಠಚ್ಛವಿರಿತಿ ಗಣೈಸ್ಸಾದರಂ ವೀಕ್ಷ್ಯಮಾಣಃ
ಪುಣ್ಯಂ ಯಾಯಾಸ್ತ್ರಿಭುವನಗುರೋರ್ಧಾಮ ಚಂಡೀಶ್ವರಸ್ಯ |
ಧೂತೋದ್ಯಾನಂ ಕುವಲಯರಜೋಗಂಧಿಭಿರ್ಗಂಧವತ್ಯಾ
ಸ್ತೋಯಕ್ರೀಡಾನಿರತಯುವತಿಸ್ನಾನತಿಕ್ತೈರ್ಮರುದ್ಭಿಃ || (I-37)

"ಸ್ವಾಮಿಯಾದ ನೀಲಕಂಠನ ಕುತ್ತಿಗೆಯ ಬಣ್ಣವನ್ನು ಈ ಮೇಘ ದೂತನು ಹೊಂದಿರುವನೆಂದು ಪ್ರಮಥಗಣಗಳು ಆದರದಿಂದ ಇವನನ್ನು ನೋಡುವರಂತೆ." ಇಂತಹ ಪವಿತ್ರವಾದ ಸ್ಥಳದಲ್ಲಿ ಸಾಯಂಕಾಲದವರೆಗೂ ತಂಗಿ ಶೂಲಿಯ ಪ್ರದೋಷಪೂಜೆಯ ಕಾಲದಲ್ಲಿ ಭೇರಿಹೊಡೆದಂತೆ ಗರ್ಜಿಸಿದರೆ ಮೇಘದೂತನ ಗುಡುಗಿಗೆ ಸಂಪೂರ್ಣವಾದ ಫಲವು ಸಿಕ್ಕುವುದೆಂದು ಯಕ್ಷನ ಅಭಿಪ್ರಾಯ. ಶ್ರೇಷ್ಠವಾದ ನೃತ್ಯದಿಂದಲೂ ರತ್ನಖಚಿತವಾದ ಹಿಡಿಯುಳ್ಳ ಚಾಮರವನ್ನು ಬೀಸುವುದರಿಂದಲೂ ಈಶ್ವರನ ಸೇವೆಗೈದು ಸೋತಿರುವ ವೇಶ್ಯಾಂಗನೆಯರ ಮೇಲೆ ಮೊಟ್ಟಮೊದಲಿನ ಮಳೆಹನಿಗಳನ್ನು ಕೆಡವಿ ಅವರ ಶ್ರಮವನ್ನು ಪರಿಹರಿಸಿದರೆ ಅವರು ದುಂಬಿಗಳ ಸಾಲಿನಂತೆ ಕಾಣುವ ತಮ್ಮ ಕಡೆಗಣ್ಣಿನ ನೋಟಗಳನ್ನು ಇವನ (ಮೇಘದೂತನ) ಮೇಲೆ ಬೀರುವರು. ಇದೂ ಸುಖಕರವೆನ್ನುವುದರಲ್ಲಿ ಸಂಶಯವಿಲ್ಲ. ಪೂಜೆ ಮುಗಿದ ಮೇಲೆ ಹರನು ನೃತ್ಯವನ್ನಾರಂಭಿಸುವಾಗ ಮೇಘವು ಹೊಸ ದಾಸವಾಳ ದಂತಿರುವ ಸಂಧ್ಯಾರಾಗವನ್ನು ಧರಿಸಿ ಮಂಡಲಾಕಾರವನ್ನು ತಾಳಿ ಅವನ ಹೆಗಲನ್ನಲಂಕರಿಸಿದರೆ ಹರನು ರಕ್ತದಿಂದ ತೊಯ್ದ ಗಜಾಸುರಚರ್ಮವನ್ನು ಅಪೇಕ್ಷಿಸುವುದೇ ಇಲ್ಲ. ಆಗ ಭವಾನಿಯು ಇವನನ್ನು ಶಾಂತಳಾಗಿ ನೋಡುವಳು. ಅಂತೂ ಮೇಘದೂತನಿಗೆ ಸುಖವೊಂದುಕಡೆ; ಅದರಲ್ಲಿಯೂ ಐಹಿಕ ಸುಖಗಳೆಲ್ಲದರ ಪರಿಚಯವೂ ಆಗುವುದು; ಮತ್ತೊಂದು ಕಡೆ ಅವನ ಜನ್ಮವೇ ಸಾರ್ಥಕತೆ ಹೊಂದುವುದು. ಐಹಿಕಾಮುಷ್ಮಿಕ ಸುಖಗಳೆರಡೂ ದೂತನಿಗೆ ಸುಲಭವಾಗಿ ಸಿಕ್ಕುವುವು. ಇದೆಲ್ಲ ಆದಮೇಲೆ, ರಾತ್ರಿಯ ಕಗ್ಗತ್ತಲಿನಲ್ಲಿ ರಮಣರ ವಸತಿಗಳಿಗೆ ಹೋಗುವ ಅಭಿಸಾರಿಕೆಯರಿಗೂ ಮೇಘದೂತನು ನೆರವಾಗಬೇಕು. ಇಲ್ಲವೆನ್ನುವಂತಿಲ್ಲ. ಒರೆಗಲ್ಲಿನ ಮೇಲೆ ಎಳೆದ ಹೊನ್ನಿನ ಗೆರೆಯಂತೆ ಮಿಂಚನ್ನು ಬೀರಿ ಅವರಿಗೆ ದಾರಿಯನ್ನು ತೋರಿಸಬೇಕು. ಆಗ ಮಾತ್ರ ಗರ್ಜಿಸಕೂಡದಂತೆ. ಅವರು ಮೊದಲೇ ಹೆದರಿರುವರಂತೆ. ಹೀಗೆ ಎಲ್ಲರೂ ಸುಖಪಡುವಾಗ ತಾನಾದರೂ ಏಕಾಕಿಯಾಗಿರಲು ಹೇಗೆ ಸಾಧ್ಯ? ಆದುದರಿಂದ ತನ್ನ ವಿದ್ಯುದ್ವನಿತೆಯಿಂದ ಕೂಡಿ ಯಾವದಾದರೊಂದು ಉಪ್ಪರಿಗೆಯ ಮೇಲೆ ರಾತ್ರಿಯನ್ನು ಕಳೆದು ಸೂರ್ಯೋದಯವಾದಮೇಲೆ ಮುಂದಿನ ದಾರಿಯನ್ನು ಹಿಡಿಯಬೇಕಂತೆ. ಹೇಗೂ

ಕೈಗೊಂಡ ಕಾರ್ಯದಲ್ಲಿ ಸ್ನೇಹಿತರು ಉದಾಸೀನರಾಗರೆಂದು ಯಕ್ಷನ ದೃಢವಾದ ನಂಬಿಕೆ.

ವಿರಹಿಯಾದ ಯಕ್ಷನಿಗೆ ಮೇಘವು ಸಚೇತನವಾಗಿ ತೋರುವುದಂತಿರಲಿ. ಕ್ರಾಂತದರ್ಶಿಯಾದ ಕಾಳಿದಾಸನಿಗೆ ಇಡಿಯ ಪ್ರಕೃತಿ ಪ್ರಪಂಚವೂ ಸಚೇತನವಾಗಿ ತೋರುವುದು. ನದಿ, ವೃಕ್ಷ, ಪರ್ವತ ಮೊದಲಾದುವೂ ಸಚೇತನವಾದಂತೆ ಅವನಿಂದ ವರ್ಣಿತವಾಗಿರುವುದು ಈಗಾಗಲೇ ಗೋಚರವಾಗಿರಬೇಕು! ಅವನ ಪ್ರಕೃತಿ ಪ್ರೇಮಕ್ಕೆ ಎಲ್ಲೆಯೇ ಇಲ್ಲ. ಅವನ ಗ್ರಂಥಗಳನ್ನು ಓದುವಾಗ ಈ ವಿಚಾರವು ಪದೇಪದೇ ನಮ್ಮ ಮನಸ್ಸಿಗೆ ಬರುವುದರಲ್ಲಿ ಸಂಶಯವಿಲ್ಲ. ಮೇಘವು ಉಜ್ಜಯಿನಿಯಿಂದ ಹೊರಡುವ ಪ್ರಾತಃಕಾಲವು, ಪ್ರಣಯಿಗಳು ಖಂಡಿತವನಿತೆಯರ ಕಣ್ಣೀರನ್ನೊರಸಿ ಸಮಾಧಾನಪಡಿಸುವ ಸಮಯವಂತೆ. ನಳಿನಿಯ ಕಮಲವದನದಿಂದ ರವಿಯು ಇಬ್ಬನಿಯೆಂಬ ಕಣ್ಣೀರನ್ನು ಒರೆಸುತ್ತಿರುವನಂತೆ. ನಳಿನಿಯೆಂಬ ಖಂಡಿತವನಿತೆಯನ್ನು ಸಮದಾಯಿಸುವ ಪ್ರಣಯಿಯಾದ ರವಿಯ ಕಿರಣಗಳಿಗೆ ಮೇಘದೂತನು ಅಡ್ಡವಾಗಿ ಬರಕೂಡದಂತೆ. ಹಾಗೆಯೇ, ಪ್ರಕೃತಿಸುಂದರವಾದ ಮೇಘದೂತನ ಪ್ರತಿಬಿಂಬವು ನಿರ್ದುಷ್ಟವಾದ ಅಂತರಂಗದಂತೆ ಶುಭ್ರವಾದ ಗಂಭೀರಾ (ನದಿ) ಜಲದಲ್ಲಿ ಬಿದ್ದೇಬೀಳುವುದಂತೆ. ಗಂಭೀರೆಯ ಚಂಚಲ ಮೀನುಗಳ ಹೊರಳಿಕೆಗಳು ಅವಳ ಪ್ರಣಯ ನೋಟಗಳಂತೆ. ಮೇಘದೂತನ ಪ್ರತಿಬಿಂಬವು ಅವಳಲ್ಲಿ ಪ್ರವೇಶವನ್ನು ಹೊಂದಿದಮೇಲೆ ಅವಳ ಈ ಪ್ರಣಯ ನೋಟಗಳನ್ನು ನಿರಾಕರಿಸಲು ಸಾಧ್ಯವೇ? ಮತ್ತು ಹೀಗೆ ಅವಳೊಡನೆ ರಮಿಸಿದ ಮೇಲೆ ಅವಳನ್ನು ಬಿಟ್ಟುಹೋಗಲು ಮನಸ್ಸು ಬರುತ್ತದೆಯೇ? ಇಲ್ಲ. ಎಲ್ಲವೂ ಸ್ವಾಭಾವಿಕವೇ. ಆದರೂ ಬಿಟ್ಟು ಹೋಗಬೇಕು. ಮಿತ್ರ ಕಾರ್ಯವು ನೆರವೇರುವುದಕ್ಕೆ ಮುನ್ನ ಸ್ವಾರ್ಥಕ್ಕೆಲ್ಲಿ ಅವಕಾಶ?

ಮುಂದೆ ಪ್ರಯಾಣ ಮಾಡುತ್ತ ಮೇಘದೂತನು ದೇವಗಿರಿಯಲ್ಲಿ ನೆಲಸಿರುವ ಸ್ಕಂದನಮೇಲೆ ಆಕಾಶಗಂಗೆಯ ನೀರಿನಿಂದ ತಣಿದ ಹೂಮಳೆಯನ್ನು ಕರೆಯಬೇಕೆಂದು ಯಕ್ಷನು ಆಶಿಸುತ್ತಾನೆ. ಸ್ಕಂದನೂ ಕೂಡ ಯಕ್ಷನಿಗೆ ಅತಿಪ್ರಿಯನು. ಇವನ ವಾಹನವಾದ ನವಿಲಿನ ಕಾಂತಿಯುಕ್ತವಾದ ಗರಿಗಳನ್ನು ಭವಾನಿಯು ಪುತ್ರವಾತ್ಸಲ್ಯದಿಂದ ನೈದಿಲೆಯೊಡನೆ ಜೋಡಿಸಿ

ಕೊಂಡು ಕಿವಿಯಲ್ಲಿ ಧರಿಸುವಳಂತೆ. ಈ ಸ್ಕಂದದೇವನ ಮಯೂರವನ್ನು ದೇವಗಿರಿಯ ಗುಹೆಗಳಲ್ಲಿ ಪ್ರತಿಧ್ವನಿತವಾಗುವ ಗುಡುಗುಗಳಿಂದ ಮೇಘ ದೂತನು ಕುಣಿಸಬೇಕಂತೆ. ಹೀಗೆ ಶರವಣಭವನನ್ನು ಆರಾಧಿಸಿ ಸ್ವಲ್ಪ ದಾರಿಯನ್ನು ಸವೆಸುವುದರೊಳಗಾಗಿ ಸಿದ್ಧದಂಪತಿಗಳು ಕಣ್ಣಿಗೆ ಬೀಳುವರಂತೆ. ಅವರು ಇವನ ಹನಿಗಳಿಂದ ತಮ್ಮ ವೀಣೆಗಳು ಕೆಡುವುವೆಂದು ಹೆದರಿ ದೂರ ಸರಿಯುವರಂತೆ. ಅಲ್ಲೇ ಸನ್ನಿಹಿತವಾಗುವ ಚರ್ಮಣ್ವತೀ ನದಿಯನ್ನೂ ಪೂಜಿಸಿ ತಂಗಿದಾಗ ಮೇಘದೂತನು ಹೇಗೆ ಕಾಣಿಸುವನೆಂಬುದನ್ನು ನೋಡೋಣ—

ತ್ವಯ್ಯಾದಾತುಂ ಜಲಮವನತೇ ಶಾರ್ಙ್ಗಿಣೋ ವರ್ಣಚೌರೇ
ತಸ್ಯಾಸ್ಸಿಂಧೋಃ ಪೃಥುಮಪಿ ತನುಂ ದೂರಭಾವಾತ್ಪ್ರವಾಹಮ್ ।
ಪ್ರೇಕ್ಷಿಷ್ಯಂತೇ ಗಗನಗತಯೋ ನೂನಮಾವರ್ಜ್ಯ ದೃಷ್ಟೀ
ರೇಕಂ ಮುಕ್ತಾಗುಣಮಿವ ಭುವಃ ಸ್ಥೂಲಮಧ್ಯೇಂದ್ರನೀಲಮ್ ॥

(I-50)

ನದಿಯ ಪ್ರವಾಹವು ವಿಶಾಲವಾಗಿದ್ದರೂ ದೂರಕ್ಕೆ ಸಣ್ಣಗೆ ಕಾಣುವುದಂತೆ. ಶಾರ್ಙ್ಗಿಯಂತೆ ಶ್ಯಾಮಲವರ್ಣವುಳ್ಳ ಮೇಘದೂತನು ನೀರಿಗಾಗಿ ಕೆಳಕ್ಕಿಳಿದಾಗ ಭೂಮಿಯು ಮಧ್ಯದಲ್ಲಿ ಇಂದ್ರನೀಲಮಣಿಯುನ್ನುಳ್ಳ ಮುತ್ತಿನ ಹಾರವನ್ನು ಧರಿಸಿದಂತೆ ಕಾಣುವುದಂತೆ. ಯಾರಿಗೆ ಈ ದೃಶ್ಯದ ಸುಯೋಗ? ಗಗನ ಸಂಚಾರಿಗಳಿಗೆ ಮಾತ್ರ; ನಮಗಾದರೋ ಈ ವಿಷಯವು ಕಾಳಿದಾಸನ ಪ್ರತಿಭೆ ಮತ್ತು ಕಲ್ಪನಾಶಕ್ತಿಗಳಿಂದಲೇ ಆಸ್ವಾದ್ಯವಾಗುವುದು ಸಹೃದಯರ ಅನುಭವಕ್ಕೆ ಅಗೋಚರವಲ್ಲ.

ಅನಂತರ, ಹುಬ್ಬಿನ ಭಾವಗಳಿಂದ ಶೃಂಗಾರಚೇಷ್ಟೆಗಳನ್ನು ಪ್ರದರ್ಶಿಸುವ ದಶಪುರಸ್ತ್ರೀಯರ ನೇತ್ರಗಳು ಮೇಘದೂತನನ್ನು ಎದುರುಗೊಳ್ಳುವುವು. ಹಾಗೆಯೇ ಬ್ರಹ್ಮಾವರ್ತವನ್ನು ದಾಟಿದರೆ ಇತಿಹಾಸಪ್ರಸಿದ್ಧವಾದ ಕುರುಕ್ಷೇತ್ರ ಸಿಕ್ಕುವುದು. ಇಲ್ಲಿನ ಸರಸ್ವತೀ ನದಿಯ ಜಲವು ಬಹಳ ಪ್ರಸಿದ್ಧ. ಬಂಧುಪ್ರೀತಿಯಿಂದ ಸಮರವಿಮುಖನಾದ ಬಲರಾಮನು ಅದನ್ನು ಸೇವಿಸಿದನಂತೆ. ಪ್ರಿಯಾಮುಖಸಂಪರ್ಕದಿಂದ ಹೆಚ್ಚು ರುಚಿಕರವಾದ ಮದ್ಯಕ್ಕಿಂತಲೂ ಸರಸ್ವತೀಜಲದಲ್ಲಿ ಅವನಿಗೆ ಹೆಚ್ಚು ಆಸಕ್ತಿಯಂತೆ. ಆದುದ

ರಿಂದಲೇ ಸರಸ್ವತೀಜಲಪಾನದಿಂದ ಮೇಘದೂತನ ಹೊರಬಣ್ಣವು ಕಪ್ಪಾಗಿದ್ದರೂ ಹೃದಯವು ಶುದ್ಧವಾಗುವುದೆಂದು ಯಕ್ಷನ ಅಭಿಪ್ರಾಯ:—

ಹಿತ್ವಾ ಹಾಲಾಮಭಿಮತರಸಾಂ ರೇವತೀಲೋಚನಾಙ್ಕಾಂ
ಬಂಧುಪ್ರೀತ್ಯಾ ಸಮರವಿಮುಖೋ ಲಾಂಗಲೀ ಯಾಸ್ಸಿಷೇವೇ ।
ಕೃತ್ವಾ ತಾಸಾಮಭಿಗಮಮಪಾಂ ಸೌಮ್ಯ ಸಾರಸ್ವತೀನಾ
ಮನ್ತಶ್ಶುದ್ಧ ಸ್ತ್ವಮಸಿ ಭವಿತಾ ವರ್ಣಮಾತ್ರೇಣ ಕೃಷ್ಣಃ ॥

(I-53)

ಇಲ್ಲಿಂದ ಮುಂದೆ ಜಾಹ್ನವಿಯು ಸಿಕ್ಕುವಳು. ಅವಳು ಸಗರನ ಮಕ್ಕಳನ್ನು ಸ್ವರ್ಗಕ್ಕೇರಿಸಲು ಅನುಕೂಲವನ್ನೊದಗಿಸಿದ ಹಂತ. ಗೌರಿಯು ಸವತಿ ಮಾತ್ಸರ್ಯದಿಂದ ಹುಬ್ಬು ಗಂಟುಹಾಕಿಕೊಂಡಿದ್ದಾಗ ಅವಳನ್ನು ತನ್ನ ನೊರೆನಗೆಗಳಿಂದ ಹೀಯಾಳಿಸುತ್ತ, ಅಲೆಗಳಿಂದ ಹರನ ಕೇಶವನ್ನು ಹಿಡಿದುಕೊಂಡಂತಿರುವಳಂತೆ. ಮೇಘದೂತನು ಸ್ವಲ್ಪ ಬಗ್ಗಿ ಅವಳ ಸ್ಫಟಿಕ ಸ್ವಚ್ಛವಾದ ಪ್ರವಾಹವನ್ನು ನೋಡುವಾಗ ಇವನ ನೆರಳು ನೀರಿನಲ್ಲಿ ಬಿದ್ದು ಕ್ಲಪ್ತವಲ್ಲದ ಸ್ಥಳದಲ್ಲೇ ಯಮುನಾಸಂಗಮವಾದಂತೆ ತೋರುವುದಂತೆ. ಆಚೆಗೆ ಮಂಜಿನಿಂದ ಬೆಳ್ಳಗಿರುವ, ಇವಳ ಉತ್ಪತ್ತಿಸ್ಥಾನವಾದ ಹಿಮಾಲಯವು ಸನ್ನಿಹಿತವಾಗುವುದು. ಕಸ್ತೂರಿ ಮೃಗಗಳು ಕುಳಿತುಕುಳಿತು ಅದರ ಬಂಡೆಗಳೆಲ್ಲ ಸುವಾಸನೆಯಿಂದ ಕೂಡಿವೆಯಂತೆ. ವೃಕ್ಷಗಳ ಸಂಘರ್ಷದಿಂದ ಹುಟ್ಟಿ ಚಮರೀಮೃಗಗಳ ಬಾಲಗಳನ್ನು ಸುಡುವ ಕಾಡುಕಿಚ್ಚು ಹಿಮಾಲಯವನ್ನು ಬಾಧಿಸುವುದು ಯಕ್ಷನಿಗೆ ಸಹಿಸದು. ಆದುದರಿಂದಲೇ ತನ್ನ ಸಾವಿರಾರು ಹನಿಗಳಿಂದ ಅದನ್ನು ಆರಿಸಬೇಕೆಂದು ಮೇಘದೂತನಿಗೆ ಅವನು ಹೇಳಿಕೊಡುವನು. ಉತ್ತಮರ ಸಂಪತ್ತು ಆರ್ತರ ಕ್ಲೇಶನಿವಾರಣೆಗಾಗಿಯೇ ವಿನಿಯೋಗಿಸಲ್ಪಡಬೇಕೆಂಬುದನ್ನು[1] ಇಬ್ಬರೂ ಒಪ್ಪುವರಷ್ಟೆ. ಹೀಗೆಯೇ, ವಿಫಲವಾದ ಕಾರ್ಯಕ್ಕೆ ಕೈ ಹಾಕಿದವರು ಅವಮಾನಕ್ಕೆ ಗುರಿಯಾಗುವುದರಲ್ಲೂ[2] ಸಂದೇಹವೇ ಇಲ್ಲ. ಆದುದರಿಂದ ರಭಸದಿಂದ ನುಗ್ಗುವ ಶರಭಗಳು

1. ಆಪನ್ನಾರ್ತಿಪ್ರಶಮನಫಲಾಃ ಸಂಪದೋ ಹ್ಯುತ್ತಮಾನಾಮ್ । (I-57).

2. ಕೇ ವಾ ನ ಸ್ಯುಃ ಪರಿಭವಪದಂ ನಿಷ್ಫಲಾರಂಭಯತ್ನಾಃ । (I-58.)

ಮೇಘದೂತನ ಮೇಲೆ ಅನಾವಶ್ಯಕವಾಗಿ ಬಿದ್ದರೆ ಅವುಗಳನ್ನು ದಟ್ಟವಾದ ಆಲಿಕಲ್ಲುಗಳ ಮಳೆಯಿಂದ ಚದುರಿಸಲೂ ಬೇಕು. ಹೀಗೆ ದುಷ್ಟಶಿಕ್ಷಣ, ಆರ್ತಕ್ಲೇಶನಿವಾರಣ ಮುಂತಾದ ಸತ್ಕಾರ್ಯಗಳಲ್ಲಿ ಆಸಕ್ತನಾಗಿ ಮುಂದೆ ಹೋದರೆ ಸ್ವಲ್ಪ ದೂರದಲ್ಲೇ ಕಲ್ಲಿನ ಮೇಲೆ ಕೆತ್ತಿರುವ ಹರಪದನ್ಯಾಸವು ಸಿಕ್ಕುವುದು. ಅದನ್ನು ಸಿದ್ಧರು ಯಾವಾಗಲೂ ಆರಾಧಿಸುತ್ತಿರುವರಂತೆ ಅದರ ದರ್ಶನ ಮಾತ್ರದಿಂದಲೇ ಭಕ್ತರ ಪಾಪವು ತೊಲಗಿ ಅವರಿಗೆ ಪ್ರಮಥ ಪದವಿಯು ಸಿಕ್ಕುವುದಂತೆ. ಆದುದರಿಂದ ಅದನ್ನು ಭಕ್ತಿಯಿಂದ ಪ್ರದಕ್ಷಿಣೆ ಮಾಡಬೇಕೆಂದು ಯಕ್ಷನ ಸಲಹೆ. ಆ ಸಮಯದಲ್ಲಿ ಮೇಘದೂತನು ಗರ್ಜಿಸಿದರೆ ಬಿದಿರುಗಳ ವೇಣುನಾದ ಮತ್ತು ಕಿನ್ನರಿಯರ ಗಾನಗಳ ಜೊತೆಗೆ ಮೃದಂಗ ಧ್ವನಿಯೂ ಸೇರಿದಂತಾಗಿ ಪಶುಪತಿಯ ಸಂಗೀತಕ್ಕೆ ಪೂರ್ಣತೆಯು ಒದಗಿದಂತಾಗುವುದು.

ಅನಂತರ ಮಾನಸಸರೋವರಕ್ಕೆ ಹೋಗುವ ಹಂಸಗಳ ಮಾರ್ಗವಾದ ಕ್ರೌಂಚರಂಧ್ರವು ಸಿಕ್ಕುವುದು. ಅಲ್ಲಿಂದ ಉತ್ತರಕ್ಕೆ ಹೋದರೆ ಕೈಲಾಸವು ಆದರದಿಂದ ಮೇಘದೂತನಿಗೆ ಆತಿಥ್ಯವನ್ನು ನೀಡುವುದು. ಕೈಲಾಸದ ಸೌಂದರ್ಯವು ಅನಿರ್ವಚನೀಯವೆನ್ನುವಷ್ಟು ಮಟ್ಟಿನದು. ಅದು ಸುರ ಸ್ತ್ರೀಯರ ಕನ್ನಡಿ. ರಾವಣನ ತೋಳುಗಳಿಂದ ಅದರ ತಪ್ಪಲು ಪ್ರದೇಶಗಳು ಸಡಿಲವಾಗಿವೆ. ಅದರ ಎತ್ತರವಾದ ಶಿಖರಗಳು ಕುಮುದದಂತೆ ಬೆಳ್ಳಗಿರು ವುದರಿಂದ ರಾಶಿಹಾಕಿದ ತ್ರ್ಯಂಬಕನ ಅಟ್ಟಹಾಸದಂತೆ ಕಾಣುವುವು. ಆಗ ತಾನೆ ಕಡಿದ ದಂತದ ಚೂರಿನಂತೆ ಬೆಳ್ಳಗಿರುವ ಈ ಬೆಟ್ಟದ ತಪ್ಪಲನ್ನು ಉಜ್ಜಿದ ಕಾಡಿಗೆಯಂತೆ ಕಪ್ಪಾಗಿರುವ ನಮ್ಮ ಮೇಘದೂತನು ಆಶ್ರಯಿಸಿದರೆ ಕಪ್ಪುಬಟ್ಟೆಯು ಬಲರಾಮನ ಭುಜವನ್ನೇರಿದಂತೆ ಕಾಣುವುದಂತೆ. ಆಗ ಬೆಟ್ಟದ ಕಾಂತಿಯನ್ನು ನೋಡಿ ದೇವತೆಗಳೂ ಸಂತೋಷಗೊಳ್ಳುವರಂತೆ. ಈ ಪವಿತ್ರವಾದ ಕೈಲಾಸವು ಹರನ ಕ್ರೀಡಾಶೈಲ. ಗೌರಿಯು ಹೆದರದೆ ಧೈರ್ಯವಾಗಿ ತನ್ನ ಕೈ ಹಿಡಿದು ಸಂಚರಿಸಲೆಂದು ಅಪನು ತನ್ನ ಸರ್ಪಾಂಗದ ವನ್ನು ಇಲ್ಲಿ ಧರಿಸುವುದಿಲ್ಲವಂತೆ. ಆಗ ಅವಳು ರತ್ನಮಯವಾದ ಆ ಪರ್ವತ ವನ್ನೇರುವುದಕ್ಕೆ ಅನುಕೂಲಿಸುವಂತೆ ಮೇಘದೂತನು ನೀರನ್ನಡಗಿಸಿಕೊಂಡು ರಮ್ಯವಾದ ಚಪ್ಪಡಿಗಳ ರೂಪವನ್ನು ತಾಳಿ ಹಂತವಾಗಬೇಕೆಂದು ಯಕ್ಷನ

ಅಭಿಲಾಷೆ.[1] ಕ್ರೀಡಾಸಕ್ತೆಯರಾದ ಅಲ್ಲಿನ ಸುರಸ್ತ್ರೀಯರು ಇವನನ್ನು ತಡೆಗಟ್ಟಿದರೆ ಅದಕ್ಕೆ ಇದ್ದೇ ಇದೆ ಗರ್ಜನೆಯ ಪ್ರತೀಕಾರ. ಹಿಮಾಲಯದಲ್ಲಿ ಮೇಘದೂತನ ಲಲಿತ ಚೇಷ್ಟೆಗಳಿಗೆ ವಿಶೇಷವಾದ ಸೌಕರ್ಯವಿದೆಯಂತೆ. ಹೊಂದಾವರೆಯನ್ನು ಬೆಳೆಸುವ ಮಾನಸಸರೋವರದ ಜಲವನ್ನು ಕುಡಿಯುವುದು ಒಂದು ಕ್ಷಣ, ಐರಾವತವು ನೀರನ್ನು ಕುಡಿಯುವಾಗ ಒಂದು ಕ್ಷಣ ಅದರ ಮುಖದ ಮುಸುಕಾಗುವುದು; ಗಾಳಿಯೆಬ್ಬಿಸಿ ರಮ್ಯವಾದ ಕಲ್ಪವೃಕ್ಷದ ಚಿಗುರುಗಳನ್ನು ಅಲ್ಲಾಡಿಸುವುದು, ಇವೇ ಮೊದಲಾದುವು ಇವನಿಗೆ ಬಹಳ ಪ್ರೀತಿಯನ್ನುಂಟುಮಾಡುವುವು. ಅಲ್ಲಿಂದ ಪ್ರಿಯನ ತೊಡೆಯನ್ನೇರಿದ ಕಾಮಿನಿಯಂತೆ ಆ ಬೆಟ್ಟದ ತಪ್ಪಲನ್ನಾಶ್ರಯಿಸಿರುವ ಅಲಕೆಯನ್ನು ಗುರುತಿಸಲು ಬಹಳ ಸುಲಭ. ಹನಿಯುತ್ತಿರುವ ಮೋಡಗಳು ಅಲ್ಲಿನ ಉಪ್ಪರಿಗೆಗಳ ಮೇಲೆ ಸಾಲುಗಟ್ಟಿದರೆ ಅಲಕೆಯು,ಮುಂಗುರುಳಿನಲ್ಲಿ ಮುತ್ತಿನ ಸರವನ್ನು ಧರಿಸಿದ ಕಾಮಿನಿಯಂತೆ ಶೋಭಿಸುವಳಂತೆ.

## ಉತ್ತರ ಮೇಘ

ಹೀಗೆ ಮೇಘದೂತನ ಪ್ರಯಾಣದ ಗುರಿಯಾದ ಅಲಕೆಯ ಮಾರ್ಗವನ್ನು ವಿವರವಾಗಿಯೂ, ರಂಜಕವಾಗಿಯೂ ವರ್ಣಿಸಿದನಂತರ ಯಕ್ಷನು ತನ್ನ ಊರಿನ ಭೋಗಸಮೃದ್ಧಿಗಳನ್ನೂ ತನ್ನ ಹೆಂಡತಿಯನ್ನು ಗುರ್ತಿಸುವ ರೀತಿಯನ್ನೂ ವಿವರಿಸಿ ಹೇಳತೊಡಗುವನು. ಮಿಕ್ಕೆಲ್ಲ ಪ್ರದೇಶಗಳ ವರ್ಣನೆಯೇ ಒಂದು ವಿಧ; ಅಲಕೆ ಅಲ್ಲಿಯೂ ತನ್ನ ಮನೆಯ ಸನ್ನಿವೇಶ, ತನ್ನ ಪ್ರಿಯೆಯ ರೂಪ, ಲಾವಣ್ಯ, ವಿರಹದಶೆ ಇವುಗಳ ವರ್ಣನೆಯೇ ಒಂದು ವಿಧವೆನ್ನಬಹುದು ಯಕ್ಷನ ದೃಷ್ಟಿಯಿಂದ ತನ್ನ ಊರಿಗೆ ಸಂಬಂಧಿಸಿದ ಎಲ್ಲವೂ ಅನುಪಮ ಸೌಂದರ್ಯದಿಂದ ಕೂಡಿದುದು. ಕೇವಲ ಸುಖಮಯ ಸನ್ನಿವೇಶ. ಸಾಮಾನ್ಯಜನರ ಕಲ್ಪನೆಗೂ ಗೋಚರವಾಗದ ಆದರ್ಶ

---

1. ಹಿತ್ವಾ ತಸ್ಮಿನ್ಭುಜಗವಲಯಂ ಶಂಭುನಾ ದತ್ತಹಸ್ತಾ
ಕ್ರೀಡಾಶೈಲೇ ಯದಿ ಚ ವಿಚರೇತ್ಪಾದಚಾರೇಣ ಗೌರೀ ।
ಭಂಗೀಭಕ್ತ್ಯಾ ವಿರಚಿತವಪುಃ ಸ್ತಂಭಿತಾಂತರ್ಜಲೌಘಃ
ಸೋಪಾನತ್ವಂ ಕುರು ಮಣಿತಟಾರೋಹಣಾಯಾಗ್ರಯಾಯೀ ॥
(I-64)

ಜೀವನ ಅಲ್ಲಿನದು. ಇಂತಹ ಆದರ್ಶಚಿತ್ರವು ಕಾಳಿದಾಸಪ್ರತಿಭೆಯಿಂದ ಮಾತ್ರ ಹೊರಡಲು ಸಾಧ್ಯವೆಂದು ಹೇಳಬಹುದು.

ಇತರ ಕಡೆಗಳಲ್ಲಿ ಮೇಘದೂತನ ಸೌಂದರ್ಯವನ್ನೂ ಅವನು ಪ್ರಕೃತಿ ಸನ್ನಿವೇಶಕ್ಕೊದಗಿಸಿದ ಅಧಿಕವಾದ ಕಳೆಯನ್ನೂ ಪ್ರಶಂಸಿಸಿದ ಯಕ್ಷನು ಅಲಕೆಯ ವಿಷಯದಲ್ಲಿ ಮಾತ್ರ ಬಹಳ ಅಭಿಮಾನದಿಂದ ವರ್ಣಿಸುವಂತೆ ತೋರುವುದು. ಅವನ ದೇಶಪ್ರೇಮವು ಬಹಳ ಉತ್ತಮವಾದುದು. ಅದರಲ್ಲೂ ದೇಶವನ್ನಗಲಿದ್ದ ಅವನಿಗೆ ಅಲಕೆಯು ಇನ್ನೂ ಸುಂದರವಾಗಿ ತೋರುವುದು ಸ್ವಾಭಾವಿಕ. ಆದುದರಿಂದಲೇ ಮೊಟ್ಟಮೊದಲು "ಅಲಕೆಯ ಉಪ್ಪರಿಗೆಗಳು ನಿನಗೇನೂ ಕಡಿಮೆಯಿಲ್ಲ" ವೆನ್ನುವಂತೆ ಪ್ರಾರಂಭಿಸಿ ಮೇಘ ದೂತನಿಗೆ ಅದರ ನಿರತಿಶಯ ಸೌಂದರ್ಯವನ್ನು ವರ್ಣಿಸುವನು. ಮೇಘ ದೂತನಿಗೆ ಮಿಂಚೆಂಬ ಹೆಂಡತಿಯಿದ್ದರೆ ಅಲಕೆಯ ಸೌಧಗಳಲ್ಲಿ ಲಲಿತ ವನಿತೆಯರಿರುವರು; ಇವನಿಗೆ ಬಣ್ಣಬಣ್ಣದ ಕಾಮನಬಿಲ್ಲಿದ್ದರೆ, ಅಲ್ಲಿಯೂ ಇದಕ್ಕೆ ಕಡಿಮೆಯಿಲ್ಲದ ನಾನಾವರ್ಣದ ಚಿತ್ರಗಳಿವೆ; ಆ ಉಪ್ಪರಿಗೆಗಳಿಂದ ಹೊರಡುವ ಮೃದಂಗ ಧ್ವನಿಯು ಇವನ ಗಂಭೀರವಾದ ಗರ್ಜನೆಗೇನೂ ಕಡಿಮೆಯಲ್ಲ; ಅವುಗಳ ರತ್ನಖಚಿತವಾದ ನೆಲಕ್ಕೂ ಇವನ ನೀರು ತುಂಬಿದ ದೇಹಕ್ಕೂ ಅಜಗಜಾಂತರ, ಕಡೆಯದಾಗಿ ಅವುಗಳ ಔನ್ನತ್ಯವು ಇವನವರೆಗೂ ವ್ಯಾಪಿಸಿದೆಯೆಂದೂ ಹೇಳಬಹುದು. ಆದುದರಿಂದ ಅಲಕೆಯು ಯಾವ ವಿಧದಲ್ಲೂ ಮೇಘದೂತನಿಗೆ ಕಡಿಮೆಯಿಲ್ಲವಾದರೂ ಇವನೊಡನೆ ಹೋಲಿಸಲು ಮಾತ್ರ ಅರ್ಹವಾಗಿರುವುದಂತೆ.

ಅಲ್ಲಿನ ಹೆಂಗಸರ ಕೈಗಳಿಗೆ ಲೀಲಾಕಮಲಗಳು, ಕುರುಳುಗಳಿಗೆ ಹೊಸ ಕುಂದಪುಷ್ಪಗಳು, ಮುಖಕ್ಕೆ ಲೋಧ್ರಪುಷ್ಪದ ಪರಾಗಗಳು, ಜಡೆಯ ಅಲಂಕಾರಕ್ಕೆ ಹೊಸ ಕುರವಕ; ಕಿವಿಗೆ ಶಿರೀಷಕುಸುಮ; ಬೈತಲೆಗೆ ಅರಳಿದ ನೀಪ; ಹೀಗೆ ಬೇರೆಡೆಗಳಲ್ಲಿ ಒಂದೊಂದು ಋತುವಿನಲ್ಲಿ ಮಾತ್ರ ಸಿಕ್ಕುವ ಹೂಗಳೆಲ್ಲ ಅಲಕೆಯಲ್ಲಿ ಯಾವಾಗಲೂ ಅಲಂಕಾರಕ್ಕೆ ಸಿದ್ಧವಾಗಿರುವುವು. ಗಿಡಗಳಲ್ಲಿ ಯಾವಾಗಲೂ ದುಂಬಿಗಳ ಝೇಂಕಾರ; ತಾವರೆ ಬಳ್ಳಿಗಳಲ್ಲಿ ಯಾವಾಗಲೂ ಅರಳಿರುವ ತಾವರೆಗಳು; ಸುತ್ತುವರಿದಿರುವ ಹಂಸಶ್ರೇಣಿಗಳು; ಅನವರತ ರೆಕ್ಕೆಯನ್ನು ಕೆದರಿಕೊಂಡು ಕೇಕೆ ಹಾಕುವ ಸಾಕಿದ ನವಿಲುಗಳು;

ಎಲ್ಲಕ್ಕಿಂತ ಹೆಚ್ಚಾಗಿ ಪ್ರತಿರಾತ್ರಿಯಲ್ಲೂ ಬೆಳದಿಂಗಳು; ಆನಂದಕ್ಕೆ ಹೊರತು ಕಣ್ಣೀರು ಸುರಿಸುವ ಪ್ರಸಂಗವೇ ಇಲ್ಲ; ಕಾಮತಾಪವಲ್ಲದೆ ಬೇರೆ ತಾಪವೇ ಇಲ್ಲ; ಪ್ರಣಯದಿಂದುಂಟಾಗಿ ಅದನ್ನೇ ಹೆಚ್ಚಿಸುವ ವಿರಹ; ಯೌವನವನ್ನು ಬಿಟ್ಟು ಬೇರೆ ಅವಸ್ಥೆಯೇ ಇಲ್ಲ; ಇದೆಲ್ಲವೂ ಅಲ್ಲಿನ ಸ್ವಾಭಾವಿಕವಾದ ಸನ್ನಿವೇಶವನ್ನು ಸೂಚಿಸುವುದು. ಇಂತಹ ಸನ್ನಿವೇಶದಲ್ಲಿ ಜೀವಿಸುವ ಯಕ್ಷರ ಜೀವನವು ಇದಕ್ಕನುಗುಣವಾಗಿಯೇ ಇರಬೇಕೆಂದು ಬೇರೆ ಹೇಳಬೇಕಾಗಿಲ್ಲ. ಸ್ಫಟಿಕಮಯವಾದ ಉಪ್ಪರಿಗೆಗಳ ಬಿಸಿಲುಮಹಡಿಯಲ್ಲಿ ಉತ್ತಮಸ್ತ್ರೀಯರೊಡನೆ ಕುಳಿತು ಗಂಭೀರವಾದ ಪುಷ್ಕರಧ್ವನಿಯನ್ನಾಲಿಸುತ್ತ ನಕ್ಷತ್ರದ ಬೆಳಕಿನಿಂದ ಹೊಳೆಯುವ ಕಲ್ಪವೃಕ್ಷದ ಮದ್ಯವನ್ನು ಅಲ್ಲಿನವರು ಸೇವಿಸುವರು. ದೇವತೆಗಳೂ ಮೋಹಿಸುವಂತಹ ಯಕ್ಷಕನ್ಯೆಯರು ಗಂಗೆಯ ತಂಗಾಳಿಯು ಬೀಸುವಾಗ ಮಂದಾರವೃಕ್ಷಗಳ ನೆರಳಿನಲ್ಲಿ ಗೂಢಮಣಿಯೆಂಬ ಆಟವನ್ನಾಡುವರು. ಅಲ್ಲಿನ ಸ್ತ್ರೀಯರ ಸುರತಾಯಾಸವನ್ನು ನೀರನ್ನು ಜಿನಗಿಸುವ ಕಿಟಕಿಗಳ ಚಂದ್ರಕಾಂತಗಳೇ ಪರಿಹರಿಸುವುವು. ಒಟ್ಟಿನಲ್ಲಿ ಅಲಕೆಯು ಸಕಲ ಉಪಭೋಗವಸ್ತು ಪೂರ್ಣವಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು. ಅಲ್ಲಿನ ನಾಗರಿಕರಿಗೆ ಸಿಕ್ಕದ ಪದಾರ್ಥಗಳೇ ಇಲ್ಲ. ವೈಭ್ರಾಜವೆಂಬ ಉಪವನ, ಕಿನ್ನರರ ಕುಬೇರಕೀರ್ತಿಗಾನ, ಸುರವೇಶ್ಯಾಸಲ್ಲಾಪ ಇವುಗಳಲ್ಲೇ ಅವರು ಯಾವಾಗಲೂ ನಿರತರಾಗಿರುವರು. ಯಾವುದಕ್ಕಾಗಲಿ ಅಭಾವವಿದ್ದರೆ ತಾನೆ ಶ್ರಮಪಡಬೇಕಾದ ಅಗತ್ಯ? ಎಲ್ಲರಿಗೂ ಸಂಪೂರ್ಣವಾದ ಸುಖಲಾಭಕ್ಕೆ ಅವಕಾಶವಿರುವುದರಿಂದ ಯಾರೊಬ್ಬರಿಗೂ ಅಸೂಯೆಗವಕಾಶವಿಲ್ಲ. ಯಾವ ವಿಧವಾದ ಜೀವನ ಸಮಸ್ಯೆಯೂ ಇಲ್ಲದಿರುವಾಗ ಇಚ್ಛೆ, ಪ್ರಯತ್ನ, ಪೈಪೋಟಿ, ದ್ವೇಷ, ಅಸೂಯೆಗಳು ಹೇಗೆ ತಲೆದೋರುತ್ತವೆ? ಇದರಿಂದ ಯಕ್ಷರು ಕೇವಲ ಸ್ವಾರ್ಥತೆಯಿಂದ ಕೂಡಿ ಇತರರ ತೊಂದರೆಗಳನ್ನು ಗಣಿಸದೆ ಸುಖಲೋಲುಪರಾಗಿ ಸೋಮಾರಿಗಳಂತೆ ಕಾಲಕಳೆಯುತ್ತಿದ್ದರೆಂದು ಹೇಳುವಂತಿಲ್ಲ. ಅವರ ನಿರಂತರ ಸುಖಾನುಭವಕ್ಕೆ (ಅಲ್ಲಿನ ಸಮೃದ್ಧಿಯು ಕಾರಣವೇ ಹೊರತು ಇತರರ ಸುಖಸಮೃದ್ಧಿಗಳ ಲೂಟಿಯಾಗಲಿ ಅಪೋಹವಾಗಲಿ ಕಾರಣವಲ್ಲ. ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಆ ಐಹಿಕ ಭೋಗವಸ್ತುಗಳ ಸಮೃದ್ಧಿಗೆ) ಅಲ್ಲಿರುವ ಕಲ್ಪವೃಕ್ಷವೇ ಮುಖ್ಯಕಾರಣ. ಅದರ ಪ್ರಭಾವದಿಂದ ಬೇಕಾದುದೆಲ್ಲ ದೊರಕುವುದು.

ಅಲಕೆಯಲ್ಲಿ ಕುಬೇರನ ಮನೆಯ ಉತ್ತರಕ್ಕೆ ಯಕ್ಷನ ಮನೆಯಿದೆ ಯಂತೆ. ಅದಕ್ಕೆ ಕಾಮನಬಿಲ್ಲಿನಂತಿರುವ ತೋರಣವಿರುವುದರಿಂದ ದೂರ ದಿಂದಲೇ ಅದನ್ನು ಗುರುತಿಸಬಹುದಂತೆ. ಅಂಗಳದಲ್ಲಿ ಇವನ ಪ್ರಿಯೆಯು ಅಕ್ಕರೆಯಿಂದ ಬೆಳಸಿದ ಬಾಲಮಂದಾರವೃಕ್ಷ; ಪಚ್ಚೆಗಳಿಂದ ರಚಿತವಾದ ಸೋಪಾನವುಳ್ಳ ಕೊಳ; ಅಲ್ಲಿ ವೈದೂರ್ಯದಂತಿರುವ ಬಳುಕುವ ದಂಟುಗಳ ತುದಿಯಲ್ಲಿ ಅರಳಿದ ಹೊಂದಾವರೆಗಳು; ನೀರಿನಲ್ಲೇ ಹಂಸಗಳು ಗೂಡು ಕಟ್ಟಿಕೊಂಡು ಮೇಘದೂತನು ಎಷ್ಟು ಪ್ರೇರಿಸಿದರೂ ಅವು ಕೊಳವನ್ನು ಬಿಟ್ಟು ಹೋಗುವುದೇ ಇಲ್ಲವಂತೆ; ಕೊಳದ ದಡದಲ್ಲಿ ಸುಂದರವಾದ ಇಂದ್ರ ನೀಲ ಮಣಿಗಳಿಂದಲಂಕೃತವಾದ ಕ್ರೀಡಾಶೈಲ; ಅದರ ಸುತ್ತಲೂ ಹೊನ್ನಿನ ಬಾಳೆಯಗಿಡಗಳಿವೆಯಂತೆ; ಅಲ್ಲಿಯೇ ಕುರವಕಗಳಿಂದ ಸುತ್ತುಗಟ್ಟಿದ ಮಾಧವೀಮಂಟಪ; ಅದರ ಸಮೀಪದಲ್ಲಿ ಅಲುಗುತ್ತಿರುವ ಚಿಗುರು ಗಳನ್ನುಳ್ಳ ಕೆಂಪು ಅಶೋಕ ಮತ್ತು ಸುಂದರವಾದ ಕೇಸರ ವೃಕ್ಷಗಳಿವೆ ಯಂತೆ; ಇವೆರಡರ ಮಧ್ಯೆ ಸ್ಫಟಿಕದ ಜಗಲಿಯ ಮೇಲೆ, ಎಳೆ ಬಿದಿರಿನಂತೆ ಹಸುರಾದ ಪಚ್ಚೆಗಳಿಂದ ಮೆಟ್ಟಿದ ಚಿನ್ನದ ವಾಸಯಷ್ಟಿಯಿದೆಯಂತೆ. ಸಂಜೆಯವೇಳೆ ಯಕ್ಷನ ಕಾಂತೆಯು ತಾನು ಸಾಕಿದ ನವಿಲನ್ನು ಅದರ ಮೇಲೆ ಹತ್ತಿಸಿ ಕೈಗಳನ್ನು ತಟ್ಟುತ್ತಾ ಅದನ್ನು ಕುಣಿಸುವಾಗ ಅವಳ ಕೈ ಬಳೆಗಳು ರಮ್ಯವಾದ ದನಿಗೈಯುವುವಂತೆ; ಮನೆಯ ಎರಡು ಪಕ್ಕಗಳಲ್ಲಿಯೂ ಶಂಖ ಪದ್ಮಗಳನ್ನು ಚಿತ್ರಿಸಿರುವುದಂತೆ. ಹೀಗೆ ಅತಿ ಸೂಕ್ಷ್ಮವಾದ ವಿಚಾರಗಳೂ ಕೂಡ ಯಕ್ಷನಿಗೆ ಮರೆಯುವಂತಿಲ್ಲ. ಇವೆಲ್ಲವನ್ನೂ ಜ್ಞಾಪಕದಲ್ಲಿಟ್ಟು ಕೊಂಡರೆ ತನ್ನ ಮನೆಯನ್ನು ಸುಲಭವಾಗಿ ಹುಡುಕಬಹುದೆಂದು ಹೇಳಿ ಕಡೆಯಲ್ಲಿ ಆ ಮನೆಯ ಪ್ರಕೃತಸ್ಥಿತಿಯನ್ನು ಹೀಗೆ ವರ್ಣಿಸುವನು—

"ಕ್ಷಾಮಚ್ಛಾಯಂ ಭವನಮಧುನಾ ಮದ್ವಿಯೋಗೇನ ನೂನಂ |
ಸೂರ್ಯಾಪಾಯೆ ನ ಖಲು ಕಮಲಂ ಪುಷ್ಯತಿ ಸ್ವಾಮಭಿಖ್ಯಾಮ್ ||
(II—17)

"ನಾನಿಲ್ಲದಿರುವುದರಿಂದ ಮನೆಯ ಕಳೆಯು ಈಗ ಕುಗ್ಗಿರುವುದು; ಸೂರ್ಯನಿಲ್ಲ ದಿರುವಾಗ ಕಮಲದ ನಿಜವಾದ ಕಾಂತಿಯು ಗೋಚರವಾಗುವುದಿಲ್ಲವಷ್ಟೆ."

ಯಕ್ಷನ ಮನೆಯನ್ನು ಗುರುತಿಸಿದ ಮೇಲೆ ಮೇಘದೂತನ ಕೆಲಸವು ಗುರುತರವಾಗುವುದು. ಅವನು ಬಹಳ ಜಾಗರೂಕನಾಗಿ ವರ್ತಿಸಬೇಕಂತೆ. ಏಕಾಏಕಿ ಗುಡುಗು ಸಿಡಿಲುಗಳಿಂದ ಮಳೆಗರೆಯುತ್ತ ಹೊರಟರೆ ಅನಾಹುತ ವಾದೀತು! ಆದುದರಿಂದ ಅವನು ಹೇಗೆ ತನ್ನ ಪತ್ನಿಯನ್ನು ಕಂಡು ಮಾತಾಡಿಸಬೇಕೆಂಬ ವಿಚಾರದಲ್ಲಿ ಬಹಳ ವಿಶದವಾಗಿ ಯಕ್ಷನು ಸಲಹೆ ಕೊಡುತ್ತಾನೆ. ಮೊದಲು ದೇಹವನ್ನೆಲ್ಲ ಉಡುಗಿಸಿಕೊಂಡು, ಕ್ರೀಡಾಶೈಲದಿಂದ ಮಿಂಚು ಹುಳುಗಳಂತೆ ಸ್ವಲ್ಪ ಮಾತ್ರ ಬೆಳಗುವ ಮಿಂಚುಗಣ್ಣಿನಿಂದ ಅವಳನ್ನು ನೋಡಬೇಕಂತೆ. ಆಗ ಅಂದವಾದ ಹಲ್ಲು, ತೊಂಡೆಯ ಹಣ್ಣಿನಂತಿರುವ ತುಟಿ, ಬೆದರಿದ ಹರಿಣಿಯ ನೋಟ, ಬಡನಡು, ಮೇಲ್ನಡೆ ಈ ಲಕ್ಷಣಗಳಿಂದ ಕೂಡಿ ಸ್ತನಭಾರದಿಂದ ಬಗ್ಗಿರುವ ಕೃಶಾಂಗಿಯೊಬ್ಬಳು ಕಣ್ಣಿಗೆ ಬೀಳುವಳಂತೆ. ಬ್ರಹ್ಮನ ತರುಣೀಸೃಷ್ಟಿಕಾರ್ಯಪ್ರಥಮಫಲವಾದ ಆ ಮಿತಭಾಷಿಣಿಯೇ ಯಕ್ಷನ ಪ್ರಾಣಪ್ರಿಯೆ. ಪ್ರಿಯನು ದೂರದಲ್ಲಿರುವುದರಿಂದ ಚಕ್ರವಾಕಿಯಂತೆ ಶೋಕಿಸುತ್ತಿರುವಳು. ಈಚೆಗಂತೂ ಹೆಚ್ಚು ಹೆಚ್ಚು ದುಃಖಿಸಿ ಶಿಶಿರದಲ್ಲಿ ಕಳೆಗುಂದಿದ ಪದ್ಮಿನಿಯಂತೆ ಅವಳು ಬದಲಾಯಿಸಿರಬೇಕೆಂದು, ಯಕ್ಷನ ಊಹೆ. ಅತ್ತು ಅತ್ತು ಅವಳ ಕಣ್ಣುಗಳು ಊದಿರಬಹುದು; ನಿಟ್ಟುಸಿರಿನಿಂದ ಅವಳ ತುಟಿಯ ಕಾಂತಿಯು ಮಾಸಿರಬಹುದು. ಮುಂಗುರುಳುಗಳ ಜೋಲಾಟದಿಂದ ಸ್ಪಷ್ಟವಾಗಿ ಕಾಣಿಸದ ಮುಖವನ್ನು ಕೈಗಳಮೇಲೆ ಇಟ್ಟುಕೊಂಡಿದ್ದರೂ ಇರಬಹುದಂತೆ; ಮೇಘದೂತನು ನೋಡುವಾಗ, ಅವಳು ಪೂಜಾಸಕ್ತಳಾಗಿಯೋ, ವಿರಹಕೃಶವಾದ ಯಕ್ಷನ ದೇಹವನ್ನು ತಾನು ಭಾವಿಸಿದಂತೆ ಚಿತ್ರಿಸುತ್ತಲೋ, ಇಲ್ಲದಿದ್ದಲ್ಲಿ ಪಂಜರದಲ್ಲಿರುವ ಶಾರಿಕೆಯನ್ನು "ಎಲೆ ರಸಿಕೆ, ನಿನಗೆ ಸ್ವಾಮಿಯ ನೆನಪಿದೆಯೇ? ನೀನು ಅವನಿಗೆ ಪ್ರಿಯಳಷ್ಟೆ" ಎಂದು ಕೇಳುತ್ತಲೋ ಇರಬಹುದಂತೆ. ಅಥವಾ ಹೀಗಿದ್ದರೂ ಇರಬಹುದು--

ಉತ್ಸಂಗೇ ವಾ ಮಲಿನವಸನೆ ಸೌಮ್ಯ ನಿಕ್ಷಿಪ್ಯ ವೀಣಾಂ
ಮದ್ಗೋತ್ರಾಂಕಂ ವಿರಚಿತಪದಂ ಗೇಯಮುದ್ಗಾತುಕಾಮಾ ।
ತಂತ್ರೀಮಾರ್ದ್ರಾಂ ನಯನಸಲಿಲೈಃ ಸಾರಯಿತ್ವಾ ಕಥಂಚಿತ್
ಭೂಯೋ ಭೂಯಃ ಸ್ವಯಮಪಿ ಕೃತಾಂ ಮೂರ್ಛನಾಂ ವಿಸ್ಮರಂತೀ।
(II—23)

"ಮಾಸಿದ ಸೀರೆಯನ್ನುಟ್ಟು ವೀಣೆಯನ್ನು ತೊಡೆಯಮೇಲಿಟ್ಟುಕೊಂಡು ತನ್ನ ಪ್ರಿಯನ ಹೆಸರನ್ನು ಉಲ್ಲೇಖಿಸುವ ಗೀತೆಯೊಂದನ್ನು ಹಾಡಲೆಳಸು ವಳು; ಆದರೆ ಕಣ್ಣೀರಿನಿಂದ ವೀಣೆಯ ತಂತಿಗಳು ತೊಯ್ದುಹೋಗಲಾಗಿ ಬಹಳ ಕಷ್ಟದಿಂದ ಅದನ್ನೊರಸುತ್ತ ತಾನೇ ಅನೇಕಾವೃತ್ತಿ ಹಾಡಿದ್ದ ಮೂರ್ಛನೆಗಳನ್ನೂ ಮರೆಯುತ್ತ ಪುನಃ ಪುನಃ ಹಾಡಿದ್ದನ್ನೇ ಹಾಡುವಳಂತೆ" ಪ್ರಿಯವಿಯುಕ್ತರಾದ ಅಂಗನೆಯರಿಗೆ ಪ್ರಾಯಶಃ ಇವೇ ವಿನೋದಗಳೆಂದು ಯಕ್ಷನಿಗೆ ಗೊತ್ತು. ಅದುದರಿಂದಲೇ ಅವನು ತನ್ನ ಪ್ರಿಯೆಯು ಇರ ಬಹುದಾದ ಅವಸ್ಥೆಗಳನ್ನೆಲ್ಲ ಊಹಿಸಿ ವರ್ಣಿಸುವನು. ಹೃದಯದ್ರಾವಕ ವಾದ ಅವಳ ಸ್ಥಿತಿಯನ್ನು ನೋಡಿ ಮೇಘದೂತನೂ ಪ್ರಥಮವೃಷ್ಟಿಯೆಂಬ ಕಣ್ಣೀರನ್ನು ಸುರಿಸಬೇಕಾಗುವುದಂತೆ. ವಿರಹವೇದನೆಯಿಂದ ಅವಳು ಅನು ಭವಿಸುವ ಕಷ್ಟ ಅಷ್ಟಿಷ್ಟಲ್ಲ. ಕನಸಿನಲ್ಲಾದರೂ ಪ್ರಿಯನ ಸಮಾಗಮವಾಗ ಬಹುದೆಂದು ಅವಳು ನಿದ್ದೆಮಾಡಲು ಪ್ರಯತ್ನಿಸಿದರೆ ಅದನ್ನೂ ಕೂಡ ಕಣ್ಣೀರು ತಡೆಗಟ್ಟುವುದಂತೆ. ತಾನು ಬಹಳ ಭಾಗ್ಯಶಾಲಿಯೆಂದು ಭಾವಿಸಿ ಹೀಗೆ ಹೇಳುತ್ತಿಲ್ಲವೆಂದೂ ಕ್ಷಿಪ್ರದಲ್ಲೇ ಇವನಿಗೂ ಪ್ರತ್ಯಕ್ಷತಃ ಎಲ್ಲವೂ ತಿಳಿಯುವುದೆಂದೂ ಯಕ್ಷನು ಭರವಸೆ ಕೊಡುವನು. ಕಡೆಯದಾಗಿ ಒಂದು ಕೋರಿಕೆಯಿದೆ ಅವನದು. ಮೇಘದೂತನು ನೋಡಿದಾಗ ಯಕ್ಷಿಗೇನಾದರೂ ನಿದ್ದೆ ಹತ್ತಿದ್ದರೆ ಒಂದು ಜಾವ ಮಾತ್ರ ನಿರೀಕ್ಷಿಸಬೇಕಂತೆ; ಗರ್ಜಿಸಿ ಅವಳ ನ್ನೆಚ್ಚರಿಸಿದರೆ, ಒಂದು ಪಕ್ಷ ಸ್ವಪ್ನದಲ್ಲಿ ಅವಳಿಗೆ ಪ್ರಿಯಸಮಾಗಮವಾಗಿದ್ದರೆ ಅದು ತಪ್ಪುವುದಂತೆ! ಅದುದರಿಂದ ಸ್ವಲ್ಪ ತಡವಾಗಿ ಅವಳನ್ನು ಜಲಕಣ ಮಿಶ್ರವಾದ ಗಾಳಿಯಿಂದೆಬ್ಬಿಸಿ ಹೊಸಜಾಜಿಯ ಮೊಗ್ಗುಗಳಿಂದ ಉಪಚರಿಸ ಬೇಕಂತೆ. ಅನಂತರ ಇವನು ಕುಳಿತಿರುವ ಕಿಟಕಿಯನ್ನೇ ದಿಟ್ಟಿಸುವ ಆ ಮಾನಿನಿಗೆ ತನ್ನ ಗಂಭೀರವಾದ ಸಂದೇಶವನ್ನು ತಿಳಿಸಬೇಕೆಂದು ಯಕ್ಷನ ಸಲಹೆ.

ಯಕ್ಷನ ಸಂದೇಶವು ಬಹಳ ಹೃದಯಂಗಮವಾದುದು ಮತ್ತು ಆದರ್ಶ ವಾದುದು. ಅದರ ಪ್ರತಿಯೊಂದು ಪದವೂ ಅರ್ಥಗರ್ಭಿತವಾಗಿಯೂ ಹೊಸ ಉತ್ಸಾಹವನ್ನು ಹುಟ್ಟಿಸುವಂತೆಯೂ ರಚಿತವಾಗಿದೆ. ಇದನ್ನು ಯಕ್ಷನ ಮಾತಿನಲ್ಲೇ ಹೇಳುವುದು ಉತ್ತಮ, "ಸುಮಂಗಲಿ, ನಾನು ನಿನ್ನ ಗಂಡನ

ಸ್ನೇಹಿತನಾದ ಮೇಘ; ಅವನ ಸಂದೇಶವನ್ನು ತೆಗೆದುಕೊಂಡು ಇಲ್ಲಿ ಬಂದಿರುವೆನು;" ಹೀಗೆಂದು ನೀನು ಹೇಳಿದ ಕೂಡಲೆ ಸೀತೆಯು ಆಂಜನೇಯನನ್ನು ನೋಡಿದಂತೆ ಅವಳು ನಿನ್ನನ್ನು ಆದರದಿಂದ ಕಂಡು ನಿನ್ನ ಮುಂದಿನಮಾತನ್ನು ಆಲಿಸುವಳು. ನಾರಿಯರಿಗೆ ಸ್ನೇಹಿತರು ತರುವ ಕಾಂತವಾರ್ತೆಯು ಸಮಾಗಮಕ್ಕಿಂತ ಸ್ವಲ್ಪ ಮಾತ್ರ ಕಡಿಮೆ. ಅನಂತರ ಹೀಗೆಂದರುಹು ಅವಳಿಗೆ "ರಾಮಗಿರ್ಯಾಶ್ರಮದಲ್ಲಿ ಕ್ಷೇಮವಾಗಿರುವ ನಿನ್ನ ಕಾಂತನು ನಿನ್ನ ಕ್ಷೇಮವನ್ನು ವಿಚಾರಿಸುವನು. ಹೆಜ್ಜೆ ಹೆಜ್ಜೆಗೂ ವಿಪತ್ತಿಗೀಡಾಗಿರುವ ಪ್ರಾಣಿಗಳನ್ನು ಮುಖ್ಯವಾಗಿ ಕೇಳಬೇಕಾದುದು ಇದೇ ಹೊರತು ಮತ್ತೇನೂ ಅಲ್ಲ."

ತನ್ನ ಪತ್ನಿಯು ಅನುಭವಿಸುತ್ತಿರುವ ವೇದನೆಯು ತನ್ನ ತೀವ್ರತರವಾದ ವಿರಹವೇದನೆಯಿಂದಲೇ ಯಕ್ಷನಿಗೆ ವೇದ್ಯವಾಗಿರುವುದಂತೆ. ಅವಳು ಸಖಿಯರೊಡನೆ ಇರುತ್ತಿದ್ದಾಗಲೇ ಗಟ್ಟಿಯಾಗಿ ತಿಳಿಸಬಹುದಾಗಿದ್ದ ಅನೇಕ ವಿಚಾರಗಳನ್ನೂ ಅವಳ ಮುಖಸ್ಪರ್ಶವನ್ನಾಶಿಸಿ ಕಿವಿಯಲ್ಲಿ ಗುಟ್ಟಾಗಿ ಹೇಳಿಕೊಳ್ಳುತ್ತಿದ್ದನಂತೆ. ಆದರೆ ಈಗವಳು ಅವನ ಕಣ್ಣು ಕಿವಿಗಳಿಗೂ ದೂರವಾಗಿರುವಳು. ಆದುದರಿಂದಲೇ ದುಃಖಪೂರ್ವಕವಾದ ತನ್ನ ಸಂದೇಶವನ್ನು ಮೇಘದ ಮೂಲಕ ಕಳುಹಿಸಿರುವನಂತೆ. ತನ್ನ ಪ್ರಿಯೆಯ ಅಂಗಸೌಕುಮಾರ್ಯವನ್ನು ಪ್ರಿಯಂಗುಲತೆಗಳಲ್ಲೂ, ನೋಟವನ್ನು ಬೆದರಿದ ಹರಿಣಿಗಳಲ್ಲೂ, ಮುಖಕಾಂತಿಯನ್ನು ಚಂದ್ರನಲ್ಲೂ, ಜಡೆಯನ್ನು ನವಿಲುಗಳ ಕಲಾಪದಲ್ಲೂ, ಭ್ರೂವಿಲಾಸವನ್ನು ನದೀತರಂಗಗಳಲ್ಲೂ ನೋಡಬಯಸುವನಂತೆ. ಆದರೆ ಅಯ್ಯೋ! ಒಂದರಲ್ಲೂ ಅವಳ ಸಾಮ್ಯವಿಲ್ಲ. ಚಿತ್ರದಲ್ಲಾದರೂ ಅವಳ ಸಮಾಗಮವನ್ನು ಹೊಂದಲು ಪ್ರಯತ್ನಿಸಿದರೆ, ಕಡೆಗೆ ಆಗುವುದಿಷ್ಟೆ—

ತ್ವಾಮಾಲಿಖ್ಯ ಪ್ರಣಯಕುಪಿತಾಂ ಧಾತುರಾಗೈಶ್ಶಿಲಾಯಾಂ
ಆತ್ಮಾನಂ ತೇ ಚರಣಪತಿತಂ ಯಾವದಿಚ್ಛಾಮಿ ಕರ್ತುಂ ।
ಅಸ್ರೈಸ್ತಾವನ್ಮುಹುರುಪಚಿತೈರ್ದೃಷ್ಟಿರಾಲುಪ್ಯತೇ ಮೇ
ಕ್ರೂರಸ್ತಸ್ಮಿನ್ನಪಿ ನ ಸಹತೇ ಸಂಗಮಂ ನೌ ಕೃತಾಂತಃ ॥(II-44)

"ಪ್ರಣಯಕುಪಿತಳಾದ ನಿನ್ನನ್ನು ಸಂತೈಸಲು ನಿನ್ನಡಿಗೆರಗಿರುವಂತೆ ಧಾತುರಾಗದಿಂದ ಕಲ್ಲಿನ ಮೇಲೆ ಚಿತ್ರಿಸುವುದರೊಳಗಾಗಿ ಮೇಲೆ ಮೇಲೆ ಉಕ್ಕಿ ಬರುವ ಕಣ್ಣೀರಿನಿಂದ ನನ್ನ ನೋಟವು ಮಂಕಾಗುವುದು. ಕ್ರೂರನಾದ

ವಿಧಿಯು ಚಿತ್ರದಲ್ಲೂ ನಮ್ಮ ಸಮಾಗಮವನ್ನು ಸಹಿಸನು." ಎಷ್ಟೋ ಕಷ್ಟದಲ್ಲಿ ನಿನ್ನನ್ನು ಸ್ವಪ್ನದಲ್ಲಿ ಕಂಡು ಗಟ್ಟಿಯಾಗಿ ಆಲಿಂಗಿಸಿಕೊಳ್ಳಲು ಬರಿಯ ಆಕಾಶಕ್ಕೆ ಕೈ ಚಾಚಿದ ನನ್ನನ್ನು ನೋಡಿ ವನದೇವತೆಗಳು ಮುತ್ತಿನಂತಿರುವ ತಮ್ಮ ಕಂಬನಿಯನ್ನು ಸುರಿಸದಿರರು. ಪ್ರಿಯೆ, ನನ್ನ ಬಯಕೆಗಳಲ್ಲಿ ಒಂದೂ ಕೈಗೂಡದೆ ನಿರಂತರ ಹೀಗೆ ಶೋಕಿಸುತ್ತಿರುವೆನು. ಆದರೆ ಒಂದು ದೃಷ್ಟಿಯಿಂದ ಮುಂದೆ ಅನುಭವಿಸಬಹುದಾದ ಸುಖಗಳನ್ನು ಕಲ್ಪಿಸಿಕೊಳ್ಳುತ್ತಾ ಜೀವವನ್ನುಳಿಸಿಕೊಳ್ಳುವೆನು. ಸುಮಂಗಲಿ, ನೀನೂ ಕಾತರಪಡಬೇಡ; ಚಕ್ರದ ಅರೆಗಳಂತೆ ಕೀಳುಮೇಲಾಗುವ ಸುಖವಾಗಲಿ ಕಷ್ಟವಾಗಲಿ [1] ಎಲ್ಲಿಯವರೆಗೆ ಇರುವುದು? ಯಾರನ್ನು ತಾನೆ ಕೊನೆಯವರೆಗೂ ಹಿಂಬಾಲಿಸುವುದು? ನಮ್ಮ ಶಾಪವು ಕೊನೆಗಾಣಲು ಉಳಿದಿರುವ ನಾಲ್ಕು ತಿಂಗಳನ್ನು ಕಣ್ಣುಮುಚ್ಚಿ ಕಳೆ. ಅನಂತರ ಈಗ ಯಾವ ಸುಖಗಳನ್ನು ಅನುಭವಿಸಲು ಹಂಬಲಿಸುತ್ತಿರುವೆವೋ ಅವುಗಳನ್ನೆಲ್ಲ ತುಂಬಿದ ಬೆಳದಿಂಗಳ ರಾತ್ರಿಗಳಲ್ಲಿ ಇಬ್ಬರೂ ಅನುಭವಿಸೋಣ. ನಮ್ಮ ಪರಸ್ಪರ ಪ್ರೀತಿಯನ್ನು ಮಾತ್ರ ಮರೆಯಬೇಡ." ಇದು ಯಕ್ಷನ ಸಂದೇಶದ ಸಂಗ್ರಹ ಮಾತ್ರ. ಆದರೂ ಅದರ ಹಿಂದೆ ಅಡಗಿರುವ ಯಕ್ಷನ ಗಾಢವಾದ ಪ್ರೇಮವೂ, ಪ್ರಿಯೆಯ ಕ್ಷೇಮಚಿಂತನತತ್ಪರತೆಯೂ ಯಾರಿಗೂ ಗೋಚರವಾಗದಿರದು.

ಸಂದೇಶವನ್ನು ಯಾವ ರೀತಿ ತಿಳಿಸಬೇಕೆಂದು ಮೇಘದೂತನಿಗೆ ಹೇಳಿ ಕಡೆಯಲ್ಲಿ ಅವನಿಗೆ ತನ್ನ ಕೃತಜ್ಞತೆಯನ್ನೂ ಆಶೀರ್ವಾದವನ್ನೂ ಈ ರೀತಿ ಸೂಚಿಸುವನು.—

"ಈ ಬಂಧುಕಾರ್ಯವನ್ನು ನಡೆಸೋಣವೆಂದು ಈ ವೇಳೆಗೆ ಸಂಕಲ್ಪಿಸಿಯೇ ಇರಬೇಕು. ಒಲ್ಲೆನೆನ್ನುವುದು ನಿನ್ನ ಧೀರತೆಗೆ ಸಲ್ಲದು. ಗೋಗರೆಯುವ ಚಾತಕಗಳಿಗೆ ಸದ್ದು ಮಾಡದೆಯೇ ನೀರನ್ನು ಸುರಿಸುವೆ. ಹೆಚ್ಚು ಹೇಳಲೇಕೆ! ಈ ಅನುಚಿತವಾದ ಪ್ರಾರ್ಥನಾಮಾರ್ಗವನ್ನು ಹಿಡಿದಿರುವ ನನ್ನನ್ನು ಮಿತ್ರನೆಂದೋ, ವಿಧುರನೆಂದೋ, ದಯಾಪಾತ್ರನೆಂದೋ ಭಾವಿಸಿ ನನ್ನ ಕೆಲಸವನ್ನು ನಡೆಸು. ಆಮೇಲೆ ವರ್ಷಋತುವಿನಿಂದ ನಿನ್ನ ಸಂಪತ್ತನ್ನು

1. ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರನೇಮಿಕ್ರಮೇಣ.

ಹೆಚ್ಚಿಸಿಕೊಂಡು ಇಷ್ಟಬಂದಂತೆ ಸಂಚರಿಸು. ನಿನಗೂ ನಿನ್ನ ವಿದ್ಯುತ್ಕಾಂತೆಗೂ ಕ್ಷಣವೂ ವಿಯೋಗವಾಗದಿರಲಿ."

ಇಷ್ಟೆಲ್ಲ ಮಾತನಾಡಿ, ವರ್ಣಿಸಿ, ಪ್ರಾರ್ಥಿಸಿದರೂ ಯಕ್ಷನು ತನ್ನ ಮೇಘದೂತನಿಂದ ಒಂದು ಮರುಮಾತನ್ನೂ ಅಪೇಕ್ಷಿಸುವುದಿಲ್ಲ. ಏಕೆಂದರೆ ಕೋರಿಕೆಯನ್ನು ಸಲ್ಲಿಸುವುದೇ ಸತ್ಪುರುಷರು ಯಾಚಕರಿಗೆ ಕೊಡುವ ಮರುಮಾತೆಂದು [1] ಅವನ ನಂಬಿಕೆ

"ಕಸ್ತೂರಿಯ ಪರಿಮಳವನ್ನು ಸಾರಿಸಾರಿ ಹೇಳಬೇಕಾಗಿಲ್ಲ" ವೆಂಬ ಗಾದೆಗನುಸಾರವಾಗಿ ಮೇಘಸಂದೇಶದ ಸೌಂದರ್ಯವನ್ನೂ ಸ್ವಾರಸ್ಯವನ್ನೂ ಹೆಚ್ಚು ವಿಮರ್ಶಿಸಿ ವಿವರಿಸುವುದು ಅನಾವಶ್ಯಕ. ಕಾಳಿದಾಸನ ಮೇಲ್ಪಙ್ಕ್ತಿಯನ್ನನುಸರಿಸಿ ಈಚೆಗೆ ಅನೇಕ ದೂತ ಅಥವಾ ಸಂದೇಶ ಕಾವ್ಯಗಳು ಹುಟ್ಟಿರುವುವು [2] ವೈಷಯಿಕ ಸುಖವನ್ನು ತ್ಯಜಿಸಿಯೇ ಮೋಕ್ಷವನ್ನು ಸಂಪಾದಿಸಬೇಕೆಂದು ಹೇಳುವ ಜೈನ ಬೌದ್ಧಮತಾನುಯಾಯಿಗಳೂ ತಮ್ಮ ಸಿದ್ಧಾಂತ ತತ್ವಗಳನ್ನು ಬೋಧಿಸಲು ಈ ಕಾವ್ಯಮಾರ್ಗವನ್ನೇ ಉಪಯೋಗಿಸಿಕೊಂಡಿರುವರು. ಜೀವಾತ್ಮನು ಪರಮಾತ್ಮನಲ್ಲಿಗೆ ಕಳುಹಿಸುವ ಹೃದಯವೆಂಬ ಪ್ರೇಮದೂತನು ದಾರಿಯಲ್ಲಿ ಸಿಕ್ಕುವ ಮಾನುಷಸೌಂದರ್ಯ ವೈಷಯಿಕಸುಖಗಳಿಗೆ ಬೆರಗಾಗಿ ದಾರಿತಪ್ಪಕೂಡದೆಂಬುದೇ ಕಾವ್ಯದ ಗೂಢಾಶಯವೆಂದು ಹೇಳಿ ಅನೇಕ ಸನಾತನಧರ್ಮಾವಲಂಬಿಗಳೂ ಇದರ ಮೇಲ್ಪಙ್ಕ್ತಿಯನ್ನನುಸರಿಸಿ ಚೇತೋದೂತ, ಮನೋದೂತ ಮುಂತಾದ ಕಾವ್ಯಗಳನ್ನು ನಿರ್ಮಿಸಿರುವರು. ಕಾವ್ಯದ ಆಶಯವೇನೆಂಬ ವಿಚಾರದಲ್ಲಿ ಇವರ ಅಭಿಪ್ರಾಯಗಳನ್ನು ಒಪ್ಪದಿದ್ದರೂ ಇದರಿಂದೆಲ್ಲ ಒಂದು ಸಂಗತಿಯನ್ನು ಮಾತ್ರ ಖಂಡಿತವಾಗಿ ಊಹಿಸಬಹುದು. ಮೇಘಸಂದೇಶವು ಎಂತಹ ಅರಸಿಕರ ಮೇಲೂ ಪರಿಣಾಮಕಾರಿಯಾದ ಪ್ರಭಾವವನ್ನು ಬೀರಿದೆಯೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಎಂದಮೇಲೆ ಸಾಹಿತ್ಯಸುಧಾಪಾನ

---

1. ಪ್ರತ್ಯುಕ್ತಂ ಹಿ ಪ್ರಣಯಿಷು ಸತಾಮೀಪ್ಸಿತಾರ್ಥಕ್ರಿಯೈವ.

2. ಭರತಖಂಡದಲ್ಲೇ ಸುಮಾರು ೫೦ ಕ್ಕೆ ಕಡಿಮೆಯಿಲ್ಲದಂತೆ ಇದರ ಅನುಕರಣಗಳು ಸಿಕ್ಕುತ್ತದೆ. ಇತರ ಕೆಲವು ಭಾಷೆಗಳಲ್ಲೂ ಅನುಕರಣಗಳಿವೆಯೆಂದು ಹೇಳಲಾಗಿದೆ.

ದಿಂದ ವಿಶದವಾದ ಹೃದಯವನ್ನುಳ್ಳ ಸಹೃದಯರಿಗೆ ಇದರಿಂದ ಉಂಟಾಗುವ ಆನಂದವನ್ನು ವರ್ಣಿಸಲು ಸಾಧ್ಯವೇ?

ಇದಲ್ಲದೆ ಬಹಳ ಸಣ್ಣದಾಗಿಯೂ ಸುಲಭವಾಗಿಯೂ ಇರುವ ಈ ಕಾವ್ಯಕ್ಕೆ ಸುಮಾರು 50 ವ್ಯಾಖ್ಯಾನಗಳಿರುವುದೂ, ಇದರ 120 ಶ್ಲೋಕಗಳಲ್ಲಿ 33 ಶ್ಲೋಕಗಳನ್ನು (ಕಾಲು ಭಾಗಕ್ಕಿಂತಲೂ ಹೆಚ್ಚು) ಆಲಂಕಾರಿಕರು ಉದಾಹರಿಸಿರುವುದೂ ಇದರ ಮೇಲ್ಮೆಯನ್ನು ಸೂಚಿಸುವುವು. ವಿಲ್ಸನ್‌ರವರು ಭಾರತದ ಸುವರ್ಣ ಗ್ರಂಥಮಾಲೆಯಲ್ಲಿ ಇದಕ್ಕೆ ಅಗ್ರಸ್ಥಾನವನ್ನು ಕೊಟ್ಟಿರುವುದರ ಔಚಿತ್ಯವನ್ನು ಇದರಿಂದ ಮನಗಾಣಬಹುದು.

ಗಗನಮಾರ್ಗದಲ್ಲಿ ಸಂಚರಿಸಿದ ಅಂಶ, ವಿರಹಿಯು ನಲ್ಲೆಗೆ ಸಂದೇಶವನ್ನು ಕಳುಹಿಸುವ ಅಂಶ ಇವೆರಡೂ ರಾಮಾಯಣದಿಂದ ಸೂಚಿತವಾಗಿರಬಹುದು. ಆದರೆ ಸನ್ನಿವೇಶಕ್ಕೆ ತಕ್ಕಂತೆ ಮೋಡವನ್ನು ಆ ಕಾರ್ಯಕ್ಕೆ ಉಪಯೋಗಿಸಿಕೊಂಡದ್ದು, ಆಯಾ ಪ್ರದೇಶಗಳಿಗೆ ಹೋದಾಗ ಮೇಘಕ್ಕೂ ಅವುಗಳಿಗೂ ಚಮತ್ಕಾರವಾದ ನಿಕಟಸಂಬಂಧವನ್ನು ಸೂಚಿಸುವುದು, ಸಂದೇಶಕ್ಕೆ ರಾಮಾಯಣದಲ್ಲಿ ಅನಿರೂಪಿತವಾದ ಪ್ರಿಯಾಜೀವರಕ್ಷಣೆಯೆಂಬ ಉದಾತ್ತವಾದ ಉದ್ದೇಶವನ್ನು ಆರೋಪಿಸಿರುವುದು, ಕಾವ್ಯದ ಉದ್ದಕ್ಕೂ ಶಾಂತಪ್ರೇಮವನ್ನು ಹೆಣೆದಿರುವುದು, ಇವೆಲ್ಲವೂ ಕಾಳಿದಾಸನ ಅನ್ಯಾದೃಶವಾದ ಕಲ್ಪನಾಶಕ್ತಿಯ ಫಲ. ಪ್ರಕೃತಿಮಾನವರಲ್ಲಿ ಚೇತನಾಚೇತನವೆಂಬ ಭೇದವನ್ನೆಣಿಸದೆ ಪರಸ್ಪರ ಸುಖದುಃಖಗಳನ್ನು ಅನುಭವಿಸಿ ಆನಂದಿಸುವುದು, ದುಃಖಿಸುವುದು, ಮರುಗುವುದೂ ಉಂಟೆಂಬಂತೆ ಚಿತ್ರಿಸಿರುವುದು ಹೃದಯಂಗಮವಾಗಿದೆ. ಮಾನವ ಜೀವನದಲ್ಲಿ ಪ್ರಕೃತಿಯು ಒಂದು ಮುಖ್ಯವಾದ ಭಾಗವಿದ್ದಂತೆ. ಹಾಗೆಯೇ ಪ್ರಕೃತಿಯಲ್ಲಿ ಮಾನವನೂ ಒಂದು ಮುಖ್ಯವಾದ ಅಂಶ. ಒಂದನ್ನೊಂದು ಬಿಡದೆ ಎರಡೂ ಪೂರ್ಣತೆಯನ್ನು ಹೊಂದುವುವು. ಈ ವಿಧವಾದ ಪ್ರಕೃತಿಪ್ರೇಮವು ಕಾಳಿದಾಸನ ಮನೋಧರ್ಮದಲ್ಲಿ ಬೇರೂರಿತ್ತು. ಕಾವ್ಯಾನಂದವು "ಬ್ರಹ್ಮಾಸ್ವಾದಸಹೋದರ" ವೆಂದು ಲಲಿತರೀತಿಯಲ್ಲಿ ಬೋಧಿಸಿರುವುದೇ ಮೇಘಸಂದೇಶದ ವೈಶಿಷ್ಟ್ಯ.

ರಸಭಾವಗಳು ಭಾವಗೀತೆಗಳ ಲಕ್ಷಣಾನುಸಾರವಾಗಿ ಒಂದೊಂದು ಶ್ಲೋಕದಲ್ಲೂ ತುಂಬಿ ತುಳುಕುತ್ತಿರುವುವು. ಉತ್ಕಟವಾದ ಭಾವಗಳೂ

ಸರಳವಾದ ಭಾಷೆಯಲ್ಲಿ ಸಾಕ್ಷಾತ್ತಾಗುವಂತೆ ನಿರೂಪಿತವಾಗಿರುವುವು. ಕೆಲವು ಕಡೆಗಳಲ್ಲಿ ಭಕ್ತಿಭಾವವೂ[1] ಕೆಲವು ಕಡೆ ಶಾಂತರಸವೂ[2] ಗೋಚರವಾದರೂ ಪ್ರಧಾನವಾದ ವಿಪ್ರಲಂಭ ಶೃಂಗಾರಕ್ಕೆ ಯಾವುದೂ ವಿರೋಧಿಯಲ್ಲ.[3] ಲೋಕವೃತ್ತಾಂತವನ್ನು ಪ್ರದರ್ಶಿಸಿ ಆ ಮೂಲಕ ನಾಯಿಕೆಯ ಮನಸ್ಸನ್ನು ಸ್ಥಿರಪಡಿಸುವುದೇ ಇಲ್ಲಿ ಕವಿಯ ಆಶಯ. ಪಾಠಕರ ದೃಷ್ಟಿಯಿಂದ, ಅತಿಥಿಸತ್ಕಾರ, ಪರೋಪಕಾರ, ದೈವಭಕ್ತಿ, ತೀರ್ಥಯಾತ್ರೆ, ಭಾರತದ ಇತಿಹಾಸ ಮತ್ತು ದೇಶಪದ್ಧತಿಗಳ ಪರಿಚಯ ಎಲ್ಲವೂ ದೃಶ್ಯಕಾವ್ಯದ ಮೂಲಕ ಆಗುವುದಕ್ಕಿಂತ ಸಾವಿರ ಪಾಲು ಹೆಚ್ಚು ಆನಂದದಿಂದ ಮಧುರ ರಮಣೀಯವಾದ ರೀತಿಯಲ್ಲಿ ಅನುಭವಗೋಚರವಾಗುತ್ತದೆ. "ವಿದ್ವತ್ಪ್ರೀತ್ಯೈ ಬಹುರಸಸುಧಾಸ್ಯಂದಿ ಸಂದೇಶಕಾವ್ಯಮ್" ಎಂಬ ಸುಭಗ ಸಂದೇಶದ ಮಾತು ಮೇಘ ಸಂದೇಶಕ್ಕೆ ಮುಖ್ಯವಾಗಿ ಅನ್ವಯಿಸುವುದು. ಕಾವ್ಯದ ಒಂದೊಂದು ಶ್ಲೋಕದಲ್ಲೂ ಚಿತ್ರಿತವಾಗಿರುವ ಸನ್ನಿವೇಶವೂ ವ್ಯಕ್ತಿಗಳೂ ಯಥಾವತ್ತಾಗಿ ಪಾಠಕರ ಕಣ್ಣುಮುಂದೆ ನಿಲ್ಲುವುವು. ಈ ವರ್ಣನೆಗಳಲ್ಲಿ ಗುಣತಾರತಮ್ಯವನ್ನು ಕಂಡುಹಿಡಿಯುವುದು ಅಸಾಧ್ಯ. ಮೇಘವು ವಿರಹಿಣಿಯಾದ ಯಕ್ಷಪತ್ನಿಯನ್ನು ಕಂಡಾಗ ಅವಳ ಸ್ಥಿತಿ, ಹರನು ಸರ್ಪಗಳನ್ನು ದೂರಮಾಡಿ ಹಸ್ತಲಾಘವ ಕೊಡುತ್ತಿರಲು ಕೈಲಾಸದಲ್ಲಿ ಮೆಲ್ಲಮೆಲ್ಲನೆ ಸಂಚರಿಸುವ ಗೌರಿ; ಗಂಗಾತೀರದಲ್ಲಿ ಗೂಢಮಣಿ (ಮರಳಿನಲ್ಲಿ ಬಚ್ಚಿಟ್ಟಿರುವ ರತ್ನವನ್ನು ಹುಡುಕುತ್ತಿರುವುದು) ಯನ್ನಾಡುವ ಬಾಲಿಕೆಯರು; ಇವೇ ಮೊದಲಾದ ವ್ಯಕ್ತಿ ವರ್ಣನೆಗಳೂ; ಅಲಕೆ, ಯಕ್ಷಪ್ರಾಸಾದ, ಉಜ್ಜಯಿನಿ ಮೊದಲಾದ ಪ್ರದೇಶಗಳ ವರ್ಣನೆಗಳೂ ಹೃದಯಂಗಮವಾಗಿರುವುವು. ಕೆಲವು ವರ್ಣನೆಗಳು ಚಿತ್ರಗಾರರಿಗೂ ಸ್ಫೂರ್ತಿಯನ್ನಿತ್ತು ಈಚೆಗೆ ಚಿತ್ರಾರ್ಪಿತವಾಗಿಯೂ ಇವೆ.[4]

---

1. I-37, I-47. 2. II-34, II-51.

3. Cf. ವಿದ್ಯುಲ್ಲತಾ 164, — ಅತ್ರ ಪ್ರಕೃತಶೃಂಗಾರರಸಪ್ರತಿಕೂಲ ತಾತ್ಪರ್ಯಾತ್.

4. ಭಾರತದ ಸುವರ್ಣಗ್ರಂಥಮಾಲೆ. ವಿಲ್ಸನ್‌ರವರ ಸಂಸ್ಕರಣ. ಕಾಶಿಯ ಕೇಶವಪ್ರಸಾದ ಮಿತ್ರರ ಹಿಂದೀ ಸಂಸ್ಕರಣ.

## ವೃತ್ತ, ಶೈಲಿ, ಅಲಂಕಾರಗಳು

ಕಾವ್ಯದ ವೃತ್ತವು ವಸ್ತುವಿಗನುಗುಣವಾಗಿರುವುದು ಎಲ್ಲ ವಿಮರ್ಶಕರ ಗಮನಕ್ಕೂ ಬಂದಿದೆ. ವೃತ್ತವು ಉದ್ದವಾಗಿ ಹೆಚ್ಚು ಗುರುವರ್ಣಗಳಿಂದ ಕೂಡಿರುವುದು ಕಾವ್ಯದ ಪ್ರಧಾನರಸವಾದ ವಿಪ್ರಲಂಭ ಶೃಂಗಾರವನ್ನು ಪೋಷಿಸುವುದು. ತಾನಾಗಿಯೇ ಎಳೆದೆಳೆದು ಹೇಳಬೇಕಾಗಿರುವ ಶ್ಲೋಕಗಳ ಗತಿಯು ವಿರಹಾವಸ್ಥೆಯ ಸೂಚನೆಗೆ ತಕ್ಕಂತೆ ಇದೆ. ವೃತ್ತದಲ್ಲಿ ನಾಲ್ಕು ಕಡೆ ಯತಿ ಬರುವುದು ಇದಕ್ಕೆ ಸಹಕರಿಸುತ್ತದೆ. ಸಂದೇಶಹಾರಿಯಾದ ಮೇಘದ ಪ್ರಯಾಣದ ಸಾವಧಾನ, ಅನಾಯಾಸಗಳೂ ಈ ಮಂದಾಕ್ರಾಂತಾ ವೃತ್ತ ದಿಂದ ಸೂಚಿತವಾಗುವುವು. ಒಟ್ಟಿನಲ್ಲಿ ಈ ವೃತ್ತದ ಪ್ರಭಾವದಿಂದ ಶ್ಲೋಕ ಗಳು ರಾಜರ್ಷಿವಿಯಿಂದ ಸಾಗಿ ಪಾಂಡಿತ್ಯವಿಲ್ಲದಿರುವವರಿಗೂ ಭಾವವು ತಾನಾಗಿಯೇ ಸ್ಫುರಿಸುವುದು. ಒಟ್ಟು ಕಾವ್ಯವು (ಶ್ರೋತ್ರಪೇಯ) ಕಿವಿ ಗಿಂಪಾಗಿರುವುದಕ್ಕೂ ವೃತ್ತವು ಬಹಳ ಮಟ್ಟಿಗೆ ಕಾರಣವಾಗಿದೆಯೆನ್ನುವು ದರಲ್ಲಿ ಸಂದೇಹವಿಲ್ಲ.

ಮೇಘಸಂದೇಶದ ಶೈಲಿಯು ಬಹಳ ಸುಲಭವೆನ್ನುವುದರಲ್ಲಿ ವಿವಾದವೇ ಇಲ್ಲ. ಪದಗಳು ಲಲಿತವಾಗಿರುವುದರಿಂದ ಸಂಸ್ಕೃತದ ಸ್ಥೂಲಪರಿಚಯ ವುಳ್ಳವರೂ ಸುಲಭವಾಗಿ ಅರ್ಥವನ್ನು ತಿಳಿದುಕೊಳ್ಳಬಹುದು. ಉದ್ದ ವಾದ ಸಮಸ್ತಪದಗಳು ಕೆಲವು ಕಡೆ ಬಂದರೂ ಅವುಗಳ ಅರ್ಥವನ್ನು ತಿಳಿದುಕೊಳ್ಳುವುದಕ್ಕೆ ಹೆಚ್ಚು ಕ್ಲೇಶಪಡಬೇಕಾಗಿಲ್ಲ.

ಅದಕ್ಕೇ ಹೆಸರುಗೊಂಡ ಈ ಕವಿಯ ಉಪಮೆಗಳು ಪ್ರಕೃತ ಕಾವ್ಯದಲ್ಲಿ ಹೇರಳವಾಗಿವೆ. ಇವುಗಳಲ್ಲಿ ಅನೇಕ ಮುಖ್ಯವಾದುವನ್ನು ಅನುವಾದದಲ್ಲಿ ಸೇರಿಸಲು ಪ್ರಯತ್ನಪಡಲಾಗಿದೆ. ಆದುದರಿಂದ ಪುನಃ ಅವುಗಳನ್ನು ಪಟ್ಟಿ ಮಾಡುವುದು ಅನಾವಶ್ಯಕ. ಹೀಗೆಯೇ ರಮ್ಯವಾದ ಅನೇಕ ಉತ್ಪ್ರೇಕ್ಷೆ ಗಳೂ ಅರ್ಥಾಂತರ ನ್ಯಾಸಗಳ ಔಚಿತ್ಯವೂ ಸಹೃದಯರಿಗೆ ಆಹ್ಲಾದಕರ ವಾಗುವುವು.

ಲೌಕಿಕ ದೃಷ್ಟಿಯಿಂದ, ಯಕ್ಷಪತ್ನಿಯು ಒಂದು ಪ್ರತಿಸಂದೇಶವನ್ನು

ಕಳುಹಿಸಿದ ಸಂಗತಿಯನ್ನು ಕುರಿತು ಅನೇಕ ಕಾವ್ಯಗಳು ಹುಟ್ಟಿರುವುವು.[1] ಆದರೆ ಅವು ಕಾಳಿದಾಸನ ಆಶಯವನ್ನೇ ಅನುಸರಿಸಿವೆಯೆನ್ನಲು ಮನಸ್ಸು ಬಾರದು. ಆದುದರಿಂದ ಕೆಲವು ಪ್ರತಿಗಳಲ್ಲಿ ಮುದ್ರಿತವಾಗಿರುವ, ಈ ಅರ್ಥವನ್ನೊಳಗೊಂಡ 'ಆಶ್ವಾಸ್ಯೈವಂ ಪ್ರಥಮ ವಿರಹೋದಗ್ರಶೋಕಾಂ--' ಎಂಬ ಶ್ಲೋಕವು ಪ್ರಕ್ಷಿಪ್ತವೆಂದು ತೋರುತ್ತದೆ.[2] ತ್ರೈಲೋಕ್ಯಮೋಹನ ಗುಹನಿಯೋಗಿ ರವಿಕೀರ್ತಿಯು ಮೇಘದೌತ್ಯವೆಂಬ ಕಾವ್ಯದಲ್ಲಿ ಯಕ್ಷಪತ್ನಿಯು ಗಂಡನ ಪ್ರವಾಸಾಜ್ಞೆಯನ್ನು ರದ್ದುಪಡಿಸಬೇಕೆಂದು ಕುಬೇರನನ್ನು ಪ್ರಾರ್ಥಿಸಿಕೊಂಡುದಾಗಿ ಹೇಳಿದೆ[3] ಕುಬೇರನು ಮೇಘಸಂದೇಶವನ್ನು ಕೇಳಿದಕೂಡಲೆ ಮರುಗಿ ಶಾಪವು ಕೊನೆಗಾಣುವಂತೆ ಮಾಡಿದನೆಂದು ಪ್ರತಿಪಾದಿಸುವ 'ಶ್ರುತ್ವಾ ವಾರ್ತಾಂ ಜಲದಕಥಿತಾಂ ತಾಂ ಧನೇಶೋಪಿ ಸದ್ಯಃ--' ಎಂಬ ಪ್ರಕ್ಷಿಪ್ತ ಶ್ಲೋಕವೂ ಇದೇ ಮಾರ್ಗವನ್ನನುಸರಿಸಿರುವುದು.

## ಪರಿಶಿಷ್ಟ I—ಮೇಘಸಂದೇಶ—ಪಾಠ

ಕಾವ್ಯವು ಭಿನ್ನರುಚಿಗಳಾದ ಅನೇಕ ಸಹೃದಯರ ಮೆಚ್ಚುಗೆಯನ್ನು ಪಡೆದುದರಿಂದ ಇದರ ಪಾಠದಲ್ಲಿ ಅನೇಕ ವಿಶೇಷಗಳು ಕಂಡುಬರುತ್ತವೆ.

I. ಶ್ಲೋಕಗಳ ಒಟ್ಟು ಸಂಖ್ಯೆಯಲ್ಲಿ ಭೇದ—ವ್ಯಾಖ್ಯಾನಕಾರರಲ್ಲಿ ಮುಖ್ಯರಾದವರು ಕಾಶ್ಮೀರದ ವಲ್ಲಭದೇವ ಮತ್ತು ಮಲ್ಲಿನಾಥ. ವಲ್ಲಭ ಪಾಠದಲ್ಲಿ ಒಟ್ಟು 111 ಶ್ಲೋಕಗಳು. ಮಲ್ಲಿನಾಥ ಪಾಠದಲ್ಲಿ 118.[4]

---

1. ಮಂಡಿಕಲ್ ರಾಮಾಶಾಸ್ತ್ರಿಗಳ 'ಮೇಘ ಪ್ರತಿಸಂದೇಶ'; ಕೃಷ್ಣಮೂರ್ತಿಯ 'ಯಕ್ಷೋಲ್ಲಾಸ' (17th century); ಕೊರಾದ ರಾಮಚಂದ್ರನ 'ಘನವೃತ್ತ'; ಮ|| ಮ|| ಪರಮೇಶ್ವರ ಝಾರವರ 'ಯಕ್ಷಮಿಲನ ಕಾವ್ಯ'; ಭಟ್ಟವಾಮನನ 'ಹಂಸ ಸಂದೇಶ'—ಇವೇ ಮೊದಲಾದುವು. Krishnamachariar's Cl. S. Lit.

2. M. Rangacharya—Critical Appreciation of the Cloud Messenger, p. 88.

3. I. H. Q. III, pp. 273—97.

4. Harichand,—Kālidāsa et l art, p. 239.

ನಂದರ್ಗಿಕರ್‌ರವರ ಸಂಸ್ಕರಣದಲ್ಲಿ ಒಟ್ಟು 121 ಶ್ಲೋಕಗಳು (ಇದರಲ್ಲಿ ಮಲ್ಲಿನಾಥನು ಪ್ರಕ್ಷಿಪ್ತವೆಂದು ಹೇಳಿ ವ್ಯಾಖ್ಯಾನಮಾಡಿರುವ ಶ್ಲೋಕಗಳೂ ಸೇರಿವೆ). 'ವಾಸಶ್ಚಿತ್ರಂ ಮಧುನಯನಯೋಃ'—(II-33) ಎಂಬುದನ್ನು ಮಹಿಮಸಿಂಹಗಣಿಯೂ 'ಗತ್ಯುತ್ಕಂಪಾದಲಕಪತಿತೈಃ' — (II - 11) ಎಂಬುದನ್ನು ಈಶ್ವರಚಂದ್ರವಿದ್ಯಾಸಾಗರರವರೂ ಪ್ರಕ್ಷಿಪ್ತವೆನ್ನುವರು. ಇವುಗಳ ಜೊತೆಗೆ ನಂದರ್ಗಿಕರ್‌ರವರು ಮಲ್ಲಿನಾಥನು ವ್ಯಾಖ್ಯಾನಮಾಡದ 9 ಶ್ಲೋಕಗಳನ್ನು ಪ್ರಕ್ಷಿಪ್ತವೆಂದು ಕೊಟ್ಟಿರುವರು.[1]

II. ಕ್ರಮಭೇದ—ಪೂರ್ವಮೇಘದಲ್ಲಿ 'ಮಂದಂಮಂದಂ........', 'ತಾಂಚಾವಶ್ಯಂ... ....', 'ಕರ್ತುಂಯಚ್ಚ........' 'ಅಪೃಚ್ಛಸ್ವ........' ಎಂಬ ಕ್ರಮದಲ್ಲಿ ಮಲ್ಲಿನಾಥನೂ ಪೂರ್ಣಸರಸ್ವತಿಯೂ ವ್ಯಾಖ್ಯಾನ ಮಾಡಿರುವರು. ನಂದರ್ಗಿಕರ್‌ರವರು ಈ ಪಾಠಕ್ರಮವು ತಪ್ಪೆಂದು ಆಕ್ಷೇಪಿಸಿರುವರು. ವಲ್ಲಭನು 'ಅಪೃಚ್ಛಸ್ವ........', 'ಮಂದಂಮಂದಂ........', 'ತಾಂ ಚಾವಶ್ಯಂ .. ....', 'ಕರ್ತುಂಯಚ್ಚ........', ಎಂಬ ಕ್ರಮವನ್ನನು ಸರಿಸಿರುವನು.[2] ಇದರಂತೆಯೇ ಉತ್ತರ ಮೇಘದ ಅಲಕಾವರ್ಣನೆಯ ಶ್ಲೋಕಗಳೂ ಬೇರೆ ಬೇರೆ ಕ್ರಮಗಳಲ್ಲಿ ಪಠಿತವಾಗಿವೆ.

III. ಪಾಠಭೇದಕ್ಕೆ ಉದಾಹರಣೆ—'ಆಷಾಢಸ್ಯ ಪ್ರಥಮದಿವಸೆ' ಎಂದು ಮಲ್ಲಿನಾಥನ ಪಾಠವಿರುವಲ್ಲಿ 'ಆಷಾಢಸ್ಯ ಪ್ರಶಮದಿವಸೆ' ಎಂದು ವಲ್ಲಭಪಾಠವಿದೆ. ವಲ್ಲಭನು 'ಪ್ರಥಮದಿವಸೆ' ಎಂಬ ಪಾಠವನ್ನು ತಪ್ಪೆಂದು ಆಕ್ಷೇಪಿಸಿ 'ಪ್ರಶಮದಿವಸೆ' ಎಂಬುದನ್ನೇ ಸಮರ್ಥಿಸಿರುವನು.[3]

IV. ಮೂಲಪಾಠವನ್ನು ನಿರ್ಧರಿಸಲು ಸಿಕ್ಕುವ ಸಹಾಯ—ಕೆಲವು ಪ್ರಾಚೀನ ಜೈನ ಗ್ರಂಥಗಳಲ್ಲಿ ಈ ಕಾವ್ಯದ ಶ್ಲೋಕಗಳನ್ನು ಸಮಸ್ಯಾಪೂರಣಕ್ಕೆ ಉಪಯೋಗಿಸಿಕೊಂಡಿರುವುದರಿಂದ ಮೂಲಪಾಠವನ್ನು ನಿರ್ಧರಿ

1. Cf. Notes pp. 115 and 116.

2. Cf. Hultsch's End., p. 29.

3. ಈ ಪಾಠ ಭೇದ ಮತ್ತು ಶ್ಲೋಕಗಳ ಕ್ರಮ ಭೇದಗಳ ವಿವರವೆಲ್ಲವನ್ನೂ ಹುಲ್ಷ್‌ರವರ ಸಂಸ್ಕರಣದ ಪೀಠಿಕೆ (pp. XV-XIX), ಅವರ ಪ್ರಕ್ಷಿಪ್ತ ಶ್ಲೋಕಗಳ ಅನುಬಂಧ, ನಂದರ್ಗಿಕರ್‌ರವರ ಟಿಪ್ಪಣಿಗಳಿಂದ ವಿಶದವಾಗಿ ತಿಳಿಯಬಹುದು.

ಸಲು ಸ್ವಲ್ಪ ಸಹಾಯವು ಸಿಕ್ಕುವುದು. ಇಂತಹ ಗ್ರಂಥಗಳಲ್ಲಿ ಸಂಗಮನ ಮಗ ವಿಕ್ರಮನ ನೇಮಿದೂತವು ಒಂದು. ಪ್ರಕ್ಷಿಪ್ತವೆಂದು ಭಾವಿಸಲ್ಪಟ್ಟಿರುವ ಮೇಘಸಂದೇಶದ ಹದಿನಾಲ್ಕು ಶ್ಲೋಕಗಳು ಇದರಲ್ಲಿವೆ. ಇದರ ಕಾಲವು ಅನಿಶ್ಚಿತವಾಗಿದೆ. ಇದರಂತೆಯೇ ವೀರಸೇನನ ಶಿಷ್ಯ ಜಿನಸೇನನ ಪಾರ್ಶ್ವಾಭ್ಯುದಯ (ಒಬ್ಬ ತೀರ್ಥಂಕರರ ಚರಿತ್ರೆ) ದಲ್ಲಿ ಈ ಕಾವ್ಯವು ಪೂರ್ತಿಯಾಗಿ ಅಡಕವಾಗಿದೆ. ಪಾರ್ಶ್ವಾಭ್ಯುದಯದ ಒಂದೊಂದು ಶ್ಲೋಕದಲ್ಲೂ ಮೇಘಸಂದೇಶದ ಒಂದೆರಡು ಪಾದಗಳಾದರೂ ಸೇರಿಕೊಂಡಿವೆ. ಜಿನಸೇನನು ಈ ಸಮಸ್ಯಾಪೂರಣ ಕಾರ್ಯದಲ್ಲಿ ಮೂಲಪಾಠವನ್ನು ಬಹಳ ಚೆನ್ನಾಗಿ ಗಮನಿಸಿರುವನು. ಇವನು ಒಂದನೆಯ ಅಮೋಘವರ್ಷನೆಂಬ ರಾಷ್ಟ್ರಕೂಟ ದೊರೆಯ ಸಮಕಾಲಿಕನು. ಕಾಳಿದಾಸನ ಹೆಸರನ್ನು ನಿರ್ದೇಶಿಸುವ ಐಹೊಳೆ ಶಾಸನ ಮತ್ತು ಬಾಣನ ಕಾಲಕ್ಕಿಂತ ಒಂದೂವರೆ ಶತಮಾನ ಮಾತ್ರ ಈಚಿನವನು.[1] ಔತ್ತರ ದಾಕ್ಷಿಣಾತ್ಯ ಬೌದ್ಧರೂ ಈ ಕಾವ್ಯವನ್ನು ವ್ಯಾಸಂಗಮಾಡಿದ್ದರು. ಸಿಂಹಳೀ ಭಾಷೆಯಲ್ಲಿರುವ ಇದರ ಅನುವಾದ ಒಂದನ್ನು ಪಾನಬೊಕ್ಕೆಯವರು ಅಚ್ಚುಹಾಕಿಸಿರುವರು. ಮತ್ತು ಟಿಬೆಟನ್ ಭಾಷೆಯ ಪರಿವರ್ತನವೊಂದನ್ನು ಜರ್ಮನ್ ಭಾಷಾಂತರದೊಡನೆ ಡಾ॥ ಬೆಕ್ ರವರು ಪ್ರಕಟಿಸಿರುವರು. ಪ್ರಕ್ಷಿಪ್ತವೆಂದು ಹೇಳಲಾಗಿರುವ ಶ್ಲೋಕಗಳಲ್ಲಿ ಏಳು ಮಾತ್ರ ಸಿಂಹಳೀ ಸಂಸ್ಕರಣದಲ್ಲೂ ಆರು ಶ್ಲೋಕಗಳು ಟಿಬೆಟನ್ ಸಂಸ್ಕರಣದಲ್ಲೂ ಕಂಡುಬರುತ್ತವೆ.

## ಪರಿಶಿಷ್ಟ II—ಮೇಘಸಂದೇಶದ ಕೆಲವು ಪ್ರಶಂಸೆಗಳು

1. "The most wonderful love-poem in any language." —C. A. KINCAID.

2. "In Meghasandesa Kalidasa created a new genre in Sanskrit literature." "A majestic metre........" —RYDER.

1. T. S. Kuppuswamy Sastri—Ind. Ant. XXXVI, p. 287ff.

3. "Its subject is a sort of idyll of fairy-land." — ROOKE.

4. "A gem of inestimable worth." — SCHROEDER.

5. "The most beautiful bewailing of a passionate love which one can read." — MEYER.

6 "The admirable truth to Nature........in the Meghaduta." — ALEXANDER VON HUMBOLDT.

7. "And Meghaduta the cloud-messenger
Whoever seeks him not as a friend
of the soul ?"

Swift-moving cloud, aerial traveller
Whoever with thee wandered, sailed
with thee

The land of my youth greets me
cordially !

I am captured, I am in bondage
Oh, I have no other messenger
Free in the sky is thy path
Thou art not a subject of this queen !

— GOETHE.

8. "The pearl of Indian Lyrics" — "In tenderness and beauty of invention as also of the mode of thought, this shortest work of Kālidāsa is unsurpassed" — HILLEBRANDT.

"It is difficult to praise too highly either the brilliance of the description of the cloud's progress, or the pathos of the picture of the wife, sorrowful and alone"

— HILLEBRANDT.

9. One of the most wonderful products of the poetic art known to human culture and civilisation. — M. RANGACHARYA.

10. " A poem of transcendental beauty and charm." — K. S. RAMASWAMY SASTRY.

11. "The geographical part of the poem seems to be very accurately conceived ........ we cannot help being pleased with the simplicity and propriety of taste which gives to the graceful ornamental of nature so prominent a part in the decoration of feminine beauty."

— WILSON.

12. "At youth's coronation, Kālidāsa, you took your seat
Your belowed by your side, in Love's primeval paradise
Earth spread its emerald green carpet beneath your feet
The sky held over your heads its canopy gold-embroidered,"

— RABINDRANATH TAGCRE.

(For full text see Preface to Rooke's English Translation of Meghaduta.)

13. The Meghadūta is in its own way the finest elegiac poem the like of which is perhaps difficult to find in the whole literature of the world. — P. C. LAHIRI.

## ಶಾಕುಂತಲ[1]

"ಅಭಿಜ್ಞಾನ ಶಾಕುಂತಲ" ವನ್ನು ಕಾಳಿದಾಸನ ಸರ್ವಸ್ವವೆನ್ನಬಹುದು.[2] ಇವನ ಉಳಿದ ಕಾವ್ಯ ನಾಟಕಗಳೆಲ್ಲ ನಷ್ಟವಾದರೂ ಇದೊಂದೇ ಇವನನ್ನು ವಿಶ್ವಕವಿಶಿರೋಮಣಿಗಳ ಪಙ್ಕ್ತಿಗೇರಿಸುವುದಕ್ಕೆ ಸಾಕು. ಆದುದರಿಂದಲೇ ವಿಶ್ವಸಾಹಿತ್ಯದ ಅಮೂಲ್ಯ ಗ್ರಂಥಶತಕದಲ್ಲಿ ಇದನ್ನು ಸೇರಿಸಲಾಗಿದೆ. ಭರತಖಂಡದ ಸಾಹಿತ್ಯವನ್ನು ಪಾಶ್ಚಾತ್ಯರು ಶ್ರದ್ಧೆಯಿಂದ ವ್ಯಾಸಂಗಮಾಡಲು ಉಪಕ್ರಮಿಸಿದಾಗ ಮೊಟ್ಟಮೊದಲೇ ಸರ್ ವಿಲಿಯಂ ಜೋನ್ಸ್‌ರವರು ಇದನ್ನು ಪರಿವರ್ತಿಸಿದರು. ಆ ಆಂಗ್ಲ ಭಾಷಾಂತರವನ್ನೋದಿಯೇ ಆಗಿನ ಅನೇಕ ಪಾಶ್ಚಾತ್ಯ ಕವಿಗಳೂ ವಿಮರ್ಶಕರೂ ತಮ್ಮ ಆದರ ಪ್ರಶಂಸೆಗಳನ್ನು ವ್ಯಕ್ತಪಡಿಸಿದರು. ಹೀಗೆ ಜನ್ಮಭೂಮಿಗೂ ವಿಶ್ವಕ್ಕೂ ಏಕಕಾಲದಲ್ಲಿ ಚಿರಫಲಕಾರಿಯಾದ ಸೇವೆಯನ್ನು ಸಲ್ಲಿಸುವ ಸುಯೋಗವು ಲಭಿಸುವುದು ಅಪರೂಪ. ಇದನ್ನು ಹೊಂದಿದ ಕಾಳಿದಾಸನು ಧನ್ಯರಲ್ಲಿ ಧನ್ಯ.

ಶಾಕುಂತಲವನ್ನು ಭರತಖಂಡದ ಪ್ರಾಂತೀಯ ಭಾಷೆಗಳಲ್ಲಲ್ಲದೆ ಫ್ರೆಂಚ್, ಜರ್ಮನ್, ಇಟಾಲಿಯನ್, ಸ್ವೀಡಿಷ್, ಡಚ್ ಮುಂತಾದ ವಿದೇಶೀಯ ಭಾಷೆಗಳಲ್ಲೂ ಪರಿವರ್ತಿಸಿರುವರು. ಕೆಲವುವೇಳೆ ಆಯಾದೇಶದ ಅಭಿನಯಕ್ರಮಾನುಸಾರವಾಗಿ ಬೇರೆ ಬೇರೆ ರಂಗಪಾಠಗಳನ್ನೂ ನಿರ್ಮಿಸಿಕೊಂಡಿರುವರು. ಬೇರೆ ಬೇರೆ ಸಂಸ್ಕೃತಿಯವರೂ ಇದರ ವಿಷಯದಲ್ಲಿ ತೋರಿಸುತ್ತಿರುವ ಆಸಕ್ತಿಯೇ ಕವಿಯ ಶಾಶ್ವತ ಕೀರ್ತಿಯ ಪತಾಕೆ.

ಸಂಸ್ಕೃತ ಕವಿಗಳು ಸಾಮಾನ್ಯವಾಗಿ ಕಥಾವಸ್ತುವನ್ನು ಹೊಸದಾಗಿ

---

1. ಈ ನಾಟಕವನ್ನು ಅಭಿಜ್ಞಾನ ಶಾಕುಂತಲ, ಅಭಿಜ್ಞಾನ ಶಕುಂತಲಮ್ (....ಲಾ) ಎಂದು ಬೇರೆ ಬೇರೆ ಹೆಸರುಗಳಿಂದ ವ್ಯವಹರಿಸುವುದು ವಾಡಿಕೆಯಾಗಿದ್ದರೂ "ಅಭಿಜ್ಞಾನ ಶಾಕುಂತಲ" ಎಂಬುದೇ ಯುಕ್ತತಮ; ನಿರ್ವಚನಮಾಡುವುದಕ್ಕೂ ಸುಲಭ. 'ಅಭಿಜ್ಞಾನ' ವೆಂದರೆ 'ಸ್ಮರಣ ಸಹಕಾರಿ' ಅಥವಾ 'ಸ್ಮಾರಕ' ವೆನ್ನಬಹುದು. ಅಭಿಜ್ಞಾನವೇ ಪ್ರಧಾನವಾಗಿರುವ ಶಕುಂತಲೆಯ ವಿಷಯವಾದ ನಾಟಕವೆಂದು ನಿರ್ವಚನಮಾಡಬಹುದು.

2. "ಕಾಳಿದಾಸಸ್ಯ ಸರ್ವಸ್ವ ಮಭಿಜ್ಞಾನ ಶಕುಂತಲಮ್."

ಕಲ್ಪಿಸಿಕೊಳ್ಳುವುದಿಲ್ಲವೆಂಬ ಅಂಶವನ್ನು ನಾವು ಪದೇಪದೇ ಜ್ಞಾಪಿಸಿಕೊಳ್ಳ ಬೇಕಾಗಿದೆ. ಆದರೆ ಭಾರತ, ರಾಮಾಯಣ ಅಥವಾ ಬೃಹತ್ಕಥೆ ಮೊದಲಾದ ಆಕರಗಳಿಂದ ವಸ್ತುವನ್ನು ಆರಿಸಿಕೊಂಡ ಮಾತ್ರಕ್ಕೆ ಕಾವ್ಯರಚನಾ ಕೌಶಲವು ಕೆಳಮಟ್ಟದ್ದೆಂದು ಸಿದ್ಧವಾಗುವುದಿಲ್ಲ ಇದಕ್ಕೆ ಶಾಕುಂತಲದ ನಿದರ್ಶನವೊಂದೇ ಸಾಕು. ಆರಿಸಿಕೊಂಡ ಕಥಾವಸ್ತುವನ್ನು ರಂಗಭೂಮಿಯ ಸೌಕರ್ಯ, ಪಾತ್ರರಚನೆ, ರಸಪರಿಪೋಷಗಳಿಗನುಗುಣವಾಗಿ ಮಾರ್ಪಡಿ ಸುವುದರಲ್ಲಿ ಕವಿಯ ಕೌಶಲವು ಗೋಚರವಾಗುವುದು. ಅಂತು ಈ ರೀತಿ ಪರಿಚಿತವಾದ ವಸ್ತುವನ್ನು ಪಯೋಗಿಸಿಕೊಳ್ಳುವುದರಲ್ಲಿ ಕವಿಗೆ ಸ್ವಲ್ಪ ಅನು ಕೂಲವುಂಟು; ಹೆಚ್ಚು ಪಾಂಡಿತ್ಯವಿಲ್ಲದವರನ್ನೂ ಇಂತಹ ವಸ್ತುವಿನಿಂದ ಆಕರ್ಷಿಸಬಹುದು; ಪರಿಚಿತರಾದ ಪಾತ್ರಗಳೇ ಕವಿಯು ಸೃಷ್ಟಿಸಿದ ಹೊಸ ಸನ್ನಿವೇಶದಲ್ಲಿ ಸಂಚರಿಸುವುದನ್ನು ನೋಡಿದಾಗ ಪ್ರೇಕ್ಷಕರಿಗೆ ಹೆಚ್ಚು ಸಂತೋಷವಾಗುವುದಕ್ಕೆ ಅವಕಾಶವಿದೆ. ಹೊಸ ವಸ್ತುವನ್ನು ಗ್ರಹಿಸುವುದಕ್ಕೆ ಬೇಕಾಗುವ ಬುದ್ಧಿಕ್ಲೇಶವು ತಪ್ಪುವುದು. ಕವಿಯ ಚಾತುರ್ಯವು ಸುಲಭ ವಾಗಿ ಹೊರಬೀಳುವುದು. ಇದಲ್ಲದೆ, ಪುರಾಣಪ್ರಸಿದ್ಧರಾದ ದೇವತೆಗಳ ಅಥವಾ ವೀರರ ಕತೆಯನ್ನು ಬರೆದರೂ, ಕೇಳಿದರೂ ಪುಣ್ಯವನ್ನುಗಳಿಸಬಹು ದೆಂಬ ಭಾವನೆಯಿದ್ದುದರಿಂದ ಕವಿ, ಸಾಮಾಜಿಕರಿಬ್ಬರಿಗೂ ಇವು ಆಕರ್ಷಕ ವಾಗಿದ್ದುವು. ಒಟ್ಟಿನಲ್ಲಿ, ರಸಾವಿರ್ಭಾವವೇ ಕವಿತೆಯ ಮುಖ್ಯೋದ್ದೇಶವೆಂಬ ಭಾವನೆಯಿದ್ದುದರಿಂದ ಕಥಾವಸ್ತುವನ್ನು ಹೊಸದಾಗಿ ನಿರ್ಮಿಸಿಕೊಳ್ಳುವ ಆವಶ್ಯಕತೆಯೊದಗಲಿಲ್ಲ.

ಅಭಿಜ್ಞಾನ ಶಾಕುಂತಲದ ವಸ್ತುವನ್ನು ಮಹಾಭಾರತದ ಆದಿಪರ್ವದ ಶಕುಂತಲೋಪಾಖ್ಯಾನದಿಂದ ಆರಿಸಿದೆ.[1] ಆದರೆ ಅಲ್ಲಿನ ಕತೆಗೂ ಕಾಳಿ

1. ಪದ್ಮಪುರಾಣದಲ್ಲಿ (ಸ್ವರ್ಗಖಂಡ ಅ. 1-7) ಯೂ ಈ ಕತೆಯು ಸಿಕ್ಕುವು ದರಿಂದ ಕಾಳಿದಾಸನ ನಾಟಕಕ್ಕೆ ಅದೇ ಮೂಲವೆಂದು ಶ್ರೀ. ಹರದತ್ತಶರ್ಮ ಮತ್ತು ಡಾ॥ವಿಂಟರ್‌ನಿಟ್ಸ್‌ರವರ ಅಭಿಪ್ರಾಯ. (*Cf.* Har Dutt Sharma. Kālidāsa and Padma Purāna..............Dr. Winternitz—Gesh Ind. Lit. III, p. 405). ಆದರೆ ಪದ್ಮಪುರಾಣದ ಕತೆಯೇ ಶಾಕುಂತಲದ ಆಧಾರದ ಮೇಲೆ ಹುಟ್ಟಿದ್ದೆಂದು ವಿಮರ್ಶಕರ ಆಶಯ. (*Cf.* S K. De.—I. H. Q. XVI-ii. p. 407; Dhanapati Banerji, Q. J. M S, X, p. 88; K. C. Chattopādhyāya—Allah. Univ. Mag. 1938, p. 409) ಈ ಅಭಿಪ್ರಾಯವೇ ಹೆಚ್ಚು ಸಮರ್ಪಕವಾಗಿದೆ.

ದಾಸನು ನಿರೂಪಿಸುವ ಕತೆಗೂ ಬಹಳ ವ್ಯತ್ಯಾಸ. ದುರ್ವಾಸ ಶಾಪ, ಉಂಗುರದ ವೃತ್ತಾಂತ ಇವೇ ಮೊದಲಾದ ನೂತನ ಸಂವಿಧಾನಗಳನ್ನೂ ಅದಕ್ಕೆ ಬೇಕಾದ ಪಾತ್ರವರ್ಗವನ್ನೂ ಸೃಷ್ಟಿಸಿರುವುದರ ಜೊತೆಗೆ ಮುಖ್ಯ ಪಾತ್ರಗಳಾದ ದುಷ್ಯಂತ ಶಕುಂತಲೆ ಇವರ ಮನೋಭಾವವನ್ನು ಕೂಡ ಕಾಳಿದಾಸನು ತಕ್ಕಮಟ್ಟಿಗೆ ಬದಲಾಯಿಸಿರುತ್ತಾನೆ. ಇದು ಹೇಗೆ? ಮತ್ತು ಏಕೆ? ಎಂಬ ವಿಚಾರಗಳು ಕತೆಯನ್ನು ಅನುವಾದಮಾಡಿ ಮೂಲಕತೆಗೂ ಕಾಳಿದಾಸನ ಕತೆಗೂ ಇರುವ ತಾರತಮ್ಯವನ್ನು ನಿರೂಪಿಸುವಾಗ ಸ್ಪಷ್ಟಪಡುತ್ತವೆ. ಪ್ರಕೃತ ಇಷ್ಟು ಮಾತ್ರ ಗಮನಿಸಬಹುದು.

ಮಹಾಭಾರತದಲ್ಲಿ ಶಕುಂತಲೋಪಾಖ್ಯಾನವು ಪ್ರಾಸಂಗಿಕವಾಗಿ ಬರುವ ನೂರಾರು ಕತೆಗಳಲ್ಲೊಂದು. ರಚನೆಯ ವೈಶಿಷ್ಟ್ಯಕ್ಕಿಂತ ಕತೆಯ ವಿಷಯಕ್ಕೇ ಪ್ರಾಧಾನ್ಯ. ಇದು ನಿಸರ್ಗಸುಂದರವಾದ ಒಂದು ಪ್ರಕೃತಿ ಸನ್ನಿವೇಶ. ಶಾಕುಂತಲವು ಅದರಿಂದ ನಿರ್ಮಿಸಿದ ಕಲಾಕೃತಿ. ಶುದ್ಧವಾದ, ಸ್ವಚ್ಛವಾದ ಅಮೃತಶಿಲೆಯಿಂದ ನಿರ್ಮಿಸಿದ ಸುಂದರ ಪ್ರತಿಮೆ. ಒಂದು ಪ್ರಕೃತಿಸೌಂದರ್ಯ; ಇನ್ನೊಂದು ಕಲಾಸೌಂದರ್ಯ. ಮೊದಲಿನದರಲ್ಲಿ ನೈಸರ್ಗಿಕತೆ, ಸ್ವಾಭಾವಿಕತೆ (Realism) ಎದ್ದು ಕಾಣುತ್ತದೆ. ಅಲ್ಲಿನ ದುಷ್ಯಂತ ಶಕುಂತಲೆಯರು ಸ್ವಾಭಾವಿಕವಾದ ಮಾನುಷಸಹಜವಾದ ಆಶೆ ಆಕಾಂಕ್ಷೆಗಳನ್ನುಳ್ಳವರು. ಅದಕ್ಕೆ ತಕ್ಕಂತೆ ಒಂದು ವಿಧವಾದ ಸಾಮಾಜಿಕ ಔಚಿತ್ಯ, ಕಾಲಕ್ಕೆ ತಕ್ಕಂತೆ ವರ್ತಿಸುವುದು ಇವನ್ನು ತಿಳಿದು ತಮ್ಮತಮ್ಮ ಅಂತಃಸ್ಫೂರ್ತಿಯ ಪ್ರಚೋದನೆಗನುಸಾರವಾಗಿ ವರ್ತಿಸುವವರು. ಅವರಲ್ಲಿ ಧರ್ಮಾಧರ್ಮಗಳ ಹೋರಾಟವಷ್ಟಿಲ್ಲ. ಅದಕ್ಕೆ ಬದಲು ದೇವತೆಗಳ ಕೃಪೆಯೇ ಈ ವಿಷಯದಲ್ಲಿ ಹೆಚ್ಚು ಸಹಕಾರಿಯಾಗಿ ನಿರ್ಣಾಯಕವಾಗುವುದು. ಆದರೆ ಶಾಕುಂತಲದ ವ್ಯಕ್ತಿಗಳು ಈ ದಶೆಯನ್ನು ಮೀರಿದವರು. ಇಲ್ಲಿನ ನಾಯಕ ನಾಯಿಕೆಯರು ಹೆಚ್ಚು ಆದರ್ಶಪ್ರಾಯರಾದವರು. ಇವರಲ್ಲಿ ಅಸಾಧಾರಣವಾದ ದೈವಾಂಶವಿದೆ. ಸಂದಿಗ್ಧವಾದ ವಿಷಯಗಳಲ್ಲಿ ಅಂತಃಕರಣ ಪ್ರವೃತ್ತಿಯೇ ಪ್ರಮಾಣವಾಗುವಷ್ಟು ಸತ್ತ್ವವಿದೆ, ಶಾಕುಂತಲದ ದುಷ್ಯಂತನಲ್ಲಿ ಸಾಮಾನ್ಯವಾಗಿ ಹೇಳಬಹುದಾದರೆ ನಾಟಕದ ಒಟ್ಟು ಸನ್ನಿವೇಶದಲ್ಲೇ ಹೆಚ್ಚು ಕಾಲ್ಪನಿಕ ಆದರ್ಶತೆ (Idealism) ಯಿದೆ. ಇದಲ್ಲದೆ, ಮಹಾಭಾರತದ ಕತೆ.

ಯನ್ನೋದುವಾಗ ನಮ್ಮ ಗಮನವು ಧರ್ಮದಕಡೆಗೆ ಹೋಗುತ್ತದೆ. ದುಷ್ಯಂತ ಮಾಡಿದ್ದು ಸರಿಯೇ? ಶಕುಂತಲೆಯನ್ನು ಅವನು ನಿರಾಕರಿಸಿದಮೇಲೆ ಒಂದು ಪಕ್ಷ ದೇವತೆಗಳು ಮಧ್ಯೆ ಬಂದು ಅವಳನ್ನು ಸ್ವೀಕರಿಸುವಂತೆ ರಾಜನನ್ನು ಒತ್ತಾಯಪಡಿಸದೆ ಇದ್ದಿದ್ದರೆ ಅವಳ ಗತಿಯೇನು? ಎಂಬ ಪ್ರಶ್ನೆಗಳು ಏಳುವುವು. ಮತ್ತೊಂದು ಕಡೆ ಶಕುಂತಲೆಯ ಪ್ರೇಮದ ನೈಜತೆಯ ವಿಷಯವಾಗಿಯೂ ಆಶಂಕೆಗಳೇಳುವುವು; ನಿಜವಾಗಿಯೂ ಪ್ರೇಮದಿಂದ ಮದುವೆಗೊಪ್ಪಿದಳೇ? ಅಥವಾ ರಾಜ್ಯದ ಆಸೆಯಿಂದಲೇ? ಎಂದು. ಧರ್ಮದ ದೃಷ್ಟಿಯಿಂದ ಇವರ ನಡವಳಿಕೆಗೆ ಸಮಂಜಸವಾದ ಉಪಪತ್ತಿಯನ್ನು ಕೊಡಲು ಸಾಧ್ಯವಾಗದೆ ಹೋಗುವುದು. 'ಇದೊಂದು ಕತೆ; ಸ್ವಾಭಾವಿಕವಾಗಿ ನಡೆಯತಕ್ಕದ್ದು; ಸಾಧಾರಣವಾದ ಮಾನವೀಯ ಪ್ರವೃತ್ತಿಯುಳ್ಳ ಇಲ್ಲಿನ ವ್ಯಕ್ತಿಗಳನ್ನು ನೋಡಿ ಧರ್ಮಾಧರ್ಮವಿವೇಕವನ್ನು ಹೊಂದಬೇಕು' ಎನ್ನಿಸುವುದು. ಆದರೆ ಶಾಕುಂತಲದಲ್ಲಿ ಧರ್ಮದ ಬದಲು ಪ್ರೇಮವು ನಮ್ಮ ದೃಷ್ಟಿಯನ್ನು ಸೆಳೆಯುವುದು. ಆದರ್ಶವ್ಯಕ್ತಿಗಳಾದ ದುಷ್ಯಂತ ಶಕುಂತಲೆಯರ ಪ್ರೇಮವು ಹೇಗೆ ಅಂಕುರಿಸಿತು? ಬೆಳೆಯಿತು? ಪರಿಶುದ್ಧಿ ಹೊಂದಿತು? ಇದೇ ಶಾಕುಂತಲದ ವಸ್ತು. ಇಲ್ಲಿ ದಾಂಪತ್ಯಪ್ರೇಮಕ್ಕೂ ಧರ್ಮಕ್ಕೂ ಒದಗುವ ಸಂಘರ್ಷವು ಚಿತ್ರಿತವಾಗಿ ಪ್ರೇಮವು ಆದರ್ಶವಾಗಿ ಮಂಗಳಕರವಾಗಬೇಕಾದರೆ ಯಾವ ರೀತಿ ಪರಿಪಕ್ವವಾಗಬೇಕೆಂಬುದೂ ಸೂಚಿತವಾಗಿದೆ. ಒಟ್ಟಿನಲ್ಲಿ ಪ್ರೇಮ, ಧರ್ಮಗಳ ಸಮನ್ವಯ ಅಥವಾ ಸಾಮಂಜಸ್ಯ ಮತ್ತು ಸುಹೃತ್ಪ್ರೇಮ, ಪ್ರಕೃತಿಪ್ರೇಮ, ಅಪತ್ಯಪ್ರೇಮ, ಧರ್ಮಪ್ರೇಮ, ಇವುಗಳ ಮಿಲನದಲ್ಲಿರಬೇಕಾದ ಹೊಂದಿಕೆಗಳೇ ಶಾಕುಂತಲದಲ್ಲಿ ನಿರೂಪಿಸಲ್ಪಟ್ಟಿವೆಯೆಂದು ತಿಳಿಯಬಹುದು. ಇಲ್ಲಿನ ಆದರ್ಶವು ಎಲ್ಲರೂ ಆಶಿಸತಕ್ಕದ್ದು.

ದುಷ್ಯಂತ ಶಕುಂತಲೆಯರ ಪ್ರೇಮದ ಅಂಶಕ್ಕೆ ಪ್ರಾಧಾನ್ಯವಿರುವುದರಿಂದ ನಾಟಕದ ರಸವು ಶೃಂಗಾರವೆಂದು ಹೇಳಲಾಗಿದೆ. ವಿಪ್ರಲಂಭದಿಂದ ಸಂಭೋಗ ಶೃಂಗಾರದ ಪರಿಪೋಷಕ್ಕೂ ಪರಿಶುದ್ಧಿಗೂ ಸಹಾಯವಾಗಿದೆ. ಒಟ್ಟು ಏಳು ಅಂಕಗಳಲ್ಲಿ ನಾಟಕದ ಕತೆಯು ಈ ರೀತಿ ಜರುಗುವುದು.

ಕವಿಕುಲಗುರುವು ಈ ನಾಟಕವನ್ನು ಶಿವಸ್ತೋತ್ರಾತ್ಮಕವಾದ ನಾಂದೀಪದ್ಯದಿಂದ ಪ್ರಾರಂಭಿಸಿರುವನು. ಹಿಂದಿನ ನಾಟಕಗಳ ನಾಂದೀ ಶ್ಲೋಕ

ಗಳಲ್ಲಿ ಶಿವನ ವಿಶ್ವವ್ಯಾಪಿತ್ವ, ನಿವೃತ್ತಿಮಾರ್ಗಾಸಕ್ತಿಗಳನ್ನು ಒತ್ತಿ ಹೇಳಿದೆ. ಇಲ್ಲಿ ಅವನು ಲೋಕಾನುಗ್ರಹಾರ್ಥವಾಗಿ ಅಷ್ಟಮೂರ್ತ್ಯಾತ್ಮಕವಾದ ದೇಹವನ್ನು ತಾಳಿದುದು ಮಾತ್ರ ನಿರ್ದಿಷ್ಟವಾಗಿದೆ. ಅನಂತರ ನಟೀಸೂತ್ರಧಾರರು ಪ್ರಸ್ತಾವನೆಯನ್ನು ಪ್ರಾರಂಭಿಸುವರು. ಇಲ್ಲಿ ಬರುವ ಅತಿ ಪರಿಚಿತವಾದ 'ಆ ಪರಿತೋಷಾದ್ವಿದುಷಾಂ........' ಎಂಬ ಶ್ಲೋಕವು ಕವಿಯ ವಿನಯವನ್ನೂ ಆತ್ಮವಿಶ್ವಾಸವನ್ನೂ ಸೂಚಿಸುವುದು. ಕೇವಲ ಸಾಂಪ್ರದಾಯಿಕವೆಂದು ಪರಿಗಣಿಸಲ್ಪಟ್ಟಿದ್ದರೂ ಇಲ್ಲಿನ ಗ್ರೀಷ್ಮಋತುವರ್ಣನೆಯು ರಮ್ಯವಾಗಿದೆ. ಉಪಭೋಗಪರತೆಯನ್ನು ಸೂಚಿಸುವುದರಿಂದ ಕಾವ್ಯಾರ್ಥವ್ಯಂಜಕವಾಗಿಯೂ ಇದೆ. ಪ್ರೇಕ್ಷಕರನ್ನು ಪ್ರಾಪಂಚಿಕ ವಾತಾವರಣದಿಂದ ಸಾಹಿತೀಯ ವಾತಾವರಣಕ್ಕೆ ಒಯ್ಯಲು ಪ್ರಸ್ತಾವನೆಯು ಬಹಳ ಮಟ್ಟಿಗೆ ಸಹಕಾರಿಯಾಗಿದೆ.

ಜ್ಯೇಷ್ಠಮಾಸ; ಸಾಯಂಕಾಲದ ಸಮಯವಿರಬಹುದು. ಹಸ್ತಿನಾಪುರದ ದೊರೆ ದುಷ್ಯಂತನು ಬೇಟೆಗಾಗಿ ಹೊರಟಿರುವನು. ಕಣ್ವಾಶ್ರಮದ ಸುತ್ತಿನ ಅರಣ್ಯದಲ್ಲಿ ಸಂಚರಿಸುತ್ತ ಒಂದು ಜಿಂಕೆಯ ಸೊಬಗಿಗೆ ಮೆಚ್ಚಿ ಆಸೆಪಟ್ಟು ಅದನ್ನು ಹಿಡಿಯಬೇಕೆಂಬ ಹಠದಿಂದ ವಾಯುವೇಗದಲ್ಲಿ ಹೊರಡುವನು. "ಜಿಂಕೆಯು ಆಕಾಶದಲ್ಲೇ ಸಂಚರಿಸುತ್ತಿದೆಯೆನ್ನುವಷ್ಟು ವೇಗವಾಗಿ ಕುಪ್ಪಳಿಸುತ್ತಿರುವುದು. ಕತ್ತನ್ನು ಓರೆಮಾಡಿಕೊಂಡು ಹೆಜ್ಜೆಹೆಜ್ಜೆಗೂ ಹಿಂತಿರುಗಿ ನೋಡುತ್ತ ಬಾಣದ ಭಯದಿಂದ ತನ್ನ ಹಿಂಭಾಗವನ್ನು ಉಡುಗಿಸಿಕೊಂಡಿರುವಂತೆ ಕಾಣುವುದು. ಮಿತಿಮೀರಿದ ಶ್ರಮದಿಂದ ಏದುತ್ತಾ ಬಾಯ್ದೆರೆಯಲಾಗಿ ಅರ್ಧ ಕಡಿದ ಹುಲ್ಲಿನ ಚೂರುಗಳು ದಾರಿಯುದ್ದಕ್ಕೂ ಚೆಲ್ಲಿವೆ."[1] ಮೃಗವು ಬಾಣದ ಎಲ್ಲೆಗೆ ಸಿಕ್ಕುವಂತಾಗಲು ದೊರೆಯು ಬಾಣವನ್ನು ಹೂಡುವನು. ಅಷ್ಟರಲ್ಲಿ "ಇದು ಆಶ್ರಮ ಮೃಗ, ಇದನ್ನು ಕೊಲ್ಲ

---

1. ಗ್ರೀವಾಭಂಗಾಭಿರಾಮಂ ಮುಹುರನುಪತತಿ ಸ್ಯಂದನೇ ಬದ್ಧದೃಷ್ಟಿಃ
ಪಶ್ಚಾರ್ಧೇನ ಪ್ರವಿಷ್ಟಃ ಶರಪತನಭಯಾದ್ಭೂಯಸಾ ಪೂರ್ವಕಾಯಮ್ ।
ದರ್ಭೈರರ್ಧಾವಲೀಢೈಃ ಶ್ರಮವಿವೃತಮುಖಭ್ರಂಶಿಭಿಃ ಕೀರ್ಣವರ್ತ್ಮಾ
ಪಶ್ಯೋದಗ್ರಪ್ಲುತತ್ವಾದ್ವಿಯತಿ ಬಹುತರಂ ಸ್ತೋಕಮುರ್ವ್ಯಾಂ ಪ್ರಯಾತಿ ॥
(I—7)

ಇದು ಮೂಲದ ಶ್ಲೋಕ, ಗದ್ಯಾನುವಾದದಲ್ಲಿ ಪಾದಗಳ ಕ್ರಮವನ್ನು ಬದಲಾಯಿಸಿದೆ.

ಲಾಗದು" ಎಂಬ ತಾಪಸರ ಕೂಗು ಕೇಳಬರುವುದು. ಕೂಡಲೇ ಮೂವರು ತಾಪಸರು ಎದುರಿಗೆ ಬಂದು 'ಹೂರಾಶಿಗೆ ಬೆಂಕಿಯಿಟ್ಟಂತೆ ಮೃದುವಾದ ಮೃಗಶರೀರಕ್ಕೆ ಮೊನೆಯಾದ ಬಾಣವನ್ನು ಬಿಡಲಾಗದು. ಅತಿ ಸೂಕ್ಷ್ಮವಾದ ಜಿಂಕೆಗಳ ಜೀವವೆಲ್ಲಿ? ವಜ್ರಕಠಿನವಾದ ನಿನ್ನ ಬಾಣಗಳೆಲ್ಲಿ?" ಎಂದು ಅವನನ್ನು ತಡೆಯುವರು. ಬಾಣವು ಬತ್ತಳಿಕೆಯನ್ನು ಸೇರುವುದು. ಸಂತುಷ್ಟರಾದ ತಪಸ್ವಿಗಳು ದುಷ್ಯಂತನನ್ನು ಸ್ತುತಿಸಿ, ಚಕ್ರವರ್ತಿಲಕ್ಷಣವುಳ್ಳ ಪರಾಕ್ರಮಿಯಾದ ಮಗನನ್ನು ಪಡೆಯುವಂತೆ ಆಶೀರ್ವದಿಸುವರು. ಅನಂತರ ಹತ್ತಿರದಲ್ಲಿದ್ದ ಕಣ್ವರ ಆಶ್ರಮವನ್ನು ತೋರಿಸಿ, ಕಾರ್ಯಗೌರವವಿಲ್ಲದಿದ್ದರೆ ಅಲ್ಲಿ ಹೋಗಿ ಆತಿಥ್ಯವನ್ನು ಸ್ವೀಕರಿಸಬೇಕೆಂದು ಆಮಂತ್ರಣವಿತ್ತು ಹೊರಡುವರು. ಕುಲಪತಿಗಳು ಶಕುಂತಲೆಯ ದುರದೃಷ್ಟವನ್ನು ಪರಿಹರಿಸುವುದಕ್ಕಾಗಿ ಸೋಮತೀರ್ಥಕ್ಕೆ ಹೋಗಿರುವರೆಂದು ತಿಳಿದುಬರುತ್ತದೆ. ಆದರೂ ಅತಿಥಿ ಸತ್ಕಾರಕ್ಕಾಗಿ ನಿಯುಕ್ತಳಾಗಿದ್ದ ಅವರ ಮಗಳಿಗೇ ತನ್ನ ಗುರುಭಕ್ತಿಯನ್ನು ನಿವೇದಿಸಿ ಪುನೀತನಾಗಬೇಕೆಂಬುದೇ ದೊರೆಯ ಆಸೆ. ಇದಕ್ಕಾಗಿ ತಪಸ್ವಿಗಳಿಗೆ ಅಡಚಣೆಯಾಗದಿರಲೆಂದು ಸ್ವಲ್ಪ ದೂರದಲ್ಲೇ ರಥದಿಂದಿಳಿದು ಉಚಿತವಾದ ವೇಷವನ್ನು ಧರಿಸಿ ಆಶ್ರಮದ ಕಡೆಗೆ ತೆರಳುವನು.

ಆಶ್ರಮದ ಬಾಗಿಲಿಗೆ ಹೋದಕೂಡಲೆ ಬಲತೋಳು ಅದಿರಿ ಶುಭ ಶಕುನವಾಗುವುದು. 'ತಪೋವನದಲ್ಲಿ ರಾಜರು ಆಶಿಸಬಹುದಾದುದೇನು?' ಎನ್ನಿಸುವುದು. ಆದರೂ 'ಶುಭವು ದೊರಕುವದಿದ್ದರೆ ಅನುಕೂಲ ಸಾಮಗ್ರಿಗಳು ಎಲ್ಲಾದರೂ ಸಿದ್ಧವಾಗುವುವು' ಎಂದುಕೊಂಡು ಸಮಾಧಾನಗೊಳ್ಳುವನು. ಶಕುನವು ಫಲಿಸುವುದು. ಉದ್ಯಾನದ ದಕ್ಷಿಣಭಾಗದಿಂದ ಸ್ತ್ರೀಯರ ಮಧುರಾಲಾಪವು ಕಿವಿಗೆ ಬೀಳುವುದು. ಅಲ್ಲಿಗೆ ಹೋಗಿ ನೋಡುವಲ್ಲಿ ಅಂತಃಪುರ ಸ್ತ್ರೀಯರ ಸೌಂದರ್ಯವನ್ನೂ ಮೀರಿಸುವ ಕಾಂತಿಯುಳ್ಳ ಮೂವರು ತಾಪಸ ಯುವತಿಯರು ರಾಜನನ್ನು ಆಶ್ಚರ್ಯಗೊಳಿಸುವರು.

ತಾಪಸ ಕುವರಿಯರು ಗಿಡಗಳಿಗೆ ನೀರೆರೆಯುತ್ತಿರುವರು. ಸಖಿಯಾದ ಅನಸೂಯೆಯು ಕುಲಪತಿಗಳನ್ನು ಆಕ್ಷೇಪಿಸುವಂತೆ ಮಾತನಾಡುತ್ತ ಗಿಡಗಳಿಗೆ ನೀರೆರೆಯುವ ಕಷ್ಟವಾದ ಕೆಲಸಕ್ಕೆ ಸುಕುಮಾರಳಾದ ಶಕುಂತಲೆಯನ್ನು ನೇಮಿಸಿದರಲ್ಲಾ ಎನ್ನುತ್ತಿರುವಳು. "ತಂದೆಯವರ ಆಜ್ಞೆ ಮಾತ್ರ

ವಲ್ಲ; ನನಗೂ ಅವುಗಳ ವಿಷಯದಲ್ಲಿ ಸೋದರ ಸ್ನೇಹವಿದೆ" ಎನ್ನುವಳು ಶಕುಂತಲೆ. ಇದರಿಂದ ದುಷ್ಯಂತನಿಗೆ ಶಕುಂತಲೆಯ ಪರಿಚಯವಾಗುವುದು. ಅವಳು ಕಣ್ವರ ಮಗಳೆಂದು ಗೊತ್ತಾಗುವುದು. ಶಕುಂತಲೆ ಮತ್ತು ಸಖಿಯರ ಮಾತುಕತೆಗಳು ಚೆನ್ನಾಗಿ ಸಾಗುವುವು. ಹಾಸ್ಯಚತುರೆಯರಾದ ಸಖಿಯರು ಶಕುಂತಲೆಯ ಸೌಂದರ್ಯ, ಯೌವನ, ಮದುವೆ ಮೊದಲಾದ ವಿಷಯಗಳನ್ನು ಕುರಿತೇ ಮಾತನಾಡುವರು. ಶಕುಂತಲೆಗೆ ಒಂದೊಂದು ಸಲ ಸಿಟ್ಟಾದಂತಾಗುವುದು; ಆದರೂ ಹೃದಯದಲ್ಲಿ ಒಂದು ವಿಧವಾದ ಸಂತೋಷ, ಸ್ನೇಹ, ತೃಪ್ತಿಗಳು ಕಲೆತಿರುವುವು. ಇವರ ಮಾತನ್ನೆಲ್ಲ ಮರೆಯಲ್ಲಿ ನಿಂತು ಕೇಳುತ್ತ ಕೇಳುತ್ತ ದೊರೆಗೂ ಶಕುಂತಲೆಯಮೇಲೆ ಪ್ರೀತಿ ಹುಟ್ಟುವುದು. ತನ್ನೊಡನೆ ವಿವಾಹಕ್ಕೆ ಇವಳು ಅರ್ಹಳೇ? ಎಂಬ ಪ್ರಶ್ನೆಯೂ ಏಳುವುದು. ಕಣ್ವರು ಬ್ರಾಹ್ಮಣರೆಂದು ಗೊತ್ತಿದ್ದುದರಿಂದ ಆ ಆಲೋಚನೆಯು ಅಸಾಧುವೆಂದು ತೋರುವಷ್ಟರಲ್ಲೇ ತನ್ನ 'ಆರ್ಯ' ಮನಸ್ಸಿನಲ್ಲಿ ಈ ಭಾವನೆ ಹುಟ್ಟಿದುದರ ಆಧಾರದಮೇಲೆಯೇ ಅವಳು ಪರಿಗ್ರಹಕ್ಕೆ ಅರ್ಹಳೆಂದು ತೀರ್ಮಾನಿಸುವನು. ಇತರ ಪ್ರಮಾಣಗಳಿಂದಲೂ ಅದನ್ನು ದೃಢಪಡಿಸಿಕೊಳ್ಳಬೇಕೆಂಬುದು ಅವನ ಆಸೆ. ಪ್ರೇಮವು ಮಾತ್ರ ವಿಲಂಬವನ್ನು ಸಹಿಸದು.

ಇಷ್ಟರಲ್ಲಿ ದುಂಬಿಯೊಂದು ಶಕುಂತಲೆಯ ಮುಖದ ಸುತ್ತಲೂ ಸುಳಿದಾಡುವುದು. ಅವಳ ಕಣ್ಣು, ಕಿವಿ, ತುಟಿಗಳ ಮೇಲೆ ಕುಳಿತುಕೊಳ್ಳುತ್ತ, 'ಲೋಭನೀಯ'ವಾದ ಆ ಸೌಂದರ್ಯವನ್ನು ಅದು ಉಪಭೋಗಿಸುವುದನ್ನು ನೋಡಿ ದುಷ್ಯಂತನಿಗೆ ಹೊಟ್ಟೆಕಿಚ್ಚು. ಶಕುಂತಲೆಯು ತುಂಟ ದುಂಬಿಯ ಬಾಧೆಯನ್ನು ಸಹಿಸಲಾರದೆ ಸಖಿಯರ ಸಹಾಯವನ್ನು ಕೋರುವಳು. ಅವರಾದರೋ ದುಂಬಿಗಿಂತ ಹೆಚ್ಚು ಕೀಟಲೆ ಮಾಡುವವರು; 'ದುಷ್ಟಶಿಕ್ಷಣವು ರಾಜಕಾರ್ಯವಾದ್ದರಿಂದ ದುಷ್ಯಂತನಿಗೇ ಮೊರೆಯಿಡು' ಎನ್ನುವರು.

ತವಕಪಡುತ್ತಿದ್ದ ದುಷ್ಯಂತನು ಇದೇ ಸಮಯವೆಂದು ಅವರೆದುರಿಗೆ ನಿಲ್ಲುವನು. ತರುಣಿಯರು ವಿಸ್ಮಿತರಾಗುವರು. "ಇನ್ನೇನೂ ಹೆಚ್ಚು ಪ್ರಮಾದವಿಲ್ಲ; ನಮ್ಮ ಸಖಿಯು ದುಂಬಿಯ ಕಾಟವನ್ನು ಸಹಿಸಲಾರದೆ

ಕೂಗಿಕೊಂಡಳು" ಎಂದು ಪ್ರಿಯಂವದೆಯು ತಿಳಿಸುವಳು. ಕಾಮಿ ಯಾದರೂ ದೊರೆಯು ಶಕುಂತಲೆಯನ್ನು ತಪೋವನೋಚಿತವಾದ ರೀತಿ ಯಲ್ಲೇ ಪ್ರಶ್ನೆಮಾಡುವನು — "ತಪಸ್ಸು ಸಾಗುತ್ತಿದೆಯೇ?" ಎಂದು. ಅನಸೂಯೆಯು 'ಈಗ ಉತ್ತಮಾತಿಥಿಯು ಬಂದಿರುವುದರಿಂದ' ಎನ್ನು ವಳು. ಶಾಸ್ತ್ರೀಯವಾದ ಅತಿಥಿಸತ್ಕಾರಕ್ಕೆ ಅವರು ಸನ್ನಾಹಮಾಡುವಷ್ಟರಲ್ಲಿ ದೊರೆಯು ಅದಕ್ಕಿಂತ ಹೆಚ್ಚು ಅಭಿಮತವಾದ ಸಲ್ಲಾಪಕ್ಕೇ ಅವರನ್ನೆಳೆ ಯುವನು. ಮಾತನಾಡುತ್ತ, ಅವರ ಸ್ನೇಹ, ವಯಸ್ಸು, ರೂಪು ಎಲ್ಲವೂ ಹೊಂದಿಕೊಂಡಿವೆಯೆಂದು ಪ್ರಶಂಸಿಸುವನು. ಅವರೂ ಇವನ ಚತುರ ಗಂಭೀರಾಕೃತಿಗೂ ಮಧುರಪ್ರಿಯಾಲಾಪಕ್ಕೂ ಮರುಳಾಗುವರು. ಶಕುಂತಲೆ ಯಲ್ಲಿ ತಪೋವನ ವಿರುದ್ಧವಾದ ಮನೋವಿಕಾರವುಂಟಾಗುವುದು. ಇದೇಕೆ ಹೀಗಾಗುವುದು? ಎಂದು ಅವಳಿಗೂ ಅಚ್ಚರಿ.

ಅನಸೂಯೆಯು ಅತಿಥಿಯ ವಂಶ ಮುಂತಾದುವನ್ನು ಕುರಿತು ಪ್ರಶ್ನಿಸಲು ದುಷ್ಯಂತನು ತಾನು ದೊರೆಯೆಂಬುದನ್ನು ಮರೆಮಾಚಿ ಕುರು ರಾಜನ ಹತ್ತಿರ ಧರ್ಮಾಧಿಕಾರವನ್ನು ನಡೆಸುವವನೆಂದೂ ಅವನ ಅಪ್ಪಣೆಯ ಮೇರೆಗೆ ತಪಸ್ವಿಗಳ ಕರ್ಮಗಳು ನಿರ್ವಿಘ್ನವಾಗಿ ನಡೆಯುತ್ತಿರುವುವೇ ಎಂದು ಪರಿಶೀಲಿಸುವುದಕ್ಕಾಗಿ ಅಲ್ಲಿಗೆ ಬಂದಿರುವುದಾಗಿಯೂ ತಿಳಿಸುವನು. ಶಕುಂತಲೆಗೆ ಇವನ ವಿಷಯದಲ್ಲಿ ಪ್ರೀತಿಯು ಹೆಚ್ಚುವುದು. ಸಖಿಯರ ಹೃದಯಗಳಲ್ಲಿಯೂ ಈ ಪ್ರೇಮತಂತ್ರೀನಾದವು ಮರುದನಿಗೈಯುವುದು. "ಕುಲಪತಿಗಳು ಈಗ ಆಶ್ರಮದಲ್ಲಿದ್ದಿದ್ದರೆ" ಎನ್ನುವರು ಶಕುಂತಲೆಯನ್ನು ನೋಡುತ್ತ. ಅವಳು "ಏನಾಗುತ್ತಿತ್ತು?" ಎನ್ನಲು "ಜೀವಿತ ಸರ್ವಸ್ವ ವನ್ನೇ (ನಿನ್ನನ್ನೇ) ಅರ್ಪಿಸಿಯಾದರೂ ಈ ಅತಿಥಿಯನ್ನು ಸಂತೋಷಗೊಳಿಸು ತ್ತಿದ್ದರು" ಎಂದು ಉತ್ತರ ಕೊಡುವರು. ಶಕುಂತಲೆಯು ಈ ಮೃದುಹಾಸ್ಯ ವನ್ನರಿತು ನಾಚುವಳು.

ಇಷ್ಟು ಸಲ್ಲಾಪವಾದಮೇಲೆ ದುಷ್ಯಂತನೂ ಧೈರ್ಯಗೊಂಡು 'ನಿಮ್ಮ ಸಖಿಯ ವಿಷಯವಾಗಿ ಕೆಲವು ಸಂಗತಿಗಳನ್ನು ತಿಳಿದುಕೊಳ್ಳಬೇಕಾಗಿದೆ' ಎನ್ನುವನು. ಅವರು ಒಪ್ಪಿ ಶಕುಂತಲೆಯು ವಿಶ್ವಾಮಿತ್ರ ಮೇನಕೆಯರ ಮಗ ಳೆಂದೂ ತಾತ ಕಾಶ್ಯಪರು ಅವಳ ಸಾಕುತಂದೆಯಾದರೆಂದೂ ತಿಳಿಸುವರು.

'ಮೇನಕೆಯ ಮಗಳಾದ್ದರಿಂದಲೇ ಇವಳಲ್ಲಿ ಇಷ್ಟು ಸೌಂದರ್ಯ' ಎನ್ನಿಸು ವುದು ದೊರೆಗೆ. ಮತ್ತು ತಾನು ಅವಳನ್ನು ಆಶಿಸಿದುದು ಅನುಚಿತವಲ್ಲ ವೆನಿಸಿದರೂ ಅವಳ ವಿವಾಹವನ್ನು ಕುರಿತು ನೇರವಾಗಿ ಪ್ರಸ್ತಾಪಿಸಲು ಸಂಕೋಚಪಟ್ಟು 'ನಿಮ್ಮ ಸಖಿಯು ವಿವಾಹದವರೆಗೆ ಮಾತ್ರ ಹೀಗೆ (ಆಶ್ರಮ ಧರ್ಮಚಾರಿಣಿಯಾಗಿ) ಇರುವಳೋ ಅಥವಾ ಯಾವಜ್ಜೀವವೂ ಹೀಗೆಯೇ (ಆಶ್ರಮದಲ್ಲಿ ಹರಿಣಿಯರೊಡನೆಯೇ) ಇರುವ ಅಭಿಪ್ರಾಯವೊ?' ಎಂದು ಪ್ರಶ್ನೆಮಾಡುವನು. ಇವನ ಪ್ರಶ್ನೆಯ ಅರ್ಥವನ್ನು ಪೂರ್ಣವಾಗಿ ಅರಿತು ಪ್ರಿಯಂವದೆಯು 'ಅವಳು ಪಿತೃಪರಾಧೀನಳು; ಅನುರೂಪನಾದ ವರನಿಗೇ ಅವಳನ್ನು ಕೊಡಬೇಕೆಂದು ತಂದೆಯ ಸಂಕಲ್ಪ' ಎಂದು ಉತ್ತರ ಕೊಡುವಳು. ದುಷ್ಯಂತನಿಗೆ "ಹಾಗಾದರೆ ನನ್ನ ಆಸೆಯು ಕೈಗೂಡುವುದು ಅಸಾಧ್ಯವಲ್ಲ. ಯಾವುದನ್ನು ಸುಡುವ ಬೆಂಕಿಯೆಂದು ಭಾವಿಸಿ ಹೆದರುತ್ತಿದ್ದೆನೋ ಅದು ಮುಟ್ಟಬಹುದಾದ ರತ್ನವೇ" ಎನ್ನಿಸುವುದು.

ಸಖಿಯರ ಮಾತಿನ ಸರಣಿಯನ್ನು ನೋಡಿ ಶಕುಂತಲೆಯು ನಾಚಿಕೆ ಗೊಂಡು ಹೊರಡಲೆಳಸುವಳು. ಅವಳನ್ನು ತಡೆದು ನಿಲ್ಲಿಸಲು ದುಷ್ಯಂತನೇ ತ್ವರೆಪಡುವಷ್ಟರಲ್ಲಿ ಪ್ರಿಯಂವದೆಯು ಉಪಾಯದಿಂದ ಅವಳನ್ನು ನಿಲ್ಲಿಸಿ ಕೊಳ್ಳುವಳು. "ಎರಡು ಕೊಡ ನೀರನ್ನು ನೀನಿನ್ನೂ ಗಿಡಗಳಿಗೆ ಹುಯ್ಯ ಬೇಕಾಗಿದೆ; ಆ ಸಾಲ ತೀರಿಸಿ ಹೋಗುವೆಯಂತೆ ನಿಲ್ಲು" ಎಂದು ಪ್ರಿಯಂವದೆಯು ಒತ್ತಾಯಪಡಿಸುವಳು. ಹೀಗೆನ್ನುತ್ತಲೇ ದುಷ್ಯಂತನಿಗೆ ಕನಿಕರ ಹುಟ್ಟಿ ತಾನೇ ಆ ಸಾಲವನ್ನು ಉಂಗುರವನ್ನು ಕೊಟ್ಟು ತೀರಿಸುವು ದಾಗಿಯೂ ಶಕುಂತಲೆಗೆ ಆ ತೊಂದರೆ ಕೊಡಕೂಡದೆಂದೂ ಸೂಚಿಸುವನು. ಸಖಿಯರು ಉಂಗುರವನ್ನು ತೆಗೆದುಕೊಂಡು ಅದರಲ್ಲಿ ಕೆತ್ತಿದ್ದ ಹೆಸರನ್ನು ನೋಡುವರು. ಪುನಃ ದೊರೆಯು ಮರೆಮಾಚಿದರೂ ತಮ್ಮ ಅತಿಥಿಯು ಮಹಾರಾಜನೇ ಎಂದು ಅವರಿಗೆ ತಿಳಿಯುವುದು. ರಾಜಪುರುಷನ ಅಥವಾ ರಾಜನ ಮಾತೇ ಸಾಕೆಂದೂ ಉಂಗುರಕ್ಕೆ ವಿಯೋಗವು ಬರದಿರಲೆಂದೂ ಹೇಳಿ ಅದನ್ನು ಹಿಂದಕ್ಕೆ ಕೊಡುವರು. ಶಕುಂತಲೆಯೂ ಅಲ್ಲಿಂದ ಹೊರಡಲು ಇಷ್ಟವಿಲ್ಲದೆ ಪ್ರೇಮವ್ಯಂಜಕವಾದ ಮಾತೊಂದನ್ನಾಡುವಳು. ಅಷ್ಟರಲ್ಲಿ ಒಂದು ಕಾಡಾನೆಯು ಆಶ್ರಮವನ್ನು ಸಮೀಪಿಸುತ್ತಿದ್ದ ದುಷ್ಯಂತನ

ಸೈನ್ಯದ ದೆಸೆಯಿಂದ ಬೆದರಿ ಹಾವಳಿ ಮಾಡುವುದಕ್ಕೆ ತೊಡಗುವುದು. ತಾಪಸರೆಲ್ಲ ಕಾತರರಾಗಿ ಬೊಬ್ಬೆಯಿಡುವುದು ಕೇಳಿಬರುವುದು. ರಾಜನು ಮನಸ್ಸಿಲ್ಲದಿದ್ದರೂ ಶಕುಂತಲೆಯನ್ನು ಅಗಲಬೇಕಾಗಿ ಬರುವುದು ಸತ್ಕಾರವನ್ನು ಸ್ವೀಕರಿಸಲು ಪುನಃ ಆಶ್ರಮಕ್ಕೆ ಬರಬೇಕೆಂದು ಪ್ರಾರ್ಥಿಸಿ ತರುಣಿಯರು ಆಶ್ರಮಕ್ಕೆ ತೆರಳುವರು.

---

# ಎರಡನೆಯ ಅಂಕ

ಮಾರನೆಯ ದಿನ ಪ್ರಾತಃಕಾಲವಿರಬಹುದು. ತಪೋವನದ ಸಮೀಪದಲ್ಲಿದ್ದ ರಾಜಶಿಬಿರದಲ್ಲಿ ದೊರೆಯ ಸಂಗಡ ಬಂದಿದ್ದ ಮಾಢವ್ಯ (ವಿದೂಷಕ)ನು ಪ್ರಲಾಪಿಸುತ್ತಿರುವನು. ಕಾಲಕಾಲಕ್ಕೆ ಅನ್ನ ನೀರಿಲ್ಲದೆಯೂ ಬಿಸಿಲಿನಲ್ಲಿ ಅಲೆಯುತ್ತಲೂ ಅವನಿಗೆ ಸಹಿಸಲಾರದಷ್ಟು ಶ್ರಮ. ನೆಟ್ಟಗೆ ನಿಲ್ಲುವುದಕ್ಕೆ ಕೂಡ ಆಗದು. ಕೋಲೂರಿ ನಿಂತು ಯಾವಾಗ ದೊರೆಯು ಊರಿಗೆ ಹೋಗೋಣವೆನ್ನುವನೋ ಎಂದು ತಪಿಸುತ್ತಿರುವನು. ಆದರೆ ಆ ಋಷಿಕುಮಾರಿ (ಶಕುಂತಲೆ) ಯು ಕಣ್ಣಿಗೆ ಬಿದ್ದು ದೊರೆಗೆ ರಾಜಧಾನಿಯು ಮರೆತೇಹೋಗಿದೆ. ವಿದೂಷಕನ ಪಾಡು ಹೇಳತೀರದು. ಹೇಗಾದರೂ ಸ್ವಲ್ಪ ವಿಶ್ರಾಂತಿ ಸಿಕ್ಕೀತೇ ಎಂದು ತೊಳಲುತ್ತಿರುವನು.[1]

ಇತ್ತ ದೊರೆಗಾದರೋ ಅನುರಾಗವನ್ನು ಸೂಚಿಸಿದಂತೆ ತೋರಿದ ಶಕುಂತಲೆಯ ವಿಭ್ರಮದ ಸ್ಮರಣೆಯೇ ಆಗಿದೆ. ಅದನ್ನು ನೆನೆದರೇ ಸಂತೋಷ; ಸಮಾಗಮ ದೊರಕದಿದ್ದರೂ ಕಾಮಿಗಳಿಗೆ ಪರಸ್ಪರ ಅನುರಾಗವಿದೆಯೆಂದು ತಿಳಿದರೂ ಸಾಕು ಎಂದು ಯೋಚಿಸುತ್ತಿರುವನು. ಆದರೆ ಶಕುಂತಲೆಗೆ ತನ್ನ ವಿಷಯದಲ್ಲಿ ಅನುರಾಗವಿದೆಯೇ? ಅದು ನಿಶ್ಚಿತವೇ? ಎಂಬ ಶಂಕೆ ತೋರಿ ಸ್ವಲ್ಪ ನಿರಾಶೆಯುಂಟಾಗುವುದು. ಅವಳ ವಿಭ್ರಮವೆಲ್ಲವೂ ತನ್ನನ್ನು ಕುರಿತೇ ಎಂದು ಭಾವಿಸಿ ತನ್ನ ಮನಸ್ಸು ಮೋಸಹೋಗಿರಬಹುದೋ? ಎನ್ನಿಸುವುದು. ತನ್ನ ಕಾಮುಕ ಮನಸ್ಸಿನ ಭ್ರಾಂತ ವಿಹಾರ

1. ಇದು ಪ್ರವೇಶಕದ ಕಥಾಭಾಗ.

ಗಳನ್ನು ನೋಡಿ ತನಗೇ ಆಶ್ಚರ್ಯವಾಗುವುದು. ಅಷ್ಟರಲ್ಲಿ ವಿದೂಷಕನು (ಕೈ ಕಾಲುಗಳು ಚಲಿಸದಂತೆ ಆಗಿದ್ದುದರಿಂದ) ಕುಳಿತಲ್ಲಿನಿಂದಲೇ ಜಯ ಶಬ್ದವನ್ನು ಮಾಡಿ ಅವನನ್ನು ಸ್ವಾಗತಿಸುವನು. ದೊರೆಯು ಇವನ ಗೋಳನ್ನು ವಿಚಾರಿಸಲು, ಬೇಟೆಯಿಂದಲೇ ತನಗೆ ಇಷ್ಟು ತೊಂದರೆ ಯೊದಗಿತೆಂದೂ ಅದನ್ನು ಕೂಡಲೇ ನಿಲ್ಲಿಸಬೇಕೆಂದೂ ಪ್ರಾರ್ಥಿಸುವನು. ಮನಸ್ಸು ಶಕುಂತಲೆಯಲ್ಲಿ ನೆಟ್ಟಿದ್ದರಿಂದ ದೊರೆಗೂ ಬೇಟೆಯು ಸಾಕೆನ್ನಿಸಿತ್ತು. ಆದರೆ ರಾಜಧಾನಿಗೆ ಹಿಂತಿರುಗುವ ಯೋಚನೆಯು ಮಾತ್ರ ಹಿಂದಾಗಿತ್ತು. ಇದನ್ನರಿಯದ ಸೇನಾಪತಿಯು, ಅಲ್ಲಿಗೆ ಬಂದು, ದೊರೆಯ ನಿರುತ್ಸಾಹವನ್ನು ಹೋಗಲಾಡಿಸುವುದಕ್ಕಾಗಿ ಬೇಟೆಯ ಗುಣಗಳನ್ನು ಹೊಗಳುವುದಕ್ಕೆ ತೊಡಗುವನು. ಆದರೆ ತನಗೂ ಊರಿಗೆ ಹಿಂತಿರುಗ ಬೇಕೆಂಬ ಆಸೆಯಿದ್ದುದ್ದರಿಂದ ವಿದೂಷಕನಿಗೆ ಹೇಳಿಕೊಟ್ಟು ತಾನು ನೆಪ ಮಾತ್ರಕ್ಕೆ ಬೇಟೆಯನ್ನು ಹೊಗಳಿದರೂ ಅವನು ಅದನ್ನು ನಿರೋಧಿಸು ವಂತೆಯೇ ಸಂಚುಮಾಡಿರುವನು. ಕೊನೆಗೆ ದೊರೆಯು 'ಆಶ್ರಮ ಸಮೀಪ ದಲ್ಲಿರುವೆವಾದುದರಿಂದ ನಿನ್ನ ಮಾತು ನನಗೆ ರುಚಿಸದು. ಕಾಡಿನ ಮೃಗ ಗಳೆಲ್ಲ ನೆಮ್ಮದಿಯಾಗಿ ವಿಹರಿಸಲಿ, ಹೆದೆಯು ಸಡಿಲವಾಗಿರುವ ಈ ನನ್ನ ಧನುಸ್ಸೂ ಸ್ವಲ್ಪ ವಿಶ್ರಾಂತಿಹೊಂದಲಿ; ಬೇಟೆಗಾಗಿ ಮುಂಚೆ ಹೋಗಿರುವ ಭಟರನ್ನು ಬರಮಾಡಿ ಆಶ್ರಮಪೀಡೆಯಾಗದಂತೆ ನೋಡಿಕೊ " ಎಂದು ಅಪ್ಪಣೆಮಾಡುವನು. ಸದ್ಯಕ್ಕೆ ವಿದೂಷಕನಿಗೆ ಸಂತೋಷವಾಗುವುದು.

ಇಬ್ಬರೂ ನಿರ್ಜನವಾದ ಪ್ರದೇಶದಲ್ಲಿ ಮರದ ನೆರಳಿನಲ್ಲಿ ಕುಳಿತು ಮಾತಿಗೆ ಪ್ರಾರಂಭಿಸುವರು. ದೊರೆಯು ವಿದೂಷಕನಿಗೆ ಶಕುಂತಲೆಯ ಸೌಂದರ್ಯವನ್ನು ವರ್ಣಿಸಲು ತೊಡಗುವನು. ಸಂತುಷ್ಟಮನಸ್ಕನಾಗಿದ್ದ ಅವನನ್ನು ಅಂತರ್ಯಕ್ಕೆಳೆದು ಮುಂದಿನ ಕಾರ್ಯಕ್ರಮವನ್ನು ನಿರ್ಣಯಿಸುವುದೇ ಉದ್ದೇಶ. ವಿದೂಷಕನಿಗೆ ಮೊದಮೊದಲು ಪೀಡಿಸುವ ಸ್ವಭಾವ. ಕಾಡಿನಲ್ಲಿ ಬೆಳೆದ ತಾಪಸಕನ್ಯೆಯು ಅವನು ಬಣ್ಣಿಸಿದಷ್ಟು ಸುಂದರಿಯಾಗಿರಲಾರಳೆಂದು ಆಕ್ಷೇಪಿಸುವನು. ದೊರೆಯು ಅವನನ್ನು ಒಪ್ಪಿಸುವುದಕ್ಕಾಗಿ ಪುನಃಪುನಃ ಅವಳನ್ನು ವರ್ಣಿಸುವನು—

ಅನಾಘ್ರಾತಂ ಪುಷ್ಪಂ ಕಿಸಲಯಮಲೂನಂ ಕರರುಹೈಃ
ಅನಾವಿದ್ಧಂ ರತ್ನಂ ಮಧು ನವಮನಾಸ್ವಾದಿತರಸಂ ।
ಅಖಂಡಂ ಪುಣ್ಯಾನಾಂ ಫಲಮಿಹ ಚ ತದ್ರೂಪಮನಘಂ
ನ ಜಾನೇ ಭೋಕ್ತಾರಂ ಕಮಿಹ ಸಮುಪಸ್ಥಾಸ್ಯತಿ ವಿಧಿಃ ॥

"ಅವಳ ರೂಪು ಮೂಸಿನೋಡದ ಹೂವು, ಉಗುರುಸೋಕದ ಚಿಗುರು; ಕಡೆಯದ ರತ್ನ; ರುಚಿನೋಡದ ಹೊಸಮಧು; ಪೂರ್ವಪುಣ್ಯದ ಪೂರ್ಣ ಫಲ; ಇದನ್ನು ಅನುಭವಿಸುವುದಕ್ಕೆ ಯಾರನ್ನು ನಿರ್ಮಿಸಿರುವುದೋ ವಿಧಿ?" ಎನ್ನುವನು.

ವಿದೂಷಕನೂ ಮುಗ್ಧನಾಗುವನು. ದೊರೆಯು ಪ್ರೋತ್ಸಾಹಿತನಾಗಿ ಮತ್ತೂ ವಿಶದವಾಗಿ ಅವಳು ಪ್ರದರ್ಶಿಸಿದ ವಿಭ್ರಮಗಳನ್ನು ವಿವರಿಸುವನು. ತಪೋವನವು ಉಪವನಪ್ರಾಯವಾಗಿದ್ದರೂ ತಿರುಗಿ ಆಶ್ರಮಕ್ಕೆ ಹೋಗಲು ಅವನಿಗೆ ಸ್ವಲ್ಪ ಸಂಕೋಚ. ಇದಲ್ಲದೆ ಕೆಲವರು ತಾಪಸರು ಇವನನ್ನು ಗುರ್ತಿಸಿದ್ದರಂತೆ. ಆದುದರಿಂದ ಪ್ರಣಯವೃತ್ತಾಂತವನ್ನು ಮುಂದುವರಿಸುವುದಕ್ಕೆ ಸರಿಯಾದ ನೆಪವನ್ನು ಹೂಡಬೇಕಾಗಿತ್ತು. ಇದಕ್ಕಾಗಿಯೇ ವಿದೂಷಕನ ಸಲಹೆ ಬೇಕಾಗಿದ್ದುದು. ಆದರೆ ಅಷ್ಟರಲ್ಲೇ ಇಬ್ಬರು ಋಷಿಕುಮಾರರು ಬಂದು "ನೀನು ಇಲ್ಲಿ ತಂಗಿರುವುದು ಆಶ್ರಮವಾಸಿಗಳಿಗೆ ಗೊತ್ತಿದೆ. ಕಣ್ವರು ಆಶ್ರಮದಲ್ಲಿಲ್ಲದಿರುವುದರಿಂದ ಕೆಲವರು ರಾಕ್ಷಸರು ಯಾಗಕ್ಕೆ ಅಡ್ಡಿಮಾಡುತ್ತಿರುವರು. ಇದಕ್ಕಾಗಿ ನೀನು ಕೆಲವು ದಿವಸ ಆಶ್ರಮದಲ್ಲಿದ್ದುಕೊಂಡು ಯಾಗವನ್ನು ರಕ್ಷಿಸಬೇಕು" ಎಂದು ಬಿನ್ನವಿಸುವರು. ವಿದೂಷಕನಿಗೆ ರಾಕ್ಷಸರ ಹೆಸರನ್ನು ಕೇಳಿದ ಕೂಡಲೇ ಭಯ. ಈ ವೇಳೆಗೆ ಸರಿಯಾಗಿ, ರಾಜಮಾತೆಯು ನಡೆಸಬೇಕಾಗಿದ್ದ ವ್ರತದಸಮಯಕ್ಕೆ ದೊರೆಯು ಹಿಂತಿರುಗಬೇಕೆಂದು ಊರಿನಿಂದ ಸಂದೇಶವು ಬರುವುದು. ದೊರೆಗೆ ಏನೂ ತೋರದು. ತನ್ನ ಪೂರ್ವಜರ ಮೇಲ್ಪಂಕ್ತಿಯನ್ನನುಸರಿಸಿ ವಿಪತ್ತಿಗೀಡಾದವರ ರಕ್ಷಣೆಯಲ್ಲಿ ತೊಡಗುವುದೇ? ಮಾತೆಯ ಆಜ್ಞೆಗನುಸಾರವಾಗಿ ಊರಿಗೆ ಹೊರಡುವುದೇ? ಎಂದು ಒಕ್ಕಡೆ ತಪಸ್ವಿಕಾರ್ಯ; ಇನ್ನೊಕ್ಕಡೆ ಹಿರಿಯರಪ್ಪಣೆ. ಯಾವುದನ್ನೂ ಉಪೇಕ್ಷಿಸುವಂತಿಲ್ಲ. ಹೀಗೆ ಯೋಚಿಸಿ ಯೋಚಿಸಿ, ಕಡೆಗೆ ವಿದೂಷಕನನ್ನು

ರಾಜಧಾನಿಗೆ ಕಳುಹಿಸಬೇಕೆಂದು ತೀರ್ಮಾನಿಸುವನು. ಅದರಂತೆ ವಿದೂಷಕನು ದೊರೆಯ ತಮ್ಮನಂತೆ ವೇಷವನ್ನು ಮಾರ್ಪಡಿಸಿಕೊಂಡು ಉಚಿತ ವೈಭವದೊಡನೆ ಹಿಂತಿರುಗುವನು. ತಪೋವನಕ್ಕೆ ತೊಂದರೆಯಾಗದಿರಲೆಂದು ದುಷ್ಯಂತನು ಸೈನ್ಯವನ್ನೆಲ್ಲ ಮಾಧವ್ಯನೊಡನೆ ರಾಜಧಾನಿಗೇ ಕಳುಹಿಸುವನು. ಚಂಚಲಮನಸ್ಕನಾದ ವಿದೂಷಕನಿಂದ ತನ್ನ ಶಕುಂತಲಾಪ್ರೇಮರಹಸ್ಯವು ರಾಣೀವಾಸವನ್ನು ಮುಟ್ಟದಿದ್ದರೂ ಮುಟ್ಟಬಹುದೆಂದು ಶಂಕಿಸಿ ರಾಜನು ಅವನನ್ನು ಕುರಿತು "ಮಿತ್ರ, ಕಾಮವ್ಯಾಪಾರಬಹಿರ್ಮುಖರಾಗಿ ಜಿಂಕೆಗಳೊಡನೆ ಬೆಳೆದ ತಾಪಸಿಯರೆಲ್ಲಿ? ನಾವೆಲ್ಲಿ? ನಾನು ಶಕುಂತಲೆಯ ವಿಷಯವಾಗಿ ಆಡಿದ ಮಾತೆಲ್ಲ ಕೇವಲ ಹಾಸ್ಯ; ನಿಜವೆನ್ನಬೇಡ. ನಾನು ಆಶ್ರಮಕ್ಕೆ ಹೋಗುತ್ತಿರುವುದು ಋಷಿಗಳ ಮೇಲಿನ ಭಕ್ತಿಗೌರವಗಳಿಂದ. ನಿಜವಾಗಿಯೂ ನನಗೆ ಆ ತಾಪಸಕರುಣೆಯಲ್ಲಿ ಪ್ರೀತಿಯಿಲ್ಲ" ಎಂದು ಹೇಳಿ ಕಳುಹಿಸಿಕೊಡುವನು.

---

## ಮೂರನೆಯ ಅಂಕ

ಸುಮಾರು ಹದಿನೈದು ದಿನಗಳು ಕಳೆದಿವೆ. ದುಷ್ಯಂತನ ಸಹಾಯದಿಂದ ರಾಕ್ಷಸರ ಬಾಧೆಯು ತಪ್ಪಿ ಯಾಗವು ಮುಂದುವರಿಯುತ್ತಿರುವುದು. ಒಂದು ದಿನ ದರ್ಭೆಯನ್ನು ಶೇಖರಿಸಲು ಹೊರಟ ಶಿಷ್ಯನೊಬ್ಬನು ಪ್ರಿಯಂವದೆಯನ್ನು ಕಂಡು ಮಾತನಾಡಿಸಲು ಶಕುಂತಲೆಯು ಬಹಳ ಅಸ್ವಸ್ಥಳೆಂದೂ ಅವಳ ಚಿಕಿತ್ಸೆಗಾಗಿ ಇವಳು ಶ್ರಮಪಡುತ್ತಿರುವುದಾಗಿಯೂ ತಿಳಿದುಬರುವುದು. "ಶಕುಂತಲೆ ಕುಲಪತಿಗಳ ಉಚ್ಛ್ವಾಸ, ಅವಳನ್ನು ಜಾಗರೂಕರಾಗಿ ನೋಡಿಕೊಳ್ಳಿ; ನಾನೂ ಕೂಡ ಗೌತಮಿಯ ಕೈಯಲ್ಲಿ ಶಾಂತ್ಯುದಕವನ್ನು ಕಳುಹಿಸುತ್ತೇನೆ" ಎಂದು ಹೇಳಿ ಅವನು ಹೊರಡುವನು.[1]

ದುಷ್ಯಂತನು ಕಾಮಪೀಡಿತನಾಗಿರುವನು. ಮಹಾತಪಸ್ವಿಗಳಾದ ಕಣ್ವರು ಆಶ್ರಮದಲ್ಲಿಲ್ಲದಿರುವಾಗ ಶಕುಂತಲೆಯಲ್ಲಿ ಪ್ರಣಯಾಸಕ್ತನಾದರೆ

---

1. ಇದು ವಿಷ್ಕಂಭಕದ ಕಥಾಂಶ.

ಅವರ ತಡೆಯಿಲ್ಲದ ಶಾಪಕ್ಕೀಡಾಗಬೇಕಾಗುವುದೆಂದು ಅವನಿಗೆ ಗೊತ್ತು. ಆದರೂ ಅವನ ಹೃದಯವು ಮಾತ್ರ ಶಕುಂತಲೆಯ ಗೀಳನ್ನು ಬಿಡದು. ಚಂದ್ರನೂ ಮನ್ಮಥನೂ ಶಾಂತಾಯುಧರಾದರೂ ಅವರ ಪೆಟ್ಟು ಕಾಮಿಗಳನ್ನು ಬೆಂಕಿಗಿಂತ ಹೆಚ್ಚಾಗಿ ಸುಡಬಲ್ಲುದು. ಆದ್ದರಿಂದ, ಯಾಗಸದಸ್ಯರು ವಿಶ್ರಮಿಸಿಕೊಳ್ಳಬಹುದೆಂದು ಅಪ್ಪಣೆಯಿತ್ತರೂ ಇವನು ಶಕುಂತಲೆಯನ್ನು ಕಾಣಬಹುದೆಂದು ಊಹಿಸಿ ಮಾಲಿನೀತೀರದ ಲತಾಗೃಹಕ್ಕೆ ಬರುವನು.

ಊಹೆಯು ಫಲಿಸುವುದು. ತಣ್ಣಗಿರುವ ಚಪ್ಪಡಿಯ ಮೇಲೆ ಹಾಸಿದ್ದ ಹೂಹಾಸಿಗೆಯಲ್ಲಿ ಶಕುಂತಲೆ ಮಲಗಿರುವಳು. ಸಖಿಯರು ಅವಳನ್ನು ಉಪಚರಿಸುತ್ತಿರುವರು. ದುಷ್ಯಂತನು ಹತ್ತಿರದ ಮರದ ಹಿಂದೆ ನಿಂತು ಅವರ ಸಲ್ಲಾಪವನ್ನು ಕೇಳತೊಡಗುವನು. ಸಖಿಯರು ತಾವರೆ ಎಲೆಯಿಂದ ಬೀಸುತ್ತ ಆಗಾಗ "ತಾಪವು ಈಗ ಕಡಿಮೆಯೇ?" ಎಂದು ಕೇಳುವರು. ಶಕುಂತಲೆಗೆ ಅವರು ಬೀಸುತ್ತಿರುವುದೇ ಗೊತ್ತಿಲ್ಲ. ಸ್ನೇಹಿತೆಯರಿಬ್ಬರೂ ಗಾಬರಿಗೊಂಡು ಒಬ್ಬರನ್ನೊಬ್ಬರು ನೋಡುತ್ತ "ಇದು ಬಿಸಿಲಿನ ತಾಪವೆಯೋ? ಅಥವಾ ಬೇರೆ ವಿಧವಾದ ತಾಪವೋ?" ಎಂದು ಸಂಶಯಪಡುವರು. "ಆ ರಾಜರ್ಷಿಯನ್ನು ನೋಡಿದಂದಿನಿಂದ ಶಕುಂತಲೆಯು ಅಸ್ವಸ್ಥಳಾಗಿರುವಳು. ಅದೇ ಇವಳ ವ್ಯಾಧಿಗೆ ಕಾರಣವಿರಬಹುದೇ?" ಎಂಬ ಪ್ರಿಯಂವದೆಯ ಊಹೆಯನ್ನು ಅನಸೂಯೆಯೂ ಸಮರ್ಥಿಸುವಳು. ಹೇಗೂ ವ್ಯಾಧಿಯು ಇಂತಹುದೆಂದು ತಿಳಿದುಕೊಳ್ಳದೆ ಚಿಕಿತ್ಸೆಗಾರಂಭಿಸಬಾರದೆಂದು ಅನಸೂಯೆಯು ಶಕುಂತಲೆಯನ್ನೇ ಪ್ರಶ್ನಿಸುವಳು. ಶಕುಂತಲೆಗೆ ತಾಪವು ದುಸ್ಸಹವಾಗಿದ್ದರೂ ಕಾರಣವನ್ನು ಬಾಯ್ದೆರೆದು ಹೇಳಲು ಮನಸ್ಸುಬಾರದು. ಪ್ರಿಯಂವದೆಯೂ ಕೂಡ ಉಪಚಾರೋಕ್ತಿಗಳಿಂದ ಅವಳನ್ನು ಒತ್ತಾಯಪಡಿಸುವಳು. ಕಡೆಗೆ, ಸ್ನೇಹಿತೆಯರೊಡನೆ ಹಂಚಿಕೊಂಡಲ್ಲಿ ಕ್ಲೇಶದ ವೇದನೆಯು ಕಡಿಮೆಯಾಗಬಹುದೆಂದು ಶಕುಂತಲೆಯು ತನ್ನ ಇಂಗಿತವನ್ನು ಹೊರಗೆಡಹಲು ನಿಶ್ಚಯಿಸುವಳು. "ತಪೋವನವನ್ನು ರಕ್ಷಿಸುತ್ತಿರುವ ಆ ರಾಜರ್ಷಿಯನ್ನು ಕಂಡಾರಭ್ಯ ....................." ಎನ್ನುವಳು; ನಾಚಿಕೆಯಿಂದ ಮಾತು ಮುಂದೆ ಹೋಗದು; ಪುನಃ ಸಖಿಯರ ಪ್ರೇರೇಪಣೆಯಾದ ಮೇಲೆ "ಅವನನ್ನಾಶಿಸಿ ಹೀಗಾಗಿರುವೆನು. ಅದು ನಿಮಗೂ ಸಮ್ಮತ

ವಾಗಿದ್ದರೆ ಅವನ ದಯೆಯು ನನ್ನಮೇಲೆ ಬೀಳುವಂತೆ ಮಾಡಿರಿ. ಇಲ್ಲದಿದ್ದರೆ ನನ್ನ ಆಸೆಯನ್ನು ಬಿಡಿ" ಎಂದು ಮುಗಿಸುವಳು. ಮರೆಯಲ್ಲಿ ನಿಂತು ಕೇಳುತ್ತಿರುವ ದುಷ್ಯಂತನಿಗೆ ಈ ಮಾತು ಕರ್ಣರಸಾಯನವಾಗುವುದು.

ಸಖಿಯರಿಗೆ ವಿಷಯಗಳೆಲ್ಲ ಸ್ಪಷ್ಟವಾಗುವುವು. ಶಕುಂತಲೆ ಕಾಮಾರ್ತಳು; ಇವಳ ಪ್ರೇಮವು ಉತ್ತಮ ಪಾತ್ರವನ್ನೇ ಆರಿಸಿರುವುದು. ಆದುದರಿಂದ ಕಾಲಹರಣಮಾಡದೆ ಗುಟ್ಟಾಗಿ ಇವಳ ಇಚ್ಛೆಯನ್ನು ಸಲ್ಲಿಸಬೇಕಾದ್ದು ಕರ್ತವ್ಯ. ಇದಲ್ಲದೆ ರಾಜರ್ಷಿಯೂ ಸ್ನೇಹಪೂರ್ಣವಾದ ದೃಷ್ಟಿಯಿಂದ ತನಗೆ ಶಕುಂತಲೆಯಲ್ಲಿರುವ ಅನುರಾಗವನ್ನು ವ್ಯಕ್ತಪಡಿಸಿ ಕೊರಗಿ ಕಂಗೆಡುತ್ತಿರಬೇಕು. ಆದುದರಿಂದ ಅವನನ್ನೊಪ್ಪಿಸಲು ವಿಲಂಬವಾಗದು. ಎಂದು ಎಲ್ಲವನ್ನೂ ಪರಿಗಣಿಸಿ ಪ್ರಿಯಂವದೆಯು ದೇವತಾಪ್ರಸಾದದ ಹೂಗಳಲ್ಲಿ ಮರೆಸಿ ಒಂದು ಪ್ರಣಯಲೇಖನವನ್ನು ಕಳುಹಿಸಬೇಕೆಂದು ಸಲಹೆಕೊಡುವಳು. ಒಕ್ಕಣೆಯನ್ನು ಯೋಚಿಸುವಷ್ಟರಲ್ಲಿ ಪುನಃ ದುಷ್ಯಂತನು ಸಮ್ಮತಿಸದಿರಬಹುದೆಂಬ ಸಂದೇಹವು ತಲೆದೋರುವುದು.

ಇತ್ತ ದುಷ್ಯಂತನು "ಯಾರು ನಿನ್ನನ್ನು ಒಲ್ಲೆನೆನ್ನಬಹುದೆಂದು ಶಂಕಿಸುತ್ತಿರುವೆಯೋ ಅವನೇ ಸಂಗಮೋತ್ಸುಕನಾಗಿರುವನು; ಬೇಕೆನ್ನುವವರಿಗೆ ಲಕ್ಷ್ಮಿಯು ಸಿಕ್ಕದಿರಬಹುದು; ಲಕ್ಷ್ಮಿಗೆ ಬೇಕಾದವರು ಸಿಕ್ಕದಿರುವುದುಂಟೆ?"[1] ಎಂದುಕೊಳ್ಳುತ್ತಿರುವನು.

ಆಗ ಸಖಿಯರು ಶಕುಂತಲೆಯನ್ನು ಕುರಿತು "ಸ್ವಗುಣಗಳನ್ನು ಅಲ್ಲಗಳೆಯುವವಳೇ! ಶರೀರವನ್ನು ತಣಿಸುವ ಶರಚ್ಚಂದ್ರಿಕೆಯನ್ನು ಬಟ್ಟೆಯನ್ನಡ್ಡಗಟ್ಟಿ ತಡೆಯುವರೆ?" ಎಂದು ಹೇಳಿ ಅವಳಿಗೆ ಬುದ್ಧಿ ಕಲಿಸುವರು. ಶಕುಂತಲೆಯು ತಾವರೆಯ ಎಲೆಯಮೇಲೆ ಉಗುರಿನಿಂದ ಪ್ರಣಯವಚನ

---

1. ಅಯಂ ಸ ತೇ ತಿಷ್ಠತಿ ಸಂಗಮೋತ್ಸುಕೋ
ವಿಶಙ್ಕಸೇ ಭೀರು ಯತೋಽವಧೀರಣಾಮ್ ।
ಲಭೇತವಾ ಪ್ರಾರ್ಥಯಿತಾ ನ ವಾ ಶ್ರಿಯಂ
ಶ್ರಿಯಾ ದುರಾಪಃ ಕಥಮೀಪ್ಸಿತೋ ಭವೇತ್ ॥ (III-13)

ವನ್ನು ಬರೆದು ಸಖಿಯರಿಗಾಗಿ ಅದನ್ನು ಓದುವಳು ಪತ್ರವನ್ನು ಕಳುಹಿಸು ವಷ್ಟರಲ್ಲಿ ತೊಂದರೆಯನ್ನು ತಪ್ಪಿಸಿ ದುಷ್ಯಂತನು ಅಲ್ಲಿಗೇ ಬರುವನು; ಪ್ರಣಯವಚನಕ್ಕೆ ಪ್ರಣಯಪೂರ್ವಕವಾದ ಉತ್ತರವನ್ನು ಕೊಡುತ್ತಲೇ ಇವರಿಗೆ ಕಾಣಿಸಿಕೊಳ್ಳುವನು. ತಡವಿಲ್ಲದೆ ಕೈಗೂಡಿದ ತಮ್ಮ ಮನೋರಥಕ್ಕೆ (ಎಂದರೆ ದೊರೆಗೆ) ಸಖಿಯರು ಸ್ವಾಗತವನ್ನರ್ಪಿಸುವರು. ಶಕುಂತಲೆಯೂ ಕೂಡ ಗೌರವವನ್ನು ಸೂಚಿಸುವುದಕ್ಕಾಗಿ ಏಳಲು ಪ್ರಯತ್ನಿಸುವಳು. ಆದರೆ ದೊರೆಯು ಇದನ್ನು ತಡೆಯುವನು. ಅನಸೂಯೆಯು ದುಷ್ಯಂತನನ್ನು ಹಾಸುಗಲ್ಲಿನ ಒಕ್ಕಡೆಯಲ್ಲೇ ಕುಳ್ಳಿರಿಸುವಳು. ಶಕುಂತಲೆಗೆ ಮತ್ತೂ ನಾಚಿಕೆ ಯಾಗುವುದು. ಪ್ರಿಯಂವದೆಯು ನಿಸ್ಸಂಕೋಚವಾಗಿ ಪೀಠಿಕೆಯನ್ನು ಪ್ರಾರಂಭಿಸುವಳು — "ನಿಮ್ಮಿಬ್ಬರ ಅನುರಾಗವು ಪ್ರತ್ಯಕ್ಷವಾಗಿರುವುದು. ಆದರೂ ಸಖೀಸ್ನೇಹಕ್ಕಾಗಿ ಹೇಳಬೇಕಾಗಿದೆ" ಎಂದು. ದೊರೆಯಿಂದ ಪ್ರೋತ್ಸಾಹಹೊಂದಿದ ಮೇಲೆ "ತನ್ನ ದೇಶದ ಪ್ರಜೆಗಳಲ್ಲಿ ಪೀಡಿತರಾದವರ ಕ್ಲೇಶಗಳನ್ನು ಪರಿಹರಿಸುವುದು ರಾಜನ ಧರ್ಮ (ಅದಕ್ಕಿಂತ ಹೆಚ್ಚಿನ ಧರ್ಮ ವಿಲ್ಲ) ಆದುದರಿಂದ ನಿನ್ನನ್ನಾಶಿಸಿ ಮದನಕೃಶಳಾಗಿರುವ ನಮ್ಮ ಸಖಿಯನ್ನು ಬದುಕಿಸಬೇಕು" ಎಂದು ನಿವೇದಿಸುವಳು. ಅಂತಃಪುರವಿರಹದಿಂದ ಕ್ಲೇಶ ಪಡುತ್ತಿರುವ ರಾಜರ್ಷಿಯನ್ನು ನಿರ್ಬಂಧಪಡಿಸಿ ಪ್ರಯೋಜನವಿಲ್ಲವೆಂದು ಶಕುಂತಲೆಯೆನ್ನುವಳು. ಇದರಲ್ಲಿ ಅನಸೂಯೆಯೂ ಜೊತೆಯಾಗುವಳು. ಆಗ ದುಷ್ಯಂತನು ಶಪಥಪೂರ್ವಕವಾಗಿ ಶಕುಂತಲೆಯೇ ತನ್ನ ಕುಲದ ಏಳ್ಗೆಗೆ ಕಾರಣಳೆಂದೊಪ್ಪುವನು. ಇದರಿಂದ ಸಖಿಯರು ಸಂತುಷ್ಟರಾಗಿ, ತಾಯಿಯನ್ನು ಹುಡುಕುತ್ತ ಅತ್ತಿತ್ತ ನೋಡುತ್ತಿದ್ದ ಜಿಂಕೆಮರಿಯೊಂದನ್ನು ತಾಯಿಯ ಹತ್ತಿರಕ್ಕೆ ಸೇರಿಸುವ ನೆಪದಿಂದ ಸರಿಯುವರು. ಒಬ್ಬರಾದರೂ ಜೊತೆಯಲ್ಲಿರಬೇಕೆಂದು ಶಕುಂತಲೆ ಕೂಗುವಳು. ಆದರೂ "ಭೂಪನೇ ನಿನ್ನೊಡನೆ ಇರುವಾಗ ಬೇರೆ ರಕ್ಷಕರು ಬೇಕೆ?" ಎನ್ನುತ್ತ ಇಬ್ಬರೂ ಹೊರಟೇ ಹೋಗುವರು.

ಸಖಿಯರು ಮಾಡುತ್ತಿದ್ದ ಉಪಚಾರಗಳನ್ನು ದೊರೆಯೇ ಮಾಡಲು ಪಕ್ರಮಿಸಲು ಶಕುಂತಲೆಯು "ಪೂಜ್ಯರ ವಿಷಯದಲ್ಲಿ ಅಪರಾಧಕ್ಕೆ ಗುರಿ ಯಾಗುವವಳಲ್ಲ" ಎಂದು ಹೇಳಿ ಹೊರಡುವುದಕ್ಕೆ ಉದ್ಯುಕ್ತಳಾಗುವಳು.

ದೊರೆಯು ಅವಳನ್ನು ತಡೆಯುವನು. ಆದರೂ ಶಕುಂತಲೆಯು ಇವನ ಪ್ರಣಯೋಪಚಾರಗಳಿಗೆ ಒಡಂಬಡದೆ "ಪೌರವನೇ! ಕಾಮಾರ್ತಳಾದರೂ ನಾನು ಸ್ವಾತಂತ್ರ್ಯವನ್ನು ಅವಲಂಬಿಸುವವಳಲ್ಲ" ಎಂದು ಆಕ್ಷೇಪಿಸಲು, ದುಷ್ಯಂತನು "ಎಲೆ ಭೀರು! ಹಿರಿಯರಿಗೆ ಏತಕ್ಕೆ ಭಯಪಡುವೆ? ಧರ್ಮಜ್ಞರಾದ ಕುಲಪತಿಗಳು ನಿನ್ನವಸ್ಥೆಯನ್ನರಿತು ಕೋಪಿಸಿಕೊಳ್ಳರು; ಇದೂ ಅಲ್ಲದೆ ಅನೇಕ ರಾಜರ್ಷಿಕನ್ಯೆಯರು ಗಾಂಧರ್ವವಿಧಿಯಿಂದ ಮದುವೆಯಾದುದನ್ನು ಹಿರಿಯರು ಒಪ್ಪಿದರೆಂದು ಪುರಾಣಗಳಲ್ಲೂ ಹೇಳಿದೆ" ಎಂದು ಹೇಳಿ ಅವಳನ್ನು ಸಮಾಧಾನಪಡಿಸುವನು.

ಸ್ವಲ್ಪ ಹೊತ್ತು ಏಕಾಂತದಲ್ಲಿ ಪ್ರಣಯವು ಮುಂದುವರಿಯುವುದು. ಅನಂತರ ಸಖಿಯರು ಚಾತುರ್ಯದಿಂದ ಗೌತಮಿಯ ಆಗಮನವನ್ನು ತಿಳಿಸುವರು. ರಾಜನು ಇಷ್ಟವಿಲ್ಲದಿದ್ದರೂ ಹೊರಡಬೇಕಾಗುವುದು. ಗೌತಮಿಯೂ, ಸಖಿಯರೂ ಪುನಃ ಶಕುಂತಲೆಯನ್ನು ಉಪಚರಿಸುವರು. ಅನಂತರ ಶಕುಂತಲೆಯು ವಕ್ರೋಕ್ತಿಯಿಂದ (ಇತರರಿಗೆ ತಿಳಿಯದಂತೆ) ದೊರೆಯನ್ನು ಪುನಃ ಆಹ್ವಾನಿಸಿ, ಅವರೊಡನೆ ಆಶ್ರಮಕ್ಕೆ ಹೋಗುವಳು. ದೊರೆಯು ಆದರಂತೆ ಪುನಃ ಅಲ್ಲಿಗೆ ಬಂದು ಲತಾವಲಯವನ್ನು ಬಿಟ್ಟುಹೋಗಲು ಮನಸ್ಸುಬಾರದೆ ಚಿಂತಿಸುತ್ತಿರುವಷ್ಟರಲ್ಲಿ ರಾಕ್ಷಸರು ಯಾಗಕ್ಕೆ ಅಡ್ಡ ಬಂದಿರುವರೆಂಬ ಆರ್ತನಾದವು ಕೇಳಿಬಂದು ಅವನನ್ನೂ ಕಾರ್ಯೋನ್ಮುಖನನ್ನಾಗಿ ಮಾಡುವುದು.

---

## ನಾಲ್ಕನೆಯ ಅಂಕ

ದುಷ್ಯಂತ ಶಕುಂತಲೆಯರ ಗಾಂಧರ್ವವಿವಾಹವು ನಡೆದು ಸುಮಾರು ಇಪ್ಪತ್ತು ದಿನಗಳು ಕಳೆದುವು. ತಾಪಸರ ಯಾಗವು ಮುಗಿದುದರಿಂದ ದುಷ್ಯಂತನು ರಾಜಧಾನಿಗೆ ಹಿಂತಿರುಗಿರುವನು. ಶಕುಂತಲೆಯು ಸಖಿಯರಿಬ್ಬರೂ ಹೂ ಕೊಯ್ಯುತ್ತಿರುವರು. ಏನೋ ಕಾರಣಗಳಿಂದ ಇಬ್ಬರ ಮನಸ್ಸಿನಲ್ಲೂ ಶಕುಂತಲೆಯ ಮುಂದಿನ ಜೀವನದ ವಿಷಯವಾಗಿ ಸ್ವಲ್ಪ ಕಳವಳ. "ಊರಿಗೆ ಹೋಗಿ ಅಂತಃಪುರ ಸಹವಾಸವನ್ನು ಹೊಂದಿದಮೇಲೆ

ದೊರೆಯು ಶಕುಂತಲೆಯನ್ನು ನೆನೆಯುವನೆ?" ಎಂದು ಅನಸೂಯೆಗೆ ಸಂದೇಹ. "ಕುಲಪತಿಗಳು ಈ ವೃತ್ತಾಂತವನ್ನು ತಿಳಿದು ಏನೆನ್ನುವರೋ" ಎಂದು ಪ್ರಿಯಂವದೆಗೆ ಗಾಬರಿ. ಇವರು ಹೀಗೆ ಪ್ರಸ್ತಾಪಿಸುತ್ತಿರುವಾಗಲೇ ಪೂಜ್ಯರಾದ ದುರ್ವಾಸರು ಆಶ್ರಮಕ್ಕೆ ಬಂದು ತಮ್ಮ ಆಗಮನವನ್ನು ಉದ್ಘೋಷಿಸುವರು. ಶಕುಂತಲೆಯು ದೊರೆಯ ಪ್ರಯಾಣದಿಂದ ವಿಮನಸ್ಕಳಾಗಿರುವಳೆಂಬುದನ್ನರಿತು ಸಖಿಯರು ಅತಿಥಿಸತ್ಕಾರಕ್ಕೆ ಬರುವಷ್ಟರಲ್ಲೇ ಅವರು ಕೋಪಗೊಂಡು "ನೀನು ಯಾರಿಗಾಗಿ ಹಂಬಲಿಸುತ್ತ ನನ್ನನ್ನು ತಿರಸ್ಕರಿಸಿದೆಯೋ ಅವನು ಜ್ಞಾಪಕ ಕೊಟ್ಟರೂ ನಿನ್ನನ್ನು ಸ್ಮರಿಸದಿರಲಿ" ಎಂದು ಶಾಪಕೊಟ್ಟು ದುರ್ದಾನತೆಗೆದುಕೊಂಡವರಂತೆ ಹೊರಡುವರು. ಆದರೂ ಅನಸೂಯೆ, ಪ್ರಿಯಂವದೆಯರು ಕೂಡಲೆ ಬಂದು ಅವರ ಪಾದಕ್ಕೆರಗಿ ಕ್ಷಮೆ ಬೇಡಲು ಅವರು ಸ್ವಲ್ಪ ದಯೆತೋರಿಸಿ, ಸ್ಮಾರಕಾಭರಣವನ್ನು ನೋಡಿದೊಡನೆ ದುಷ್ಯಂತನಿಗೆ ಇವಳ ನೆನಪು ಬರುವಂತೆ ಶಾಪದ ತೀವ್ರತೆಯನ್ನು ಕಡಿಮೆಮಾಡುವರು. ದೊರೆಯು ಕೊಟ್ಟಿದ್ದ ಮುದ್ರೆಯುಂಗುರವಿದ್ದದ್ದರಿಂದ ಏನೊಂದು ತೊಂದರೆಯೂ ಆಗಲಾರದೆಂದು ತೃಪ್ತರಾಗಿ ಮೃದುಸ್ವಭಾವವುಳ್ಳ ಶಕುಂತಲೆಗೆ ಇದನ್ನು ತಿಳಿಸಕೂಡದೆಂದು ನಿಶ್ಚಯಿಸಿ ಅವಳ ಶ್ರೇಯಸ್ಸಿಗಾಗಿ ಪೂಜೆಯನ್ನು ನೆರವೇರಿಸುವರು.[1]

ಮೂರು ನಾಲ್ಕು ತಿಂಗಳು ಕಳೆದ ಮೇಲೂ ದೊರೆಯು ಶಕುಂತಲೆಯನ್ನು ರಾಜಧಾನಿಗೆ ಬರಮಾಡಿಕೊಳ್ಳಲು ಯಾರನ್ನೂ ಕಳುಹಿಸದೆ ಇರುವುದನ್ನು ನೋಡಿ ಅನಸೂಯೆಗೆ ಅಸಮಾಧಾನ. ಅಂದು ಬೆಳಗಿನ ಜಾವದಲ್ಲಿ ಅನಸೂಯೆಗೆ ಇದೇ ಯೋಚನೆಯಾಗಿದೆ. ವಿಷಯಪರಾಙ್ಮುಖರಾದ ತಾಪಸರು ಇದನ್ನರಿಯದಿದ್ದರೂ ದೊರೆಯ ನಡತೆಯು ಸರ್ವಥಾ ದೂಷ್ಯವೆಂದೇ ಅವಳ ಭಾವನೆ. ಆದರೂ ದುರ್ವಾಸರ ಶಾಪವೇ ದೊರೆಯ ಔದಾಸೀನ್ಯಕ್ಕೆ ಕಾರಣವೋ? ಎಂಬ ಶಂಕೆಯೂ ಒಮ್ಮೆ ತಲೆದೋರುವುದು. ಮತ್ತೊಮ್ಮೆ "ದೊರೆಯು ಅಸತ್ಯಸಂಧ; ನನ್ನ ಸಖಿ ಶುದ್ಧ ಹೃದಯಳು. ಹೀಗೆ ವಿರುದ್ಧ ಸ್ವಭಾವದವರನ್ನು ಒಟ್ಟುಗೂಡಿಸುವ ಕಾಮನ ದುಸ್ಸಂಕಲ್ಪವೇ ಕಡೆಗೂ (ಈ ಗಾಂಧರ್ವ ವಿವಾಹದಿಂದ) ಫಲಿಸಿರಬೇಕು" ಎಂದುಕೊಳ್ಳುವಳು.

---

1. ಇದು ವಿಷ್ಕಂಭಕದ ಕಥಾಂಶ.

"ದೊರೆಗೆ ನೆನಪು ಬರಲೆಂದು ಮುದ್ರೆಯುಂಗುರವನ್ನಾದರೂ ಕಳುಹಿಸೋಣ ವೆಂದರೆ ಕ್ಲೇಶಕರವಾದ ಆಶ್ರಮದ ಕೆಲಸಗಳಲ್ಲಿ ಆಸಕ್ತರಾದ ತಪಸ್ವಿಗಳಿಗೆ ವಿರಾಮವೆಲ್ಲಿ?" ಎಂದು ತೊಳಲುವಳು. ಇದರ ಜೊತೆಗೆ, ಕುಲಪತಿಗಳಾದ ಕಣ್ವರು ಪ್ರವಾಸದಿಂದ ಆಗತಾನೆ ಹಿಂತಿರುಗಿರುತ್ತಾರೆ. ಶಕುಂತಲೆಯಲ್ಲಿ ಗರ್ಭಚಿಹ್ನೆಗಳು ಸ್ಪಷ್ಟವಾಗಿ ತೋರುತ್ತಿವೆ. ಇವಳು ದುಷ್ಯಂತನನ್ನು ಪರೋಕ್ಷ ದಲ್ಲಿ ವರಿಸಿ ಗೃಹಿಣೀವೃತ್ತಿಯಲ್ಲಿರುವಳೆಂದು ಹೇಗೆ ತಿಳಿಸುವುದು? ಎಂಬ ಮತ್ತೊಂದು ಯೋಚನೆ. ಈ ಸಮಸ್ಯೆಗೇನೋ ದೈವವೇ ಪರಿಹಾರವನ್ನು ಸಿದ್ಧಪಡಿಸಿತು. ಕುಲಪತಿಗಳು ಶಕುಂತಲೆಯ ಯೋಗಕ್ಷೇಮವನ್ನು ವಿಚಾರಿಸು ವಾಗ ಗಾಂಧರ್ವ ವಿವಾಹವನ್ನು ಅನುಮೋದಿಸಿದ್ದನ್ನು ಪ್ರಿಯಂವದೆ ಆಗತಾನೆ ಕೇಳಿದ್ದಳು. ಅಗ್ನಿ ಗೃಹದಲ್ಲಿದ್ದಾಗ ಅಶರೀರವಾಣಿಯಿಂದ ಕಣ್ವರಿಗೆ ಈ ಸಂಗತಿ ತಿಳಿದಿತ್ತು. ಅದಕ್ಕನುಗುಣವಾಗಿ ಅವರು ಆ ಹೊತ್ತೇ ಶುಭದಿನವಾಗಿದ್ದುದ ರಿಂದ ಶಕುಂತಲೆಯನ್ನು ಗಂಡನ ಮನೆಗೆ ಕಳುಹಿಸಬೇಕೆಂದು ಸಂಕಲ್ಪಿಸಿದ್ದರು. ಪ್ರಿಯಂವದೆಯು ಅನಸೂಯೆಗೆ ಇದನ್ನು ತಿಳಿಸಿ ಶಕುಂತಲೆಯನ್ನು ಯಥೋ ಚಿತವಾಗಿ ಅಲಂಕರಿಸುವುದಕ್ಕೆ ಅವಳನ್ನು ತ್ವರೆಗೊಳಿಸುವಳು.

ಸೂರ್ಯೋದಯದ ವೇಳೆಗೆ ಶಕುಂತಲೆಯು ಸ್ನಾನಮಾಡಿರುವಳು. ತಾಪಸಿಯರು ಮಂಗಳವನ್ನಾಶಿಸುತ್ತ ಅವಳನ್ನು ಸುತ್ತುವರಿದಿರುವರು. ಒಬ್ಬಳು ಮಹಾದೇವಿಯ ಪದವಿಯನ್ನು ಹೊಂದೆಂದೂ ಇನ್ನೊಬ್ಬಳು ವೀರ ಮಾತೆಯಾಗೆಂದೂ, ಮತ್ತೊಬ್ಬಳು ಗಂಡನ ಅತಿಶಯ ಪ್ರೀತಿಗೆ ಪಾತ್ರ ವಾಗೆಂದೂ ನಾನಾ ವಿಧವಾಗಿ ಆಶೀರ್ವದಿಸುತ್ತಿರುವರು. ಸಖಿಯರೂ ಅಲ್ಲಿಗೆ ಬಂದು ಶಕುಂತಲೆಯನ್ನು ಅಲಂಕರಿಸಲು ಪ್ರಾರಂಭಿಸುವರು. ಇವರಿಂದ ಮಂಗಳಾಲಂಕರಣವು ಇನ್ನುಮುಂದೆ ಸಿಗದೆಂದು ಶಕುಂತಲೆಗೆ ವ್ಯಥೆ. "ಅಮೂಲ್ಯವಾದ ರತ್ನಾಭರಣಗಳನ್ನು ಧರಿಸಲು ಯೋಗ್ಯವಾದ ಇವಳ ದೇಹಕ್ಕೆ ಆಶ್ರಮದಲ್ಲಿ ಸಿಕ್ಕುವ ಅಲ್ಪಾಭರಣಗಳಲ್ಲಾ!" ಎಂದು ಸಖಿಯರಿಗೆ ವ್ಯಥೆ. ಅಷ್ಟರಲ್ಲಿ ಕಾಶ್ಯಪರ ಪ್ರಭಾವದಿಂದ ಆಶ್ರಮದ ಗಿಡಗಳು ಆಭರಣಾದಿ ಗಳನ್ನು ಸುರಿಸುವುವು. ಸಖಿಯರು ತಾಪಸಿಯರಾದರೂ ತಮ್ಮ ಚಿತ್ರಪರಿ ಚಯದ ಸಹಾಯದಿಂದ ಅವಳಿಗೆ ಆ ಆಭರಣಗಳನ್ನು ಸರಿಯಾಗಿಯೇ ತೊಡಿಸುವರು.

ಶಕುಂತಲೆಯು ಅಂದು ಪತಿಗೃಹಕ್ಕೆ ತೆರಳುವಳೆಂದು ಇತ್ತ ಕಾಶ್ಯಪರಿಗೂ ಶೋಕ. ಕೊರಳು ತಡೆಗಟ್ಟಿದಂತಾಗಿ ಕಣ್ಣು ಮಂಕಾಗಿರುವುದು. ಮಗಳನ್ನು ಗಂಡನ ಮನೆಗೆ ಕಳುಹಿಸುವಾಗ ವನವಾಸಿಗಳಾದ ತಪಸ್ವಿಗಳಿಗೇ ಇಷ್ಟು ದುಃಖವಾದರೆ ಸಂಸಾರಿಗಳ ಪಾಡೇನು! ಎಂದು ಅವರು ಭಾವಿಸುತ್ತಿರುವರು.[1] ಬೆಳಗಿನ ಸ್ನಾನಾಹ್ನಿಕಗಳನ್ನು ಮುಗಿಸಿ ಹೀಗೆ ಯೋಚಿಸುತ್ತ ಕುಳಿತಿದ್ದಾಗ ಶಕುಂತಲೆ ನಮಸ್ಕರಿಸುವಳು. ಶೋಕಭರವನ್ನು ಬಹಳ ಶ್ರಮದಿಂದ ಮರೆ ಮಾಚಿ, "ಪತಿಗೆ ಪ್ರಿಯಳಾಗಿ ಚಕ್ರವರ್ತಿಯಾಗಲು ಅರ್ಹನಾದ ಪುತ್ರನನ್ನು ಪಡೆ" ಎಂದು ಆಶೀರ್ವದಿಸುವರು. ಅನಂತರ, ಆಹುತಿಯನ್ನು ಸ್ವಿಕರಿಸಿ ಪ್ರಜ್ವಲಿಸುತ್ತಿದ್ದ ತ್ರೇತಾಗ್ನಿಯನ್ನು ಪ್ರದಕ್ಷಿಣೆಮಾಡಿ ಹೊರಡುವ ಸನ್ನಾಹ. ಶಾರ್ಙ್ಗರವ, ಶಾರದ್ವತ, ಗೌತಮಿಯರು ಜೊತೆಗೆ ಹೊರಡಲು ಸಿದ್ಧರಾಗುವರು. ಒಡನಾಡಿಯಾಗಿದ್ದ ಶಕುಂತಲೆಯು ಆಶ್ರಮದಿಂದ ಹೊರಡುತ್ತಿರುವುದನ್ನು ನೋಡಿ ಅಲ್ಲಿನ ಗಿಡ, ಬಳ್ಳಿ, ಮೃಗಗಳೂ ಕೂಡ ದುಃಖಪಡುತ್ತವೆ. ಶಕುಂತಲೆಗೆ ಅಪ್ಪಣೆಕೊಡಿರೆಂದು ಕಾಶ್ಯಪರು ಕೇಳಿದಾಗಲಂತೂ ಅವುಗಳ ಶೋಕವು ಮಿತಿ ಮೀರುವುದು. ಶಕುಂತಲೆಗೂ ಹೊರಡಲು ಕಾಲೇ ಬಾರದು. ಆಶ್ರಮದ ವಸ್ತುಗಳಿಗೂ ಅವಳಿಗೂ ಇದ್ದ ಬಾಂಧವ್ಯವು ಬಹಳ ಹತ್ತಿರದ್ದಾಗಿತ್ತು. ತಾನೇ ಬೆಳಸಿದ್ದ 'ವನಜ್ಯೋತ್ಸ್ನೆ'ಯನ್ನು ಕಂಡು ಬೀಳ್ಕೊಳ್ಳುವಾಗ ಬಹಳ ದುಃಖವಾಗುವುದು. ತಬ್ಬಲಿಯಾಗಿದ್ದ ಅಲ್ಲಿನ ಒಂದು ಜಿಂಕೆಮರಿಯನ್ನು ಅವಳೇ ಸಾಕಿದ್ದಳು. ಆ 'ಸಾಕುಮಗನು' ಈಗ ಸೆರಗನ್ನು ಎಳೆಯುತ್ತ ಬೇಡ ವೆನ್ನುತ್ತಿರುವಾಗ ಹೊರಡುವುದು ಕಷ್ಟತರವಾಗುವುದು. ಬಹಳ ಕಷ್ಟದಿಂದ ಅವನನ್ನು ಸಮಾಧಾನಪಡಿಸಿ ಇತ್ತ ಗರ್ಭಿಣಿಯಾದ ಮತ್ತೊಂದು ಹರಿಣಿಗೆ ಸುಖಪ್ರಸವವಾದುದನ್ನು ತನಗೆ ತಿಳಿಸಬೇಕೆಂದು ಬಯಸುತ್ತ, ಅನಸೂಯೆ ಪ್ರಿಯಂವದೆಯರನ್ನು ಅಗಲಬೇಕಲ್ಲ ಎಂದು ಕಣ್ಣೀರಿಡುತ್ತ ಶಕುಂತಲೆಯು

---

1. ಯಾಸ್ಯತ್ಯದ್ಯ ಶಕುಂತಲೇತಿ ಹೃದಯಂ ಸಂಸ್ಪೃಷ್ಟ ಮುತ್ಕಂಠಯಾ
ಕಂಠಃ ಸ್ತಂಭಿತಬಾಷ್ಪವೃತ್ತಿಕಲುಷಶ್ಚಿಂತಾಜಡಂ ದರ್ಶನಮ್ ।
ವೈಕ್ಲವ್ಯಂ ಮಮ ತಾವದೀದೃಶಮಹೋ ಸ್ನೇಹಾದರಣ್ಯೌಕಸಃ
ಪೀಡ್ಯಂತೆ ಗೃಹಿಣಃ ಕಥಂ ನು ತನಯಾವಿಶ್ಲೇಷದುಃಖೈರ್ನವೈಃ ॥

ಇದು ಮೂಲದ ಶ್ಲೋಕ. ಇದರ ಸಂಕ್ಷಿಪ್ತವಾದ ಅರ್ಥವನ್ನು ಮಾತ್ರ ಮೇಲೆ ನಿರೂಪಿಸಿದೆ (IV-8).

ಹೊರಡುವಳು. ಕಾಶ್ಯಪರು, ಅನಸೂಯೆ ಪ್ರಿಯಂವದೆ ಎಲ್ಲರೂ ದಾರಿ ಕಳುಹಿಸುವುದಕ್ಕಾಗಿ ಸ್ವಲ್ಪ ದೂರ ಹಿಂಬಾಲಿಸುವರು. ಶುಭಶಕುನಗಳಾಗುವುವು.

ಹತ್ತಿರದ ಒಂದು ಸರೋವರವನರೆಗೆ ಕಳುಹಿಸಿಕೊಟ್ಟು ಕಾಶ್ಯಪರು ಹಿಂದಿರುಗಲೆಳಸಿ ಅಳಿಯನಾದ ದುಷ್ಯಂತನಿಗೆ ತಲಪಿಸಬೇಕೆಂದು ಒಂದು ಸಂದೇಶವನ್ನು ಕೊಡುವರು :—

"ಅಸ್ಮಾನ್ ಸಾಧು ವಿಚಿಂತ್ಯ ಸಂಯಮಧನಾನುಚ್ಚೈಃ ಕುಲಂ ಚಾತ್ಮನಃ
ತ್ವಯ್ಯಸ್ಯಾಃ ಕಥಮಪ್ಯಬಾಂಧವಕೃತಾಂ ಸ್ನೇಹಪ್ರವೃತ್ತಿಂ ಚ ತಾಮ್ ।
ಸಾಮಾನ್ಯಪ್ರತಿಪತ್ತಿಪೂರ್ವಕಮಿಯಂ ದಾರೇಷು ದೃಶ್ಯಾ ತ್ವಯಾ
ಭಾಗ್ಯಾಯತ್ತಮತಃಪರಂ ನ ಖಲು ತದ್ವಾಚ್ಯಂ ವಧೂಬಂಧುಭಿಃ ॥"

"ನಾವು ತಪೋಧನರು; ನೀವು ಉತ್ತಮ ಕುಲದವರು; ಇವಳಿಗೆ ನಿಮ್ಮ ವಿಷಯದಲ್ಲಿ ಸಹಜವಾದ ಪ್ರೇಮ ಹುಟ್ಟಿದೆ; ಎಂಬಿವೆಲ್ಲವನ್ನೂ ಮನಗಂಡು ಇವಳನ್ನು ನಿಮ್ಮ ರಾಣಿವಾಸದವರಲ್ಲೊಬ್ಬಳನ್ನಾಗಿ ಕಾಣಿರಿ. ಉಳಿದುದು ಅವರವರ ಅದೃಷ್ಟಕ್ಕೆ ಸೇರಿದ್ದು; ಹೆಣ್ಣಿನ ಕಡೆಯವರು ಹೇಳತಕ್ಕುದಲ್ಲ." ಇದರ ಜೊತೆಗೆ, ಶಕುಂತಲೆಗೂ ಪತಿಗೃಹದಲ್ಲಿ ಹೇಗೆ ವರ್ತಿಸಬೇಕೆಂಬ ವಿಚಾರದಲ್ಲಿ ಬುದ್ಧಿವಾದವನ್ನಿತ್ತು ತಮ್ಮ ಕರ್ತವ್ಯವನ್ನು ಪೂರೈಸುವರು. ಶಕುಂತಲೆಗೆ ಮತ್ತೇನೂ ಮಾತನಾಡುವುದಕ್ಕೆ ತೋರದಿದ್ದರೂ ತಂದೆಯವರ ದೇಹಸ್ಥಿತಿಯ ವಿಷಯದಲ್ಲಿ ಬಹಳ ಆತಂಕವಿದ್ದುದರಿಂದ ಆ ವಿಚಾರದಲ್ಲಿ ಜಾಗರೂಕತೆಯಿಂದಿರಬೇಕೆಂದು ಅವರಿಗೆ ಬಿನ್ನವಿಸಿ ಪುನಃ ತಾನು ಆಶ್ರಮಕ್ಕೆ ಯಾವಾಗ ಬರಬಹುದೆಂದು ಕೇಳುವಳು. ಅದಕ್ಕೆ ಉತ್ತರವಾಗಿ "ಪತಿಯಾದ ದುಷ್ಯಂತನೊಡನೆ 'ಚತುರಂತ ಮಹೀಸಪತ್ನಿ'ಯಾಗಿ ಬಾಳಿ ವೀರಪುತ್ರನನ್ನು ಪಡೆದು ಅವನಿಗೆ ಕಾಲಕ್ರಮದಲ್ಲಿ ರಾಜ್ಯಭಾರವನ್ನೊಪ್ಪಿಸಿ ವಾನಪ್ರಸ್ಥಾಶ್ರಮಕ್ಕೆ ಯೋಗ್ಯತೆಯನ್ನು ಪಡೆದಮೇಲೆ ಪತಿಯೊಡನೆ ಇಲ್ಲಿಗೆ ಬರಬಹುದು"[1] ಎಂದು ಕಾಶ್ಯಪರು ಅಪ್ಪಣೆಕೊಡುವರು........ಮಗಳನ್ನಗಲಿದ

1. ಭೂತ್ವಾ ಚಿರಾಯ ಚತುರಂತಮಹೀಸಪತ್ನೀ
ದೌಷ್ಯಂತಿಮಪ್ರತಿರಥಂ ತನಯಂ ನಿವೇಶ್ಯ ।
ಭರ್ತ್ರಾ ತದರ್ಪಿತಕುಟುಂಬಭರೇಣ ಸಾರ್ಧಂ
ಶಾಂತೇ ಕರಿಷ್ಯಸಿ ಪದಂ ಪುನರಾಶ್ರಮೇಽಸ್ಮಿನ್ ॥ (IV. 12).

ದುಃಖವು ಬಾಧಿಸುತ್ತಿದ್ದರೂ ರಕ್ಷಿಸುವುದಕ್ಕೆಂದು ತಮ್ಮಲ್ಲಿಟ್ಟಿದ್ದ ಮುಡುಪನ್ನು ಹಿಂದಿರುಗಿ ಕೊಟ್ಟವರಂತೆ ಮನಸ್ಸಿನಲ್ಲಿ ಸಮಾಧಾನಗೊಂಡು ಕಾಶ್ಯಪರು ಅನಸೂಯೆ ಪ್ರಿಯಂವದೆಯರನ್ನೂ ಸಂತೈಸುತ್ತ ಹಿಂದಿರುಗುವರು. ಆಶ್ರಮದಿಂದ ದುಷ್ಯಂತನ ರಾಜಧಾನಿಗೆ ಸುಮಾರು ಮೂರು ದಿವಸಗಳ ಪ್ರಯಾಣ.

---

## ಐದನೆಯ ಅಂಕ

ಆಗತಾನೆ ಧರ್ಮಾಸನದಿಂದೆದ್ದು ದುಷ್ಯಂತನು ವಿದೂಷಕನೊಡನೆ ತನ್ನ ಏಕಾಂತಗೃಹದಲ್ಲಿ ವಿಶ್ರಮಿಸಿಕೊಳ್ಳುತ್ತಿರುವನು. ಸಂಗೀತಶಾಲೆಯಿಂದ ಒಂದು ಸೊಗಸಾದ ಗೀತವು ಕೇಳಬರುವುದು. ಮಾಢವ್ಯನು ಅದರ ಅರ್ಥದ ಕಡೆಗೆ ಗಮನವನ್ನು ಸೆಳೆಯುವನು. ಮೊದಮೊದಲು ಹೆಚ್ಚಿನ ಒಲವನ್ನು ತೋರಿಸಿ ಕಡೆಗೆ ಕಣ್ಣೆತ್ತಿಯೂ ನೋಡದೆ ಇರುವ ನಾಯಕ ಸ್ವಭಾವವನ್ನು ಭ್ರಮರಾಪದೇಶದಿಂದ ಅಲ್ಲಿ ದೂಷಿಸಿರುವುದರ ಚಮತ್ಕಾರವು ಅವನ ಮನಸ್ಸಿಗೆ ಒಪ್ಪುವುದು. ಇದರಿಂದ ಅವಳ ಚತುರತೆಯನ್ನು ಮೆಚ್ಚಿದುದಾಗಿ ಆ ಗಾಯಕಿ ಹಂಸಪದಿಕೆಗೆ ದೊರೆಯು ಹೇಳಿ ಕಳುಹಿಸುವನು. ಆದರೆ ಅದು ಕಿವಿಗೆ ಬಿದ್ದಾಗಿನಿಂದ ಮನಸ್ಸು ಕಳವಳ ಪಡುತ್ತಿರುವುದನ್ನು ಕಂಡು ಆಶ್ಚರ್ಯವಾಗುವುದು. ಇದಕ್ಕೆ ಕಾರಣವನ್ನು ಹೀಗೆ ಊಹಿಸುವನು:—

ರಮ್ಯಾಣಿ ವೀಕ್ಷ್ಯ ಮಧುರಾಂಶ್ಚ ನಿಶಮ್ಯ ಶಬ್ದಾನ್
ಪರ್ಯುತ್ಸುಕೀ ಭವತಿ ಯತ್ಸುಖಿತೋಽಪಿ ಜಂತುಃ ।
ತಚ್ಚೇತಸಾ ಸ್ಮರತಿ ನೂನಮಬೋಧಪೂರ್ವಂ
ಭಾವಸ್ಥಿರಾಣಿ ಜನನಾಂತರಸೌಹೃದಾನಿ ॥

"ಸುಖಿಯಾಗಿದ್ದರೂ ಮಧುರಗಾನವನ್ನು ಕೇಳಿಯೋ ರಮ್ಯವಸ್ತುವನ್ನು ನೋಡಿಯೋ ನರನು ಅರಿವೇ ಇಲ್ಲದಂತೆ ತವಕಪಡುವುದಿದೆಯಲ್ಲ ಇದಕ್ಕೆ ಮನಸ್ಸಿನಲ್ಲಿ ಭಾವರೂಪವಾಗಿ ಬೇರೂರಿರುವ ಜನ್ಮಾಂತರದ ಸೌಹಾರ್ದದ ಸ್ಮರಣೆಯೇ ಕಾರಣ."

ಈ ವೇಳೆಗೆ ತಾಪಸರು ಅರಮನೆಗೆ ಬಂದು ದೊರೆಯನ್ನು ಕಾಣ ಲೆಳಸುವರು. ದೊರೆಯು ಬಳಲಿದ್ದುದರಿಂದ ಕಂಚುಕಿಯು ಇವರ ಆಗಮನ ವನ್ನು ತಿಳಿಸಲು ಸ್ವಲ್ಪ ಹಿಂಜರಿಯುವನು. ಆದರೆ ರಾಜರು, ಸೂರ್ಯ, ವಾಯು, ಆದಿಶೇಷರಂತೆ ಅವಿಚ್ಛಿನ್ನವಾಗಿ ತಮ್ಮ ಕೆಲಸಗಳನ್ನು ಗಮನಿಸ ಬೇಕು ಎಂದು ಯೋಚಿಸಿ ಇವರ ಆಗಮನವನ್ನು ಬಿನ್ನವಿಸುವನು. ಕೂಡಲೆ ದುಷ್ಯಂತನು ಅವರನ್ನು ಉಚಿತವಾದ ಸತ್ಕಾರದೊಡನೆ ಸ್ವಾಗತಿಸಬೇಕೆಂದು ಉಪಾಧ್ಯಾಯ ಸೋಮರಾತನಿಗೆ ಹೇಳಿ ಕಳುಹಿಸುವನು. ಅಗ್ನಿಗೃಹದಲ್ಲಿ ಭೇಟಿಗೆ ಏರ್ಪಾಡಾಗುವುದು. ಈ ತಾಪಸರು ಯಾವ ಕಾರ್ಯಕ್ಕಾಗಿ ತನ್ನ ಲ್ಲಿಗೆ ಬಂದಿರಬಹುದೆಂದು ದುಷ್ಯಂತನಿಗೆ ಸಂದೇಹ.

ಇತ್ತ ಶಾರ್ಙ್ಗರವ ಶಾರದ್ವತರ ಮನೋಭಾವವೇ ಒಂದು ರೀತಿಯದಾ ಗುವುದು. ಧಾರ್ಮಿಕ ವಾತಾವರಣದಲ್ಲಿದ್ದರೂ ಅಲ್ಲಿಗೆ ಬಂದೊಡನೆಯೇ ಜನಸಂದಣಿಯನ್ನು ನೋಡಿ ಶಾರ್ಙ್ಗರವನಿಗೆ ಅರಮನೆಯು ಬೆಂಕಿಬಿದ್ದ ಮನೆಯಂತೆ ಕಾಣಿಸುವುದು. ಇಲ್ಲಿನ ಜನರಿಗೂ ತಮಗೂ ಇರುವ ತಾರತಮ್ಯವು ಶಾರದ್ವತನಿಗೆ ಸ್ಪಷ್ಟವಾಗುವುದು. ಶಕುಂತಲೆಯ ಬಲಗಣ್ಣು ಅದಿರುವುದು. ಗೌತಮಿಯು ಆತಂಕಗೊಂಡು ಅವಳ ಗಂಡನ ಮನೆ ದೇವರು ಶುಭವನ್ನು ಕರುಣಿಸಲೆಂದು ಆಶೀರ್ವದಿಸುವಳು.

ಬುರುಕಿ ಹಾಕಿಕೊಂಡಿದ್ದರೂ ಶಕುಂತಲೆಯ ಶರೀರಲಾವಣ್ಯವು ದೊರೆಗೆ ಮರೆಯಾಗಿರಲಿಲ್ಲ. ಪರಕಲತ್ರವನ್ನು ನೋಡಬಾರದೆಂದು ಅವನು ಅಡ್ಡಮುಖ ಹಾಕಿಕೊಳ್ಳುವನು. ತಕುಂತಲೆಯ ಹೃದಯವು ಏಕೋ ನಡುಗುವುದು.

ಪರಸ್ಪರ ಕುಶಲಪ್ರಶ್ನೆಗಳಾದಮೇಲೆ ತಾಪಸರು ಕಾಶ್ಯಪರ ಸಂದೇಶ ವನ್ನು ಅರುಹುವರು. "ನೀವಿಬ್ಬರೂ ಪರಸ್ಪರ ಒಪ್ಪಿ ಮದುವೆಯಾದುದನ್ನು ನಾನೂ ನಿಮ್ಮ ಮೇಲಿನ ಪ್ರೀತಿಯಿಂದ ಅನುಮೋದಿಸಿರುವೆನು. ನೀನು ಪೂಜಾರ್ಹರಲ್ಲಿ ಅಗ್ರಗಣ್ಯ, ಶಕುಂತಲೆ ಸತ್ಕ್ರಿಯೆಯ ಅಪರಾವತಾರ. ಹೀಗೆ ಸಮಾನ ಗುಣರಾದ ವಧೂವರರನ್ನು ಒಟ್ಟುಗೂಡಿಸಿ ವಿಧಿಯು ಬಹುಕಾಲ ದಿಂದ ತನಗಿದ್ದ ದೂಷಣೆಯನ್ನು ತಪ್ಪಿಸಿಕೊಂಡಿರುವನು. ಈಗ ಗರ್ಭವತಿ

ಯಾಗಿರುವ ಇವಳನ್ನು ಧರ್ಮಾಚರಣೆಗಾಗಿ ಪರಿಗ್ರಹಿಸು" ಎಂದು. ಈ ವೇಳೆಗೆ ವೃದ್ಧಗೌತಮಿಯು ತನಗೆ ಅವಕಾಶವಿಲ್ಲದಿದ್ದರೂ ಬಾಯಿಹಾಕಿ "ನೀವಿಬ್ಬರೂ ಬೇರೊಬ್ಬರನ್ನೂ ಕೋರದೆ ಪರಸ್ಪರ ಪ್ರೀತಿಯನ್ನೇ ಮುಂದಿಟ್ಟು ನಡೆದಿರುವುದರಲ್ಲಿ ಯಾರೂ ಮರುಮಾತಾಡುವಂತಿಲ್ಲ. ಅನ್ಯಾಪೇಕ್ಷೆಯಿಲ್ಲದೆ ಅಂಕುರಿಸಿದ ಅನುರಾಗಕ್ಕನುಗುಣವಾಗಿ ಸುಖದಾಂಪತ್ಯವನ್ನನುಭವಿಸಿರಿ" ಎನ್ನುವಳು. ದೊರೆಯು ಮೊದಲಾಡಿದ ಕೆಲವು ಮಾತುಗಳಿಂದಲೂ ಅಶುಭ ನಿಮಿತ್ತಗಳಿಂದಲೂ ಶಕುಂತಲೆಗೆ ಈಗಾಗಲೇ ಸಂದೇಹ ಹುಟ್ಟಿ ದುಷ್ಯಂತನೇ ನೆನ್ನುವನೋ ಎಂದು ಕಾತರತೆ ಉಂಟಾಗಿದೆ. ಆ ವೇಳೆಗೆ ಸರಿಯಾಗಿ "ಇದೇನು ನೀವು ಹೇಳುತ್ತಿರುವುದು?" ಎಂಬ ದುಷ್ಯಂತನ ಪ್ರಶ್ನೆಯು ಅವಳಿಗೆ ಬೆಂಕಿಯಂತೆ ತೋರುವುದು. ಮಾತಿನ ಮೇಲೆ ಮಾತು ಬೆಳೆಯುವುದು—

**ಶಾರ್ಙ್ಗರವ**:—ಇದೇನಿದು?...............ನೀವೇ ಬಹಳ ಮಟ್ಟಿಗೆ ಲೋಕ ವೃತ್ತಾಂತವನ್ನೆಲ್ಲ ತಿಳಿದವರಷ್ಟೆ! ಪತಿವ್ರತೆಯಾಗಿದ್ದರೂ ತೌರುಮನೆಯಲ್ಲೇ ಇರುವ ಸುಮಂಗಲಿಯನ್ನು ಜನರು ಅನ್ಯಥಾ ಭಾವಿಸುವರು. ಆದುದರಿಂದಲೇ ಗಂಡನಿಗೆ ಅಪ್ರಿಯಳಾಗಿದ್ದರೂ ಅವಳನ್ನು ಅವಳ ಬಂಧುಗಳು ಅವನ ಹತ್ತಿರವೇ ಬಿಡಲೆಳಸುವುದು.

**ರಾಜ**:— ಹಾಗಾದರೆ ನಾನು ಇವಳನ್ನು ಮದುವೆಯಾಗಿದ್ದೆನೆ?

**ಶಕುಂತಲೆ**:—(ತನ್ನಲ್ಲಿ ತಾನು, ವಿಷಾದದಿಂದ) ಎಲೆ ಮನಸ್ಸೆ, ನೀನು ಕಳವಳಪಡುತ್ತಿದ್ದುದು ಈಗ ಯುಕ್ತವಾಯಿತು.

**ಶಾರ್ಙ್ಗರವ**:—ಇದೇನು ಮಾಡಿದ್ದನ್ನು ಒಲ್ಲದೆಯೋ, ಧರ್ಮ ವೈಮುಖ್ಯದಿಂದಲೋ, ನಡೆದ ಸಂಗತಿಯನ್ನು ತಿರಸ್ಕರಿಸಿಯೋ? (ನೀನು ಮಾತನಾಡುತ್ತಿರುವುದು?)

**ರಾಜ**:—ಇದೇತಕ್ಕೆ ಈ ಇಲ್ಲದುದನ್ನು ಕಲ್ಪಿಸುವ ಪ್ರಶ್ನೆ?

**ಶಾರ್ಙ್ಗರವ**:—ಐಶ್ವರ್ಯಮದಮತ್ತರು ಬಹುಶಃ ಈ ವಿಕಾರಗಳಿಗೀಡಾಗುವರು!

ರಾಜ :—ಇದು ಅತಿ ಅತಿ ಬೈಗಳ ನನಗೆ!

**ಗೌತಮಿ** :—ಜಾತೆ! ಒಂದು ಗಳಿಗೆ ಲಜ್ಜೆಪಡದಿರು, ನಿನ್ನ ಮೇಲು ಮುಸುಕನ್ನು ತೆಗೆಯುತ್ತೇನೆ. ಆಗ ನಿನ್ನ ಗಂಡನು ನಿನ್ನ ಗುರುತನ್ನು ಹಿಡಿಯುವನು.

ಹೀಗೆಂದು ಹೇಳಿ ಶಕುಂತಲೆಯ ಅವಗುಂಠನವನ್ನು ತೆಗೆಯಲಾಗಿ ದೊರೆಯು ಅವಳ ಅಕಳಂಕಿತವಾದ ಸೌಂದರ್ಯವನ್ನು ನೋಡಿ ಮತ್ತೂ ಹೆಚ್ಚಾದ ಧರ್ಮಸಂಕಟದಲ್ಲಿ ಸಿಕ್ಕಿಬೀಳುವನು. ಅವಳನ್ನು ಪರಿಗ್ರಹಿಸುವುದಾಗಲಿ ನಿರಾಕರಿಸುವುದಾಗಲಿ ಯಾವುದೂ ಸಾಧ್ಯವಿಲ್ಲದೆ ಹೋಗುವುದು. ಎಷ್ಟೆಷ್ಟು ಕ್ಲೇಶಪಟ್ಟರೂ ಅವಳನ್ನು ವರಿಸಿದುದು ನೆನಪಿಗೆ ಬಾರದು. ಹೀಗಿರುವಾಗ ಗರ್ಭವತಿಯಾಗಿರುವ ಅವಳನ್ನು ತನ್ನವಳೆಂದು ಒಪ್ಪಿ ಅಧರ್ಮವನ್ನೆಸಗುವುದಕ್ಕೆ ಮನಸೊಪ್ಪದು. ಯೋಚಿಸುತ್ತ ಕುಳಿತುಕೊಳ್ಳುವನು. ಆಗ ಪ್ರತೀಹಾರಿ ಹೇಳುವಳು—ಅಯ್ಯೋ ನಮ್ಮ ಸ್ವಾಮಿಯ ಧರ್ಮದೃಷ್ಟಿಯೇ! ಅನಾಯಾಸವಾಗಿ ದೊರೆತ ಈ ಸುರೂಪವನ್ನು ನೋಡಿ ಯಾರು ತಾನೆ ಯೋಚಿಸುವರು?

**ಶಾರ್ಙ್ಗರವ** :—ರಾಜನೇ! ಇದೇನು ಸುಮ್ಮನಿರುವೆ?

**ರಾಜ** :—ತಪಸ್ವಿಗಳೆ! ಎಷ್ಟು ಯೋಚಿಸಿದರೂ ಈಕೆಯನ್ನು ಸ್ವೀಕರಿಸಿದುದು ಸ್ಮರಣೆಗೆ ಬರುವುದಿಲ್ಲ. ಹೀಗಿರುವಾಗ ಗರ್ಭಚಿಹ್ನೆಯುಳ್ಳ ಈಕೆಯನ್ನು ನನ್ನ ಪತ್ನಿಯೆಂದು ಹೇಗೆ ಪರಿಗ್ರಹಿಸಲಿ?

**ಶಕುಂತಲೆ** :—(ಮರೆಯಲ್ಲಿ) ಆರ್ಯನಿಗೆ ಮದುವೆಯಲ್ಲೇ ಸಂದೇಹ. ಬಹುದೂರ ಹತ್ತಿದ್ದ ನನ್ನಾಸೆ ಇನ್ನೆಲ್ಲಿ?

**ಶಾರ್ಙ್ಗರವ** :—ಛೆ! ಹಾಗಲ್ಲ, ಮಗಳನ್ನು ನೀನು ಕೆಣಕಿದುದನ್ನು ಒಪ್ಪಿದುದು ಕುಲಪತಿಗಳ ತಪ್ಪು. ಅವರೇ ವಿಮಾನ್ಯರು. ಇನ್ನೇನು? ಒಡವೆಯನ್ನು ಕದ್ದ ಕಳ್ಳನನ್ನು ಸತ್ಪಾತ್ರವೆಂದಂತಾಯಿತು.

**ಶಾರದ್ವತ** :—ಶಾರ್ಙ್ಗರವ, ಈಗ ನೀನು ಸುಮ್ಮನಿರು; ಶಕುಂತಲೆ! ನಾವು ಹೇಳಬೇಕಾದುದನ್ನು ಹೇಳಿಯಾಯಿತು. ಈ ಮಹಾಪುರುಷ ಹೀಗೆ ಹೇಳುತ್ತಾನೆ. ಇವನನ್ನೊಪ್ಪಿಸುವ ಪ್ರತ್ಯುತ್ತರವನ್ನು ನೀನೇ ಕೊಡತಕ್ಕದ್ದು.

**ಶಕುಂತಲೆ** :—(ಮರೆಯಲ್ಲಿ) ಅಂತಹ ಅನುರಾಗವು ಈ ಅವಸ್ಥಾಂತರ ವನ್ನು ಹೊಂದಿದ ಮೇಲೆ ಸ್ಮರಣೆಯನ್ನುಂಟುಮಾಡುವುದರಿಂದೇನು? ನಾನು ತಾನೆ ಶೋಚನೀಯಳೆಂಬುದು ತೀರ್ಮಾನವಾಯಿತು.

ಆದರೂ, ಹೇಗಾದರೂ ಆಗಲಿ, ಪ್ರಯತ್ನಮಾಡೋಣವೆಂದು ದೊರೆ ಯನ್ನು ಒಪ್ಪಿಸಲು ಪ್ರಾರಂಭಿಸುವಳು.

**ಶಕುಂತಲೆ** :—(ಪ್ರಕಾಶವಾಗಿ) ಆರ್ಯಪುತ್ರ! (ಅರ್ಧೋಕ್ತಿಯಲ್ಲಿ) ಮದುವೆಯಾಗಿರುವ ವಿಚಾರದಲ್ಲೇ ಸಂಶಯ ಹುಟ್ಟಿರುವಾಗ ಇದು ಸಮುದಾ ಚಾರವಲ್ಲ. (ಪುನಃ ಮೊದಲಿನಂತೆ) ಪೌರವನೆ! ಮೊದಲು ಆಶ್ರಮದಲ್ಲಿ ಸ್ವಭಾವತಃ ಸರಳಹೃದಯಳಾದ ನನ್ನನ್ನು ಒಪ್ಪಿಗೆಯ ಮಾತುಗಳನ್ನಾಡಿ ಮೋಸಗೊಳಿಸಿ, ಈಗ ಹೀಗೆ ನಿರಾಕರಿಸುವುದು ಯುಕ್ತವೇ?

**ರಾಜ** :—(ಕಿವಿಯನ್ನು ಮುಚ್ಚಿಕೊಳ್ಳುತ್ತ) ಶಾಂತಂ ಪಾಪಂ. ರಭಸ ದಿಂದ ದಡವನ್ನು ಕೊಚ್ಚುವ ನದಿಯು ನೀರನ್ನೂ ಕದಡಿ, ದಡದ ಮರವನ್ನೂ ಉರುಳಿಸುವಂತೆ ನಿನಗೂ ಅಪಕೀರ್ತಿಯನ್ನು ತಂದುಕೊಂಡು ನನ್ನನ್ನೂ ಅಧೋಗತಿಗಿಳಿಸುವೆಯಾ?

**ಶಕುಂತಲೆ** :—ಸತ್ಯವಾಗಿಯೂ ಪರಸ್ತ್ರೀಯೆಂಬ ಸಂದೇಹದಿಂದ ನೀನು ಹೀಗೆ ವರ್ತಿಸುತ್ತಿರುವೆಯಾದರೆ ಈ ಅಭಿಜ್ಞಾನದಿಂದ ನಿನ್ನ ಸಂದೇಹ ವನ್ನು ಪರಿಹರಿಸುವೆನು (ಎಂದು ಉಂಗುರವನ್ನು ಹುಡುಕುವಳು).

**ದೊರೆ** :—ಅದೀಗ ಒಪ್ಪತಕ್ಕ ಮಾತು.

**ಶಕುಂತಲೆ** :—ಅಯ್ಯೋ! ನನ್ನ ಬೆರಳಿನಲ್ಲಿ ಉಂಗುರವಿಲ್ಲವಲ್ಲ! (ಎಂದು ಗೌತಮಿಯ ಮುಖ ನೋಡುವಳು.)

**ಗೌತಮಿ** :—ಶಕ್ರಾವತಾರದಲ್ಲಿ ಶಚೀತೀರ್ಥಕ್ಕೆ ನಮಸ್ಕರಿಸುತ್ತಿದ್ದಾಗ ಉಂಗುರವು ಕಳಚಿ ಹೋಗಿರಬೇಕು.

**ದೊರೆ** :—(ಹುಸಿನಗೆ ನಗುತ್ತ) ಹೆಂಗಸರ ಬುದ್ಧಿಯು ಸಮಯಕ್ಕೆ ಸರಿಯಾಗಿ ಕುದುರುವುದಕ್ಕೆ ಇದು ಒಳ್ಳೆಯ ನಿದರ್ಶನ.

**ಶಕುಂತಲೆ** :—ಈ ವಿಷಯದಲ್ಲಿ ವಿಧಿ ಪ್ರಬಲವಾಯಿತು. ಇರಲಿ. ಬೇರೊಂದು ವಿಚಾರವನ್ನು ನಿನಗರುಹುವೆನು.

**ದೊರೆ**:—ನೋಡಿದ್ದು ಮುಗಿಯಿತು ಇನ್ನು ಕೇಳಬೇಕಾದುದಾಯಿತು.

ಅಂತು ಇದೆಲ್ಲವನ್ನೂ ಸಹಿಸಿಕೊಂಡು ಶಕುಂತಲೆಯು ಬಹಳ ಪ್ರಯಾಸ ಪಡುತ್ತ ಅವನಿಗೆ ಹಿಂದಿನ ಸಂದರ್ಭದ ಸ್ಮರಣೆಯನ್ನುಂಟುಮಾಡಲು ಪ್ರಯತ್ನಿಸುವಳು. ದುಷ್ಯಂತನು ಯಾವುದನ್ನೂ ನಂಬದೆ "ಹೀಗೆತಾನೆ ಕಾರ್ಯವನ್ನು ಸಾಧಿಸಿಕೊಳ್ಳುವುದಕ್ಕಾಗಿ ಸುಳ್ಳು ಹೇಳುವ ಚದುರೆಯರ ಪಾಶಕ್ಕೆ ವಿಷಯಿಗಳು ಬೀಳುವುದು" ಎಂದು ಉತ್ತರ ಕೊಡುವನು. "ಆಶ್ರಮದಲ್ಲಿ ಬೆಳೆದ ಈ ಹೆಣ್ಣು ಮೋಸವನ್ನರಿಯಳು" ಎಂಬ ಗೌತಮಿಯ ಮಾತೂ ಬೆಲೆಯಿಲ್ಲದ್ದಾಗುವುದು. ಅದಕ್ಕೂ ದೊರೆಯು ಬಿರುಸಾಗಿಯೇ ಉತ್ತರ ಕೊಡುವನು. ಆಗ ಶಕುಂತಲೆ ಕೋಪಗೊಂಡು "ಅನಾರ್ಯ! ನಿನ್ನ ಚಿತ್ತವೃತ್ತಿಯನ್ನೇ ಇತರರಿಗೂ ಆರೋಪಿಸಿರುವೆ; ಹುಲ್ಲುಮುಚ್ಚಿದ ಬಾವಿ ಯಂತೆ ಧರ್ಮಕವಚವನ್ನು ಮಾತ್ರ ಧರಿಸಿ ವಂಚಕನಾದ ನಿನಗೆ ಯಾರು ತಾನೆ ಸಮನಾಗುವರು?" ಎಂದು ಅವನನ್ನು ಧಿಕ್ಕರಿಸುವಳು. ಸಂದೇಹ ವನ್ನು ಹೆಚ್ಚಿಸುವ ಇವಳ ಕೋಪವು ದೊರೆಗೆ ಅಕೃತಕವಾಗಿ ತೋರುವುದು. ದುಃಖವೂ ನಾಚಿಕೆಯೂ ಉಂಟಾಗುವುವು. ಆದರೇನುಮಾಡಿಯಾನು? ಶಕುಂತಲೆಯು ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಅಳುವುದಕ್ಕೆ ತೊಡಗುವಳು.

ಶಾರ್ಙ್ಗರವನು ಕೋಪವನ್ನು ತಡೆಯಲಾರದೆ ಪುನಃ ಪ್ರಾರಂಭಿಸುವನು. ಬಿರುಸಾದ ಮೊನೆಯಾದ ಮಾತುಗಳು ಒಂದಾದಮೇಲೊಂದು ದೊರೆಯ ದುಃಖಿತ ಹೃದಯವನ್ನು ಇರಿಯುವುವು. ಕೋಪಗೊಂಡ ಋಷಿಕುಮಾರನನ್ನು ಸಮಾಧಾನಗೊಳಿಸುವ ಮಾತುಗಳೆಲ್ಲ ವ್ಯರ್ಥವಾಗುವುವು. ಕಡೆಗೆ ಶಾರದ್ವತನು "ಶಾರ್ಙ್ಗರವ! ಸುಮ್ಮನೆ ಮಾತನಾಡಿ ಪ್ರಯೋಜನವೇನು? ಗುರುಗಳ ಅಪ್ಪಣೆ ಯನ್ನು ನಡೆಸಿದ್ದಾಯಿತು. ನಾವು ಹಿಂದಿರುಗೋಣ" ಎಂದು ಹೇಳಿ ದೊರೆಯ ಕಡೆಗೆ ತಿರುಗಿ "ಇವಳು ನಿನ್ನ ಹೆಂಡತಿ; ಬೇಕಾದರೆ ಇಟ್ಟುಕೊ ಬೇಡವಾದರೆ ಬಿಡು; ಹೆಂಡತಿಯರ ಮೇಲೆ ಗಂಡಂದಿರಿಗೆ ಸರ್ವಸ್ವಾತಂತ್ರ್ಯ" ಎಂದು ಮಾತನ್ನೆಲ್ಲ ಮುಗಿಸಿ ಗೌತಮಿಯೊಡನೆ ಹೊರಡಲುದ್ಯುಕ್ತನಾಗುವನು. "ಈ ಕಪಟಿ ನನ್ನನ್ನು ಮೋಸಗೊಳಿಸಿದ; ನೀವೂ ನನ್ನನ್ನು ಬಿಡುವಿರಾ" ಎಂದು

ಶಕುಂತಲೆಯು ಹಿಂಬಾಲಿಸಲು ಗೌತಮಿಯು ಇವಳನ್ನೂ ಹಿಂದಕ್ಕೆ ಕರೆದು ಕೊಂಡು ಹೋಗುವುದು ಯುಕ್ತವೆಂದು ಸೂಚಿಸುವಳು. ಶಾರ್ಙ್ಗರವನು ರೋಷದಿಂದ ಹಿಂದಿರುಗಿ "ಎಲೆ, ಸ್ವೇಚ್ಛಾವರ್ತಿನಿ! ಇದೇನು ಸ್ವಾತಂತ್ರ್ಯ ವನ್ನು ವಹಿಸಿದೆ" ಎಂದು ಗರ್ಜಿಸಿದಾಗ ಶಕುಂತಲೆ ಭಯದಿಂದ ನಡುಗು ವಳು. "ದೊರೆಯು ಹೇಳುವಂತೆ ನೀನಿದ್ದಲ್ಲಿ ಕುಲಕ್ಕೆ ಹೊರಗಾದ ನಿನ್ನಿಂದ ತಂದೆಗೇನಾಗಬೇಕು? ಹಾಗಿಲ್ಲದೆ ನಿನಗೆ ಕರ್ತವ್ಯಜ್ಞಾನವಿರುವುದಾದರೆ ಗಂಡನ ಮನೆಯಲ್ಲಿ ದಾಸಿಯಾಗಿರುವುದೂ ತಕ್ಕುದು; ಆದುದರಿಂದ ನಿಲ್ಲು. ನಾವು ಹೊರಡುವೆವು" ಎಂದು ಗುಡಿಗುಡಿಸಿ ಶಾರ್ಙ್ಗರವನು ಇತರರೊಡನೆ ಹೊರಟೇಹೋಗುವನು.

ಇದರಲ್ಲಿ ಯಾವುದು ಸತ್ಯವೆಂದು ನಿರ್ಧರಿಸಲಾರದೆ ದೊರೆಯು ವಿಮೂಢ ನಾಗಿರುವಲ್ಲಿ ಪುರೋಹಿತ (ಸೋಮರಾತ) ನು ಒಂದು ಸಲಹೆಯನ್ನು ಕೊಡುವನು.—

"ಪ್ರಸವವಾಗುವವರೆಗೂ ಈಕೆಯು ನಮ್ಮ ಮನೆಯಲ್ಲಿರಲಿ. ಏತಕ್ಕೆಂದರೆ ಇಗೋ ಹೀಗೆ: ಮೊಟ್ಟಮೊದಲೇ ಚಕ್ರವರ್ತಿ ಲಕ್ಷಣವನ್ನುಳ್ಳ ಪುತ್ರನನ್ನು ನೀನು ಹೊಂದುವೆಯೆಂದು ಸಾಧುಗಳು ಹೇಳಿರುವರು. ಅದಕ್ಕನುಸಾರವಾಗಿ ಇವಳಲ್ಲಿ ಜನಿಸುವ ಮುನಿದೌಹಿತ್ರನಲ್ಲಿ ಚಕ್ರವರ್ತಿ ಲಕ್ಷಣಗಳು ಕಂಡುಬಂದಲ್ಲಿ ಈಕೆಯನ್ನು ಗೌರವಿಸಿ ಅಂತಃಪುರಕ್ಕೆ ಸೇರಿಸಿಕೊ. ಇಲ್ಲದಿದ್ದಲ್ಲಿ ತಂದೆಯ ಮನೆಗೆ ಕಳುಹಿಸುವುದು ಗೊತ್ತೇ ಇದೆ." ಎಂಬ ಈ ಸಲಹೆಯು ದೊರೆಗೆ ಒಪ್ಪಿ, ಶಕುಂತಲೆ ಅಳುತ್ತಾ ಪುರೋಹಿತನ ಹಿಂದೆ ಹೊರಡುವಳು. ದೊರೆಯು ಇವಳನ್ನೇ ಕುರಿತು ಚಿಂತಿಸುತ್ತಿರುವಾಗ ಪುರೋಹಿತನು ಪುನಃ ಬಂದು ಶಕುಂತಲೆಯನ್ನು ಅಪ್ಸರಸ್ತೀರ್ಥದಿಂದ ಬಂದ ಜ್ಯೋತಿಯೊಂದು ಮೇಲಕ್ಕೆತ್ತಿ ಕೊಂಡು ಹೋದ ಕೌತುಕವನ್ನು ತಿಳಿಸುವನು. ಎಲ್ಲರೊಡನೆ ದೊರೆಯೂ ಆಶ್ಚರ್ಯಪಟ್ಟರೂ "ಹಿಂದೆಯೇ ಕೈಬಿಟ್ಟಿದ್ದ ಆ ವಸ್ತುವನ್ನು ಕುರಿತು ಇನ್ನು ತರ್ಕಿಸಿ ಫಲವೇನು?" ಎಂದು ಹೇಳಿ ಎಲ್ಲರಿಗೂ ವಿಶ್ರಮಿಸಿಕೊಳ್ಳಲು ಆಜ್ಞೆ ಯಿತ್ತು ತಾನೂ ಶಯನಗೃಹದ ಕಡೆಗೆ ಹೊರಡುವನು. ಕಡೆಗೂ ಈ ವಿಷಯವು ಅವನ ಮನಸ್ಸನ್ನು ಬಿಡುವುದೇ ಇಲ್ಲ. "ಈಗ ತೊರೆದ ಆ ಮುನಿ ಪುತ್ರಿ ನನ್ನ ಹೆಂಡತಿಯೆಂದು ಹೇಗೂ ನೆನಪು ಬರುವುದಿಲ್ಲ. ಆದರೂ ಅವಳನ್ನೇ

ನೆನೆದು ನೆನೆದು ಅಳಲುವ ಈ ನನ್ನ ಮನಸ್ಸು ನಂಬಿಕೆಯನ್ನುಂಟುಮಾಡು ತ್ತಿರುವಂತಿದೆ" ಎಂಬ ಭಾವನೆ ಮನಸ್ಸಿನಲ್ಲಿ ಬೇರೂರುವುದಕ್ಕೆ ತೊಡಗುವುದು.

---

## ಆರನೆಯ ಅಂಕ

ಶಕ್ರಾವತಾರದಲ್ಲಿ ಬಲೆಯನ್ನು ಬೀಸಿದಾಗ ಒಬ್ಬ ಬೆಸ್ತನಿಗೆ ಒಂದು ದಿನ ದೊಡ್ಡ ಕೆಂಪುಮೀನು (ರೋಹಿತ) ಸಿಕ್ಕುವುದು. ಅದನ್ನು ಕತ್ತರಿಸಿದಾಗ ಒಳಗೆ ಒಂದು ರತ್ನದ ಉಂಗುರವು ಕಾಣಬರುವುದು. ಬೆಸ್ತನು ಸಂತೋಷ ಗೊಂಡು ಅದನ್ನು ಮಾರುವುದಕ್ಕಾಗಿ ಪೇಟೆಯ ಬೀದಿಗೆ ಹೋಗುವನು. ಈ ಸಮಾರಂಭದಲ್ಲಿ ಹೇಗೋ ಆ ಉಂಗುರದ ಮುದ್ರೆಯಲ್ಲಿ ದೊರೆಯ ಹೆಸರಿದ್ದು ದನ್ನು ನಗರರಕ್ಷಕರು ಕಂಡು ಒಡನೆಯೊಡನೆ ಇವನನ್ನು ವಶಪಡಿಸಿಕೊಂಡು ನಾನಾವಿಧವಾಗಿ ಬೈದು ಹಿಂಸಿಸುವುದಕ್ಕೆ ತೊಡಗುವರು. ಬೆಸ್ತನ ಸಮರ್ಥನೆ ಯೆಲ್ಲ ವ್ಯರ್ಥವಾಗುವುದು. ಕಡೆಗೆ ಆ ಅಧಿಕಾರಿಯು ಎಲ್ಲವನ್ನೂ ದೊರೆಗೇ ಅರಿಕೆ ಮಾಡುವನು. ಉಂಗುರವನ್ನು ನೋಡಿದೊಡನೆಯೇ ದೊರೆಯ ನೆನಪು ಕೆರಳಿ ಅವನು ಕಂಬನಿಸುರಿಸುವನು. ಇತ್ತ ಬೆಸ್ತನಾಡಿದ್ದು ನಿಜವಾಗಲು ಅವನಿಗೆ ಬಹುಮಾನವು ಸಿಕ್ಕಿ ಅದರ ಅರ್ಧವು ಅಧಿಕಾರಿಗೂ ಲಭಿಸುವುದು. ಇಬ್ಬರೂ ಸ್ನೇಹಿತರಾಗಿ ಮದ್ಯಗೃಹದ ಕಡೆಗೆ ಹೊರಡುವರು.

ಮೇನಕೆಯ ಸಖಿಯಾದ ಸಾನುಮತಿಯು ಸರದಿಯ ಪ್ರಕಾರ ಅಪ್ಸರ ಸ್ತ್ರೀರ್ಥದ ಕಾವಲುಗಾರಿಕೆಯನ್ನು ಮುಗಿಸಿ ಹಸ್ತಿನಾಪುರದ ಕಡೆ ಬರುವಳು. ವಸಂತಋತು ಆಗತಾನೆ ಪ್ರಾರಂಭವಾಗಿದ್ದರೂ ದುಷ್ಯಂತನ ಅರಮನೆಯ ಲ್ಲಾಗಲಿ ರಾಜಧಾನಿಯಲ್ಲಾಗಲಿ ಯಾವ ಉತ್ಸವಗಳನ್ನೂ ಕಾಣದೆ, ಇದರ ಕಾರಣವನ್ನು ಯಾರ ಕಣ್ಣಿಗೂ ಬೀಳದಂತೆ (ತಿರಸ್ಕರಿಣೀ ವಿದ್ಯೆಯ ಬಲದಿಂದ) ತಿಳಿಯಲೆಳಸುವಳು. ಉದ್ಯಾನಪಾಲಿಕೆಯರಿಬ್ಬರು ಕಾಮದೇವನ ಪೂಜೆ ಯನ್ನು ಮಾಡಬೇಕೆಂದಿದ್ದಾಗ ಅರಮನೆಯ ಕಂಚುಕಿಯೊಬ್ಬನು ಅಡ್ಡಿ ಬಂದು ದೊರೆಯ ವಿರಹವೇದನೆಯ ವಿಚಾರವನ್ನು ವಿಶದಪಡಿಸಿ ಆ ಕಾಲದಲ್ಲಿ ವಸಂ ತೋತ್ಸವವನ್ನು ನಡೆಸುವುದು ರಾಜಾಜ್ಞೆಗೆ ವಿರುದ್ಧವೆಂದು ಹೇಳಿದುದನ್ನೆಲ್ಲ ಸಾನುಮತಿ ಕೇಳಿ ಪಶ್ಚಾತ್ತಾಪಪಡುವಳು. ಆ ವೇಳೆಗೆ ದುಷ್ಯಂತನೂ ಅಲ್ಲಿಗೆ

ಬರುವನು. ಬಳಲಿ ಕಂಗೆಟ್ಟು ಶಕುಂತಲೆಯ ಪುನಸ್ಸಮಾಗಮಕ್ಕಾಗಿ ಅವನು ವಿಲಪಿಸುತ್ತಿದ್ದುದನ್ನು ನೋಡಿ ಸಾನುಮತಿಗೆ ಸ್ವಲ್ಪ ಸಮಾಧಾನವಾಗುವುದು. ಮಾಧವೀಮಂಟಪದಲ್ಲಿ ಕುಳಿತು ದುಷ್ಯಂತ ವಿದೂಷಕರು ಮಾತಿಗಾರಂಭಿಸುವರು. "ಮಿತ್ರ, ಈಗ ಶಕುಂತಲೆಗೆ ಸಂಬಂಧಿಸಿದ ವಿಷಯಗಳೆಲ್ಲ ನೆನಪಿಗೆ ಬಂದಿರುವುವು. ನಿನಗೂ ನಾನು ಎಲ್ಲವನ್ನೂ ಹೇಳಿರಲಿಲ್ಲವೆ? ಅವಳನ್ನು ನಿರಾಕರಿಸಿದಾಗಲೇನೊ ನೀನು ಹತ್ತಿರ ಇರಲಿಲ್ಲ. ಆದರೆ ಅದಕ್ಕೆ ಹಿಂದೆಯೂ ನೀನು ಯಾವಾಗಲೂ ಅವಳ ವಿಚಾರವನ್ನು ಎತ್ತಲೇ ಇಲ್ಲವಲ್ಲ! ನನ್ನಂತೆ ನೀನೂ ಮರೆತೆಯಾ?" ಎಂದು ದುಷ್ಯಂತ ಕೇಳುವನು. "ನನಗೇನೂ ಮರವಿಲ್ಲ; ಎಲ್ಲವನ್ನೂ ಹೇಳಿ ಕೊನೆಯಲ್ಲಿ 'ಇವೆಲ್ಲ ಹಾಸ್ಯಕ್ಕಾಗಿ ಆಡಿದ ಮಾತು ನಿಜವಲ್ಲ' ಎಂದು ನೀನು ಹೇಳಿದೆ; ಮಂದಮತಿಯಾದ ನಾನು ಅದೇ ನಿಜವೆಂದು ಭಾವಿಸಿದೆ. ಇನ್ನು ಶೋಕಿಸಿ ಫಲವೇನು? ಭವಿತವ್ಯತೆಯೇ ಹೇಗೂ ಪ್ರಬಲ" ಎಂದು ವಿದೂಷಕನು ಉತ್ತರ ಕೊಡುವನು. ದೊರೆಯ ಹಂಬಲಿಕೆ ದುಃಖಗಳು ಕ್ಷಣಕ್ಷಣಕ್ಕೂ ಹೆಚ್ಚುವುವು. ವಿದೂಷಕನ ಸಮಾಧಾನಪಡಿಸುವ ಮಾತುಗಳೆಲ್ಲ ನಿಷ್ಫಲವಾಗುವುವು. ಹಿಂದಿನ ಸನ್ನಿವೇಶಗಳೆಲ್ಲ ಒಂದೊಂದಾಗಿ ನೆನಪಿಗೆ ಬಂದು ವಿಷಮಯ ಬಾಣಗಳಂತೆ ಅವನನ್ನು ಇರಿಯುವುವು. ಹೀಗೆ ಮಾತು ಬೆಳೆಯುವುದು. ಶಕುಂತಲೆಯನ್ನು ಯಾರು ಎತ್ತಿಕೊಂಡು ಹೋಗಿರಬಹುದೆಂಬ ವಿಚಾರವು ಏಳಲಾಗಿ ಮೇನಕೆಯ ಸಖಿಯರೇ ಹಾಗೆ ಮಾಡಿರಬೇಕೆಂದು ದೊರೆಯು ಊಹಿಸುವನು. (ಸಾನುಮತಿಯು ಇದನ್ನೆಲ್ಲ ಕೇಳುತ್ತ ಇನ್ನೂ ಅಲ್ಲೇ ಇರುವಳು.) ವಿದೂಷಕನಿಗೆ ಇವರಿಬ್ಬರ ಸಮಾಗಮವಾಗಬಹುದೆಂದೇ ತೋರುವುದು. ಆದರೆ ದೊರೆಗೆ ಆ ನಂಬಿಕೆಯಿಲ್ಲ. ಕಡೆಕಡೆಗೆ ದುಷ್ಯಂತನು ಉನ್ಮತ್ತನಂತಾಗಿ, ಕ್ಷಮಿಸಬೇಕೆಂದೂ, ಪುನಃ ಕಾಣಿಸಿಕೊಳ್ಳಬೇಕೆಂದೂ ನಾನಾ ವಿಧವಾಗಿ ಶಕುಂತಲೆಯನ್ನು ಕುರಿತು ಪ್ರಲಪಿಸುವನು. ಆ ವೇಳೆಗೆ ಚೇಟಿಯು ಶಕುಂತಲೆಯ ಚಿತ್ರವನ್ನು ತರುವಳು. ಸಾನುಮತಿಯೂ ವಿದೂಷಕನೂ ದೊರೆಯ ಚಿತ್ರಕಲಾನೈಪುಣ್ಯವನ್ನು ಮೆಚ್ಚುವರು. ದೊರೆಯ ಉನ್ಮತ್ತ ವರ್ತನೆಯು ಹೆಚ್ಚಿದಂತೆಲ್ಲ ಚಿತ್ರದ ವಿಷಯವಾಗಿಯೂ, ಶಕುಂತಲೆಯ ವಿಷಯವಾಗಿಯೂ ಅನೇಕ ಮಾತುಗಳು ನಡೆಯುವುವು. ಅನಂತರ ಚಿತ್ರವನ್ನು ತಿದ್ದುವುದಕ್ಕಾಗಿ ಬಣ್ಣದ ಬಟ್ಟಲು

ಮುಂತಾದುವನ್ನು ತರಲು ಹೊರಟ ಚತುರಿಕೆಯು ಪುನಃ ಹಿಂತಿರುಗಿ ರಾಣಿ ವಸುಮತಿಯ ಆಗಮನವನ್ನು ತಿಳಿಸುವಳು. ದುಷ್ಯಂತನು ದುಃಖವನ್ನು ತಡೆದುಕೊಂಡು ಶಕುಂತಲೆಯ ಚಿತ್ರವನ್ನು ವಿದೂಷಕನ ಕೈಯಲ್ಲಿ ಕೊಟ್ಟು ಮುಚ್ಚಿರಿಸುವನು. ಆದರೆ ದೈವವಶದಿಂದ ವಸುಮತಿಯು ಬರಲಾಗದೆ ಹೋಗುವುದು. ಧರ್ಮಾಸನದಲ್ಲಿರಲು ಸಾಧ್ಯವಾಗದೆ ರಾಜಕಾರ್ಯವನ್ನೆಲ್ಲ ಪತ್ರಮುಖೇನ ನಡೆಸುವಂತೆ ಮಂತ್ರಿಗೆ ಆಜ್ಞಾಪಿಸಿದ್ದರಿಂದ ಅವನು ಅಲ್ಲಿಗೆ ಕೂಡಲೆ ಬರಬೇಕಾಗುವುದು. ವಸುಮತಿಯು ಇದನ್ನು ಕಂಡು ಹಿಂತಿರುಗುವಳು. ಮಾಢವ್ಯನೂ ದೂರ ಸರಿಯುವನು. ಮಂತ್ರಿಯು ತಂದ ಪತ್ರದ ವಿಷಯ ಧನಮಿತ್ರನೆಂಬ ವರ್ತಕನ ಆಸ್ತಿಗೆ ಸಂಬಂಧಿಸಿದ್ದು. ವಿಚಾರಣೆಯೆಲ್ಲ ಸರಿಯಾದ ಕ್ರಮದಲ್ಲಿ ನಡೆದು ಆ ಸಮಸ್ಯೆಯು ನ್ಯಾಯವಾದ ರೀತಿಯಲ್ಲಿ ಬಗೆ ಹರಿದರೂ ದೊರೆಯ ಮನಸ್ಸಿನಲ್ಲಿ ಮಾತ್ರ ಅದರಿಂದ ಒಂದು ಹೊಸ ಬೇನೆ ಮೂಡುವುದು; ಅದು, ತನಗೆ ಮಕ್ಕಳಿಲ್ಲವೆಂಬುದು; ತನ್ನಿಂದ ಮುಂದೆ ಪುರುವಂಶವು ವಿಚ್ಛಿನ್ನವಾಗುವುದೆಂಬುದು. "ಶಕುಂತಲೆಯನ್ನು ಪರಿಗ್ರಹಿಸಿದ್ದರೆ ಹೀಗಾಗುತ್ತಿರಲಿಲ್ಲ" ಎಂಬುದು ಮನಸ್ಸಿಗೆ ಬಂದು ಪುನಃ ಅವನ ಗೋಳು ಹೆಚ್ಚುವುದು. ಸಾನುಮತಿಗೆ ಇನ್ನು ಸುಮ್ಮನಿರಲಾಗದೆ "ನಿನ್ನ ಸಂತತಿಯು ಅವಿಚ್ಛಿನ್ನವಾಗುವುದು" ಎಂದು ಮರೆಯಲ್ಲೇ ಎಂದುಕೊಳ್ಳುವಳು. ದೊರೆಯನ್ನು ಸಂತೈಸುವುದಕ್ಕಾಗಿ ಪುನಃ ವಿದೂಷಕನನ್ನು ಕರೆತರಬೇಕೆಂದು ಚತುರಿಕೆ ಹೊರಡುವಳು. ಇತ್ತ ಸಾನುಮತಿಗೆ ದುಷ್ಯಂತನ ಅಕಳಂಕ ಸ್ವಭಾವವೂ, ಶಕುಂತಲಾಪ್ರೇಮವೂ, ಅನಪರಾಧಿತ್ವವೂ ಮನದಟ್ಟಾಗಿ ಇವನ ಆತಂಕವನ್ನು ಹೋಗಲಾಡಿಸಿ ಕೂಡಲೆ ಇವರ ಪುನಸ್ಸಮಾಗಮವನ್ನು ನೆರವೇರಿಸಬೇಕೆಂಬ ಆಸೆಹುಟ್ಟುವುದು. ಆದರೂ ಶಕುಂತಲೆಯನ್ನು ಸಂತೈಸುತ್ತಿದ್ದ ಮಹೇಂದ್ರ ಜನನಿಯ ಆಶಂಸನೆಗನುಸಾರವಾಗಿ ಇದು ಕ್ಷಿಪ್ರದಲ್ಲೇ ನಡೆಯುವುದರಿಂದ ತಾನು ತ್ವರೆಪಡಬೇಕಾಗಿಲ್ಲವೆನಿಸುವುದು. ಹೇಗೂ ತಾನು ನೋಡಿ ಕೇಳಿದ್ದನ್ನೆಲ್ಲ ಸಖಿಗೆ ತಿಳಿಸಬೇಕೆಂದು ಆವಳು ಶೀಘ್ರವಾಗಿ ಹಾರಿ ಹೋಗುವಳು.

ಇಷ್ಟರಲ್ಲಿ ಪ್ರತೀಹಾರಿಯು ಬಂದು ಯಾವುದೋ ಭೂತವು ಮಾಢವ್ಯನನ್ನು ಆಕ್ರಮಿಸಿ ಮೇಘಪ್ರತಿಚ್ಛಂದದ ಶಿಖರದಲ್ಲಿ ಅವನನ್ನು ಪೀಡಿಸುತ್ತಿರುವು

ದೆಂದು ದೊರೆಗೆ ವಿಜ್ಞಾಪಿಸುವಳು. ಕೂಡಲೆ ದೊರೆಯು ಕೋಪದಿಂದ ಅತ್ತಕಡೆ ಮುನ್ನುಗ್ಗುವನು. ತನ್ನನ್ನು ಉತ್ಸಾಹಗೊಳಿಸುವುದಕ್ಕಾಗಿಯೇ ಮಾತಲಿಯು ಅವನನ್ನು ಪೀಡಿಸುತ್ತಿದ್ದನೆಂದು ಗೊತ್ತಾಗುವುದು. ಅನಂತರ ಅವನನ್ನು ಸ್ವಾಗತಿಸಿ ಕೇಳಲಾಗಿ ಇಂದ್ರನು ಇವನ (ದುಷ್ಯಂತನ) ಸಹಾಯವನ್ನು ಕೋರುತ್ತಿರುವನೆಂದೂ ಅದಕ್ಕಾಗಿ ಇವನು ಕೂಡಲೆ ತನ್ನೊಡನೆ ಹೊರಡ ಬೇಕೆಂದೂ ಮಾತಲಿಯು ತಿಳಿಸುವನು. ಇಬ್ಬರೂ ರಥಾರೂಢರಾಗಿ ಹೊರ ಡುವರು.

---

## ಏಳನೆಯ ಅಂಕ

ದುರ್ಜಯರೊಡನೆ ಯುದ್ಧದಲ್ಲಿ ಜಯಹೊಂದಿ ದುಷ್ಯಂತನು ಇಂದ್ರನ ಆತಿಥ್ಯ ಸನ್ಮಾನಗಳನ್ನು ಸ್ವೀಕರಿಸಿ ಹಿಂತಿರುಗುತ್ತ ಹೇಮಕೂಟವೆಂಬ ಕಿಂಪುರುಷಪರ್ವತಕ್ಕೆ ಬರುವನು. ಸುರಾಸುರಗುರುವಾದ ಮಾರೀಚನ ಪುಣ್ಯಾಶ್ರಮವು ಅಲ್ಲಿರುವುದೆಂದು ಮಾತಲಿಯು ಹೇಳಲಾಗಿ ದುಷ್ಯಂತನು ಮುನಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆಯುವುದಕ್ಕಾಗಿ ಅಲ್ಲಿಗೆ ಹೋಗು ವನು. ಅಲ್ಲಿಳಿದೊಡನೆಯೇ ದುಷ್ಯಂತನಿಗೆ ಅಮೃತದ ಮಡುವಿನಲ್ಲಿ ಮುಳುಗಿ ದಂತಾಗುವುದು. ಅಲ್ಲಿನ ಸನ್ನಿವೇಶದ ವೈಶಿಷ್ಟ್ಯವೇ ಒಂದು ರೀತಿಯದು. ಸ್ವರ್ಗಕ್ಕಿಂತ ಹೆಚ್ಚಿನ ನಿರ್ವೃತಿಸ್ಥಾನವದು. ಲೋಕೋತ್ತರ ಚರಿತ್ರರಾದ ತಪಸ್ವಿಗಳು ಅದನ್ನು ಅಲಂಕರಿಸಿರುವರು. ಇವರು ಭೋಗಾರ್ಹವಾದ ಸನ್ನಿ ವೇಶದಲ್ಲೇ ತಪಸ್ಸನ್ನಾಚರಿಸುವಷ್ಟು ಸಂಯಮಿಗಳು. ಕಲ್ಪವೃಕ್ಷಗಳ ವನ ದಲ್ಲಿದ್ದರೂ ಗಾಳಿಯಿಂದ ಶರೀರರಕ್ಷಣೆ ಹೊಂದಾವರೆಯ ಧೂಳಿನಿಂದ ಬೆಳಗುವ ನೀರನ್ನು ಬಿಟ್ಟು 'ಧರ್ಮ'ದಿಂದಲೇ ಅಭಿಷೇಕ. ವಿಶ್ರಾಂತಿ ಹೊಂದುವು ದಕ್ಕಾಗಿ ಆಶ್ರಯಿಸಬಹುದಾದ ರತ್ನಶಿಲೆಯಮೇಲೆ ಕುಳಿತೇ ಧ್ಯಾನ. ದೇವ ವನಿತೆಯರಿದಿರಿನಲ್ಲೇ ಇಂದ್ರಿಯನಿಗ್ರಹ. ದುಷ್ಯಂತನಿಗೆ ಈ ಪ್ರಶಾಂತ ವಾತಾ ವರಣವನ್ನೂ ಸಂಯಮ ಶಕ್ತಿಯನ್ನೂ ನೋಡಿ ಆಶ್ಚರ್ಯ, ಸಂತೋಷ ಮತ್ತು ತಾನೂ ಪುನೀತನಾದನೆಂಬ ಭಾವನೆ. ಋಷಿವರ್ಯರ ದರ್ಶನ ತೆಗೆದುಕೊಳ್ಳು ವುದಕ್ಕೆ ಕಾಲವು ಸರಿಯಾದುದೋ ಇಲ್ಲವೋ ಎಂದು ತಿಳಿಯುವುದಕ್ಕಾಗಿ

ಮಾತಲಿಯು ಹೋಗಿರುವಾಗ ಇತ್ತ ದುಷ್ಯಂತನ ಬಲದೋಳು ಅದಿರುವುದು. ಇದೇಕೆಂದು ಯೋಚಿಸುವಷ್ಟರಲ್ಲೇ "ಬೇಡ, ಮಗು, ಬೇಡವಪ್ಪಾ, ಚೇಷ್ಟೆ ಮಾಡಬೇಡ" ಎಂಬ ಹೆಂಗಸರ ಧ್ವನಿ ಕೇಳಬರುವುದು. "ದುರ್ವಿನೀತರಿಗೆ ಇದು ಸ್ಥಳವಲ್ಲ; ಯಾರಿರಬಹುದು" ಎಂದುಕೊಳ್ಳುವಷ್ಟರಲ್ಲೇ ವೀರಬಾಲಕನೊಬ್ಬನು ಸಿಂಹದ ಮರಿಯೊಂದನ್ನು ಜಗ್ಗಿಸುವುದು ಕಣ್ಣಿಗೆ ಬೀಳುವುದು. ತಾಯಿಯ ಬಳಿ ಕುಳಿತು ಹಾಲು ಹೀರುತ್ತಿದ್ದ ಆ ಸಿಂಹದ ಮರಿಯನ್ನು ಬಲಾತ್ಕಾರದಿಂದ ಎಳೆಯುತ್ತ "ಬಾಯಿಬಿಡೋ; ನಿನ್ನ ಹಲ್ಲುಗಳನ್ನೆಣಿಸೋಣ" ಎನ್ನುತ್ತಿರುವುದನ್ನು ನೋಡಿ ತಾಪಸಿಯರು ಇವನ ದುಷ್ಟತನವನ್ನು ಸಹಿಸಲಾರದೆ ಬುದ್ಧಿವಾದ ಹೇಳುತ್ತಿರುವರು.

ಬಾಲಕನ ಪರಾಕ್ರಮವನ್ನು ನೋಡಿ ದೊರೆಗೆ ಇವನ ಮೇಲೆ ವಾತ್ಸಲ್ಯ ಹುಟ್ಟುವುದು. "ಇವನು ಮಹಾತೇಜಸ್ವಿಯ ಮಗನಿರಬೇಕು" ಎಂದುಕೊಳ್ಳುವನು. ಕುತೂಹಲದಿಂದ ಅವನನ್ನು ಮಾತನಾಡಿಸುತ್ತ "ನಿನಗೆ ಆಡಲು ಬೇರೆ ಸಾಮಾನನ್ನು ಕೊಡುತ್ತೇನೆ; ಸಿಂಹದ ಮರಿಯನ್ನು ಬಿಡು" ಎಂದು ತಡೆಯಲು 'ಎಲ್ಲಿ? ಕೊಡು' ಎಂದು ಅವನು ಕೈ ನೀಡಿದಾಗ ಚಕ್ರವರ್ತಿ ಲಕ್ಷಣವು ದುಷ್ಯಂತನಿಗೆ ಕಾಣಿಸುವುದು. ಆದರೂ ಅವನು ಸಿಂಹಶಿಶುವನ್ನು ಬಿಡದಿರಲು ಇನ್ನೊಬ್ಬಳು ಹೇಳುತ್ತಾಳೆ:— 'ಬಾಯಿಮಾತಿಗೆಂದಿಗೂ ಅವನು ಮರುಳಾಗುವುದಿಲ್ಲ; ಪರ್ಣಶಾಲೆಯಲ್ಲಿರುವ ಮಾರ್ಕಂಡೇಯನ ಮಣ್ಣಿನ ನವಿಲನ್ನು ತೆಗೆದುಕೊಂಡು ಬಾ' ಎನ್ನುವಳು. ಹುಡುಗನು ಅದನ್ನೇ ಇಟ್ಟುಕೊಂಡು ಆಡಬೇಕೆಂದು ಹಟಮಾಡುವನು. ಈ ತುಂಟತನವೂ ದೊರೆಗೆ ಸಂತೋಷವನ್ನುಂಟುಮಾಡುವುದು. "ಕಾರಣವಿಲ್ಲದ ನಗು; ನಸುತೋರುವ ಮೊಗ್ಗಿನಂತಿರುವ ಹಲ್ಲುಗಳು; ತೊದಲುಮಾತು; ಇವುಗಳಿಂದ ಕೂಡಿ ಆಸೆಯಿಂದ ತೊಡೆಯಮೇಲೇರುವ ಮಕ್ಕಳನ್ನು ವಹಿಸಿ ಅವರ ಮೈ ದೂಳಿನಿಂದ ಮಲಿನವಾಗುವ ಭಾಗ್ಯ ಹೊಂದುವವರೇ ಧನ್ಯರು" ಎಂದುಕೊಳ್ಳುತ್ತ ತನಗೆ ಆ ಭಾಗ್ಯವಿಲ್ಲದಿರುವುದಕ್ಕಾಗಿ ಒಳಗೊಳಗೆ ಶೋಕಿಸುವನು. ತಮಗೆ ದಕ್ಕದ ಈ ತುಂಟನನ್ನು ಹಿಡಿದುಕೊಳ್ಳಬೇಕೆಂದು ತಾಪಸಿಯು ಹೇಳಲು ದುಷ್ಯಂತನು ಅವನನ್ನು ಕುರಿತು "ಸಾತ್ವಿಕಸುಖವನ್ನು ಕೊಡುವ ಸಂಯಮವನ್ನು ಆಶ್ರಮ ವಿರುದ್ಧಾಚರಣೆಯಿಂದ ಏಕೆ ಹದಗೆಡಿಸುವೆ ಎಳೆ

ಮಹರ್ಷಿಪುತ್ರ ? " ಎಂದು ಕೇಳುವನು. ಕೂಡಲೆ ತಾಪಸಿಯು ಅವನು ಋಷಿ ಕುಮಾರನಲ್ಲವೆಂದು ಹೇಳುವಳು. "ಅವನ ವರ್ತನೆಯಿಂದಲೇ ಅದು ವ್ಯಕ್ತವಾದರೂ ಆಶ್ರಮದಲ್ಲಿರುವನೆಂದು ಹಾಗೆ ಊಹಿಸಿದೆ" ಎನ್ನುವನು ದುಷ್ಯಂತ. ಬಾಲಕನನ್ನು ಮುಟ್ಟಿದಕೂಡಲೆ ದುಷ್ಯಂತನಿಗೆ ಬಹಳ ಸಂತೋಷ ವಾಗುವುದು. ಆಗ "ಇಂತಹವರ ಮಗನೆಂದು ತಿಳಿಯದಿದ್ದರೂ ಇವನನ್ನು ಮುಟ್ಟಿದಮಾತ್ರದಿಂದಲೇ ನನಗೆ ಇಷ್ಟೊಂದು ಸುಖ; ಇವನ ತಂದೆಗೆ ಹೀಗೆ ಗಾತ್ರಸ್ಪರ್ಶವಾದರೆ ಇನ್ನೆಷ್ಟು ಸುಖವಾದೀತೋ ? " ಎನ್ನುವನು. ಇಷ್ಟು ಹೊತ್ತಿಗೆ ತಾಪಸಿಯರು ಬಾಲಕನಿಗೂ ದುಷ್ಯಂತನಿಗೂ ಇದ್ದ ಆಕೃತಿಸಾಮ್ಯ ವನ್ನು ನೋಡಿ ಆಶ್ಚರ್ಯಗೊಳ್ಳುವರು. ಹೀಗೆಯೇ ಮುಂದೆ ಮಾತು ಬೆಳೆಯ ಲಾಗಿ ಬಾಲಕನ ವಿಚಾರವು ಸ್ವಲ್ಪಮಟ್ಟಿಗೆ ದುಷ್ಯಂತನಿಗೆ ತಿಳಿದು ಅವನು ತನ್ನವನೇ ಆಗಿರಬೇಕೆಂಬ ಸಂದೇಹವು ಬಲಪಡುವುದು. ಕಡೆಗೆ ಇವನ ತಂದೆಯ ಹೆಸರೇನು ? " ಎಂದು ಕೇಳಲಾಗಿ 'ಅವನು ಧರ್ಮಪತ್ನಿಯನ್ನು ಬಿಟ್ಟಿದ್ದರಿಂದ ಅದು ಉಚ್ಚರಿಸಲೂ ಅನರ್ಹ'ವೆಂದು ತಾಪಸಿಯರು ಜುಗುಪ್ಸೆ ಪಡುವರು. ಇದನ್ನು ಕೇಳಿದ ದೊರೆಯ ಮನಸ್ಸು ಅಳುಕುವುದು. ಇಷ್ಟಾದರೂ ಬಾಲಕನ ವೃತ್ತಾಂತವು ಹೊರಪಡದೆಹೋಗುವುದು. ತಾಯಿಯ ಹೆಸರನ್ನು ಕೇಳಿದಲ್ಲಿ ಎಲ್ಲವೂ ಸ್ಪಷ್ಟಪಡುವುದೆನ್ನಿಸುವುದು. ಆದರೆ ಅದು ಅನುಚಿತ ವೆಂದು ಶಂಕಿಸುವಷ್ಟರಲ್ಲಿ ತಾಪಸಿಯು "ಸರ್ವದಮನ, ಶಕುಂತಲಾವಣ್ಯ (ಪಕ್ಷಿಯ ಚೆಲುವು) ವನ್ನು ನೋಡು" ಎನ್ನುವಳು. ಬಾಲಕನು ತಟ್ಟನೆ ತಿರುಗಿ ನೋಡಿ "ಎಲ್ಲಿ ನಮ್ಮಮ್ಮ ? " ಎನ್ನುವನು. ತಾಪಸಿಯು ತನ್ನ ಮಾತಿನ ಅರ್ಥವನ್ನು ಬಿಡಿಸಿ ಹೇಳುವಳು. ಅಂತು ಇದರಿಂದ ಬಾಲಕನ ತಾಯಿಯ ಹೆಸರು ಶಕುಂತಲೆಯೆಂದು ತಿಳಿದರೂ ಅದೇ ಹೆಸರಿನ ಅನೇಕರಿರ ಬಹುದೆಂಬ ನಿರಾಶೆಯೂ ತಲೆದೋರುವುದು. ಮಗುವು ನವಿಲಿಗಾಗಿ ಕೈ ಚಾಚಲು ಅದಕ್ಕೆ ಕಟ್ಟಿದ್ದ ತಾತಿಯು ಕಾಣಿಸದೆ ತಾಪಸಿಯರು ಗಾಬರಿ ಗೊಳ್ಳುವರು. ದುಷ್ಯಂತನು ಅದನ್ನು ಹುಡುಕಿ ತೆಗೆದುಕೊಳ್ಳಲು ತಾಪಸಿಯರು ಭಯಗೊಂಡು ಅವನನ್ನು ತಡೆಯುವರು. ಮಗುವಿನ ತಂದೆತಾಯಿಗಳಲ್ಲದೆ ಇತರರು ಅದನ್ನು ಮುಟ್ಟಿದರೆ ಅದು ಹಾವಾಗಿ ಕಚ್ಚುವುದೆಂದು ಅವರು ಮನ ಗಂಡಿದ್ದರು. ದುಷ್ಯಂತನಿಗೆ ಏನೂ ತೊಂದರೆಯಾಗದಿರಲು ತಾಪಸಿಯರು

ಆಶ್ಚರ್ಯಗೊಂಡು ನಡೆದುದನ್ನು ವಿವರಿಸುವುದಕ್ಕಾಗಿ ಶಕುಂತಲೆಯ ಬಳಿಗೆ ಹೋಗುವರು. ಹುಡುಗನೂ ದುಷ್ಯಂತನ ಕೈಯಿಂದ ಬಿಡಿಸಿಕೊಂಡು "ಅಮ್ಮನ ಹತ್ತಿರ ಹೋಗಬೇಕು" ಎನ್ನುವನು. ಈ ವೇಳೆಗೆ ತಾನೇ ಅವನ ತಂದೆಯೆಂದು ಧೈರ್ಯಹೊಂದಿದ ದುಷ್ಯಂತನು "ಪುತ್ರಕ! ನನ್ನೊಡನೆಯೇ ತಾಯಿಯನ್ನು ಸಂತೋಷಗೊಳಿಸುವೆಯಂತೆ" ಎನ್ನುವನು. ಇದನ್ನು ಕೇಳಿ ಸರ್ವದಮನನು "ನನ್ನ ತಂದೆ ದುಷ್ಯಂತ (ನೀನಲ್ಲ)" ಎಂದು ಪ್ರತಿಭಟಿಸಲು ದುಷ್ಯಂತನಿಗೆ ಸಂಪೂರ್ಣವಾಗಿ ಸಂಶಯ ಪರಿಹಾರವಾಗುವುದು.

ಅನಂತರ ಬಾಚದ ಕೇಶಪಾಶದಿಂದ ಕೂಡಿ, ಮಾಸಿದ ಬಟ್ಟೆಯನ್ನುಟ್ಟು ಕೃಶಳಾದ ಶಕುಂತಲೆ ಬರುವಳು. ಒಬ್ಬರಿಗೆ ಮತ್ತೊಬ್ಬರ ಗುರುತೇ ಸಿಕ್ಕದಷ್ಟು ಇಬ್ಬರೂ ಕೃಶರಾಗಿರುವರು. ಶಕುಂತಲೆಯು ತನ್ನನ್ನು ಗುರ್ತಿಸಿದುದನ್ನು ನೋಡಿ ದುಷ್ಯಂತನಿಗೆ ತನ್ನ ಹಿಂದಿನ ಕ್ರೂರಾಚರಣೆಯೂ ಶುಭದಲ್ಲೇ ಕೊನೆಗಂಡಿತೆನ್ನಿಸುವುದು. ಶಕುಂತಲೆಯ ಹೃದಯವು ಮಾತ್ರ ಇನ್ನೂ ತವಕಪಡುತ್ತಲೇ ಇರುವುದು. ದೈವವು ಮಾತ್ಸರ್ಯವನ್ನು ತೊರೆದು ಕರುಣಿಸಿರುವುದೆಂಬುದು ಕ್ರಮವಾಗಿ ಗೋಚರವಾಗುವುದು. ಗ್ರಹಣವು ಬಿಟ್ಟಮೇಲೆ ಚಂದ್ರನನ್ನು ಸೇರುವ ರೋಹಿಣಿಯಂತೆ ಮೋಹತಮಸ್ಸು ನೆನಪಿನಿಂದ ದೂರವಾಗಿ ತನ್ನನ್ನು ಸೇರಿದ ಶಕುಂತಲೆಯನ್ನು ಕಂಡು ದುಷ್ಯಂತನಿಗೆ ಬಹಳ ಹರ್ಷ. ಜಯಕಾರ ಮಾಡುವಷ್ಟರಲ್ಲಿ ಶಕುಂತಲೆಗೆ ಕೊರಲು ಬಿಗಿದರೂ ದುಷ್ಯಂತನಿಗೆ ಮಾತ್ರ ಅದರ ಫಲವು ತಪ್ಪುವುದಿಲ್ಲ. ಇವರ ಸಂವಾದವನ್ನು ಕೇಳಿ ಮಗುವಿಗೆ ಆಶ್ಚರ್ಯ. ದುಷ್ಯಂತನು "ಸುಂದರಿ, ನಾನು ನಿರಾಕರಿಸಿದ ದುಃಖವನ್ನು ಮರೆತುಬಿಡು; ಆಗ ನನಗಾವುದೋ ಅನಿರ್ವಚನೀಯವಾದ ಮನೋವಿಕಾರವಾಯಿತು. ತಮೋಗುಣವು ತಲೆಯೆತ್ತಲು ಜನರು ಶುಭವನ್ನು ಕುರಿತೂ ಹೀಗೆ ವರ್ತಿಸುವರು. ತಲೆಯಲ್ಲಿ ಮುಡಿದ ಹೂಮಾಲೆಯನ್ನೂ ಕುರುಡನು ಹಾವನ್ನಾಗಿ ಎಣಿಸಿ ಕೊಡವುವನು" ಎಂದು ಶಕುಂತಲೆಯ ಕ್ಷಮೆ ಬೇಡಿ ಕಾಲಿಗೆ ಬೀಳುವನು. ತನ್ನ ಪೂರ್ವ ಜನ್ಮದ ಪಾಪವು ಶ್ರೇಯಸ್ಸಿಗೆ ಅಡ್ಡ ಬಂದುದೇ ದುಷ್ಯಂತನು ಹಾಗೆ ವರ್ತಿಸಲು ಕಾರಣವಾಯಿತೆಂದು ಶಕುಂತಲೆ ಅವನನ್ನು ಸಂತೈಸುವಳು. ಅನಂತರ ಹಿಂದೆ ನಡೆದುದೆಲ್ಲ ನೆನಪಿಗೆ ಬಂದು ಉಂಗುರದಿಂದಾದ ತೊಂದರೆ

ಯನ್ನು ಇಬ್ಬರೂ ಮನಗಾಣುವರು. ದುಷ್ಯಂತನು ಪುನಃ ಅದನ್ನು ಧರಿಸ ಬೇಕೆಂದು ನೀಡಲು ಶಕುಂತಲೆಯು ಅದನ್ನು ನಂಬದೆ ನಿರಾಕರಿಸುವಳು.

ಇಷ್ಟು ಹೊತ್ತಿಗೆ ಮಾತಲಿಯು ಬಂದು ಮಾರೀಚ ಮಹರ್ಷಿಗಳ ದರ್ಶನಕ್ಕೆ ಸಮಯವಾಯಿತೆಂದು ಹೇಳಲು ದುಷ್ಯಂತನು ಪತ್ನೀಪುತ್ರ ರೊಡನೆ ಅವರಲ್ಲಿಗೆ ಹೊರಡುವನು. ಈ ಮೂವರೂ ಸೇರಿದ್ದು ಶ್ರದ್ಧೆ, ವಿತ್ತ (ಹಣ) ಮತ್ತು ವಿಧಿಗಳು ಸೇರಿದಂತೆಂದು ಮಾರೀಚರಿಗೆ ಬಹಳ ಸಂತೋಷ. ಶಕುಂತಲೆಯನ್ನು ನಿರಾಕರಿಸಿ ತಾನು ಕಣ್ವರಲ್ಲಿ ದ್ರೋಹ ಮಾಡಿದನೆಂದು ದುಷ್ಯಂತನು ವಿಮನಸ್ಕನಾಗಲು ಮಾರೀಚರು ಧ್ಯಾನ ದೃಷ್ಟಿಯಿಂದ ಎಲ್ಲವನ್ನೂ ಸಾಕ್ಷಾತ್ಕರಿಸಿ ದುಷ್ಯಂತನು ನಿರಪರಾಧಿಯೆಂದು ಸಮರ್ಥಿಸುವರು. ಇದರಿಂದ ಶಕುಂತಲೆಗೂ ಅತಿಶಯವಾದ ಸಂತೋಷ ವಾಗುವುದು. ನಿಜಾಂಶವು ತಿಳಿದುದರಿಂದ ಇನ್ನುಮೇಲೆ ಪತಿಯ ವಿಷಯದಲ್ಲಿ ಅಸಮಾಧಾನಪಡಕೂಡದೆಂದು ಋಷಿಗಳು ಶಕುಂತಲೆಗೆ ಬುದ್ಧಿವಾದ ಹೇಳು ವರು. ಸರ್ವದಮನನಿಗೆ ಚಕ್ರವರ್ತಿ ಪದವಿಯನ್ನು ಹೊಂದುವ ಆಶೀ ರ್ವಾದವೂ, ದುಷ್ಯಂತನಿಗೆ ಇಂದ್ರಮೈತ್ರಿಯನ್ನು ಹೊಂದಿ ಭೂಸ್ವರ್ಗಲೋಕ ಗಳನ್ನು ಸುಖವಾಗಿ ಆಳುವ ಆಶೀರ್ವಚನವೂ ದೊರಕುವುವು. ಈಚಿನ ಸಂಗತಿಗಳೆಲ್ಲ ತಪಃಪ್ರಭಾವದಿಂದ ಕಣ್ವರಿಗೂ ತಿಳಿದಿವೆಯೆಂಬುದನ್ನು ಕೇಳಿ ಎಲ್ಲರಿಗೂ ಸಂತೋಷವಾಗುವುದು. ಭರತವಾಕ್ಯದಿಂದ ನಾಟಕವು ಕೊನೆ ಗಾಣುವುದು. ಇದು ನಾಟಕದ ನೀರಸವಾದ ಅನುವಾದ ಮಾತ್ರ.

ಈಗ ಮೂಲಕತೆಗೂ ನಾಟಕದ ಕತೆಗೂ ಇರುವ ಮುಖ್ಯವಾದ ವ್ಯತ್ಯಾಸ ಗಳನ್ನು ಗಮನಿಸಿ ಕಲಾದೃಷ್ಟಿಯಿಂದ ಅವುಗಳ ಪ್ರಯೋಜನವನ್ನು ಪರಿ ಶೀಲಿಸುವುದು ಆವಶ್ಯಕ. ಕತೆಯನ್ನು ಮಹಾಭಾರತದಿಂದ ತೆಗೆದುಕೊಂಡಿ ದ್ದರೂ ಕಾಳಿದಾಸನು ಅದರ ರೀತಿಯನ್ನೇ ಬಹಳಮಟ್ಟಿಗೆ ಬದಲಾಯಿಸಿರು ತ್ತಾನೆ. ಕಾಳಿದಾಸನ ವೇಳೆಗೆ ಭರತ (ದುಷ್ಯಂತ ಶಕುಂತಲೆಯರ ಪುತ್ರ) ನು ಭಾರತೀಯ ಇತಿಹಾಸದಲ್ಲಿ ಪ್ರಸಿದ್ಧನಾದ ವ್ಯಕ್ತಿಯಾಗಿದ್ದಿರಬೇಕು. ಈ ಪ್ರಭಾವಶಾಲಿಯಾದ ದೊರೆಯಿಂದಲೇ ಭರತಖಂಡಕ್ಕೆ ಆ ಹೆಸರು ಬಂತೆಂಬು ದನ್ನು ಕಾಳಿದಾಸನೂ ಆಗಲೇ ಮನಗಂಡಿದ್ದಿರಬೇಕು. ಆದುದರಿಂದಲೇ

ಅವನ ದೃಷ್ಟಿಯಿಂದ ಭರತ ಮತ್ತು ಅವನ ತಂದೆತಾಯಿಗಳು ದೈವಾಂಶ ವನ್ನೊಳಗೊಂಡವರಾಗಿ ಭಕ್ತಿಗೌರವಗಳಿಗೆ ಪಾತ್ರರಾಗಿದ್ದರು. ಇಂತಹವರ ಚರಿತ್ರೆಯನ್ನು ನಾಟಕದಲ್ಲಿ ನಿರೂಪಿಸುವಾಗ ಯಾವ ಕಾರಣದಿಂದಲೂ ವಾಚಕರು ನಾಯಕನಾಯಿಕೆಯರ ಚರಿತ್ರೆಯನ್ನು ದೂಷಿಸುವಂತೆ ಆಗಬಾರ ದೆಂದು ಕಾಳಿದಾಸನ ಅಭಿಪ್ರಾಯವಿದ್ದಂತೆ ತೋರುತ್ತದೆ. ಆದುದರಿಂದಲೇ ಶಾಕುಂತಲದ ದುಷ್ಯಂತನು ಮಹಾಭಾರತದ ದುಷ್ಯಂತನಲ್ಲ. ಇಲ್ಲಿನ ಶಕುಂತಲೆಗೂ ಅಲ್ಲಿನ ಶಕುಂತಲೆಗೂ ಬಹಳ ದೂರ. ಒಟ್ಟು ಸನ್ನಿವೇಶವೇ ಬದಲಾಯಿಸಿದೆ. ಅಲ್ಲಿನ ವಾತಾವರಣವು ಸ್ವೈಜತೆಯಿಂದ ತುಂಬಿದ್ದರೂ ಜುಗುಪ್ಸೆ ತರುವಂತಹುದು, ಆ ನಡತೆಯನ್ನು ಅನುಕರಿಸಬಾರದೆಂದು ನೀತಿ ಕಲಿಸತಕ್ಕುದು. ಆದರೆ ನಾಟಕದ ವಾತಾವರಣವು ಆದರ್ಶತೆಯಿಂದ ಕೂಡಿ ಆನಂದವನ್ನು ಕೊಡುವಂತಹುದು. ಇಲ್ಲಿನ ರೀತಿಯು ಅನುಕರಣೀಯವೂ ಆದರ್ಶವು ಆಶಿಸತಕ್ಕುದೂ ಆಗಿರುವುವು. ಹೀಗೆ ಮೂಲಕತೆಯನ್ನು ಮಾರ್ಪಡಿ ಸುವುದಕ್ಕೆ ಮುಖ್ಯವಾಗಿ ಮೂರು ಅಂಶಗಳು ಸಹಕರಿಸಿವೆ.

ದುರ್ವಾಸ ಶಾಪ ವೃತ್ತಾಂತ :—ಇದರಿಂದ ದುಷ್ಯಂತನ ಉದ್ಧಾರ ವಾಗಿದೆಯೆನ್ನಬಹುದು. ಮಹಾಭಾರತದ ದುಷ್ಯಂತನ ನಡತೆಯನ್ನು ಯಾರೂ ಮೆಚ್ಚುವಂತಿಲ್ಲ. ಕಾಡಿಗೆ ಹೋದಾಗ ಕಣ್ಣಿಗೆ ಬಿದ್ದ ಋಷಿಕನ್ನೆಯೊಬ್ಬಳ ಸೌಂದರ್ಯಕ್ಕೆ ಮುಗ್ಧನಾಗಿ ಅವಳಿಗೆ ನಾನಾವಿಧವಾದ ಆಸೆಗಳನ್ನು ತೋರಿಸಿ ಮೋಸದಿಂದ ವರಿಸುವುದು; ಅನಂತರ ಕೂಡಲೆ ಕರೆಸಿಕೊಳ್ಳುವೆನೆಂದು ಹೇಳಿಹೋಗಿ ತಾನು ಮಾಡಿದ್ದು ಅಯುಕ್ತವೆಂದು ತೋರಲಾಗಿ ಋಷಿಯು ಅಸಮಾಧಾನಪಡುವನೆಂದು ಭಯಗೊಳ್ಳುವುದು; ಮತ್ತು ಇದಕ್ಕಾಗಿ ಪಾಪ, ಆ ಶಕುಂತಲೆಯನ್ನು ಬರಮಾಡಿಕೊಳ್ಳುವುದಿರಲಿ, ಮರೆತೇಬಿಡುವುದು; ಈ ಅವಮಾನಕ್ಕೆ ಗುರಿಯಾದರೂ ಪುತ್ರವತಿಯಾಗಿದ್ದ ಶಕುಂತಲೆಯು ತಾನೇ ಇವನ ಬಳಿಗೆ ಬಂದರೂ ಪತ್ನಿಯ ನೆನಪು ಬಂದಾಗಲೂ ದುಷ್ಯಂತನು ಧೂರ್ತತನದಿಂದ ಏನೂ ತಿಳಿಯದವನಂತೆ ನಟಿಸುತ್ತಾ ಅವಳನ್ನು ಮತ್ತೂ ನಿಷ್ಠುರವಾಗಿ ಬೈದು ನಿರಾಕರಿಸುವುದು; ಇದೆಲ್ಲ ಶಾಕುಂತಲದಲ್ಲಿ ಮಾಯ ವಾಗಿದೆ. ಮಹಾಭಾರತದ ದುಷ್ಯಂತನ ನಡವಳಿಕೆಯನ್ನು ಯಾವ ದೃಷ್ಟಿ ಯಿಂದಲೂ ಸರಿಯೆನ್ನುವಂತಿಲ್ಲ. ಪಾತ್ರರಚನೆ ಮಾಡಹೊರಟರೆ ದುಷ್ಯಂತನು

ಒಂದು ನೀಚಪಾತ್ರ. ನಾಟಕದ ನಾಯಕನಾಗಲು ಬೇಕಾದ ಉದಾತ್ತತೆ, ಧೀರತನ ಅವನಲ್ಲಿಲ್ಲ. ದೈವವಾಣಿಯು ನೆರವಾಗಿ ಅವನ ನಡತೆಯ ದುಷ್ಪರಿಣಾಮವು ಕಡಿಮೆಯಾಯಿತೇ ಹೊರತು ಅವನ ಯಾವ ಪಶ್ಚಾತ್ತಾಪದ ಅಥವಾ ಪ್ರೇಮವಾತ್ಸಲ್ಯಯುತವಾದ ಮನೋಭಾವದಿಂದಲ್ಲ. ಲೋಕಾಪವಾದಕ್ಕೆ ಹೆದರಿ ಕಡೆಯಲ್ಲಿ ಹಾಗೆ ವರ್ತಿಸಿದನೆಂದರೂ, ಔಚಿತ್ಯವನ್ನು ಪಾಲಿಸುವುದಕ್ಕೆಂದು ಧರ್ಮವನ್ನು ಬಿಟ್ಟಂತೆಯೇ ಆಗುವುದು. ಹೀಗೆ ಮಹಾಭಾರತದ ದುಷ್ಯಂತನ ವಿಚಾರವನ್ನು ಪ್ರಸ್ತಾಪಿಸುತ್ತ ಹೋದಂತೆಲ್ಲ ಅವನ ವಿಚಾರದಲ್ಲಿ ನಮ್ಮ ಗೌರವ ಕಡಿಮೆಯಾಗುವುದು. ಆದರೆ ಶಾಕುಂತಲದಲ್ಲಿ ಹೀಗಿಲ್ಲ. ದುರ್ವಾಸ ಶಾಪದಿಂದ ಅವನು ಶಕುಂತಲೆಯನ್ನು ಮರೆಯುವನು. ಆದುದರಿಂದ ಅವನು ಧರ್ಮಪಾಲನೆಗಾಗಿ ಶಕುಂತಲೆಯನ್ನು ನಿರಾಕರಿಸುವವನಾಗಿ ತೋರುವನು. ಗುರುತು ಸಿಕ್ಕದಿದ್ದರೂ ರೂಪವತಿಯಾದ ಇವಳನ್ನು ಅವಳ ಮಾತಿನ ಬಲದಿಂದಲೇ ಪತ್ನಿಯೆಂದು ಸ್ವೀಕರಿಸುವುದು ಅಧರ್ಮವೆನ್ನಿಸುವುದು. ಆಗ ಅವನು ಕನಿಕರಕ್ಕೆ ಪಾತ್ರನಾಗುವನೇ ವಿನಹ ದೂಷಣೆಗಲ್ಲ. ಹಂಸಪದಿಕೆಯ ಗಾನವನ್ನು ಕೇಳಿದರೆ ಇವನೂ ಕೂಡ ಆದರ್ಶ ಏಕಪತ್ನೀವ್ರತಧಾರಿಯೆನ್ನುವಂತಿಲ್ಲದಿದ್ದರೂ ಶಕುಂತಲೆಯ ವಿಷಯದಲ್ಲಿ ಇವನ ಪ್ರೇಮವು ಕಪಟವೆನ್ನುವಂತಿಲ್ಲ. ಇವನು ಸಿಕ್ಕಿಬೀಳುವ ಸನ್ನಿವೇಶಗಳನ್ನು ವಿಶದವಾಗಿ ಪರಿಶೀಲಿಸಿ ಒಂದೊಂದು ಕಡೆಯಲ್ಲೂ ಯಾವ ರೀತಿ ವರ್ತಿಸುವನೆಂಬುದನ್ನು ನೋಡಿದರೆ ಇವನ ಉದಾತ್ತತೆ, ಸೌಜನ್ಯ, ಧರ್ಮಪರತೆ, ಗಾಂಭೀರ್ಯಗಳು ನಮ್ಮ ಗಮನಕ್ಕೆ ಬಾರದಿರವು. ಹೀಗೆಂದ ಮಾತ್ರಕ್ಕೆ ಮಾನುಷ ಸಹಜವಾದ ಗುಣದೋಷಗಳಿಂದ ಕೂಡಿ ಸಜೀವನಾದ ಮಹಾಭಾರತದ ದುಷ್ಯಂತನನ್ನು ಕಾಳಿದಾಸನು ಗುಣಗಳ ಮುದ್ದೆಯನ್ನಾಗಿ ಮಾಡಿ ಸಂಪ್ರದಾಯ ಶರಣನಾಗಿರುವನೆನ್ನುವಂತಿಲ್ಲ. ಭಾರತದ ದುಷ್ಯಂತನ ದೊಡ್ಡ ಕಳಂಕವನ್ನು ತೊಡೆದುಹಾಕಿದ್ದರೂ ಶಾಕುಂತಲದ ದುಷ್ಯಂತನೂ ಸಜೀವ ವ್ಯಕ್ತಿ. ಆದರ್ಶ ವ್ಯಕ್ತಿಯಾಗುವಷ್ಟು ಸಜೀವತೆಯಿರುವುದೇ ಇವನ ವೈಶಿಷ್ಟ್ಯ. ಇದಲ್ಲದೆ, ದೋಷಭೂಯಿಷ್ಠವಾಗಿರುವಿಕೆಯೇ ಸಜೀವತೆಯ ಕುರುಹಲ್ಲ. ಗುಣಪರಿಪೂರ್ಣನಾದ ವ್ಯಕ್ತಿಯಲ್ಲಿಯೂ ಸಜೀವತೆ ಇರಲು ಅವಕಾಶವಿದೆ; ಇರಲೂ ಬೇಕಾದ್ದು. ಆದರೆ ಮಾತ್ರ ಸನ್ನಿವೇಶಗಳ ವೈವಿಧ್ಯ

ದಿಂದಲೂ ಅವುಗಳಿಗೆ ತಕ್ಕ ವರ್ತನೆಗಳಿಂದಲೂ ಸಜೀವತೆಯು ವ್ಯಕ್ತಗೊಳ್ಳ ಬೇಕು. ಇದೇ ಉತ್ತಮ ಕಲೆಯ ಚಿಹ್ನೆ. ಇದನ್ನು ನಾವು ದುಷ್ಯಂತನ ಪಾತ್ರದಲ್ಲಿ ಪೂರ್ಣವಾಗಿ ಕಾಣಬಹುದು. ಈಗ ದುರ್ವಾಸ ಶಾಪ ವೃತ್ತಾಂತದಿಂದ ಉಂಟಾಗಿರುವ ಪ್ರಯೋಜನವು ಸ್ಪಷ್ಟಪಡುವುದು. ಸ್ವಭಾವತಃ ಒಳ್ಳೆಯವನಾದ ಉತ್ತಮವಂಶದ ದೊರೆಯೊಬ್ಬನು ಅಕಸ್ಮಾತ್ತಾಗಿ ಮಾನುಷ ಸಹಜವಾದ ಪ್ರೇಮದಬಲೆಗೆ ಸಿಕ್ಕಿ ಅನಂತರ ಮುನಿಶಾಪ, ಅದಕ್ಕಿಂತ ಹೆಚ್ಚಾದ ದೈವವಿಲಾಸಗಳೆಂಬ ಅಗ್ನಿಪರೀಕ್ಷೆಗಳಲ್ಲಿ ಉತ್ತೀರ್ಣನಾಗಿ ಶುದ್ಧಿ ಹೊಂದುವುದು ಇಲ್ಲಿ ನಮ್ಮ ಗಮನಕ್ಕೆ ಬರುವುದು. ಈ ಕತೆಯಲ್ಲಿ ಮುನಿ ಶಾಪವಾಗಲಿ ದೈವದ ಪ್ರಭಾವವಾಗಲಿ ನಿಷ್ಕಾರಣವಾಗಿ ಒದಗುವುದಿಲ್ಲ. ಐಹಿಕಪ್ರೇಮವು ದಿವ್ಯಪ್ರೇಮವಾಗುವುದಕ್ಕೆ ಮುನಿಶಾಪವು ಮುಖ್ಯವಾಗಿ ಸಹಕರಿಸುವುದು. ಪ್ರೇಮದಿಂದ ಧರ್ಮಲೋಪವಾದುದಕ್ಕೆ ಅದು ಪ್ರತೀಕಾರರೂಪ. ಶಾಪಫಲವಾದ ಕ್ಲೇಶದಿಂದ ಇಬ್ಬರೂ ಪರಿತಾಪಗೊಂಡು ಪವಿತ್ರ ರಾಗುವರು. ಇಷ್ಟೆಲ್ಲ ಕಷ್ಟವಾದರೂ ಕಡೆಯಲ್ಲಿ ಅವರಿಗೆ ಲಭಿಸುವ ಶುದ್ಧ ಪ್ರೇಮಸಿದ್ಧಿಯ ದೃಷ್ಟಿಯಿಂದ ಎಲ್ಲವೂ ಸಹ್ಯ. ಮೊದಲಿನ ಮೂರು ಅಂಕ ಗಳಲ್ಲಿ ದುಷ್ಯಂತನ ಸ್ವಭಾವವನ್ನು ತಿಳಿದಮೇಲೆ ದುರ್ವಾಸ ಶಾಪವಿಲ್ಲದೆ ಇದ್ದಲ್ಲಿ ಶಕುಂತಲೆಯ ನಿರಾಕರಣೆಯಾಗುತ್ತಿರಲಿಲ್ಲವೆನ್ನಿಸುತ್ತದೆ. ಈ ದೃಷ್ಟಿ ಯಿಂದಲೂ ನಾಟಕದಲ್ಲಿ ಸಾಮಂಜಸ್ಯಕ್ಕಾಗಿ ಶಾಪವೃತ್ತಾಂತವು ಕತೆಗೆ ಅವಶ್ಯಕವಾಗುತ್ತದೆ. ಹೀಗೆ ಕವಿಯ ಮುಖ್ಯವಾದ ಧ್ಯೇಯಸಾಧನೆಗೆ ಸಹಕರಿಸಿ ಕತೆಯಲ್ಲಿ ಔಚಿತ್ಯ, ಸ್ವಾಭಾವಿಕತೆ, ಸಾಮಂಜಸ್ಯಗಳನ್ನು ಒದಗಿಸುವುದರಿಂದ ದುರ್ವಾಸಶಾಪವೃತ್ತಾಂತವು ಕಲಾದೃಷ್ಟಿಯಿಂದ ನಾಟಕಕ್ಕೆ ಆವಶ್ಯಕವಾಗಿ ತೋರುತ್ತದೆ. ಬಲಾತ್ಕಾರವಾಗಿ ಈ ಅಂಶವನ್ನು ಮೂಲಕತೆಗೆ ಸೇರಿಸಿದಂತೆ ತೋರದೆ ಇರುವುದರಿಂದ ಕವಿಯು ಹೇಗೆ ಇದನ್ನು ಮೂಲಕತೆಯೊಡನೆ ಹೆಣೆ ದಿರುವನೆಂಬುದು ವ್ಯಕ್ತವಾಗುವುದು.[1]

---

1. *Cf.* "This curse itself emanates from the plot and is not a simple chance." Sylvain Levi, Le Theatre Indien. p. 173. **(ಫ್ರೆಂಚ್ ಮೂಲದ ಸ್ವಕೃತ ಆಂಗ್ಲ ಭಾಷಾಂತರ)** also "It is after all the result of the fault of the heroine." *Ibid.* p. 176;

2. **ಉಂಗುರದ ವಿಚಾರ**:—ಇದು ಮಹಾಭಾರತದಲ್ಲಿಲ್ಲದಿದ್ದರೂ ಕಟ್ಠಹಾರೀ ಜಾತಕ[1] ದಲ್ಲಿರುವುದು. ಆದುದರಿಂದ ಈ ಅಂಶವನ್ನು ಕಾಳಿದಾಸನು ಪೂರ್ತಿ ಕಲ್ಪಿಸಿದನೆಂದು ಹೇಳಲು ಸಾಧ್ಯವಿಲ್ಲದಿದ್ದರೂ ಶಾಕುಂತಲದ ಸನ್ನಿವೇಶಕ್ಕೆ ಇದನ್ನು ಹೊಂದಿಸಿ ಉಪಯೋಗಿಸಿದ ಯಶಸ್ಸು ಅವನಿಗೇ ಸಲ್ಲಬೇಕು. ವಿವಾಹ ಸಮಯದಲ್ಲಿ ಗುರುತಿಗಾಗಿ ಉಂಗುರವನ್ನು ಕೊಡುವ ಅಥವಾ ಬದಲಾಯಿಸುವ ಸಂಪ್ರದಾಯವು ಈಗಲೂ ಅನೇಕರಲ್ಲಿದೆ. ಇದರ ಮೂಲವು ಊಹಾಸ್ಪದವಾಗಿದ್ದರೂ ದುಷ್ಯಂತ ಶಕುಂತಲೆಯರ ಗಾಂಧರ್ವ ವೃತ್ತಾಂತದಲ್ಲಿಯೂ ಅಂಗುಲೀಯಕದಾನವು ಬರುವುದರಿಂದ ಈ ಸನ್ನಿವೇಶದಲ್ಲಿ ಉಂಟಾಗಿರುವ ಒಂದು ಚಮತ್ಕಾರವನ್ನು ಈಗಲೂ ಕೂಡ ನಾವು ಅನುಭವಿಸಲು ಸಾಧ್ಯವಾಗಿದೆ. ತನ್ನ ಹೆಸರಿನ ಮುದ್ರೆಯನ್ನು ಹೊಂದಿದ್ದ

---

Rabindranath Tagore. "What Durvāsa's curse had brought about had its seeds in human nature."—The inner meaning of S'ākuntala, p. XXI.

1. ಅಲ್ಲಿನ ಕಥೆಯು ಹೀಗಿರುವುದು:-ಬ್ರಹ್ಮದತ್ತನೆಂಬ ಕಾಶಿಯ ದೊರೆಯು ಹಣ್ಣು ಹೂವುಗಳಿಗಾಗಿ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಸೌದೆಯನ್ನಾರಿಸುತ್ತಿದ್ದ ಯುವತಿಯೊಬ್ಬಳ ಸೌಂದರ್ಯಕ್ಕೆ ಮುಗ್ಧನಾಗಿ ಅವಳನ್ನು ವರಿಸುವನು. ಕೂಡಲೆ ಬೋಧಿಸತ್ವನು ಅವಳ ಗರ್ಭದಲ್ಲಿ ಅವತರಿಸುವನು. ಇದನ್ನು ಅವಳು ದೊರೆಗೆ ತಿಳಿಸಲು ಅವನು ತನ್ನ ಮುದ್ರೆಯುಂಗುರವನ್ನು ಅವಳಿಗೆ ಕೊಟ್ಟು "ನಿನ್ನ ಮಗುವು ಹೆಣ್ಣಾದರೆ ಉಂಗುರವನ್ನು ಮಾರಿ ಆ ಬಂದ ಹಣದಿಂದ ಅದನ್ನು ಪೋಷಿಸು. ಗಂಡಾದರೆ ಉಂಗುರದೊಡನೆ ನನ್ನಲ್ಲಿಗೆ ಬಾ" ಎಂದು ಹೇಳುವನು. ಕಾಲಕ್ರಮದಲ್ಲಿ ಬೋಧಿಸತ್ವನು ಹುಟ್ಟಿ ಬೆಳೆಯುತ್ತಿದ್ದಾಗ ಅವನ ಜೊತೆಯವರು ಇವನನ್ನು ಅಜ್ಞಾತ ಪಿತೃಕನೆಂದು ಜರೆಯಲು ತಾಯಿ ಮಕ್ಕಳಿಬ್ಬರೂ ದುಃಖದಿಂದ ದೊರೆಯ ಬಳಿಗೆ ಹೊರಡುವರು. ದೊರೆಗೆ ಉಂಗುರದಿಂದ ಎಲ್ಲವೂ ಜ್ಞಾಪಕಕ್ಕೆ ಬಂದರೂ ನಾಚಿಕೆಯಿಂದ ಇವರನ್ನು ನಿರಾಕರಿಸುವನು. ಆಗ ಆ ಯುವತಿಯು ಸತ್ಯಪರೀಕ್ಷೆಗಾಗಿ ಒಂದು ಉಪಾಯವನ್ನು ಹೂಡುವಳು:—"ಹುಡುಗನು ನಿನ್ನ ಮಗನೇ ಆಗಿದ್ದಲ್ಲಿ ಆಕಾಶದಲ್ಲೇ ನಿಲ್ಲಲಿ; ಇಲ್ಲದಿದ್ದಲ್ಲಿ ಕೆಳಗೆ ಬಿದ್ದು ಸಾಯಲಿ" ಎಂದು ಅವನನ್ನು ಮೇಲಕ್ಕೆಸೆಯುವಳು. ಸತ್ಯವೇ ಗೆಲ್ಲುವುದು. ಬೋಧಿಸತ್ವನು ಆಕಾಶದಲ್ಲೇ ನಿಂತು ತನ್ನನ್ನು ಸ್ವೀಕರಿಸುವಂತೆ ದೊರೆಯನ್ನು ಕೇಳಿಕೊಳ್ಳುವನು. ದೊರೆಯು ಆಶ್ಚರ್ಯಗೊಂಡು, ಮೆಚ್ಚಿ ಅವರನ್ನು ಸ್ವೀಕರಿಸಿ ಬೋಧಿಸತ್ವನಿಗೆ ಯುವರಾಜಪದವಿಯನ್ನೂ ಅವನ ತಾಯಿಗೆ ಮಹಾರಾಣಿಯ ಪದವಿಯನ್ನೂ ಕೊಡುವನು.

ಉಂಗುರವನ್ನು ಕೊಟ್ಟು 'ಇದರಲ್ಲಿ ಕೆತ್ತಿರುವ ಹೆಸರಿನ ಅಕ್ಷರಗಳನ್ನು ದಿನ ಕ್ಕೊಂದರಂತೆ ಉಚ್ಚರಿಸು, ಅಷ್ಟರಲ್ಲಿ ನನ್ನ ಪರಿವಾರವು ಬಂದು ನಿನ್ನನ್ನು ಅರಮನೆಗೆ ಕರೆತರುವುದು' ಎಂದು ದುಷ್ಯಂತನು ಹೇಳುವ ಸನ್ನಿವೇಶವು ರಮ್ಯವಾಗಿದೆ. ಇದೆಲ್ಲ ನಡೆದಮೇಲೆ ಶಕುಂತಲೆಯ ನಿರಾಕರಣೆಯ ಸಮಯ ದಲ್ಲೂ ಉಂಗುರದ ವೃತ್ತಾಂತದಿಂದ ಒಂದು ಅಪೂರ್ವವಾದ ಜಮಾ ವಣೆಯು ಉಂಟಾಗುವುದು. ಶಕುಂತಲೆಯು ಉಂಗುರವನ್ನು ತೋರಿಸಿ ಅವನಿಗೆ ನೆನಪುತರಬೇಕೆಂದು ಪ್ರಯತ್ನಿಸುವಳು. ಆದರೆ ಅದನ್ನು ಕಾಣದೆ ವಿಫಲಳಾಗಿ ವಿಷಾದ ಮತ್ತು ನಿರಾಶೆಗಳಿಂದ ಮತ್ತೊಂದು ರೀತಿಯಿಂದ ಅವನಿಗೆ ತನ್ನ ನೆನಪುಕೊಡಲು ಪ್ರಯತ್ನಿಸುವಾಗ 'ನೋಡಿದುದಾಯಿತು, ಇನ್ನು ಕೇಳಬೇಕಾದ್ದು!' ಎಂದು ದುಷ್ಯಂತನು ಹಂಗಿಸುವನು. ಏನು ಕಸುವು ಮತ್ತು ಚೆಲುವು ಸನ್ನಿವೇಶದಲ್ಲಿ? ಕತೆಯಲ್ಲಿ ಉಂಗುರದ ವಿಚಾರ ವಿಲ್ಲದಿದ್ದರೆ ಇದು ಉಂಟಾಗುತ್ತಿರಲಿಲ್ಲ. ಇದಲ್ಲದೆ, ಉಂಗುರ ವೃತ್ತಾಂತವು ಮುನಿಶಾಪಕ್ಕಿಂತ ಬಲವಾದ ಅದೃಷ್ಟಾಂಶವನ್ನು ಕತೆಯಲ್ಲಿ ಸೇರಿಸುತ್ತದೆ. ಇದು ಒಂದು ಪಕ್ಷ ಇಲ್ಲದಿದ್ದಲ್ಲಿ ಶಾಪವು ಸಾರ್ಥಕವಾದರೂ ಉಂಗುರವನ್ನು ತೋರಿಸುವುದರಿಂದ ದುಷ್ಯಂತನಿಗೆ ನೆನಪುಂಟಾಗಿ ಶಕುಂತಲೆಯ ಸ್ವೀಕಾರದಲ್ಲಿ ಕತೆಯು ಕೊನೆಗಾಣಬೇಕಾಗುತ್ತಿತ್ತು. ಆದರೆ ಇದರಿಂದ ಕಾಳಿದಾಸನ ಧ್ಯೇಯಸಾಧನೆಯಾಗುತ್ತಿರಲಿಲ್ಲ. ಹೇಗೆಂದರೆ–ಈ ಉಂಗುರದ ದೆಸೆಯಿಂದಲೇ ದುಷ್ಯಂತ ಶಕುಂತಲೆಯರು ವಿಪ್ರಲಂಭರೂಪವಾದ ದುಃಖಕ್ಕೆ ಒಳಗಾಗಿ ತಮ್ಮ ಹಿಂದಿನ ಧರ್ಮಲೋಪಕ್ಕೆ ಪ್ರಾಯಶ್ಚಿತ್ತವನ್ನು ಹೊಂದುವುದು. ದುರ್ವಾಸರು ಶಾಪಕೊಟ್ಟಿದ್ದರೂ ಪತಿಪತ್ನಿಯರಲ್ಲಿ ಯಾರೊಬ್ಬರಿಗೂ ಅದು ತಿಳಿಯದೆ ಇದ್ದುದರಿಂದ ಮೊದಮೊದಲು ಅವರಿಗೆ ದುಃಖವೇ ಆಗಿರಲಿಲ್ಲ. ಶಕುಂತಲೆಗೆ ಪುನಸ್ಸಮಾಗಮದ ಆಸೆಯು ಇದ್ದೇ ಇತ್ತು. ನಿರಾಕರಣೆಯ ಭೀತಿಯು ಎಳ್ಳಷ್ಟೂ ಇರಲಿಲ್ಲ. ಇತ್ತ ದುಷ್ಯಂತನಿಗಂತೂ ತನ್ನ ಪೂರ್ವದ ನಡವಳಿಕೆ ಯೆಲ್ಲ ಸಂಪೂರ್ಣವಾಗಿ ಮರೆತೇಹೋಗಿದ್ದುದರಿಂದ ಶಕುಂತಲೆಯ ವಿರಹ ದಲ್ಲಿದ್ದರೂ ವಿರಹದುಃಖಾನುಭವವಿರಲಿಲ್ಲ. ಹೀಗಿರುವಲ್ಲಿ ಐದನೆಯ ಅಂಕದ ಸನ್ನಿವೇಶದಲ್ಲೇ ಉಂಗುರವು ವಿಚಿತ್ರವಾದ ಪ್ರಭಾವವನ್ನು ಬೀರಿ ದುಷ್ಯಂತ ಶಕುಂತಲೆಯರನ್ನು ದುಃಖಕ್ಕೆ ಈಡುಮಾಡುವುದು. ನ್ಯಾಯವಾಗಿ ನೋಡಿದರೆ

ಅಲ್ಲಿಂದಾಚೆಗೇ ಅವರ ಪ್ರಾಯಶ್ಚಿತ್ತಾನುಭವವು ಪ್ರಾರಂಭವಾಗುವುದೆನ್ನ ಬೇಕು. ಹೀಗೆ ದುರ್ವಾಸರ ಶಾಪವಿದ್ದರೂ ಉಂಗುರವು ಕಳೆದುಹೋಗದೆ ಇದ್ದಿದ್ದರೆ ದುಷ್ಯಂತ ಶಕುಂತಲೆಯರಿಗೆ ದುಃಖಾನುಭವವಾಗುತ್ತಿರಲಿಲ್ಲ. ವಿಪ್ರಲಂಭರೂಪವಾದ ದುಃಖವುಂಟಾಗದೆ ಇದ್ದರೆ ಅವರ ಸಮಾಗಮವು ಪವಿತ್ರವಾಗುತ್ತಿರಲಿಲ್ಲ. ಪ್ರೇಮವು ಮಂಗಳಕರವಾಗಿ ಪರಿಶುದ್ಧಿಹೊಂದುವು ದಕ್ಕೆ ಸಾಕಷ್ಟು ಅವಕಾಶ ದೊರಕುತ್ತಿರಲಿಲ್ಲ. ಉಂಗುರವು ಕಳೆದುಹೋಗಿ ಬೇಕಾದ ಸಮಯಕ್ಕೆ ಸಿಕ್ಕದೆ ಹೋಗುವುದರಿಂದ ಶಕುಂತಲೆಗೆ ವಿಪತ್ತು ಒದಗುವುದು. ಆದರೆ ಉಂಗುರವು ಸಿಕ್ಕಿದರೂ ಬೇಕಾದ ಸಮಯದಲ್ಲಿ ಅದರಿಂದಾಗಬೇಕಾಗಿದ್ದ ಪ್ರಯೋಜನವು ಆಗದೆ ದುಷ್ಯಂತನಿಗೆ ದುಃಖವು ಉಂಟಾಗುವುದು. ಅಂತು ಶಾಪದ ವೃತ್ತಾಂತಕ್ಕೂ ಉಂಗುರದ ವೃತ್ತಾಂತಕ್ಕೂ ಕತೆಯಲ್ಲಿ ನಿಕಟವಾದ ಸಂಬಂಧವಿದೆ. ಶಾಪದಿಂದ ಆಗಬೇಕಾಗಿದ್ದ ಪ್ರೇಮದ ಶುದ್ಧಿಯು ಉಂಗುರದ ದೆಸೆಯಿಂದ ಆಗುವುದು. ಇದರಿಂದ ಪಾತ್ರರಚನೆಗೂ ಬಹಳ ಉಪಕಾರವಾಗಿದೆ. ಶಾಪದ ತೀವ್ರತೆಯನ್ನು ಕಡಿಮೆಮಾಡುವುದಕ್ಕೆ ಸಹಕರಿಸಿದ ಉಂಗುರವು ಕಡೆಗೆ ಕಳೆದುಹೋಗಿ ಪುನಃ ಸಿಕ್ಕುವುದರಿಂದ ಅದರ ಪೂರ್ಣಫಲವನ್ನು ಕೊಟ್ಟಂತೆಯೇ ಆಗಿರುವುದು ಗಮನಾರ್ಹವಾದ ವಿಷಯ. ಹೀಗೆ ನಿರ್ವಹಿಸಿರುವುದರಿಂದಲೇ ದುರ್ವಾಸನು ಕೋಪಿಷ್ಠನಾದರೂ ಕರುಣೆಯುಳ್ಳ ಋಷಿಯೆಂಬ ಭಾವನೆ ಬರುವಂತಾಗಿದೆ. ಶಾಪ ಕೊಡ ಬೇಕಾಯಿತು ; ಕೊಟ್ಟ ; ಅದು ನ್ಯಾಯವೂ ಆಗಿತ್ತು. ಆದರೂ ಅದರ ತೀವ್ರತೆಯನ್ನು ಕಡಿಮೆಮಾಡಲು ಒಡಂಬಟ್ಟ ಮುನಿಯ ಕರುಣೆಯು ಪ್ರಶಂ ಸಾರ್ಹವಾಗುತ್ತದೆ. ಉಂಗುರವಿರುವುದರಿಂದ ಶಾಪದ ಸೆಕೆಯು ಕೋಮಲ ಳಾದ ಶಕುಂತಲೆಗೆ ತಟ್ಟುವುದಿಲ್ಲವೆಂದು ಧೈರ್ಯಗೊಂಡು, ಅವಳು ಗಾಬರಿ ಪಡದಿರಲೆಂದು ಈ ವಿಚಾರವನ್ನೆಲ್ಲ ಮರೆಮಾಚಿದ ಪ್ರಿಯಂವದೆ ಅನಸೂಯೆ ಯರ ಮೈತ್ರಿಯೂ, ಪ್ರಯತ್ನಶೀಲತೆಯೂ, ಸಹೃದಯರಿಗೆ ಆಸ್ವಾದಯೋಗ್ಯ ವಾಗುವುದು. ಶಕುಂತಲೆಯ ಸ್ವಭಾವವು ಹೂವಿನಂತೆ ಕೋಮಲವಾದ್ದೆಂಬ ಅಭಿಪ್ರಾಯವೂ ಇಲ್ಲಿ ವ್ಯಕ್ತವಾಗುವುದು.

ಜೊತೆಗೆ, ಮೊದಲಿನ ಅಂಕಗಳಲ್ಲಿ ಅತಿಮಾನುಷ ಪ್ರಪಂಚದಲ್ಲಿಯೋ ಎಂಬಂತೆ ಶಾಂತವಾದ ಆಶ್ರಮದ ವಾತಾವರಣದಲ್ಲಿ ನಡೆಯುವ ಉತ್ತಮೋ

ತ್ತಮರಾದ ದೈವಾಂಶವನ್ನೊಳಗೊಂಡ ನಾಯಕ ನಾಯಿಕೆಯರ ಪ್ರೇಮವ್ಯವಹಾರದ ಕತೆಗೆ ಪ್ರಾಪಂಚಿಕ ವ್ಯವಹಾರದ, ಸಾಮಾನ್ಯ ಜನಜೀವನದ ಅಂಶವು ಸೋಕುವುದು ಉಂಗುರ ವೃತ್ತಾಂತದ ದೆಸೆಯಿಂದಲೇ ಎಂದು ಹೇಳಬೇಕಾಗಿದೆ. ಆರನೆಯ ಅಂಕದ ಸಂಗತಿಗಳನ್ನು ಪರಿಶೀಲಿಸಿದರೆ ಇದರ ತತ್ವವು ಸ್ಪಷ್ಟವಾಗುವುದು. ಕಳೆದುಹೋದ ಉಂಗುರವು ಸಿಕ್ಕುವ ಸನ್ನಿವೇಶವಿಲ್ಲದಿದ್ದರೆ ಅಲ್ಲಿನ ಕತೆಯೆಲ್ಲ ವ್ಯರ್ಥವಾಗುತ್ತಿತ್ತು. ಸಾಮಾಜಿಕ ಜೀವನದ ಅಂಶವನ್ನು ಪ್ರಯತ್ನಪೂರ್ವಕವಾಗಿ ಸೇರಿಸಿದಂತಾಗುತ್ತಿತ್ತು. ಹೀಗಿಲ್ಲದೆ ಕವಿಯ ಮುಖ್ಯ ಧ್ಯೇಯಸಾಧನೆಗೆ ಬೇಕಾದ ಅಂಗುಲೀಯಕದ ಪುನಃ ಪ್ರಾಪ್ತಿಯು ನೆರವೇರುವ ಸನ್ನಿವೇಶದಲ್ಲಿ ಪ್ರಾಸಂಗಿಕವಾಗಿ ಜನಜೀವನದ ಪರಿಚಯಮಾಡಿಸುವುದು ಕವಿಯ ಕೌಶಲವನ್ನು, ಎಂದರೆ ವಿವಿಧ ಅಂಶಗಳನ್ನು ಹೊಂದಿಸಿ ಹೆಣೆಯುವ ಚಾತುರ್ಯವನ್ನೂ ಸೂಚಿಸುತ್ತದೆ.

ಈ ಕಾರಣಗಳಿಂದ ಈ ಮಾರ್ಪಾಟು ಬಹಳ ಮುಖ್ಯವಾಗಿ ಪರಿಣಮಿಸುವುದು. ನಾಟಕದ ಹೆಸರಿನಲ್ಲೇ ಕವಿಯು ಈ ಅಭಿಜ್ಞಾನಾಂಶವನ್ನು ಸೇರಿಸಿರುವುದೂ ಇದನ್ನು ಸಮರ್ಥಿಸುವುದು.[1]

3. **ಹೊಸಪಾತ್ರಗಳ ರಚನೆ**:—ಮಹಾಭಾರತದಲ್ಲಿ ದುಷ್ಯಂತ, ಶಕುಂತಲೆ, ಸರ್ವದಮನ, ಕಶ್ಯಪ ಎಂಬ ನಾಲ್ಕು ಪಾತ್ರಗಳು ಮಾತ್ರ ಇವೆ. ಮಾಢವ್ಯ, ಪ್ರಿಯಂವದೆ, ಅನಸೂಯೆ, ಶಾರ್ಙ್ಗರವ, ಶಾರದ್ವತ, ಗೌತಮಿ ಮೊದಲಾದ ಮುಖ್ಯಪಾತ್ರಗಳೂ ವೈಖಾನಸ, ಸಾರಥಿ, ದ್ವಾರಪಾಲಕ, ಸೇನಾಪತಿ, ಕರಭಕ ಮೊದಲಾದ ಸಣ್ಣಸಣ್ಣ ಪಾತ್ರಗಳೂ ಕವಿಯಿಂದ ಕಲ್ಪಿತವಾಗಿವೆ. ಒಂದು ಇಡಿಯ ವಾತಾವರಣವನ್ನೇ ನಿರೂಪಿಸಿ ನಾನಾ ವಿಧವಾದ ತತ್ವಗಳನ್ನು ಹೊರಗೆಡಹುವ ನಾಟಕದ ಸನ್ನಿವೇಶಕ್ಕೆ ಹೆಚ್ಚು ಪಾತ್ರಗಳು ಬೇಕಾಗುವುದು ಸಹಜ. ಅವುಗಳನ್ನು ಕಲ್ಪಿಸಿರುವುದೂ ಸರಿ. ಆದರೆ

---

1. *Cf.* "The sign of recognition was undoubtedly introduced into the legend for the first time and characterises the work of Kālidāsa since the poet has taken care to introduce it into the title itself of the piece."—

Sylvain Levi.—Le Theatre Indien. p. 174.

ಇಲ್ಲಿನ ಸಾಮಂಜಸ್ಯ, ಆವಶ್ಯಕತೆಗಳಿಗಿಂತ ಆಯಾ ಪಾತ್ರಗಳ ಸೌಂದರ್ಯವೂ ನಾಯಕ ನಾಯಿಕೆಯರ ಸ್ವಭಾವೋನ್ಮೀಲನಕ್ಕೆ ಅವುಗಳಿಂದಾಗುವ ಪ್ರಯೋಜನವೂ ಹೆಚ್ಚು ಗಮನಾರ್ಹ. ರಸಪರಿಪೋಷಕ್ಕೆ ಒಂದೊಂದು ಪಾತ್ರದ ಒಂದೊಂದು ಮಾತೂ ಸಹಾಯವಾಗುವುದು. ವಿಶದವಾಗಿ ಪಾತ್ರ ರಚನೆಮಾಡಲು ಇಲ್ಲಿ ಅವಕಾಶ ಕಡಿಮೆ. ಒಟ್ಟಿನಲ್ಲಿ ಇಷ್ಟು ಮಾತ್ರ ಹೇಳ ಬಹುದು. ಪ್ರಿಯಂವದೆ, ಅನಸೂಯೆಯರಿಬ್ಬರೂ ಮೈತ್ರಿಯ ಅಪರಾವತಾರ ಗಳೇ ಆದರೂ ಒಬ್ಬೊಬ್ಬರೂ ಒಂದೊಂದು ಜಾತಿಗೆ ಸೇರುವರು. ಅನಸೂಯೆ ಯಲ್ಲಿ ಗಾಂಭೀರ್ಯ, ಸೌಜನ್ಯ, ವಿಚಾರಪರತೆ, ಹೊಣೆಗಾರಿಕೆ ಇವು ಹೆಚ್ಚು. ಆದರೆ ಪ್ರಿಯಂವದೆಯಲ್ಲಿ ಹಾಸ್ಯಪ್ರಿಯತೆ, ಲಘುವಿಲಾಸ, ಹಿತಕಾರಿತ್ವಗಳು ಹೆಚ್ಚು. ಎರಡೂ ಎರಡು ಸ್ವಾಭಾವಿಕವಾದ, ಅನುಭವಗೋಚರವಾಗುವ ಸ್ತ್ರೀತ್ವದ ಪ್ರಕಾರಗಳು. ಪ್ರಿಯಂವದೆಯಲ್ಲಿ ಧೈರ್ಯ ಹೆಚ್ಚು, ಅನಸೂಯೆ ಯಲ್ಲಿ ಜಾಗರೂಕತೆ ಹೆಚ್ಚು. ಇಬ್ಬರೂ ಒಟ್ಟಿಗೆ ಸೇರಿರುವುದರಿಂದ ಶಕುಂ ತಲೆಯ ಹಿತಚಿಂತನೆಗೆ ಬೇಕಾದ ಎಲ್ಲ ಅಂಶಗಳೂ ಕೂಡಿದಂತಾಗುವುದು. ಮಾಢವ್ಯನು ದುಷ್ಯಂತನ ಏಕಮಾತ್ರ ಆಪ್ತಸ್ನೇಹಿತನಾಗಿ ಕತೆಯ ಬೆಳ ವಣಿಗೆಗೆ ಮೊದಮೊದಲಲ್ಲೇ ಸಹಾಯಮಾಡುವನು. ಪ್ರಾರಂಭದ ಶೃಂಗಾ ರಕ್ಕೆ ಮಾಢವ್ಯನ ಪಾತ್ರದಿಂದ ಅಭಿವ್ಯಕ್ತವಾಗುವ ಹಾಸ್ಯರಸವು ಅಂಗವಾಗು ವುದು. ಶಕುಂತಲೆಗೆ ಪ್ರಿಯಂವದೆಯು ಹೇಗೋ ಹಾಗೆ ದುಷ್ಯಂತನಿಗೆ ಮಾಢವ್ಯ; ಹಾಸ್ಯದಲ್ಲಿ; ಕಾಡುತ್ತ ಗೋಳಾಡಿಸುವುದರಲ್ಲಿ; ಹಿತಕಾಂಕ್ಷಿ ಗಳಾಗಿ ಸಹಕರಿಸುವುವರಲ್ಲಿ. ಆದರ್ಶ ಋಷಿಕುಮಾರರಾದ ಶಾಙ್ಗ್ರರವ ಶಾರ ದ್ವತರಲ್ಲಿ ಐಶ್ವರ್ಯಲೋಲುಪತೆಯ ತಿರಸ್ಕಾರವು ಸಮನಾಗಿ ಅಡಗಿದೆ. ರಾಜಠೀವಿ, ಅರಮನೆಯ ವೈಭವಗಳು, ನಗರವಾಸ ಇವನ್ನು ನೋಡಿ ಅವರಿಗೆ ಅಚ್ಚರಿಯೇನಿಲ್ಲ; ಅನಭಿಲಾಷೆ ಅಸಂತೋಷಗಳೇ ಹೆಚ್ಚು. ಪಾಪ, ಶಕುಂತಲೆಯು ದೊರೆಯ ಸಹವಾಸಮಾಡಿದ್ದರಿಂದ ಅವರು ಇಲ್ಲಿಗೆ ಬರ ಬೇಕಾಯಿತು. ಇಲ್ಲದಿದ್ದಲ್ಲಿ ಅವರಿಗೂ ನಾಗರಿಕ ರಾಜಗೃಹದ ವಾತಾ ವರಣಕ್ಕೂ ಸಂಬಂಧವೇ ಇಲ್ಲ. ದೊರೆಯು ಒಳ್ಳೆಯವನಂತೆ ನಡೆದಿದ್ದರೆ ಯಾವುದನ್ನೂ ಸಹಿಸಬಹುದಾಗಿತ್ತು. ಅದೂ ಯಾವಾಗ ದೊರೆಯಲಿಲ್ಲವೋ ಅವರು ರೇಗಿಬೀಳುವರು. ಅವರ ಧಿಕ್ಕಾರವು ಕಡುತರವಾಗುವುದು. ಇಬ್ಬರಲ್ಲಿ

ಶಾರ್ಙ್ಗರವ ಹೆಚ್ಚು ಕೋಪಿಷ್ಠ. ಶಾರದ್ವತನ ರೀತಿಯು ಸ್ಥಿರತರವೂ, ಶಾಂತವೂ ಆದರೂ ತೀರ್ಮಾನದ ಮನೋಭಾವವು ಅಷ್ಟೇ ಕ್ರೂರ ಮತ್ತು ಅಸಹನೀಯ. ಉಳಿದ ಪಾತ್ರಗಳ ವಿಚಾರ ಅಷ್ಟು ಪ್ರಸ್ತಾಪಿಸಬೇಕಾಗಿಲ್ಲ. ನಾಟಕದಲ್ಲಿ ಪ್ರತಿಯೊಂದು ಪಾತ್ರವೂ ಆವಶ್ಯಕವಾಗಿ ಸಾಮಾಜಿಕರ ಮನಸ್ಸನ್ನು ಆಕ್ರಮಿಸುತ್ತವೆ. ಸುಹೃತ್ಪ್ರೇಮ, ಪ್ರಕೃತಿಪ್ರೇಮ, ಅಪತ್ಯಪ್ರೇಮ ಮೊದಲಾದ ಪ್ರೇಮದ ಅನೇಕ ಪ್ರಕಾರಗಳನ್ನು ಸಮಂಜಸಗೊಳಿಸುವುದೇ ಕವಿಯ ಮುಖ್ಯ ಉದ್ದೇಶವೆಂದು ಹಿಂದೆಯೇ ಹೇಳಿದೆ. ಪ್ರೇಮದ ಒಂದೊಂದು ಪ್ರಕಾರವನ್ನೂ ಪ್ರಕಾಶಗೊಳಿಸುವುದಕ್ಕೆ ಈ ಹೊಸ ಪಾತ್ರಗಳೆಲ್ಲ ಬಹಳಮಟ್ಟಿಗೆ ಸಹಾಯಮಾಡುವುವು.

**ಇತರ ಮಾರ್ಪಾಟುಗಳು** :—ಮಹಾಭಾರತದಲ್ಲಿ ದುಷ್ಯಂತನ ಸೈನ್ಯವು ತಪೋವನದವರೆಗೂ ಮಂತ್ರಿಪುರೋಹಿತರು ಆಶ್ರಮದವರೆಗೂ ಸಂಗಡ ಹೋಗಿ ಅವನು ಋಷಿಗಳ ಆಶೀರ್ವಾದವನ್ನು ಪಡೆದು ಹಿಂದಿರುಗುವುದನ್ನು ನಿರೀಕ್ಷಿಸುತ್ತ ನಿಲ್ಲುವರು. ನಾಟಕದಲ್ಲಿ ಹೀಗಿಲ್ಲ. ಜಿಂಕೆಯನ್ನು ಹಿಂಬಾಲಿಸುತ್ತ ದೊರೆಯು ತನ್ನ ಸೈನ್ಯವನ್ನು ಬಿಟ್ಟು ಬಹಳ ದೂರ ಬರುವನು. ತಾಪಸರು ಅವನನ್ನು ಸಂಧಿಸಿ ಆಶ್ರಮವು ಸಮೀಪದಲ್ಲಿದೆಯೆಂದು ತಿಳಿಸುವರು. ಮುಂದೆ ನಡೆಯುವ ಸಂಗತಿಗಳ ದೃಷ್ಟಿಯಿಂದ ಈ ಮಾರ್ಪಾಟು ಆವಶ್ಯಕ. ಉಪಾಖ್ಯಾನದಲ್ಲಿ ದುಷ್ಯಂತ ಶಕುಂತಲೆಯರ ಕಾಮುಕವೃತ್ತವು ಬಹಳ ಅಲ್ಪ ಕಾಲಾವಧಿಯಲ್ಲಿ ನಡೆಯುವಂತೆ ಏರ್ಪಡಿಸಿದೆ. ಕಣ್ವರು ಹಣ್ಣುಗಳನ್ನು ಸಂಗ್ರಹಿಸಲು ಹೋಗಿದ್ದರು. ಅವರು ಬರುವುದರೊಳಗೇ ಗಾಂಧರ್ವ ವಿವಾಹವು ನಡೆದಿರುತ್ತದೆ. ಕಾಳಿದಾಸನಿಗೆ ಇದು ಉಚಿತವಾಗಿ ತೋರಲಿಲ್ಲ. ಪ್ರಥಮ ದರ್ಶನವೇ ಪ್ರೇಮವನ್ನು ಹುಟ್ಟಿಸಿದರೂ ಇಬ್ಬರೂ ಸ್ವಲ್ಪ ಕಾಲ ವಿಳಂಬದಿಂದ ಆಲೋಚಿಸಿ, ಪರಸ್ಪರ ತಪಿಸಿ. ತಮ್ಮ ಪ್ರೇಮವು ಆಕಸ್ಮಿಕ ಕಾಮಪ್ರಚೋದನೆಯಲ್ಲವೆಂದು ನಿರ್ಧರಿಸಿ ಮದುವೆಯಾಗುವರು. ಕಣ್ವರು ಸೋಮತೀರ್ಥಕ್ಕೆ ಹೋಗಿರುವರೆಂಬ ಕಲ್ಪನೆಯಿಂದ ಇದಕ್ಕೆ ಸರಿಯಾದ ಕಾಲಾವಕಾಶವು ಸಿಕ್ಕಿದಂತಾಗುವುದು. ದುಷ್ಯಂತನು ಪದೇಪದೇ ಬಂದು ಹೋಗುವುದಕ್ಕೂ ಅವಕಾಶವಾಗಿ ಅವರ ಪ್ರೇಮದ ಬೆಳವಣಿಗೆಯು ಚೆನ್ನಾಗಿ ನಡೆಯುವುದು. ಇದಲ್ಲದೆ, ಮಹಾಭಾರತದಲ್ಲಿ ನಡೆಯುವ ಮದುವೆಗೆ

ಮತ್ತೊಂದು ಅಧರ್ಮದ ಸೋಂಕಿದೆ. ಅಲ್ಲಿನ ಸನ್ನಿವೇಶದಲ್ಲಿ ಶಕುಂತಲೆಯು ಹೆಚ್ಚು ಸ್ವಚ್ಛಂದಚಾರಿಣಿಯಾಗುವಳು. ಸಾಕುತಂದೆ ಕಣ್ವರ ಅಪ್ಪಣೆಯನ್ನು ಕೇಳಿ ಮದುವೆಯಾಗಲು ಅವಕಾಶವಿದ್ದರೂ ಅವರು ಹಿಂದಿರುಗುವಷ್ಟು ವಿಲಂಬವನ್ನೂ ಸಹಿಸದ ಇವರ ಕಾಮಪ್ರವೃತ್ತಿಯು ನಿಂದ್ಯವಾಗುವುದು. ಶಾಕುಂತಲದಲ್ಲಿ ಈ ದೋಷ ಮರೆಯಾಗಿದೆ. ಇಲ್ಲಿಯೂ ಕೂಡ ತಂದೆಯ ಅಪ್ಪಣೆಯಿಲ್ಲದೆ ಮದುವೆಗೆ (ಗಾಂಧರ್ವ ವಿವಾಹಕ್ಕೂ ಇದು ಅನ್ವಯಿಸುವುದು) ಒಪ್ಪಿದ್ದು ಶಕುಂತಲೆಯ ತಪ್ಪಾದರೂ ಕಣ್ವರು ಹಿಂದಿರುಗಲು ಬಹಳ ಕಾಲ ಹಿಡಿಯುವುದೆಂದು ಗೊತ್ತಿದ್ದುದರಿಂದ, ಕಾಮಬಾಧೆಯು ಅಸಹನೀಯವಾಗುವುದು ಸ್ವಾಭಾವಿಕ. ತಂದೆಯ ಅಪ್ಪಣೆಯನ್ನು ಕೇಳಬೇಕೆಂಬ ಮಾತೂ ಶಕುಂತಲೆಯಿಂದ ಬರುವುದು. ಅದಕ್ಕೆ ಮುಂಚೆ ಅವಳು ತನ್ನನ್ನು ಇವನಿಗೆ ಒಪ್ಪಿಸಲು ಒಡಂಬಡುವುದಿಲ್ಲ. ಆದರೂ ನಡೆಯಬೇಕಾದ್ದು ನಡೆದೇ ಹೋಗುವುದು. ಹೀಗೆ ಕಣ್ವರು ಸೋಮತೀರ್ಥಕ್ಕೆ ಹೋಗಿರುವಂತೆ ಸನ್ನಿವೇಶವನ್ನು ಕಲ್ಪಿಸಿರುವುದರಿಂದ ಬಹಳ ಪ್ರಯೋಜನವಾಗಿರುವುದು. ನಡೆಯುವ ಸಂಗತಿಗಳಲ್ಲಿ ಔಚಿತ್ಯವೂ, ಸ್ವಾಭಾವಿಕತೆಯೂ ಬಂದಿವೆ. ಉಪಾಖ್ಯಾನದಲ್ಲಿ ಶಕುಂತಲೆಯು ತನ್ನ ಕತೆಯನ್ನು ದುಷ್ಯಂತನಿಗೆ ತಾನೇ ಹೇಳುವಳು. ಪ್ರಿಯಂವದೆ, ಅನಸೂಯೆಯರ ನಿರ್ಮಾಣದಿಂದ ಈ ಅನೌಚಿತ್ಯವು ಹೋಗಿರುವುದು. ಹಾಗೆಯೇ ಕಣ್ವರು ಹಿಂತಿರುಗಿದಮೇಲೂ ತಾನು ಮಾಡಿದುದನ್ನೆಲ್ಲ ತಾನೇ ಅವರಿಗೆ ತಿಳಿಸಿ ಕ್ಷಮೆಬೇಡುವುದಕ್ಕೆ ಬದಲಾಗಿ ಇಲ್ಲಿ ಅವರೇ ಅವಳನ್ನು ನೋಡಿ ಗರ್ಭಚಿಹ್ನೆಗಳನ್ನು ಕಂಡು ಮಿಕ್ಕೆಲ್ಲವನ್ನೂ ಜ್ಞಾನದೃಷ್ಟಿಯಿಂದ ತಿಳಿಯುವಂತೆ ಮಾರ್ಪಡಿಸಿರುವುದು ಶ್ಲಾಘನೀಯ. ಅನಸೂಯೆ ಪ್ರಿಯಂವದೆಯರೇ ಇದನ್ನು ತಿಳಿಸಲು ಸಂಕೋಚಗೊಂಡು ಭಯದಿಂದಿರುವಾಗ ಶಕುಂತಲೆಯೇ ತಿಳಿಸುವುದೆಂದರೆ ಎಷ್ಟು ಅನೌಚಿತ್ಯ! ಉಪಾಖ್ಯಾನದಲ್ಲಿ ಶಕುಂತಲೆಯು ಮೂರು ವರ್ಷಗಳ ತರುವಾಯ ಮಗನನ್ನು ಹೆತ್ತು ಹುಡುಗನಿಗೆ ಆರು ವರ್ಷ ತುಂಬಿದ ಮೇಲೆ ದುಷ್ಯಂತನಲ್ಲಿಗೆ ಹೋಗುವಳು. ಇಷ್ಟು ದೀರ್ಘಕಾಲ ಅವಳನ್ನು ಪತಿಗೃಹಕ್ಕೆ ಕಳುಹಿಸದೆ ಇಟ್ಟುಕೊಂಡ ಕಣ್ವರ ನಡತೆಯೂ ಅಲ್ಲಿಗೆ ಹೋಗಲು ಬಯಸದೆ ತೌರುಮನೆಯಲ್ಲೇ ನಿಂತ ಶಕುಂತಲೆಯ ಮನೋಭಾವವೂ ಅರ್ಥವಾಗುವುದಿಲ್ಲ. ಇದಕ್ಕೆ ಬದಲು

ನಾಟಕದಲ್ಲಿ ಕಣ್ವರು ಹಿಂತಿರುಗಿದ ಕೂಡಲೆ ಶಕುಂತಲೆಯು ನಾಲ್ಕೈದು ತಿಂಗಳು ಗರ್ಭವತಿಯೆಂದು ತಿಳಿದು ಕೂಡಲೆ ಅವಳನ್ನು ಅವಳಿರಬೇಕಾದ ಕಡೆಗೆ ಕಳುಹಿಸುವರು. ಇದರಲ್ಲಿ ಹೆಚ್ಚು ಸ್ವರಸತೆಯಿದೆಯೆಂದು ಬೇರೆ ಹೇಳ ಬೇಕಾಗಿಲ್ಲ. ಉಪಾಖ್ಯಾನದ ಸನ್ನಿವೇಶದಲ್ಲಿ ದುಷ್ಯಂತನಂತಹ ದೊರೆಯು ಒಂಬತ್ತು ವರ್ಷ ಹಿಂದೆ ತಾನು ನಡೆಸಿದ ಒಂದು ಕಾಮುಕ ವ್ಯಾಪಾರವನ್ನು ಮರೆಯುವುದು ಹೆಚ್ಚುಕಡಿಮೆ ಸ್ವಾಭಾವಿಕವೇ ಆಗುವುದು. ಆದರೆ ಇಲ್ಲಿ ಕೇವಲ ಕೆಲವು ತಿಂಗಳ ಅವಧಿಯಲ್ಲೇ ಶಕುಂತಲೆಯ ನೆನಪು ಹೋಗ ಬೇಕಾಗುವುದು. ಅದಕ್ಕೇ ಶಾಪದ ಯೋಜನೆ. ಇದು ವಿನಹ ಮರ ವೆಂದರೆ ದೌರ್ಜನ್ಯವೇ ಆಗುತ್ತಿತ್ತು. ಮತ್ತು ಗರ್ಭಿಣಿಯಾಗಿರುವಾಗ ಪತಿ ಗೃಹಕ್ಕೆ ಬರುವ ಸನ್ನಿವೇಶದಿಂದ ಇದಕ್ಕೆ ತಕ್ಕಂತೆ ಕಡೆಗೆ ಹೇಮಕೂಟದಲ್ಲಿ ಪುನಸ್ಸಮಾಗಮವಾಗುವ ವೇಳೆಗೆ ಸರ್ವದಮನನಿಗೆ ಸುಮಾರು ಐದಾರು ವರ್ಷ ಮಾತ್ರ ಆಗಿರುವಂತೆ ಏರ್ಪಡಿಸಲು ಅನುಕೂಲವಾಗಿದೆ. ಇದರಿಂದ ಪುನಸ್ಸಮಾಗಮವು ಮಿತಿಮೀರಿ ವಿಲಂಬಹೊಂದದಂತೆ ಆಗಿದೆ. ಪುತ್ರನ ಆಟಪಾಟಗಳನ್ನು ನೋಡಿ ಸಂತೋಷಪಡುವುದು ಆಗಲೂ ಪತಿ ಪತ್ನಿಯರಿಗೆ ಸಾಧ್ಯವಾಗುವಂತಾಗಿದೆ. ಮಿಕ್ಕ ಮಾರ್ಪಾಟುಗಳನ್ನೆಲ್ಲ ಮೇಲೆ ನಿರೂಪಿಸಿ ದವುಗಳಿಗಾಗಿಯೇ ಮಾಡಬೇಕಾಗಿ ಬಂದಿದೆ.

ನಾಟಕದ ವಿಮರ್ಶೆಯಲ್ಲಿ ಈಗಾಗಲೇ ಸ್ವಲ್ಪ ಮುಂದೆ ಸಾಗಿದ್ದೇವೆ. ವಿಶದವಾಗಿ ಪ್ರತಿಯೊಂದು ಪಾತ್ರದ, ಸಂಭಾಷಣೆಯ ಮತ್ತು ಸನ್ನಿವೇಶದ ಸ್ವಾರಸ್ಯವನ್ನೂ ಪರಿಶೀಲಿಸುವುದು ಕಷ್ಟಸಾಧ್ಯ. ಒಟ್ಟಿನಲ್ಲಿ ನಾಟಕದಿಂದ ಕವಿಯು ಯಾವ ಅಭಿಪ್ರಾಯವನ್ನು ಹೊರಪಡಿಸಿರುತ್ತಾನೆ? ಆ ಅಭಿಪ್ರಾಯವು ರಮ್ಯವಾದುದೇ? ಅದನ್ನು ನಿರೂಪಿಸಿರುವ ರೀತಿಯಲ್ಲಿ ಸೌಂದರ್ಯವಿದೆಯೇ? ಕಲಾದೃಷ್ಟಿಯಿಂದ ವಸ್ತು ಮತ್ತು ರಚನಾಕ್ರಮಗಳು ಮನಸ್ಸಿಗೆ ಒಪ್ಪು ತ್ತವೆಯೇ? ಸಹೃದಯರಿಗೆ ಇದರಿಂದ ಅಲೌಕಿಕಾನಂದವು ಲಭಿಸುವುದೇ? ಎಂಬೀ ವಿಚಾರಗಳನ್ನು ವಿಮರ್ಶಿಸಿದರೆ ಸಾಕು. ಕವಿಯ ಭಾವವನ್ನು ಗ್ರಹಿಸಿ ಆ ಭಾವವು ಕಾವ್ಯದಿಂದ ರಮ್ಯವಾಗಿ ಹೊರಪಡುವುದೇ ಇಲ್ಲವೇ ಎಂದು ನೋಡುವುದೇ ವಿಮರ್ಶೆಯ ಮುಖ್ಯ ಕೆಲಸ. ಪ್ರಕೃತ, ಶಾಕುಂತಲ ದಲ್ಲಿ ನಿರೂಪಿಸಲಾಗಿರುವ ಭಾವವೇನೆಂಬುದನ್ನು ತಕ್ಕಮಟ್ಟಿಗೆ ಮೇಲೆ

ತಿಳಿಸಿದೆ. ಆದರೂ ಮಹಾಕವಿಯ ಕಾವ್ಯರತ್ನದ ಸೌಂದರ್ಯವನ್ನು ಮಹಾಕವಿಗಳ ಮಾತಿನಿಂದ ವಿವರಿಸುವುದೇ ಲೇಸು. ಸುಪ್ರಸಿದ್ಧ ಜರ್ಮನ್ ಕವಿ ವಿಮರ್ಶಕ ಗೇಟೆಯ ಸೂತ್ರರೂಪವಾದ ಪ್ರಶಂಸೆಯನ್ನು[1] ಯಾರು ತಾನೆ ಮರೆಯಲು ಸಾಧ್ಯ. ಅದರಲ್ಲಡಗಿರುವ ಅಭಿಪ್ರಾಯವನ್ನು ಆಧುನಿಕ ಭಾರತದ 'ಕಾಳಿದಾಸ' ರವೀಂದ್ರನಾಥ ಠಾಕೂರರು ಹೆಚ್ಚು ಕ್ರಾಂತದೃಷ್ಟಿಯಿಂದ ಮನಗಂಡು ವಿವರಿಸಿರುತ್ತಾರೆ. "ತರುಣ ವತ್ಸರದ ಪುಷ್ಪ, ಪರಿಣತ ವತ್ಸರದ ಫಲ; ಸ್ವರ್ಗ ಮರ್ತ್ಯಗಳ ಸಮಾಗಮ"—ಇದಕ್ಕೆ ಶಾಕುಂತಲವು ಹೆಚ್ಚು ಉಪಾದೇಯವೆಂಬ ಅತಿಶಯೋಕ್ತಿಯಲ್ಲಿ ಮಾತ್ರ ತಾತ್ಪರ್ಯವಿಲ್ಲ. ವಾಸ್ತವವಾಗಿಯೂ ಶಾಕುಂತಲದಲ್ಲಿ ಗಂಭೀರವಾದ ಪರಿಣತಿಯ ಭಾವವಿದೆ. ಕಾಯಿಕ ಸೌಂದರ್ಯವನ್ನಾಶ್ರಯಿಸಿ ಉದಯಿಸುವ ಪ್ರೇಮಕ್ಕೆ ಮಂಗಳಕರವಾದ ಆತ್ಮಸೌಂದರ್ಯದ ಅಕ್ಷಯ ಸ್ವರ್ಗಧಾಮವೇ ಧ್ಯೇಯ — ಈ ಎರಡು ಲೋಕಗಳಲ್ಲಿ ಒಂದರ ಎಲ್ಲೆಯನ್ನು ದಾಟಿ ಮತ್ತೊಂದರೊಳಕ್ಕೆ ಪ್ರವೇಶಿಸಿದೆವೆಂದು ಪಾಠಕರು ಗಮನಿಸುವುದಕ್ಕೇ ಸಾಧ್ಯವಿಲ್ಲದಷ್ಟು ಚಮತ್ಕಾರದಿಂದ ಕವಿಯು ಎರಡನ್ನೂ ಬೆರಸಿರುವನು. ಸ್ವಾಭಾವಿಕ ವರ್ತನವೂ ಆತ್ಮಸಂಯಮವೂ ಪರಸ್ಪರ ವಿರುದ್ಧವಲ್ಲವೆಂದೂ ಉಚ್ಛೃಂಖಲವಾದ ಕಾಮಕ್ರೋಧಗಳೆಬ್ಬಿಸುವ ಶೋಕಾಗ್ನಿ ಪರ್ವತಗಳನ್ನು ಪಶ್ಚಾತ್ತಾಪದ ಕಣ್ಣೀರಿನಿಂದ ಆರಿಸಬಹುದೆಂದೂ ಈ ನಾಟಕವು ನಿದರ್ಶಿಸುವುದು. ಬಾಹ್ಯ ಸಾಧನದಿಂದ ಮೊಳೆತ ವಿಷವೃಕ್ಷವನ್ನು ಅಂತಶ್ಶಕ್ತಿಯಿಂದ ಬುಡಮಟ್ಟ ಮಾಡಬಹುದು. ಪ್ರೇಮವು ಸ್ವಾರ್ಥೈಕಪರವಾದರೆ ಶ್ಲಾಘ್ಯವಲ್ಲ; ಸೌಶೀಲ್ಯವನ್ನಾಶ್ರಯಿಸಿ ಮಕ್ಕಳು, ಅತಿಥಿಗಳು, ನೆರೆಹೊರೆಯವರು ಮುಂತಾದವ

---

1. "Wouldst thou the young year's blossoms
and the fruits of its decline,
And all by which the soul is charmed,
enraptured, feasted and fed,
Wouldst thou the Earth and Heaven itself
in one sole name combine?
I name thee, O, S'âkuntala! and all at once is said.

ಈಸ್ಟ್‌ವಿಕ್‌ರವರ ಆಂಗ್ಲ ಭಾಷಾಂತರ.

ರೊಡನೆ ವರ್ತಿಸಿ ಸದ್ವೃತ್ತ ಪರೋಪಕಾರಗಳಲ್ಲಿ ಪರಿಣಮಿಸಬೇಕೆಂಬುದೇ ಶಾಕುಂತಲದ ರಹಸ್ಯ.[1]

ನಾಟಕದಿಂದ ಧ್ವನಿತವಾಗುವ ಈ ಅರ್ಥವನ್ನು ಗ್ರಹಿಸಿದರೆ ಉಳಿದ ಸನ್ನಿವೇಶಗಳೆಲ್ಲ ಇದರ ಅಭಿವ್ಯಕ್ತಿಗೆ ಹೇಗೆ ಸಹಕರಿಸಿವೆಯೆಂದು ಸುಲಭವಾಗಿ ಮನಗಾಣಬಹುದು. ಇದನ್ನು ಬಿಟ್ಟಲ್ಲಿ ಪ್ರತಿಯೊಂದು ಅಂಕದಲ್ಲೂ ಪ್ರತಿಯೊಂದು ಸನ್ನಿವೇಶದಲ್ಲೂ ಒಂದು ವಿಧವಾದ ಚಮತ್ಕಾರವನ್ನೂ ಸ್ವಾಭಾವಿಕವಾದ ರಮ್ಯತೆಯನ್ನೂ ಕಾಣಬಹುದೇ ಹೊರತು ಅಲೌಕಿಕ ರಸಾಸ್ವಾದವನ್ನು ಹೊಂದುವಂತಿಲ್ಲ. ಒಟ್ಟು ಪ್ರಬಂಧದ 'ಧ್ವನಿ' ಗೆ ಹೇಗೆ ಒಂದೊಂದು ಅಂಶವೂ ಸಹಕರಿಸಿರುವುದೆಂಬುದನ್ನು ವಿಮರ್ಶಿಸಿದರೆ ಕವಿಯ ಕೌಶಲವನ್ನು ಅರಿತಂತಾಗುವುದು ಸಂವಿಧಾನ ಕೌಶಲ, ರಚನಾವೈಚಿತ್ರ್ಯ, ಇವುಗಳನ್ನು ವಿಮರ್ಶಿಸಲು ಇದೊಂದೇ ಒರೆಗಲ್ಲು.

ಶಾಕುಂತಲದಿಂದ ಹೊರಪಡುವ ಅರ್ಥವು ರಮ್ಯತಮವಾದುದೆಂದು ಬೇರೆ ಹೇಳಬೇಕಾಗಿಲ್ಲ. 'ಪ್ರೇಮ' ವೆಂಬುದು ಮಾನುಷ ಜೀವನದ ಅರ್ಥ

---

1. The inner meaning of 'S'ákuntala' Rabindranath Tagore; also Pracina Sâhitya S'ákuntala; ಮೊದಲಿನ ಪ್ರಶಂಸೆಯನ್ನು ಬರೆದ ಸುಮಾರು ನಲವತ್ತು ವರ್ಷಗಳ ಮೇಲೆ ಮತ್ತೊಂದು ಸಂದರ್ಭದಲ್ಲಿ ವೃದ್ಧನಾದ ಗೇಟೆಯು ಹೀಗೆ ಬರೆದಿರುವನು— "The first time that I became aware of this unfathomable work... it attracted me to such a degree that I...... allowed myself to be carried even to the impossible undertaking...of adapting it to the German stage......I easily recollect even now the transcendental impression which this work first created on me. The poet here appears to us in his highest function as the representative of the most natural condition of the most beautiful ways of life, of the purest moral effort, of the worthiest majesty, of the most sincere contemplation." (Hillebrandt—'Kālidāsa, p. 79; Winternitz—Gesh. Ind. Lit. III. p. 214 ಗಳಲ್ಲಿ ಉದ್ಧೃತವಾಗಿರುವ ಜರ್ಮನ್ ಮೂಲದ ಸ್ವಕೃತ ಆಂಗ್ಲ ಭಾಷಾಂತರ.)

ಭಾಗವೆಂದೇ ಹೇಳಬಹುದು. ಇದಕ್ಕೆ ಸಂಬಂಧಿಸಿದ ಯಾವುದೊಂದು ತತ್ವವೂ ಸಮಗ್ರ ಪ್ರಪಂಚಕ್ಕೇ ಉಪಾದೇಯವಾಗುವುದರಲ್ಲಿ ಸಂದೇಹವಿಲ್ಲ. ಪ್ರೇಮದ ಪರಿಶುದ್ಧಿಯೆಂಬುದು ಇಡಿಯ ಪ್ರಪಂಚಕ್ಕೆ ಆದರ್ಶಪ್ರಾಯವಾಗಲು ಅರ್ಹ. ವ್ಯಕ್ತಿಮಾತ್ರವನ್ನು ಆಶ್ರಯಿಸಿದ, ಸಂಕುಚಿತವಾದ, ಸ್ವಾರ್ಥೈಕಪರ ವಾದ ವೈಷಯಿಕ ಪ್ರೇಮವು ಮಾನುಷ ಪ್ರಪಂಚದ ಸಾಮಾನ್ಯ ವಸ್ತುಸ್ಥಿತಿ ಯೆನ್ನಬಹುದು. ಪ್ರೇಮವು ಹೀಗಿರುವುದರಿಂದಲೇ ಸಾಮಾಜಿಕ ಆವಶ್ಯಕತೆ ಗಳಿಗಾಗಿ ಅಂಗೀಕರಿಸಬೇಕಾದ ಧರ್ಮ, ಮೈತ್ರಿ ಮೊದಲಾದುವುಗಳೊಡನೆ ಸಂಘರ್ಷಕ್ಕೆ ಬರುವುದು ಸ್ವಾಭಾವಿಕವಾಗಿದೆ. ವ್ಯಕ್ತಿಜೀವನ, ಸಮಾಜ ಜೀವನಗಳ ತಿಕ್ಕಾಟವು ಅಪರಿಹಾರ್ಯವೆಂದು ತೋರುವುದೂ ಸ್ವಾಭಾವಿಕ. ಈ ಕಠಿನ ಸಮಸ್ಯೆಯನ್ನು ಪರಿಹರಿಸಲು ಒಂದೇ ಮಾರ್ಗ. ಪ್ರೇಮವನ್ನು ಎಂದರೆ ವೈಯಕ್ತಿಕವಾದ, ವೈಷಯಿಕ ಪ್ರೇಮವನ್ನು ಪರಿಶುದ್ಧಿಗೊಳಿಸಿ ಸಮಾಜಜೀವನವು ಮಂಗಳಕರವಾಗಿ ನಡೆಯುವಂತೆ ಮಾರ್ಪಡಿಸುವುದೇ ಅವಶ್ಯಕರ್ತವ್ಯ. ಪ್ರೇಮದ ವೈಷಯಿಕತೆ, ಕಾಯಿಕತ್ವ, ಸಂಕುಚಿತ ಸ್ವರೂಪ ಗಳು ಹೋದಲ್ಲಿ ಇದು ಸಾಧ್ಯವಾಗುವುದು. ಆತ್ಮಪ್ರೇಮದಲ್ಲಿ ಪರ್ಯವಸಾನ ಹೊಂದುವ ಶುದ್ಧಪ್ರೇಮವು ಯಾರಿಗೂ ಹಾನಿಕರವಲ್ಲ. ಹೀಗಾದಲ್ಲಿ ಪ್ರೇಮಕ್ಕೂ ಇತರ ಅಂಶಗಳಿಗೂ ತಿಕ್ಕಾಟವು ಒದಗುವುದಿಲ್ಲ. ಸಾಮಾಜಿಕ ಜೀವನವು ಸುಗಮವಾಗಿ ಮಂಗಳಕರವಾಗುವುದು. ಈ ಅಂಶವನ್ನು ಹೊರ ಪಡಿಸುವುದರಿಂದ ಶಾಕುಂತಲಪ್ರಬಂಧದ ವ್ಯಂಗ್ಯಾರ್ಥವು ಸರ್ವರಿಗೂ ರಮ್ಯ ವಾಗಿ ತೋರಿರುವುದು.

ಈ ಉದಾತ್ತ ಧ್ಯೇಯವನ್ನು ಮುಂದಿಡುವುದಕ್ಕೆ ಕವಿಯು ಆರಿಸಿರುವ ಚೌಕಟ್ಟು ಅತ್ಯುತ್ತಮವಾದುದು. ಶಕುಂತಲೆ ದುಷ್ಯಂತರ ವೈಯಕ್ತಿಕ ಸ್ವಭಾವವೇ ಬಹಳಮಟ್ಟಿಗೆ ಈ ಕತೆಗೆ ಹೊಂದಿಕೊಂಡಿದೆ. ಶಕುಂತಲೆಯು ವಿಶ್ವಾಮಿತ್ರಮೇನಕೆಯರ ಪುತ್ರಿ. ತಪೋನಿರತನಾದ ವಿಶ್ವಾಮಿತ್ರನನ್ನು ಮೋಹಗೊಳಿಸಿದ ದೇವಲೋಕದ ಸೌಂದರ್ಯ, ಔಜ್ವಲ್ಯಗಳು ಅವಳಲ್ಲಿವೆ. ಇತ್ತ ಬ್ರಹ್ಮಪಟ್ಟಕ್ಕಾಗಿ ಶ್ರಮಿಸುತ್ತ ಕಠೋರತಪಸ್ಸಿನಲ್ಲಿ ನಿರತನಾಗಿದ್ದ ವಿಶ್ವಾಮಿತ್ರನ ಕ್ಷಾತ್ರತೇಜಸ್ಸು, ಬ್ರಾಹ್ಮಣಸಹಜವಾದ ಸಂಯಮಕಾಂಕ್ಷೆ ಗಳೂ ಅವಳ ಪಿತ್ರಾರ್ಜಿತ ಸ್ವತ್ತು. ಆದರೆ ಅವಳದು ತಪೋವಿಘ್ನದಿಂದ

ಹುಟ್ಟಿದ ವಿಚಿತ್ರಮೂರ್ತಿ. ಹುಟ್ಟಿದ ಕೂಡಲೆ ಪರಿತ್ಯಕ್ತಳಾಗಿ ತೊಂದರೆಗೊಳಗಾದರೂ ಅವಳಿಗೆ ಬ್ರಾಹ್ಮವಾತಾವರಣದ ಸಂಪರ್ಕವೇ ಏರ್ಪಟ್ಟು ಕಣ್ವಾಶ್ರಮವನ್ನೇ ಸೇರಬೇಕಾಯಿತು. ತಂದೆಯ ಆಸೆಯು ಮಗಳಲ್ಲಿ ಕೈಗೂಡಿದ ಹಾಗಾಯಿತು. ಆದರೆ ಇದು ಶಾಶ್ವತವಾಗಲಿಲ್ಲ. ಲತೆಗಳೊಡನೆ ಲತೆಯಾಗಿ ಹೂವುಗಳೊಡನೆ ಹೂವಾಗಿ ಕಣ್ವಾಶ್ರಮದ ಪವಿತ್ರ ವಾತಾವರಣದಲ್ಲಿ ಬೆಳೆದರೂ ಮರ್ತ್ಯಸಹಜವಾದ ಕಾಮವಿಕಾರವು ಇವಳನ್ನು ಬಿಡುವುದಿಲ್ಲ. ತಪಸ್ಸು ಬ್ರಹ್ಮಚರ್ಯಗಳ ನೆಲೆಯಲ್ಲೂ ಯೌವನದ ಪ್ರಭಾವವು ಕಡಿಮೆಯಾಗುವುದಿಲ್ಲ. ಇದಕ್ಕಾಗಿ ಯಾರನ್ನೂ ಆಕ್ಷೇಪಿಸುವಂತಿಲ್ಲ. ಎಲ್ಲ ಪ್ರಕೃತಿನಿಯಮ. ಗಯಟೆಯವರ ಮಾತಿನಲ್ಲಿ ಇದು 'ಅತಿರಮ್ಯವಾದ ಜೀವನಕ್ರಮಗಳ ಅತಿಸ್ವಾಭಾವಿಕವಾದ ಒಂದು ಸ್ಥಿತಿ.' ಕಾಲಕ್ರಮದಲ್ಲಿ ಅವಳಿಗೇ ತಿಳಿಯದಂತೆ ಯೌವನವು ಅವಳನ್ನು ಅಲಂಕರಿಸುವುದು. ರಸಿಕಸಖಿಯರೊಡನೆ ಕಲೆತ ಅವಳ ಮೃದುಚೇತನವು ಯಾವ ಕಷ್ಟಕ್ಕೂ ತಕ್ಕುದಲ್ಲವೆಂಬ ಭಾವನೆ ಬರುವುದು. ಆ ಸಮಯದಲ್ಲೇ ನಾಟಕದ ಕತೆ ಪ್ರಾರಂಭವಾಗುವುದು. ಅನಾಘ್ರಾತವಾದ ಪುಷ್ಪವಾಗಿದ್ದ ಶಕುಂತಲೆಯ ಉಪಭೋಗಕ್ಕೆ ಪ್ರಕೃತಿಯೇ ಸಿದ್ಧಗೊಳಿಸುತ್ತಿರುವಂತೆ ನಾಟಕದ ಮೊದಲಲ್ಲೇ ರಮ್ಯವಾದ ವಾತಾವರಣದ ವರ್ಣನೆ ಕಾಣಬರುವುದು. ಉಪಭೋಗಪರತೆ, ಉಪಭೋಗಕ್ಷಮತೆಗಳ ಪ್ರಸ್ತಾಪವೇ ಹೆಚ್ಚು. ಎಷ್ಟು ಔಚಿತ್ಯವಿದೆಯೆಂದು ಸುಲಭವಾಗಿ ಊಹಿಸಬಹುದು. ದುಷ್ಯಂತನು ಬೇಟೆಗಾಗಿ ಬರುವನು. ಉತ್ತಮವಂಶದ ದೊರೆ, ತಪಸ್ವಿಗಳನ್ನು ಕಂಡರೆ ಗೌರವ, ರಾಜಕಾರ್ಯದಲ್ಲಿ ಆಸಕ್ತಿ, ಶ್ರದ್ಧೆ, ಮೊದಲಾದ ಗುಣಗಳು ಇವನನ್ನು ಆದರಕ್ಕೆ ಪಾತ್ರನನ್ನಾಗಿ ಮಾಡುವುವು. ಬೇಟೆಯಾದರೂ ಜಿಂಕೆಯ ಬೇಟೆ. ಮೃದುಸ್ವಭಾವವುಳ್ಳ, ಸುಂದರವಾದ ಸಾಧುಮೃಗ. ಇತರ ಸಂದರ್ಭದಲ್ಲಿ ದೊರೆಯ ಶೌರ್ಯಕ್ಕೆ ಕಳಂಕ ತರುವಂತಹುದಾದರೂ ಪ್ರಕೃತ ಸನ್ನಿವೇಶದಲ್ಲಿ ಅತ್ಯುತ್ತಮವಾದ ಸಂವಿಧಾನವೆನ್ನಿಸುವುದು. ಆಶ್ರಮದ ನೆರವಿನಲ್ಲಿ ಜಿಂಕೆಯಾದರೇನು? ಹುಲಿಯಾದರೇನು? ಎಲ್ಲ ಸಾಧುಪ್ರಾಣಿಗಳೇ. ದೊರೆಯ ಬಾಣದ ಎಲ್ಲೆಯಲ್ಲಿ ಅದು ಸಿಕ್ಕಿಬೀಳುವುದು. ಇನ್ನೇನು ಹೊಡೆಯಬೇಕೆನ್ನುವಷ್ಟರಲ್ಲಿ ತಾಪಸರು ಬಂದು ಅವನನ್ನು ತಡೆಯಲಾಗಿ ಪ್ರಾಣಿಯ ಜೀವವುಳಿಯುವುದು. ಒಟ್ಟಿನಲ್ಲಿ ಇದೆಲ್ಲ

ಶಕುಂತಲೆಯ ಭವಿಷ್ಯವನ್ನೇ ಸೂಚಿಸುತ್ತದೆ. ಶಕುಂತಲೆಯ ಮೃದುವಾದ ಜೀವವೂ, ದೊರೆಯ ಮನ್ಮಥಬಾಣಕ್ಕೆ ಸಿಕ್ಕಿಬೀಳುವುದು. ಆದರೂ ಅದೃಷ್ಟ ವಶದಿಂದ ಅದರ ತೀಕ್ಷ್ಣತೆಯು ಶಕುಂತಲೆಯ ಜೀವನಕ್ಕೆ ಕುಂದುತರದೆ ಮಂಗಳಕರವಾಗಿ ಪರಿಣಮಿಸುವುದು. ಹೀಗೆ ಸಾಮಾನ್ಯವಾದ ಒಂದು ಬೇಟೆಯ ಸನ್ನಿವೇಶ ಕಲ್ಪನೆಯಲ್ಲೂ ವ್ಯಂಗ್ಯಮರ್ಯಾದೆಯಿಂದ ಕವಿಯು ನಾಯಿಕೆಯ ಭವಿಷ್ಯಾರ್ಥ ಸೂಚನೆಯನ್ನು ಮಾಡಿರುವುದು ರಂಜಕವಾಗಿದೆ. ದುಷ್ಯಂತ ಶಕುಂತಲೆಯರ ಪ್ರಥಮ ಸಮಾಗಮವೂ ಬಹಳ ಕೌಶಲದಿಂದ ನೆರವೇರಿಸಿದುದಾಗಿದೆ. ಇಂತಹ ಸನ್ನಿವೇಶಗಳಲ್ಲಿ ಪಾತ್ರಗಳ ಅಸಭ್ಯವರ್ತನೆ ಯಿಂದ ನಾಟಕವು ಹದಗೆಡುವುದು ಸ್ವಾಭಾವಿಕ. ಆದರೆ ಕಾಳಿದಾಸನ ರಚನಾಕೌಶಲವು ಅದಕ್ಕೆಡೆಗೊಟ್ಟಿಲ್ಲ. ದುಷ್ಯಂತನು ಮರೆಯಲ್ಲಿ ನಿಂತು ಯುವತಿಯರ ಆಲಾಪವನ್ನು ಕೇಳುವುದು ಸರಿಯೆ? ಎನ್ನಿಸಬಹುದು. ಆ ಸನ್ನಿವೇಶದಲ್ಲಿ ಅದು ಉಚಿತವಾಗಿದೆ. ಆಶ್ರಮಕ್ಕೆ ಹೋಗಿ ಆತಿಥ್ಯದಲ್ಲಿ ನಿಯುಕ್ತಳಾಗಿದ್ದ ಕಣ್ವಕುವರಿಗೆ ತನ್ನ ಪ್ರಣಾಮವನ್ನು ತಿಳಿಸಿಬರಬೇಕೆಂದು ಅವನ ಆಸೆ. ಶಕುಂತಲೆಯು ಆಶ್ರಮದಲ್ಲೇ ಇದ್ದಿದ್ದರೆ ಆ ಕೆಲಸವು ತಡ ವಿಲ್ಲದೆ ನಡೆಯುತ್ತಿತ್ತು. ಆದರೆ ಶಕುಂತಲೆಯು ದಾರಿಯಲ್ಲೇ ಸಿಕ್ಕಿ ಸಖಿಯ ರೊಡನೆ ಸಲ್ಲಾಪ ಮಾಡುತ್ತಿದ್ದಾಗ ತಟ್ಟನೆ ಎದುರಿಗೆ ನಿಂತು ಅವರ ಸ್ವೇಚ್ಛಾ ವಿಹಾರಕ್ಕೆ ಕುಂದು ತರಕೂಡದೆಂದು ಮರೆಯಲ್ಲೇ ನಿಂತು ಅವರನ್ನು ನಿರೀಕ್ಷಿಸ ಬೇಕಾಯಿತು. ಅವರ ಮಾತು ಕತೆಗಳೂ ಸರಸವಾಗಿದ್ದವು. ಶಕುಂತಲೆಯ ರೂಪ ವಿಲಾಸಗಳೂ ಅವನ ಮನಸ್ಸನ್ನು ಆಕರ್ಷಿಸಿದವು. ಪ್ರೇಮವು ಅಂಕುರಿಸಿತು. ಅಷ್ಟರಲ್ಲೇ ಮನಸ್ಸು ಅಳುಕಿತು. ಋಷಿಕುವರಿಯ ವಿಷಯದಲ್ಲಿ ಆ ಭಾವನೆಯು ತಪ್ಪೆನಿಸಿತು. ಆದರೆ ಅವಳು ಋಷಿಕುವರಿ ಹೇಗಾದಾಳು? ಆಜನ್ಮಬ್ರಹ್ಮಚಾರಿಗಳಾದ ಕಣ್ವರಿಗೆ ಪುತ್ರಿಯೆಂದರೇನು? ಆದುದರಿಂದ ತನ್ನ ಪ್ರೇಮಕ್ಕೆ ಪಾತ್ರಳಾಗಿದ್ದರೂ ಇರಬಹುದು; ಇಲ್ಲದಿದ್ದಲ್ಲಿ ತನ್ನ ಆರ್ಯಮನಸ್ಸಿನಲ್ಲಿ ಆ ಭಾವನೆ ಹುಟ್ಟುತ್ತಲೇ ಇರಲಿಲ್ಲ ಎನ್ನಿಸಿತು. ಎಷ್ಟು ವಿಶ್ವಾಸ ಅವನಿಗೆ ತನ್ನ ಮನಸ್ಸಿನ ಶುದ್ಧತೆಯಲ್ಲಿ? ಇಂತಹ ಮನಸ್ಸು ಆಕಸ್ಮಿಕವಾಗಿಯಾದರೂ ಅವಳಲ್ಲಿ ಅನುರಕ್ತವಾಗುವುದು ಸಹಜ, ಮತ್ತು ಸರಿಯೆನ್ನಿಸುವುದು. ಎಲ್ಲ ಸ್ವಾಭಾವಿಕವಾದ ನಡವಳಿಕೆಯೇ ಆಗಿದೆ. ಸ್ವಲ್ಪ

ವಾದರೂ ಅಸಂಭವ, ಅನೌಚಿತ್ಯಗಳಿಲ್ಲ. ಒಳ್ಳೆಯ ಸಮಯವನ್ನು ನೋಡಿ ದೊರೆಯು ಅವರಿಗೆ ಕಾಣಿಸಿಕೊಳ್ಳುವನು; ಶಕುಂತಲೆಯ ವಿಷಯವನ್ನೆಲ್ಲ ಕೇಳಿ ಮನಸ್ಸನ್ನು ದೃಢಪಡಿಸಿಕೊಳ್ಳಲೆಂದು ದುಂಬಿಯ ನಡವಳಿಕೆಯು ದುಷ್ಯಂತನ ಪ್ರವೇಶಕ್ಕೆ ಅವಕಾಶವನ್ನು ಕಲ್ಪಿಸುವುದು. ಶಕುಂತಲೆಯ ಸಾಧುಸ್ವಭಾವವು ದುಂಬಿಯ ಹಾವಳಿಯನ್ನೂ ನಿವಾರಿಸಲಾರದೆ ಸಖಿಯರ ಸಹಾಯವನ್ನು ಕೋರುವುದು. ಪ್ರಿಯಂವದೆಯು ಅಪಹಾಸ್ಯ ಮಾಡುವುದಕ್ಕೇ ಎನ್ನುವಂತೆ "ದುಷ್ಯಂತನನ್ನು ಕೂಗು; ಆಶ್ರಮದವರೆಲ್ಲ ರಾಜನಿಂದತಾನೆ ರಕ್ಷಿಸಲ್ಪಡಬೇಕು" ಎನ್ನುವಳು. "ಅಯ್ಯೋ! ಎಂತಹ ತೊಂದರೆ; ನಮ್ಮಿಂದ ಸಾಧ್ಯವೆ ನಿವಾರಿಸುವುದಕ್ಕೆ; ಇಷ್ಟಕ್ಕಾಗಿ ನಮ್ಮನ್ನು ಕೂಗಿದೆಯಲ್ಲ" ಎಂದು ಅಪಹಾಸ್ಯದಲ್ಲಿ ತಾತ್ಪರ್ಯ.

ದುಷ್ಯಂತನು ಕಾಣಿಸಿಕೊಂಡ ಕೂಡಲೆ ಮೂವರೂ ಗಾಬರಿಗೊಳ್ಳುವರು. ಅವರಲ್ಲಿ ಹೆಚ್ಚು ಔಚಿತ್ಯವನ್ನರಿತ ಅನಸೂಯೆಯು ಸಣ್ಣಮಾತಿನಲ್ಲಿ ದೊರೆಗೆ ಉತ್ತರಕೊಟ್ಟು ಶಕುಂತಲೆಯನ್ನು ಆತಿಥ್ಯಕ್ಕೆ ಸಿದ್ಧಪಡಿಸಬೇಕೆಂಬ ನೆಪದಿಂದ ಆಶ್ರಮಕ್ಕೆ ಕಳುಹಿಸಲು ಪ್ರಯತ್ನಿಸುವಳು. ಮೂವರೂ ಆಶ್ರಮದ ವಾತಾವರಣದಲ್ಲಿ ಬೆಳೆದು ಲಜ್ಜೆ, ಭೀರುತ್ವಗಳಿಂದ ಕೂಡಿದವರು. ಆದುದರಿಂದ ಮೊದಮೊದಲು ಅವರಲ್ಲಿ ಧೈರ್ಯ, ಸಲ್ಲಾಪೋನ್ಮುಖತೆಗಳು ಅಷ್ಟಿಲ್ಲ. ಅತಿಥಿಸತ್ಕಾರವೇ ಅವರ ಮುಖ್ಯ ಆಶಯವಾಗಿತ್ತು. ಮಾನ್ಯ ಅತಿಥಿಯು ಮತ್ತಾವ ಸಡಗರವನ್ನೂ ಸತ್ಕಾರವನ್ನೂ ಬಯಸದೆ ಅವರ ಮಾತಿನಿಂದಲೇ ಸತ್ಕಾರ ಹೊಂದಿದವನಾಗಲು ಅವರಿಗೂ ಇವನ ಸೌಜನ್ಯವನ್ನು ನೋಡಿ ಸಂತೋಷವಾಗುವುದು. ಅನಸೂಯೆಗಿಂತ ಹೆಚ್ಚು ಅಭಿಮುಖಳಾದ ಪ್ರಿಯಂವದೆಯು ಇನ್ನೂ ಹೆಚ್ಚಿನ ಸತ್ಕಾರಕ್ಕೆ ಎಂದರೆ ಸಲ್ಲಾಪಕ್ಕೆ ಅವಕಾಶವನ್ನೊದಗಿಸುವಳು. ಈ ವೇಳೆಗೆ ದೊರೆಯ ಗಂಭೀರಾಕೃತಿ, ಸರಳತೆ, ಸೌಜನ್ಯಗಳು ಎಲ್ಲರ ಮನಸ್ಸನ್ನೂ, ವಿಶೇಷವಾಗಿ ಶಕುಂತಲೆಯ ಮನಸ್ಸನ್ನು, ಸೆಳೆದಿರುವುವು. ಮಾತು ಬೆಳೆಯುತ್ತ ಬೆಳೆಯುತ್ತ ಶಕುಂತಲೆಯಲ್ಲಿ ದುಷ್ಯಂತಪ್ರೇಮವು ಬೆಳೆಯುವುದು. ಅತಿಥಿಯು ದೊರೆಯೆಂದು ತಿಳಿಯುವುದಕ್ಕೆ ಮುಂಚೆಯೇ ಶಕುಂತಲೆಯಲ್ಲಿ ಪ್ರೇಮವು ಅಂಕುರಿಸಿರುವಂತೆ ನಿರ್ವಹಿಸಿರುವುದರಿಂದ ಶಕುಂತಲೆಯ ಪಾತ್ರರಚನೆಗೆ ಹೆಚ್ಚಾದ ಸಹಾಯವಾಗಿದೆ. ಮೂಲಕತೆಯಲ್ಲಿ

ನಡೆದಿರುವಂತೆ ಮಹಿಷೀಪಟ್ಟಕ್ಕಾಗಿ ಆಸೆಪಟ್ಟು ಶಕುಂತಲೆಯು ಇವನನ್ನು ಪ್ರೀತಿಸುವುದಿಲ್ಲವೆಂಬುದು ವ್ಯಕ್ತವಾಗಿದೆ. ಇವರ ಪ್ರೇಮವು ನಿಷ್ಕಳಂಕವೆನ್ನುವುದಕ್ಕೆ ಇದೂ ಒಂದು ಕಾರಣ. ದುಷ್ಯಂತನಲ್ಲಿ ಕ್ರಮವಾಗಿ ಸಂಶಯಗಳೆಲ್ಲ ಮಾಯವಾಗುತ್ತ ಶಕುಂತಲೆಯನ್ನು ಮದುವೆಯಾಗಲು ಸಾಧ್ಯವೆಂಬ ಭಾವನೆ ಬರುವುದು.

" ಭವ ಹೃದಯ ಸಾಭಿಲಾಷಂ ಸಂಪ್ರತಿ ಸಂದೇಹನಿರ್ಣಯೋ ಜಾತಃ |
ಆಶಂಕಸೆ ಯದಗ್ನಿಂ ತದಿದಂ ಸ್ಪರ್ಶಕ್ಷಮಂ ರತ್ನಮ್ " || (I-27)

ಎಂಬ ಭಾವನೆ ಬಲಗೊಳ್ಳುವುದು. ಮೊದಲು ಶಕುಂತಲೆಯನ್ನು 'ಅಗ್ನಿ' (ಬ್ರಾಹ್ಮಣ ಸ್ತ್ರೀ) ಯೆಂದು ತಿಳಿದು ನಿರಾಶನಾಗಿದ್ದ. ಅವಳ ಸೌಂದರ್ಯವು ಮಾತ್ರ 'ಲೋಭನೀಯ' (ಆಶಿಸುವಂತಹುದು) ವಾಗಿತ್ತು. ತತ್ವವು ಪೂರ್ತಿ ತಿಳಿದಮೇಲೆಯೇ ಇವನ ಪ್ರೇಮವು ಪೂರ್ಣತೆಯನ್ನು ಹೊಂದುವುದು. ಈ ಒಟ್ಟು ಸನ್ನಿವೇಶದಲ್ಲಿ ಗಮನಿಸಬೇಕಾದ್ದು ಒಂದು ವಿಷಯ. ದುಷ್ಯಂತನ ಪ್ರೇಮದ ಬೆಳವಣಿಗೆಯಲ್ಲೂ ಒಂದು ಕ್ರಮವಿದೆ. ನೋಡಿದ ಕೂಡಲೆ ರೂಪಮುಗ್ಧನಾಗಿ ವರಿಸಬೇಕೆಂಬ ಅಭಿಲಾಷೆಯನ್ನು ಅವನು ಹೊಂದಲಿಲ್ಲ. ರೂಪವು ಅವನನ್ನು ಮೊದಲು ಆಕರ್ಷಿಸಿದರೂ ಅವಳನ್ನು ಮದುವೆಯಾಗಲು ತಾನು ಅರ್ಹನೇ? ಅಂತಹ ಯೋಚನೆ ಸಾಧುವೇ? ಎಂಬ ಪ್ರಶ್ನೆಗಳು ಕೂಡಲೆ ಅವನ ಮನಸ್ಸನ್ನು ಆಕ್ರಮಿಸುವುವು. ಅವನಿಗೆ ತನ್ನ 'ಆರ್ಯ' ಮನಸ್ಸಿನ ವಿಷಯದಲ್ಲಿ ನಂಬಿಕೆಯಿದ್ದರೂ "ತಥಾಪಿ ತತ್ವತಃ ಏನಾಮು ಪಲಪ್ಸ್ಯೆ" ಎಂದು ಹೇಳುವುದನ್ನು ಗಮನಿಸುವುದು ಅತ್ಯಾವಶ್ಯಕ. ಇದರಿಂದ 'ತತ್ವನಿಶ್ಚಯ' ದ ಮೇಲೆಯೇ ಅವನ ಪ್ರೇಮವು ನಿಂತಿತ್ತೆಂದು ಭಾವಿಸಬಹುದು. ಮಿಕ್ಕ ಮಾತುಗಳೆಲ್ಲ ಸಹೃದಯ ಮನಸ್ತೃಪ್ತಿಗಾಗಿ. ಹೀಗೆ ನಿರ್ವಹಿಸಿರುವುದರಿಂದ ದುಷ್ಯಂತನ ಪಾತ್ರರಚನೆಗೆ ತುಂಬ ಉಪಕಾರವಾಗಿದೆ. ಮೊಟ್ಟಮೊದಲಿನ ಶಕುಂತಲಾಸಮಾಗಮದಲ್ಲೂ ಅವನು ಕಾಮುಕನಂತೆ, ದುಡುಕಿ ಪ್ರವೃತ್ತನಾಗಲಿಲ್ಲವೆಂದು ಧಾರಾಳವಾಗಿ ಹೇಳಬಹುದು. ಪರಸ್ಪರ ಗುಣಗಳಿಗೆ ಮೆಚ್ಚಿ ಸೋತು ಶಕುಂತಲೆ ದುಷ್ಯಂತರು ಪ್ರೇಮಪಾಶಕ್ಕೆ ಬಿದ್ದರು. ಬಿದ್ದರೂ ಕೂಡಲೆ ವಿವಾಹವು ನೆರವೇರುವುದಿಲ್ಲ. ಅಂಕುರಿಸಿದ ಪ್ರೇಮವು

ವೃದ್ಧಿಹೊಂದಿ ಅಸಹನೀಯವಾಗುವಷ್ಟು ತೀವ್ರವಾದ ಮೇಲೆಯೇ ವಿವಾಹವು ನೆರವೇರುವುದು.

ಹೀಗೆ ಪ್ರೇಮವಶರಾದ ಇಬ್ಬರಲ್ಲೂ ಸ್ವಲ್ಪಮಟ್ಟಿನ ಸಂಯಮ, ವಿಚಾರ ಶೀಲತೆಗಳಿರುವುದರಿಂದ ಇವರ ಪ್ರೇಮವು ಮಾಲವಿಕೆ ಅಗ್ನಿಮಿತ್ರರ ಪ್ರೇಮದಂತಾಗುವುದಿಲ್ಲ. ಈ ಕಾರಣದಿಂದಲೇ ಇವರ ಗಾಂಧರ್ವ ವಿವಾಹವು ಕಣ್ವರ ಸಮ್ಮತಿಯನ್ನೂ ಹೊಂದಿತೆಂದು ತೋರುತ್ತದೆ. ಇದು ಮುಂದೆ ವಿಶದಪಡುವುದು. ಪ್ರಕೃತ ಮೊದಲನೆಯ ಅಂಕದಲ್ಲಿ ದುಷ್ಯಂತ ಶಕುಂತಲೆಯರ ಸಮಾಗಮವನ್ನು ಬಹಳ ಚಮತ್ಕಾರದಿಂದ ಏರ್ಪಡಿಸಿ ಅವರಲ್ಲಿ ಕ್ರಮವಾಗಿ ಪರಸ್ಪರ ಪ್ರೇಮವು ಅಂಕುರಿಸುವ ಬಗೆಯನ್ನು ಹೃದಯಂಗಮವಾಗಿ ಚಿತ್ರಿಸಿರುವುದು ಕವಿಯ ಅಸಾಧಾರಣ ಕೌಶಲವನ್ನು ಸೂಚಿಸುವುದು. "ಸ್ವರ್ಗ ಮರ್ತ್ಯಗಳ ಸಮಾಗಮ" ರೂಪವಾದ ಶಾಕುಂತಲದಲ್ಲಿ ಇದು 'ಮರ್ತ್ಯ.' ಕವಿಯ 'ಮರ್ತ್ಯ' ದ ಚಿತ್ರವನ್ನು ನೋಡಿದಲ್ಲಿ 'ಸ್ವರ್ಗೀಯ' ಜೀವನವು ಆಶಿಸುವಂತಹುದಾದರೂ ಮರ್ತ್ಯ ಜೀವನದಲ್ಲಿ ಸೌಂದರ್ಯವಿಲ್ಲದೆ ಇಲ್ಲ ಎನ್ನಿಸುವುದು. 'ತರುಣವತ್ಸರದ ಪುಷ್ಪ' ದಿಂದಲೇ 'ಪರಿಣತ ವತ್ಸರದ ಫಲ' ದೊರಕುವುದು. ಜೊತೆಗೆ 'ಸ್ವಾಭಾವಿಕ ವರ್ತನವೂ ಆತ್ಮಸಂಯಮವೂ ಪರಸ್ಪರ ವಿರುದ್ಧವಲ್ಲ' ವೆಂಬ ಭಾವನೆಯನ್ನು ಮೊಟ್ಟ ಮೊದಲಿನ ಅಂಕದ ಸನ್ನಿವೇಶದಲ್ಲೇ ಮನಗಾಣಬಹುದು.

ವಿಧಿಯ ವಿಚಿತ್ರ ಘಟನೆಯಿಂದಲೋ ಎಂಬಂತೆ ಅಂಕುರಿಸಿದ ದುಷ್ಯಂತ ಶಕುಂತಲೆಯರ ಪ್ರೇಮವು ಬೆಳೆಯುವುದಕ್ಕೆ ಎರಡನೆಯ ಅಂಕದ ಸಂಗತಿಗಳು ಅವಕಾಶವನ್ನು ಕಲ್ಪಿಸುತ್ತವೆ. ದುಷ್ಯಂತನ ಮತ್ತೂ ಕೆಲವು ಗುಣಗಳು ನಮ್ಮ ಗಮನಕ್ಕೆ ಬರುತ್ತವೆ. ಅವನು ರಾಜ್ಯಕಾರ್ಯದಲ್ಲಿ ಆಸಕ್ತಿಯನ್ನು ಹೊಂದಿದ್ದ ತಾಯಿಯ ಮಾತನ್ನು ಮೀರುತ್ತಿರಲಿಲ್ಲ. ಇತ್ತ ಕಾಡಿನಲ್ಲಿ, ತಾಪಸರ ಯೋಗಕ್ಷೇಮದ ಭಾರವನ್ನೂ ಅವನು ಹೊತ್ತಿದ್ದ. ಶಕುಂತಲೆಯಲ್ಲಿ ಅನುರಕ್ತನಾಗಿಯೂ ಇದ್ದುದರಿಂದ ಒಂದು ದೊಡ್ಡ 'ಧರ್ಮಸಂಕಟ' ಕ್ಕೆ ಸಿಕ್ಕಿಬೀಳುವನು. ಕಡೆಗೆ ಧೈರ್ಯದಿಂದ ವರ್ತಿಸಿ ಯಾರಿಗೂ ಅಸಮಾಧಾನವಾಗದಂತೆ ಸರಿಯಾದ ಪ್ರತೀಕಾರವನ್ನು ಹೂಡುವನು. ಶಕುಂತಲೆಯ ವಿಚಾರವನ್ನು ಮಿತ್ರನಾದ ವಿದೂಷಕನೊಡನೆ ಹೇಳಿಕೊಳ್ಳುವ ಸನ್ನಿ

ವೇಶವೂ ವಿದೂಷಕನ ವರ್ತನೆಯೂ ಬಹಳ ಚೆನ್ನಾಗಿವೆ. ಯಾವ ಸಂಗತಿ ಯನ್ನು ಅಥವಾ ಮಾತನ್ನು ಬಿಟ್ಟರೂ ನಾಟಕದ ರಮ್ಯತೆಗೆ ಕುಂದು ಬರುತ್ತದೆ. ಅಷ್ಟು ಚಾತುರ್ಯದಿಂದ ಇವನ್ನು ಹೆಣೆಯಲಾಗಿದೆ. ಕಡೆಯಲ್ಲಿ ವಿದೂಷಕನನ್ನು ರಾಜಧಾನಿಗೆ ಕಳುಹಿಸುವಾಗ ದೊರೆಯು ಹೇಳುವ ಮಾತು ಇದಕ್ಕೆ ಒಂದು ಉತ್ತಮ ನಿದರ್ಶನ. "ಮಿತ್ರ, ಋಷಿಗಳ ಮೇಲಿನ ಗೌರವದಿಂದ ಆಶ್ರಮಕ್ಕೆ ಹೋಗುತ್ತೇನೆ; ಸತ್ಯವಾಗಿಯೂ ಆ ತಾಪಸಕನ್ಯೆ ಯಲ್ಲಿ ನನಗೆ ಅಭಿಲಾಷೆಯಿಲ್ಲ" ಎಂದು ಮೊದಲಾದ ಮಾತು ಕಡೆಗೆ ಎಷ್ಟು ದುಃಸಹವಾದ ಪರಿಣಾಮವನ್ನು ಹೊಂದುವುದೆಂಬುದು ನಾಟಕದ ಕಥಾನುವಾದದಿಂದ ತಿಳಿದಿರಬೇಕು. ಇದೊಂದು ಮಾತು ಇಲ್ಲದಿದ್ದರೆ ನಾಟಕದ ಕತೆಯೇ ಬದಲಾಗುತ್ತಿತ್ತೆನ್ನಬಹುದು. ದೊರೆಯು ಈ ಮಾತನ್ನು ಹೇಳು ವುದಕ್ಕೂ ಎಷ್ಟು ಮುಖ್ಯವಾದ ಕಾರಣವಿದೆ! ಈ ಒಂದು ಮಾತಿನಿಂದ ಅನ್ಯಾಸಕ್ತನಾದರೂ ರಾಣಿವಾಸದವರ ಮನಸ್ಸನ್ನು ನೋಯಿಸಲು ಬಯಸದ ಅವನ ಮುಖ್ಯ ಗುಣವೊಂದು ಹೇಗೆ ಹೊರಪಡುತ್ತದೆ! ಇದೆಲ್ಲ ಗಮನಿಸ ಬೇಕಾದ್ದು. ಹೀಗೆ ಒಂದೊಂದು ಮಾತಿಗೂ ಕತೆಯ ಒಂದೊಂದು ಅಂಶಕ್ಕೂ ಒಂದೊಂದು ಪ್ರಯೋಜನವಿದ್ದೇ ಇದೆ. ಒಟ್ಟು ನಾಟಕವು ಅನೇಕ ಕೊಂಡಿ ಗಳನ್ನುಳ್ಳ ಸರಪಳಿಯಿದ್ದಂತೆ. ಯಾವುದನ್ನು ತೆಗೆದರೂ ಕತೆಯ ಸೌಂದರ್ಯ ಕ್ಕಾಗಲಿ, ನೈಜತೆಗಾಗಲಿ ಭಂಗ ಬರುವುದು. ಇದೇ ಕವಿಯ ಸಂವಿಧಾನ ಕೌಶಲದ ಫಲ.

ಮೂರನೆಯ ಅಂಕದಲ್ಲಿ ಕಾಮಿಗಳ ಗಾಂಧರ್ವ ವಿವಾಹವು ನೆರವೇರು ವುದು. ಪ್ರಥಮದರ್ಶನವಾಗಿ ಹದಿನೈದು ಇಪ್ಪತ್ತು ದಿನ ಕಳೆದಮೇಲೆ ಇದು ನಡೆಯುವುದು. ಅದುವರೆಗೆ ಇಬ್ಬರ ಮನಸ್ಸೂ ಸಮಾಗಮಕ್ಕಾಗಿ ಕಾತರಗೊಳ್ಳುವುದು. ದುಷ್ಯಂತನಲ್ಲಿ ಕಣ್ವರು ಏನೆನ್ನುವರೋ? ಎಂಬ ಭಯ ಅಷ್ಟಿಲ್ಲ. ನಡೆಯಬಹುದಾದ ವಿವಾಹವು ನಡೆದರೆ ಅವರು ಕೋಪಿಸಿ ಕೊಳ್ಳಲಾರರೆಂಬ ನಂಬಿಕೆ ಅವನಿಗಿತ್ತು. ವಿವಾಹವು ನಡೆಯಬಹುದಾದು ದೆಂದು ಅವನಾಗಲೇ ನಿರ್ಣಯಿಸಿದ್ದನು. ಆದುದರಿಂದ ಅವನಿಗೆ ಪ್ರಿಯಾ ಸಮಾಗಮ ಕಾತರತೆ ಮಾತ್ರ ಪ್ರಬಲವಾಗಿತ್ತು. ಆದರೆ ಶಕುಂತಲೆಯ ಮನಸ್ಸಿನಲ್ಲಿ ಇನ್ನೂ ಹೆಚ್ಚಿನ ತಿಕ್ಕಾಟ. ಜೀವನದ ಮುಖ್ಯ ಸಮಸ್ಯೆ

ಯೊಂದನ್ನು ಅವಳು ಸ್ವತಃ ಪರಿಹರಿಸಬೇಕಾಗಿ ಬಂದಿದೆ. ದುಷ್ಯಂತನು ಹೇಳುವಂತೆ " ಅವಳ ' ಅವ್ಯಾಜ ಮನೋಹರ ' ವಾದ ಶರೀರವನ್ನು ತಪಸ್ಸಿಗೆ ಅರ್ಹವನ್ನಾಗಿ ಮಾಡಲು ಯತ್ನಿಸಿದಲ್ಲಿ ಶಮೀವೃಕ್ಷದ ಕೊಂಬೆಯನ್ನು ಕನ್ನೈದಿಲೆಯ ದಳದಿಂದ ಕುಯ್ಯಲು ಪ್ರಯತ್ನಿಸಿದಂತಾಗುವುದು " ನಿಶ್ಚಯ. ಅಂತೆಯೇ ತಾನು ನಿರಂತರ ಆಶ್ರಮವಾಸಕ್ಕೆ ಅನರ್ಹಳೆಂದು ಅವಳ ಭಾವನೆ ಯಿದ್ದಿರಬೇಕು. ಪ್ರಕೃತಿ ನಿಯಮವೂ ಅದನ್ನೇ ಅನುಮೋದಿಸಿತ್ತು. ಸಖಿ ಯರ ಮಾತುಗಳಿಂದಲೂ ಇದು ಸ್ಥಿರಪಡುವುದು. ಅಂತು ಯೋಗ್ಯನಾದ ಪತಿಯನ್ನು ವರಿಸಿ ಗೃಹಿಣಿಯಾಗಬೇಕೆಂಬ ಎಲ್ಲರ ಅಭಿಲಾಷೆಗೆ ತಕ್ಕಂತೆ ಈಗ ಅನುರೂಪನಾದ ವರನು ಸಿಕ್ಕಿರುವನು. ಮನಸ್ಸು ಅವನಲ್ಲಿ ಅನುರಕ್ತವಾಗಿದೆ. ಯಾವ ವಿಷಯದಲ್ಲೂ ಸಂದೇಹಪಡುವಂತಿಲ್ಲ. ಆದರೆ ತಾನು ವರಿಸಲು ಸ್ವತಂತ್ರಳಲ್ಲ. ತಾತ ಕಣ್ವರ ಅಪ್ಪಣೆಯಿಲ್ಲದೆ ಹೇಗೆ ಮದುವೆಗೆ ಸಮ್ಮತಿಸು ವುದು ? ಎಂದು ಅವಳ ಸಮಸ್ಯೆ. ದುಷ್ಯಂತನು ಆಲೋಚಿಸುವ ರೀತಿಯಲ್ಲಿ ಇವಳು ಯೋಚಿಸುವುದಿಲ್ಲ. ಶಕುಂತಲೆಯ ದೃಷ್ಟಿಯಿಂದ ತಮ್ಮ ವಿವಾಹವು ಕಣ್ವರ ಅನುಮತಿಗೆ ಯೋಗ್ಯವಾಗಿದ್ದರೂ ಅನುಮತಿಯಿಲ್ಲದೆ ಆ ವಿಷಯದಲ್ಲಿ ಮುಂದುವರಿಯುವುದು ಸೂಕ್ತವಲ್ಲ. ಆದರೆ ಕಾಮಬಾಧೆಯನ್ನು ತಡೆಗಟ್ಟಿ ನಿಲ್ಲಿಸುವ ಶಕ್ತಿ ಅವಳಿಗಿರಲಿಲ್ಲ ಕಣ್ವರು ಹಿಂತಿರುಗಲು ಬಹಳಕಾಲ ಬೇಕೆಂದು ಎಲ್ಲರೂ ಅರಿತಿದ್ದಂತೆ ತೋರುತ್ತದೆ. ಅದುವರೆಗೆ ತಡಮಾಡಿದರೆ ಮುಂದೆ ದೊರೆಯ ಮನಸ್ಸು ಹೇಗೆ ತಿರುಗುವುದೋ ಎಂಬ ಸಂಶಯಕ್ಕೂ ಅವಕಾಶ ವಿದೆ. ಮುಖ್ಯವಾಗಿ ಪ್ರೇಮವು ವಿಲಂಬವನ್ನು ಸಹಿಸದು. ಈ ಕಾರಣ ದಿಂದ ಶಕುಂತಲೆಯು ಹೇಳಲಾರದ ಮನ್ಮಥ ಬಾಧೆಗೆ ಸಿಕ್ಕಿ ಕೃಶಳಾಗುವಳು. ಇವಳ ಸ್ಥಿತಿ ಅನಸೂಯೆ ಪ್ರಿಯಂವದೆಯರಿಗೆ ಚಿಂತಾಜನಕವಾಗುವುದು. ಎಲ್ಲರಿಗೂ ಅಚ್ಚುಮೆಚ್ಚಾದ ' ಆಶ್ರಮದ ಹೂವು ' ತೊಟ್ಟು ಕಳಚಿಬಿದ್ದು ನಾಶ ವಾಗುವ ಸಂಭವ ಹೆಚ್ಚಾಗುವುದು. ಔಚಿತ್ಯ ಮೀರಿದರೂ ಚಿಂತೆಯಿಲ್ಲ; ಶಕುಂತಲೆಯ ಜೀವವನ್ನು ಉಳಿಸಬೇಕೆಂಬ ಭಾವದಿಂದಲೋ ಎಂಬಂತೆ ಸಖಿಯರು ಪ್ರತೀಕಾರವನ್ನು ಹುಡುಕಲು ತೊಡಗುವರು. ಅವರೂ ತಕ್ಕಷ್ಟು ವಿಚಾರಪರರಾಗಿಯೇ ವರ್ತಿಸುವರು. ಇವಳ ಪ್ರೇಮಕ್ಕೆ ಪಾತ್ರನಾದ ದೊರೆಯ ವಂಶ, ಗುಣ, ಮೊದಲಾದುವನ್ನೆಲ್ಲ ಸಾವಧಾನವಾಗಿ ಪರಿಶೀಲಿಸಿ,

ಇವರಿಬ್ಬರ ಪ್ರೇಮವು ನಿರ್ದುಷ್ಟವೆಂದು ತೀರ್ಮಾನಿಸಿ ಅನಂತರ ಕಾರ್ಯ ತತ್ಪರರಾಗುವರು. ದೊರೆಯ 'ಚತುರ ಗಂಭೀರಾಕೃತಿ' ಯನ್ನು ನೋಡಿ ಮೊದಲೇ ಇವನು ಪ್ರಭಾವಶಾಲಿಯಾಗಿರಬೇಕೆಂದು ಅವರು ಊಹಿಸಿದ್ದರು. ಮತ್ತು ತಾತ ಕಾಶ್ಯಪರು ಆಶ್ರಮದಲ್ಲಿದ್ದಿದ್ದರೆ ಈ ಅತಿಥಿಗೆ ತಮ್ಮ 'ಜೀವಿತ ಸರ್ವಸ್ವ' ವನ್ನು ಕೊಡುತ್ತಿದ್ದರೆಂದೂ ಆಗಲೇ ಭಾವಿಸಿದ್ದರು. ಇದಲ್ಲದೆ 'ಧರ್ಮಾಚರಣೆಯಲ್ಲೂ ಪರವಶ' ಳಾದ ಇವಳನ್ನು ಅನುರೂಪನಾದ ವರನಿಗೆ ಕೊಡುವುದೇ ಕಾಶ್ಯಪರ ಸಂಕಲ್ಪವಾಗಿತ್ತೆಂದು ಅರಿತು ಆ ಮಾತನ್ನು ದೊರೆಗೂ ತಿಳಿಸಿದ್ದರು. ಇದಕ್ಕನುಸಾರವಾಗಿ ಈಚೆಗೆ ಇವರು ಪರಸ್ಪರ ಅನುರಕ್ತರಾಗಿ ಶಕುಂತಲೆಯು ದುಷ್ಯಂತನನ್ನು ಬಿಟ್ಟು ಇರಲಾಗದ ಸ್ಥಿತಿಗೆ ಬಂದಿರುವುದನ್ನು ನೋಡಿದಾಗ ಅವರಿಗೆ ಆಶ್ಚರ್ಯ, ಅಸಮಾಧಾನಗಳಿಗೆ ಬದಲಾಗಿ ಸಂತೋಷ ಸಹಾನುಭೂತಿಗಳು ಉಂಟಾಗುವುವು. ಸಖಿಹೃದಯದಿಂದ ಶಕುಂತಲೆಯ ಬೇನೆಯನ್ನರಿತು ಕೂಡಲೆ ಸೂಕ್ತ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದು ನಿರ್ಣಯಿಸಿ ಪ್ರೇಮಪತ್ರವೊಂದನ್ನು ಕೊಂಡೊಯ್ಯಬೇಕೆಂದು ಆಲೋಚಿಸುವರು. ಈ ವೇಳೆಗಾಗಲೇ ದೊರೆಯು ವಿರಹಪೀಡಿತನಾಗಿ ಇವರಿರುವಲ್ಲಿಗೆ ಬಂದು ಮರೆಯಾಗಿ ನಿಂತು ಇವರ ಮಾತುಗಳನ್ನು ಕೇಳುತ್ತಿರುವನು. ಇದುವರೆಗೆ ನಾಯಕ ನಾಯಿಕೆಯರಿಬ್ಬರಲ್ಲೂ ಪರಸ್ಪರ ಪ್ರೇಮವು ಅಂಕುರಿಸಿದ್ದರೂ ಪ್ರತ್ಯಕ್ಷವಾಗಿ ಮನೋಭಾವಗಳ ವಿನಿಮಯವಾಗಿರಲಿಲ್ಲ. ಒಬ್ಬೊಬ್ಬರೂ 'ನಾನು ಅವನನ್ನು ಪ್ರೀತಿಸಿರುತ್ತೇನೆ; ಆದರೆ ಪ್ರೀತಿಗೆ ಬದಲುಪ್ರೀತಿಯಿದೆಯೋ ಇಲ್ಲವೋ?' ಎಂಬ ಸಂದೇಹದಲ್ಲೇ ಮುಳುಗಿ ತೊಳಲುತ್ತಿದ್ದರು. ದುಷ್ಯಂತನಿಗೆ ಶಕುಂತಲೆಯು ತನ್ನಲ್ಲಿ ಅನುರಕ್ತಳಾಗಿದ್ದರೂ ಇರಬಹುದೆಂಬ ಊಹೆಯು ಮಾತ್ರ ಬಂದಿತ್ತು. ಆದರೆ ಅದಕ್ಕೆ ಸರಿಯಾದ ಸಮರ್ಥನೆ ದೊರಕಿರಲಿಲ್ಲ. ಮೂರನೆಯ ಅಂಕದಲ್ಲಿ ಈ ಅನುರಾಗವಿನಿಮಯವು ಸಮರ್ಪಕವಾಗಿ ನಡೆದಿದೆ. ಸಖಿಯರು ಪ್ರಣಯಪತ್ರದ ಮೂಲಕ ಶಕುಂತಲೆಯ ಸ್ಥಿತಿಯನ್ನು ತಿಳಿಸಿದ್ದರೆ ಹೇಗಾಗುತ್ತಿದ್ದಿತೋ ಅದಕ್ಕಿಂತ ಸಾವಿರ ಪಾಲು ರಮ್ಯವಾದ ರೀತಿಯಲ್ಲಿ ಸಮಾಗಮವು ನಡೆದಿದೆ. ಶಕುಂತಲೆಯ ಮನಸ್ಸಿನ ಭಾವವನ್ನು ದುಷ್ಯಂತನು ಕಿವಿಯಾರೆ ಕೇಳಿದಾಗ ತಾನು ವಿರಹದಿಂದ

ಬಳಲಿ ಅಲೆಯುತ್ತ ಅಲ್ಲಿಗೆ ಬಂದುದಕ್ಕೆ ತಕ್ಕ ಪ್ರತಿಫಲ ದೊರೆತಂತಾಗುವುದು. ದುಷ್ಯಂತನು ಒಪ್ಪುವನೊ ಇಲ್ಲವೊ ಎಂದು ಸಂದೇಹಪಡುತ್ತಿದ್ದ ಶಕುಂತಲೆಗೆ ಅವನ ಪ್ರಣಯೋನ್ಮುಖತೆಯು ವ್ಯಕ್ತವಾಗುವುದು. ಶ್ರಮವಹಿಸಿ ನಡೆಸ ಬೇಕಾದ್ದು ಸಖಿಯರಿಗೆ ಶ್ರಮವಿಲ್ಲದೆ, ಹೆಚ್ಚು ತೃಪ್ತಿಕರವಾಗಿ ನಡೆಯುವುದು. ದುಷ್ಯಂತನಿಂದ ಯಾವ ಯಾವ ವಿಚಾರಗಳಲ್ಲಿ ಭರವಸೆಯನ್ನು ಪಡೆಯ ಬೇಕಾಗಿತ್ತೋ ಅದನ್ನೂ ಪಡೆದಾಗುವುದು. ಮುಂದೆ ಬರುವ ಶಕುಂತಲಾ ದುಷ್ಯಂತರ ಏಕಾಂತಕ್ರೀಡೆಯನ್ನು ಕೂಡ ಸ್ವಲ್ಪವಾದರೂ ಅಸಭ್ಯತೆ ಅಶ್ಲೀಲತೆಗಳಿಗೆಡೆಗೊಡದೆ ಕವಿಯು ಚಿತ್ರಿಸಿರುವನು. ಈ ಸಮಯದಲ್ಲಿ ಶಕುಂತಲೆಯ ವರ್ತನೆಯು ಬಹಳ ಶ್ಲಾಘನೀಯವಾಗಿರುವುದು. ಕಾಮ ತಾಪದ ಮಧ್ಯದಲ್ಲೂ ಧರ್ಮದೃಷ್ಟಿ ಅವಳಲ್ಲಿ ತಲೆದೋರುವುದು. ದುಷ್ಯಂತ ನನ್ನು ಕಟುವಾಗಿಯೇ ನಿರಾಕರಿಸುವಳು. ಆದರೆ ಅವನ ಸಂತೈಸುವ ಕೌಶಲವು ಇವಳನ್ನು ಮರಳುಗೊಳಿಸುವುದು. ಕಣ್ವರ ಅನುಮತಿಯನ್ನು ನಿರೀಕ್ಷಿಸಬೇಕಾಗಿಲ್ಲವೆಂಬ ದುಷ್ಯಂತನ ವಾದವೇ ಗೆಲ್ಲುವುದು. ಶಕುಂತಲೆಯು ಔಚಿತ್ಯವನ್ನು ಪಾಲಿಸಲಾರದೆ ಪ್ರೇಮಕ್ಕೆ ಕಟ್ಟುಬೀಳುವಳು. ವಿಶ್ವಾಮಿತ್ರ ನನ್ನು ಮೇನಕೆಯ ಸೌಂದರ್ಯವು ಮೋಹಿಸಿದಂತೆ ದುಷ್ಯಂತನ ರೂಪ, ಗುಣ ಗಳು ಇವಳನ್ನು ಮೋಹಿಸುವುವು. ಇದು ಶಕುಂತಲೆಯ ಜೀವನ ಪಥದಲ್ಲಿ ಮೊದಲಿನ ತಪ್ಪುಹೆಜ್ಜೆ. ಇವಳ ನಡವಳಿಕೆಯು ಎಷ್ಟೇ ಸ್ವಾಭಾವಿಕವಾಗಿ ತೋರಿದರೂ, ಸಾಮಾನ್ಯ ಲೌಕಿಕ ದೃಷ್ಟಿಯಿಂದ ಅಪರಿಹಾರ್ಯವಾಗಿದ್ದರೂ ಧರ್ಮದ ಒರೆಗಲ್ಲಿನಿಂದ ನೋಡಿದಲ್ಲಿ ಔಚಿತ್ಯಲೋಪವು ಅಲ್ಲಿ ಕಂಡುಬರುತ್ತದೆ. ಶ್ರೇಯಃಕಾಂಕ್ಷಿಯಾದ ಸಾಕುತಂದೆಯ ಅಭಿಪ್ರಾಯಕ್ಕೆ ಅವಕಾಶ ತಪ್ಪಿಸಿ ಸ್ವತಂತ್ರಳಾಗಿ ವರ್ತಿಸಿದ ತಪ್ಪು ಅವಳಿಗೆ ತಪ್ಪದು. ದುಷ್ಯಂತನ ಪ್ರಚೋದನೆ ಯಿಂದ ಇದು ನಡೆದುದರಿಂದ ಅವನೂ ಇದರಲ್ಲಿ ಭಾಗಿಯಾಗುವನು. ಅರಿಯದೆ ಮಾಡಿದ ತಪ್ಪಿಗಿಂತ ಅರಿತು ಮಾಡಿದ ತಪ್ಪಿಗೆ ಶಿಕ್ಷೆ ಹೆಚ್ಚಾದರೂ ಎರಡು ವಿಧವಾದ ತಪ್ಪಿಗೂ ಶಿಕ್ಷೆ ತಪ್ಪಿದ್ದಲ್ಲ. ತಪ್ಪು ಹೆಜ್ಜೆಯಿಡುವುದೇ ಸ್ವಭಾವವಾದ 'ಮರ್ತ್ಯ'ಲೋಕಕ್ಕೆ ಇದು ಸ್ವಾಭಾವಿಕವಾದ ನಿವಾರಿಸಲಶಕ್ಯ ವಾದ ಸಂಗತಿಯಾದರೆ 'ಸ್ವರ್ಗೀಯ' ಧರ್ಮದೃಷ್ಟಿಗೆ ಇದು ನಿರ್ದುಷ್ಟವಾಗು ತ್ತದೆಯೆ?

ಇದರ ಜೊತೆಗೆ ಮತ್ತೊಂದು ಧರ್ಮಲೋಪವೂ ಕೂಡಲೆ ಸಂಭವಿಸುವುದು. ಶಕುಂತಲೆಯ ಎಳ ಜೌವ್ವನದ ಶರೀರಸೌಷ್ಠವವು ದುಷ್ಯಂತನ ಅನುಭವಮಧುವಾಗುವುದು. 'ತರುಣವತ್ಸರದ ಪುಷ್ಪ' ಕ್ಕೆ ಮಧುಕರನ ಸಹವಾಸವು ಒದಗುವುದು. ಹೊಸ ಮಧುವನ್ನು ಆಸ್ವಾದಿಸಿದ ಮಧುಕರನಂತೆ ದೊರೆಯು ಸಂತೋಷದಿಂದ ಹಿಂತಿರುಗುವನು. ಊರಿಗೆ ತಲಪಿದ ಕೂಡಲೆ ಇವಳನ್ನು ಅಲ್ಲಿಗೆ ಕರೆಸಿಕೊಳ್ಳುವುದಾಗಿ ವಚನವನ್ನೂ ಇತ್ತಿರುವನು. ಆದರೇನು? ಶಕುಂತಲೆಗೆ ಮಾತ್ರ ವಿರಹವು ಸಹಿಸದು. ಅವನತ್ತ ಹೊರಟಕೂಡಲೆ ಇವಳು ಅವನನ್ನೇ ನೆನೆಯುತ್ತ ಪ್ರಪಂಚವನ್ನೇ ಮರೆಯುವಳು. ತಾನು ತನ್ನ ಪತಿ ಇಷ್ಟೆ ಅವಳ ಮನಸ್ಸನ್ನು ಆಕ್ರಮಿಸುವುವು. ಬಾಹ್ಯ ಜಗತ್ತೆಲ್ಲ ಶೂನ್ಯಪ್ರಾಯವಾಗುವುದು. ಆಶ್ರಮ, ಅಲ್ಲಿನ ಕೆಲಸಗಳು, ತನ್ನ ಕರ್ತವ್ಯ ಎಲ್ಲವನ್ನೂ ಮರೆಯುವಳು. ಆ ಸಮಯಕ್ಕೆ ಸರಿಯಾಗಿ ಆತಿಥ್ಯದ ಬಯಕೆಯಿಂದ ಎಳ್ಳಷ್ಟು ಅನಾದರವನ್ನೂ ಸಹಿಸದ ದುರ್ವಾಸರು ಬರುವರು. ಯಾರು? ಯಾರು ಆಶ್ರಮದಲ್ಲಿ? ಎಂದು ಎಷ್ಟು ಕೂಗಿದರೂ ಪ್ರತ್ಯುತ್ತರವೇ ಬರುವುದಿಲ್ಲ. ಶಕುಂತಲೆಯ ದುರದೃಷ್ಟಕ್ಕೆ ಸರಿಯಾಗಿ ಸಖಿಯರೂ ಬೇರೆ ಕೆಲಸದಲ್ಲಿ ತೊಡಗಿರುವರು. ಆದರೂ ಋಷಿಯ ಕೂಗನ್ನು ಕೇಳಿ ಓಡಿ ಬರಬೇಕೆನ್ನುವಷ್ಟರಲ್ಲಿ ಕಠಿನವಾದ ಋಷಿಶಾಪವು ಹೊರಬೀಳುವುದು. ಶಕುಂತಲೆಗೆ ಮಾತ್ರ ಏನೂ ತಿಳಿಯದು. ಪ್ರಜ್ಞೆಯೇ ಇಲ್ಲದಂತಾಗಿದೆ. ಆದುದರಿಂದಲೇ ಅವಳ ವಿಪತ್ತಿಗೆ ಪ್ರತೀಕಾರ ಮಾಡುವ ಯೋಚನೆ ಅವಳಲ್ಲಿ ಹುಟ್ಟುವುದೇ ಇಲ್ಲ. ಇದನ್ನೆಲ್ಲ ಮೊದಲೇ ಅರಿತಿದ್ದ ಕಣ್ವರು ಇದಕ್ಕಾಗಿಯೇ ಸೋಮತೀರ್ಥಕ್ಕೆ ಹೋಗಿದ್ದುದು. ಜೊತೆಗೆ ಈಗ ಪ್ರಿಯಂವದೆ ಅನಸೂಯೆಯರು ದುರ್ವಾಸರ ಕ್ಷಮೆ ಬೇಡಿ ಶಾಪದ ತೀವ್ರತೆಯನ್ನು ಕಡಿಮೆ ಮಾಡಿಸುವರು. ವಿಮೋಚನೆಗೆ ಬೇಕಾದ ಸಾಧನವು (ಉಂಗುರ) ಶಕುಂತಲೆಯ ಹತ್ತಿರ ಇದ್ದುದರಿಂದ ಯಾವ ವಿಧವಾದ ತೊಂದರೆಯೂ ಆಗಲಾರದೆಂದು ಅವರು ಧೈರ್ಯ ಹೊಂದಿದ್ದರು. ಆದ್ದರಿಂದ ಆಗ ನಡೆದುದನ್ನೆಲ್ಲ ಶಕುಂತಲೆಗೆ ತಿಳಿಸುವುದರಿಂದ ಅವಳ ಮನಸ್ಸು ನೋಯುವುದು ಹೊರತು ಬೇರೆ ಯಾವ ಪ್ರಯೋಜನವೂ ಆಗುವುದಿಲ್ಲವೆಂದು ಎಲ್ಲವನ್ನೂ ಮರೆಮಾಚುವರು. ಶಕುಂತಲೆಗೆ ತನ್ನ ತಪ್ಪನ್ನು ತಿಳಿದು ತಿದ್ದಿಕೊಳ್ಳಲೂ ಸಾಧ್ಯವಾಗದೆ ಹೋಗುವುದು.

ಕಾಶ್ಯಪರು ಹಿಂತಿರುಗಿದ ಮೇಲೆ ನಡೆಯುವ ಸಂಗತಿಗಳು ಯಾರ ಹೃದಯವನ್ನಾದರೂ ಕರಗಿಸುವಂತಹವು. ನಾಲ್ಕನೆಯ ಅಂಕವು ನಾಟಕದಲ್ಲೆಲ್ಲ ಅತ್ಯುತ್ತಮವಾದುದೆಂದೂ ಅಲ್ಲೂ ನಾಲ್ಕು ಶ್ಲೋಕಗಳು ಶ್ರೇಷ್ಠತಮವೆಂದೂ ಹೇಳುವುದು ಅತಿಶಯೋಕ್ತಿಯಲ್ಲ. ಇಲ್ಲಿ ಪ್ರತಿಪಾದಿಸಿರುವ ಸನ್ನಿವೇಶವು ಸಾಮಾನ್ಯಜನರ ಅನುಭವಕ್ಕೆ ಪರಿಚಿತವಾಗಿರುವುದೇ ಇದಕ್ಕೆ ಕಾರಣ. ಪ್ರತಿಪಾದನ ಕ್ರಮವೂ ಹೃದಯಂಗಮವಾಗಿದೆ. ಹಿತವಾದ ಮತ್ತು ಮಿತವಾದ ಕರುಣರಸವು ಇಲ್ಲಿ ಸಹೃದಯರ ಆಸ್ವಾದಕ್ಕೆ ಯೋಗ್ಯವಾಗುತ್ತದೆ. ಶಕುಂತಲೆಯ ಗಾಂಧರ್ವ ವೃತ್ತಾಂತವು ಕಾಶ್ಯಪರಿಗೆ ತಿಳಿಯುವ ಸನ್ನಿವೇಶವನ್ನು ಬಹಳ ಕೌಶಲದಿಂದ ನಿರ್ವಹಿಸಲಾಗಿದೆ. ಬಂದಕೂಡಲೆ ಆಶ್ರಮದವರ ನಡವಳಿಕೆಯ ವಿಚಾರದಲ್ಲಿ ಸಂದೇಹಪಡುವ ಸ್ವಭಾವವು ಅವರದಲ್ಲ. ಶಕುಂತಲೆಯಲ್ಲಿ ಪ್ರತ್ಯಕ್ಷವಾಗಿ ಗರ್ಭಚಿಹ್ನೆಗಳು ತೋರಿದುದರಿಂದ ಅವರು ಜ್ಞಾನದೃಷ್ಟಿಯಿಂದ ನಡೆದುದನ್ನೆಲ್ಲ ತಿಳಿಯಬೇಕಾಯಿತು. ಇಲ್ಲದಿದ್ದಲ್ಲಿ ಈ ವಿಧವಾದ ಶಂಕೆಯು ಅವರಲ್ಲಿ ಹುಟ್ಟುತ್ತಲೇ ಇರಲಿಲ್ಲ. ಹೀಗೆ ಜ್ಞಾನದೃಷ್ಟಿಯಿಂದ ವೃತ್ತಾಂತವು ಅವರಿಗೆ ತಿಳಿದುದರಿಂದ ಪ್ರಿಯಂವದೆ ಅನಸೂಯೆಯರಿಗೆ ಶ್ರಮ, ಭಯಗಳು ತಪ್ಪಿದುವು. ಅಯ್ಯೋ! ಹೇಗೆ ಇದನ್ನು ತಿಳಿಸುವುದು ಎಂದು ಗಾಬರಿಗೊಂಡಿದ್ದ ಅವರ ಮನಸ್ಸುಗಳು ಸಮಾಧಾನ ಹೊಂದುವುವು. ಇದರಿಂದ ಸನ್ನಿವೇಶದಲ್ಲಿ ಅನೌಚಿತ್ಯವು ತಪ್ಪಿ ಸ್ವಾಭಾವಿಕತೆ ಸ್ವಾರಸತೆಗಳೂ ಮೂಡಿವೆ. ಗಾಂಧರ್ವ ವೃತ್ತಾಂತವನ್ನು ತಿಳಿದಮೇಲೆ ಕಾಶ್ಯಪರು ವರ್ತಿಸುವ ರೀತಿಯು ಅವರ ಮಹತ್ವವನ್ನು ಸೂಚಿಸುವುದು. ಅವರಲ್ಲಿದ್ದ ಪೂರ್ಣಸಹಾನುಭೂತಿ, ವಾತ್ಸಲ್ಯಗಳು ಅಸಾಧಾರಣವಾದುವು. ಇವಿಲ್ಲದೆ ಇದ್ದಿದ್ದರೆ ದುರ್ವಾಸರಿಗಿಂತ ಕಠಿನವಾದ ಶಾಪವನ್ನು ಕಾಶ್ಯಪರು ಕೊಡುವುದೂ ಸಾಧ್ಯವಾಗಿತ್ತು. ಕೊಟ್ಟಿದ್ದರೂ ತಪ್ಪೆನ್ನುವಂತಿರಲಿಲ್ಲ. ಹೀಗಿರುವಾಗ ಅವರು ಎಳ್ಳಷ್ಟೂ ಉದ್ವೇಗಹೊಂದದೆ ಶಕುಂತಲೆಯನ್ನು ಸಮಾಧಾನಗೊಳಿಸಿ ಮುಂದಿನ ಕರ್ತವ್ಯವನ್ನು ಯೋಚಿಸುವುದು ಶ್ಲಾಘನೀಯವಾಗಿದೆ. ಔಚಿತ್ಯವನ್ನರಿತು, ಅವರು ಕೂಡಲೆ ಶಕುಂತಲೆಯನ್ನು ಗಂಡನ ಮನೆಗೆ ಕಳುಹಿಸಲು ಸಂಕಲ್ಪಿಸುವರು. ಮುಂದಿನ ಮಗಳನ್ನು ಬೀಳ್ಕೊಡುವ ಸನ್ನಿವೇಶವು ಸಂಸಾರಿಗಳ ಹೃದಯವನ್ನು ಮುಟ್ಟತಕ್ಕದ್ದು.

ಶಕುಂತಲೆಗೆ ಆಶ್ರಮದಲ್ಲಿ ಯಾವ ಸ್ಥಾನವಿತ್ತೆಂಬುದು ಈಗ ವ್ಯಕ್ತವಾಗುವುದು. ಶಕುಂತಲೆಗಾಗಿ ವನದೇವತೆಗಳೂ ದುಃಖಿಸುವರು. ಆಶ್ರಮದ ಪಕ್ಷಿ ಪಶು, ಮೃಗಗಳೆಲ್ಲ ಇವಳನ್ನು ತಡೆಯುವುವು. ಒಟ್ಟಿನಲ್ಲಿ ಎಲ್ಲಕ್ಕೂ ಶಕುಂತಲಾ ವಿಯೋಗವನ್ನು ತಡೆಯುವುದು ಅಸಾಧ್ಯವಾಗುವುದು. ಇನ್ನು ಇವಳ ಸಖಿಯರ ಪಾಡೇನು? ಕಡೆಗೆ ಸಂಯಮಿಗಳಾದ ಕಾಶ್ಯಪರನ್ನೂ ದುಃಖವು ಬಾಧಿಸದೆ ಬಿಡದು. ಆಗ ಅವರು ಹೇಳುವ ಮಾತು ಅತ್ಯಂತ ಸ್ವಾಭಾವಿಕವಾದ ಮತ್ತು ಎಲ್ಲರಿಗೂ ತಿಳಿದ ವಿಷಯವೇ ಆದರೂ ಯಾರ ಮನಸ್ಸನ್ನೂ ಕರಗಿಸದೆ ಬಿಡುವುದಿಲ್ಲ. ಇಲ್ಲಿನ ಸನ್ನಿವೇಶವು "ಧರ್ಮಸ್ನೇಹಾಂತರೆ ನ್ಯಸ್ತಾಃ ದುಃಖಿತಾಃ ಖಲು ಮಾತರಃ" ಎಂಬ ಭಾಸ ಮಹಾಕವಿಯ ವಾಕ್ಯವನ್ನು ನೆನಪಿಗೆ ತರುವುದು. ಮಗಳನ್ನು ಪತಿಗೃಹಕ್ಕೆ ಕಳುಹಿಸುವಾಗ ತಂದೆ ತಾಯಿಗಳ ಮನಸ್ಸು 'ಧರ್ಮ,' 'ಸ್ನೇಹ' ಗಳ ನಡುವೆ ಸಿಕ್ಕಿ ದುಃಖಪಡುವುದು ಸಂಸಾರಿಗಳೆಲ್ಲರ ಪಾಲಿಗೂ ಬಂದ ಭಾಗ್ಯ. ಪ್ರಕೃತ ಸಾಕುತಂದೆಯಾದ ಕಣ್ವರೂ ಈ ದುಃಖದಲ್ಲಿ ಭಾಗಿಯಾಗಿರುವುದನ್ನು ನೋಡಿದರೆ ಯಾರಿಗೆತಾನೆ ಮನಸ್ಸು ಕರಗದು? ಶಕುಂತಲೆಗಾಗಿ ದುಃಖಪಡುವ ವನದೇವತೆಗಳು, ಪಕ್ಷಿ ಮೃಗಗಳು, ಕಾಶ್ಯಪರು, ಸಖಿಯರು ಇವರೆಲ್ಲರೊಡನೆ ನಾವೂ ಸಹಕರಿಸಿ ದುಃಖಪಡುವಷ್ಟು ಕರುಣಾಜನಕವಾಗುವುದು ಇದೊಂದೇ ಸಂದರ್ಭವೆನ್ನಬಹುದು. ನಾಟಕದಲ್ಲಿ ಪ್ರಕೃತಿಯ ಸ್ಥಾನವನ್ನು ವಿವೇಚಿಸುವುದಕ್ಕೆ ಇದು ಸರಿಯಾದ ಅವಕಾಶ. ಮಾನುಷ ಜೀವನವನ್ನು ವ್ಯಾಪಿಸಿಕೊಂಡಿರುವ ನಿತ್ಯತತ್ವವೇ ಪ್ರತಿಯೊಂದು ನದಿ, ಗಿಡ, ಬಳ್ಳಿ, ಪಕ್ಷಿ ಮೃಗದಲ್ಲಿಯೂ ಸೂಕ್ಷ್ಮವಾದ ಕಿಡಿಯಂತೆ ಮೂರ್ತೀಭವಿಸಿದೆಯೆಂಬುದು ಕಾಳಿದಾಸನ ಉತ್ಕೃಷ್ಟವಾದ ಭಾವನೆಗಳಲ್ಲೊಂದು. ಆದ್ದರಿಂದ ಮಾನವರಲ್ಲಿ ಹೇಗೆ ಪರಸ್ಪರ ಭಾವನಾ ಸಂಬಂಧಗಳು ಸಾಧ್ಯವೋ ಹಾಗೆ ಪ್ರಕೃತಿಯೊಡನೆಯೂ ಪ್ರೀತಿ, ದ್ವೇಷ, ಔದಾಸೀನ್ಯ ಮೊದಲಾದ ಸಂಬಂಧಗಳನ್ನು ಇಟ್ಟುಕೊಳ್ಳುವುದು ಸಾಧ್ಯವಾಗಿದೆ. ಶಕುಂತಲೆಯು ಹೊರಡುವಾಗ ವನಕ್ಕೆ ವನವೇ ಗೋಳಿಡುವುದರ ತಾತ್ಪರ್ಯ ಈಗ ವ್ಯಕ್ತವಾಗುವುದು. ಅದೆಲ್ಲ ಅಸಂಭವ, ಅತಿಶಯೋಕ್ತಿಗಳಲ್ಲವೆಂದೂ ಸೂಕ್ಷ್ಮದೃಷ್ಟಿಯುಳ್ಳ ಕವಿಹೃದಯಕ್ಕೆ ಮಾತ್ರ ಗೋಚರವಾಗುವ ಸೃಷ್ಟಿಯ ಗೂಢತತ್ವವೆಂದೂ ಮನಗಾಣುವುದು. ಶಕುಂತಲೆಗೂ ಆಶ್ರಮಕ್ಕೂ

ಇದ್ದ ಬಾಂಧವ್ಯಕ್ಕೆ ಕಾರಣವಿದೆ. ಇವಳನ್ನು ಎಲ್ಲ ದೃಷ್ಟಿಯಿಂದಲೂ ಪ್ರಕೃತಿಯ ಮಗಳೆನ್ನಬಹುದು. ತಾಯಿಯು ತ್ಯಜಿಸಿದ ಕೂಡಲೆ ಪಕ್ಷಿಗಳು ಇವಳನ್ನು ಕಾಪಾಡಿದುವು. ಆಶ್ರಮಕ್ಕೆ ಬಂದಮೇಲೂ ಕಣ್ವರಿಗೆ ಇವಳಲ್ಲಿದ್ದ ಪಿತೃವಾತ್ಸಲ್ಯವು ಆಶ್ರಮದ ವೃಕ್ಷಗಳಲ್ಲಿದ್ದ ಮೈತ್ರಿಯಂತೆಯೇ ಎನ್ನಬಹುದು. ಸಂಯಮಿಗಳಾದ ಕಣ್ವರಿಗೆ ಶಕುಂತಲೆಯೂ ಆಶ್ರಮದ ಒಂದು ಹೂವು. ಇದಕ್ಕೆ ತಕ್ಕಂತೆ ಶಕುಂತಲೆಗೆ ಬಹಳ ಕಾಲ ಪ್ರಕೃತಿಯ ಸಹವಾಸವೇ ದೊರಕುವುದು. ಸಖಿಯರೊಡನೆ ಗಿಡಗಳಿಗೆ ನೀರೆರೆಯುವುದು; ಅವು ಮೊಳೆತು ಕ್ರಮವಾಗಿ ಬೆಳೆಯುವುದನ್ನು ಗಮನಿಸಿ ಸಂತೋಷಹೊಂದುವುದು; ಅವುಗಳಿಗೆ ನೋವಾಗದಂತೆ ನೋಡಿಕೊಳ್ಳುವುದು. ಇದೇ ಅವಳ ದಿನ ಚರ್ಯೆ — ಪಾತುಂ ನ ಪ್ರಥಮಂ ವ್ಯವಸ್ಯತಿ ಜಲಂ........ಎಂಬ ಶ್ಲೋಕವು ಅವಳ ಸ್ವಭಾವವನ್ನು ಚೆನ್ನಾಗಿ ಚಿತ್ರಿಸುವುದು. ಮಗುವಾಗಿದ್ದಾಗ ರಕ್ಷಿಸಿದ ಪ್ರಕೃತಿಯ ಸಾಲವನ್ನು ತೀರಿಸುವುದಕ್ಕೋ ಎಂಬಂತೆ ಅನಾಥ ಮೃಗಗಳಿಗೆ ಸಕಾಲಕ್ಕೆ ಆಹಾರಕೊಟ್ಟು ತಾಯಿಯಂತೆ ಕಾಪಾಡುವಳು. ಅವುಗಳ ಬಾಯಿ ಹುಣ್ಣಾದಾಗ ಇಂಗುದೀ ತೈಲವನ್ನು ಸವರುವಳು. ತಾನು ನೀರೆರೆದು ಬೆಳೆಸಿದ ಲತಾವೃಕ್ಷಗಳು 'ಪ್ರಾಪ್ತವಯಸ್ಕರಾದ ಕೂಡಲೆ' ಅನುರೂಪ್ಯಕ್ಕೆ ತಕ್ಕಂತೆ ಮದುವೆಯನ್ನು ಮಾಡುವಳು. ಹೀಗೆ ವನಜ್ಯೋತ್ಸ್ನೆಗೂ ಸಹಕಾರಕ್ಕೂ ಮದುವೆಯಾಗುವುದು. ಇದಕ್ಕೆ ಪ್ರತಿಯಾಗಿ ಪ್ರಕೃತಿಯೂ ದಯೆ ಕೃತಜ್ಞತೆ ಗಳನ್ನು ಸೂಚಿಸಿ ಅವಳು ಹೊರಡುವ ಸಮಯದಲ್ಲಿ ತಾಯಿಗಿಂತ ಹೆಚ್ಚಾಗಿ ದುಃಖಪಡುವುದು. ಗಿಡಮರಗಳು ಅವಳಿಗೆ ವಸ್ತ್ರಾಭರಣಗಳನ್ನು ಒದಗಿಸು ವುವು. ಕೋಗಿಲೆಗಳು ಕೂಗುವುವು. ಜಿಂಕೆಮರಿಯು ಸೆರಗನ್ನು ಹಿಡಿದೆಳೆ ಯುವುದು. ಹೀಗೆ ಇಲ್ಲಿನ ಸೋದರಸ್ನೇಹ ವಾತ್ಸಲ್ಯಗಳು ಧರ್ಮಕ್ಕೆ ಕಟ್ಟು ಬಿದ್ದು ಅದರೊಡನೆ ಸಮನ್ವಯ ಹೊಂದುವುದು ಅತ್ಯಂತ ಆಹ್ಲಾದಕರವಾಗಿದೆ. ಇದಕ್ಕಾಗಿ ಎಷ್ಟು ಮೆಚ್ಚುಗೆಯನ್ನು ವ್ಯಕ್ತಪಡಿಸಿದರೂ ಸ್ವಲ್ಪವೇ ಆಗುವುದು.

ಇಲ್ಲಿಂದ ಮುಂದಕ್ಕೆ ಕತೆಯು ಬೇಗ ಸಾಗುವುದು. ಸನ್ನಿವೇಶದಲ್ಲಿ ಹೆಚ್ಚು ವೈವಿಧ್ಯವೂ ನಾಟಕೀಯತೆಯೂ ಉಂಟಾಗುವುವು. ನಾಲ್ಕನೆಯ ಅಂಕದಲ್ಲಿನ ಶಾಂತವಾದ ವಾತಾವರಣ, ಸಂಯಮಯುತವಾದ ಸಾಂಸಾರಿಕ ಮನೋಭಾವಗಳು ಮಾಯವಾಗಿ ಪಟ್ಟಣದ ನಾಗರಿಕ ಜೀವನದ ಮತ್ತು

ರಾಜಠೀವಿ, ಭೋಗಗಗಳ ಪರಿಚಯವೂ ಉಂಟಾಗುವುದು. ಶಾರ್ಙ್ಗರವ, ಶಾರದ್ವತರು ಪ್ರಾಮುಖ್ಯ ಹೊಂದುವರು. ಶಕುಂತಲೆಯು ಇವರೊಡನೆ ಬಂದು ದುಷ್ಯಂತನ ಸಮಾಗಮಹೊಂದಲು ಪ್ರಯತ್ನಿಸುವಳು. ಕಾಶ್ಯಪರು ಒಂದು ಸಣ್ಣ, ಆದರೂ ಅರ್ಥಗರ್ಭಿತವಾದ, ಸಂದೇಶವನ್ನು ಕಳುಹಿಸಿರುವರು. ರಾಜಧಾನಿಯ ವಾತಾವರಣಕ್ಕೆ ಬರುತ್ತಲೇ ಶಾರ್ಙ್ಗರವ, ಶಾರದ್ವತರಲ್ಲಿ ಜುಗುಪ್ಸೆ, ಔದಾಸೀನ್ಯಗಳು ಹುಟ್ಟುವುವು. ಇಲ್ಲಿನ ಆಡಂಬರ, ಅನೀತಿಗಳು ಅವರಿಗೆ ಸಹಿಸವು. ಹೇಗೋ ಶಕುಂತಲೆಗೋಸ್ಕರ ಎಲ್ಲವನ್ನೂ ಸಹಿಸಿ ಕೊಂಡು ಬಂದು ಇಲ್ಲಿನ ಸಮುದಾಚಾರಗಳಿಗೆಲ್ಲ ತಲೆಬಾಗಿ ದುಷ್ಯಂತನನ್ನು ಕಾಣುವರು. ಶಕುಂತಲೆಗೆ ಆಗಲೇ ಅಪಶಕುನ ಸೂಚನೆಯಾಗುವುದು. ಮೂರು ದಿವಸದೊಳಗೆ ಪರಿಜನರನ್ನು ಕಳುಹಿಸಿ ಕರೆಸಿಕೊಳ್ಳುವೆನೆಂದು ಹೇಳಿ ಹೋಗಿದ್ದ ದುಷ್ಯಂತನು ಇದುವರೆಗೆ ಆ ವಿಚಾರಕ್ಕೆ ಗಮನಕೊಡದಿದ್ದುದೇ ಸಂಶಯಕ್ಕೆಡೆಗೊಟ್ಟಿತ್ತು. ಜೊತೆಗೆ ತನ್ನ ಆಗಮನವನ್ನು ತಿಳಿದಾಗಲೂ, ತಾನೇ ಎದುರಿಗೆ ಬಂದು ನಿಂತಾಗಲೂ ದೊರೆಗೆ ನೆನಪು ಬರದೆ ಇದ್ದುದು ಮತ್ತೂ ನಿರಾಶೆಯನ್ನುಂಟುಮಾಡಿತ್ತು. ಮೊಟ್ಟಮೊದಲಿನ ಸಂಭಾಷಣೆಯ ಕೆಲವು ಮಾತುಗಳೇ ಸಾಕಾದುವು ನಿರಾಶೆಯನ್ನು ಖಂಡಿತಗೊಳಿಸುವುದಕ್ಕೆ. ಶಾರ್ಙ್ಗರವ, ಶಾರದ್ವತರು ರೇಗಿಬಿದ್ದು ದೊರೆಯನ್ನು ನಿಂದಿಸಿದರೂ ಪ್ರಯೋಜನವಾಗುವುದಿಲ್ಲ. ಶಕುಂತಲೆಯ ಸಂಭಾಷಣೆಯಂತೂ ಇವಳನ್ನೇ ಇನ್ನೂ ನಗೆಗೀಡುಮಾಡುವುದು. ಪಾಪ! ದೊರೆ ಏನು ಮಾಡಿಯಾನು? ಎಲ್ಲ ದುರ್ವಾಸ ಶಾಪದ ಫಲ. ಅಲ್ಲ; ಅದಕ್ಕಿಂತ ಹೆಚ್ಚಾಗಿ ವಿಧಿಯು ವಿಧಿಸಿದ ಶಿಕ್ಷೆ. ಶಾಪದ ವಿಮೋಚನೆಗಾಗಿ ಬೇಕಾಗಿದ್ದ ಉಂಗುರವೂ ಕಳೆದುಹೋಗುವಂತೆ ಮಾಡಿತ್ತು ವಿಧಿ. ಅತಿಮಾನುಷ ಹಂಚಿಕೆಗಳ ಮುಂದೆ ಮಾನುಷ ಜಲ್ಪಿತ, ಕೃತಿ, ಯುಕ್ತಿಗಳೆಲ್ಲ ವಿಫಲ. ಎಂತೆಂತಹ ಹಿಂದಿನ ರಹಸ್ಯ ನಡವಳಿಕೆಗಳನ್ನು ನೆನಪಿಗೆ ತರಬೇಕೆಂದು ಯತ್ನಿಸಿದರೂ ದೊರೆಗೆ ಯಾವುದೂ ತಿಳಿಯುವುದಿಲ್ಲ. ಅವನೀಗ ಹೊಸ ಮನುಷ್ಯ. ಹೀಗಾಗಿ ಶಕುಂತಲೆಯ ಜೀವನದ ಏಕಮಾತ್ರ ಆಶಯವು ಮುರಿದುಬೀಳುವುದು. ಅವಳಾವಪದವಿಗಾಗಿ ನಿರ್ಮಿತಳಾಗಿದ್ದಳೋ ಆ ಪದವಿಯೇ ಅವಳಿಗೆ ಸಿಕ್ಕದೆ ಹೋಗುವುದು. ಪುನಃ ಆಶ್ರಮಕ್ಕೇ ಹೋಗುವುದೇ? ಅದೇ ಅವಳಿಗೆ ಸರಿಯಾದ ಸ್ಥಾನವೇ? ಅಲ್ಲ. ಖಂಡಿತ

ಅಲ್ಲ. ಕಾಶ್ಯಪರ ದೃಷ್ಟಿಯಿಂದಲೂ ಅವಳಿಗೆ ಆಗ ಆಶ್ರಮದಲ್ಲಿ ಸ್ಥಾನವಿಲ್ಲ. ಮಹಿಷೀಪಟ್ಟವನ್ನು ದೀರ್ಘಕಾಲ ಅಲಂಕರಿಸಿ ಸಮರ್ಥನಾದ ದೌಷ್ಯಂತಿಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ರಾಜ್ಯಸೂತ್ರವನ್ನು ಅವನ ಕೈಯ್ಯಲ್ಲಿಟ್ಟು ಪತಿಸಮೇತಳಾಗಿ ಅವಳು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕಾಗಿತ್ತು. ಆಗಲೇ ಅವಳಿಗೆ ಆಶ್ರಮದಲ್ಲಿ ಸ್ಥಾನ. ಆದುದರಿಂದ ದೊರೆಯು ಅವಳನ್ನು ನಿರಾಕರಿಸಿದ ಮೇಲೆ ಶಾರ್ಙ್ಗರವ, ಶಾರದ್ವತರು ಅವಳನ್ನು ಆಶ್ರಮಕ್ಕೆ ಕರೆದೊಯ್ಯಲು ಒಡಂಬಡುವುದಿಲ್ಲ. ಆಗ ಅವರು ಹೇಳುವ ಮಾತು ಕ್ರೂರವಾಗಿ ತೋರಿದರೂ ಅಕ್ಷರಶಃ ನಿಜವಾದ್ದು, ಧರ್ಮಸಮ್ಮತವಾದ್ದು. 'ನೀನು ಹೇಳಿದ್ದು ನಿಜವಾದರೆ ಇದೇ ನಿನಗೆ ಸ್ಥಾನ, ಇಲ್ಲೇ ನೀನಿರಬೇಕಾದ್ದು; ದೊರೆ ಹೇಳುವುದು ನಿಜವಾದರೆ ನೀನು ಅಸತಿಯಾಗುತ್ತೀ. ಕಾಶ್ಯಪರಿಗೆ ನಿನ್ನಿಂದಾಗಬೇಕಾದ್ದೇನು?" ಎನ್ನುವ ತಾತ್ಪರ್ಯದಿಂದ ಅವರೂ ಹೊರಡುವರು. ಶಕುಂತಲೆಯ ಸ್ಥಿತಿ ಸಂದಿಗ್ಧವಾಗುವುದು. ಭವಿಷ್ಯ ಅನಿರ್ದಿಷ್ಟವಾಗುವುದು. ಧರ್ಮಾಧರ್ಮನಿರ್ಣಯವಾದ ಹೊರತು ಮನಸ್ಸು ಸಮಾಧಾನ ಹೊಂದದಂತಾಗುವುದು. ನಿರ್ಣಯಕ್ಕೆ ಯಾವ ಆಧಾರವೂ ಇಲ್ಲ. ವಿದೂಷಕನಾದರೂ ಆಗ ಅಲ್ಲಿದ್ದಿದ್ದರೆ ಶಕುಂತಲೆಯ ಕಡೆಗೆ ಸಾಕ್ಷಿ ದೊರೆಯುತ್ತಿತ್ತು. ಆದರೆ ಅವನೂ ಹೊರಟುಹೋಗಿದ್ದನು. ಇದಕ್ಕೆ ಮೊದಲೂ ಶಕುಂತಲೆಯ ವಿಚಾರವನ್ನು ಅವನು ದೊರೆಯೊಡನೆ ಪ್ರಸ್ತಾಪಿಸುವುದಕ್ಕೆ ಅವಕಾಶವೊದಗಿರಲಿಲ್ಲ. ದೊರೆಯ (ಎರಡನೆಯ ಅಂಕದ ಕೊನೆಯಲ್ಲಿ ಹೇಳುವ) ಮಾತಿನ ಆಧಾರದಿಂದಲೇ ಅವನೂ ಶಕುಂತಲೆಯ ವಿಚಾರವನ್ನು ಮರೆತಿದ್ದನು. ಹೇಗೂ ಶಕುಂತಲೆಯು ಉಭಯತ್ರ ಪರಾಭವ ಹೊಂದಿ ಪುರೋಹಿತನ ಮನೆಯಲ್ಲಿ ನಿಲ್ಲಬೇಕಾದ ಸಲಹೆಗೂ ಒಡಂಬಡಬೇಕಾಗುವುದು. ಮಗನು ಜನಿಸಿದ ಮೇಲಾದರೂ ದೊರೆಯನ್ನು ಒಪ್ಪಿಸಬಹುದೆಂಬ ಒಂದೇ ಒಂದು ಆಶಾಕಿರಣವನ್ನು ನಂಬಿಕೊಂಡು ಈ ಸಲಹೆಗೆ ಅವಳು ಒಪ್ಪುವಳು. ಆದರೆ ಇವಳ ತಾಯಿಯು ಮಗಳಿಗಾದ ಅವಮಾನವನ್ನು ಸಹಿಸದೆ ಇವಳನ್ನು ಹೇಮಕೂಟಕ್ಕೆ ಕರೆದೊಯ್ಯುವಳು. ನಾಲ್ಕನೆಯ ಅಂಕಕ್ಕಿಂತ ಐದನೆಯ ಅಂಕವೇ ಚೆನ್ನಾಗಿದೆಯೆಂದು ಕೆಲವರ ಅಭಿಪ್ರಾಯ. ಇಲ್ಲಿ ಒಂದು ವಿಧವಾದ ಜಮಾವಣೆಯಿದೆ; ದೊರೆತನದ ವೈಭವ ರೀತಿಗಳು; ಹೃದಯವನ್ನು ಮುಟ್ಟುವ ಮಾತುಗಳು;

ಎರಡು ಕಡೆಗೂ ಸಮತೂಗುವ ವಾದಗಳ ಬಿಕ್ಕಟ್ಟು; ಎರಡು ಮನೋಭಾವಗಳ ಸಂಘರ್ಷಣೆ; ಅದರಲ್ಲೂ ಪರಸ್ಪರ ಜ್ಞಾನವಿಲ್ಲದ ವಿವಾದ; ಇವೆಲ್ಲ ಹೆಚ್ಚು ಹೃದಯಾವರ್ಜಕವಾಗಿವೆಯೆಂದು ಹೇಳುವುದುಂಟು. ಆದರೆ ಒಟ್ಟಿನಲ್ಲಿ ಈ ಅಭಿಪ್ರಾಯವೆಲ್ಲ 'ರುಚಿಭೇದ' ಮಾತ್ರಕ್ಕೆ ಸೇರಿದ್ದು. ಒಂದೊಂದು ಅಂಕದಲ್ಲಿ ಒಂದೊಂದು ಬಗೆಯ ಸೌಂದರ್ಯವಿದೆ. ನಾಲ್ಕನೆಯ ಅಂಕದ ಸಂಗತಿಗಳು ಎಂದರೆ ಆ ವಿಧವಾದ ಅನುಭವಗಳು ಸಾಮಾನ್ಯಜನ ಹೃದಯಕ್ಕೆ ಹೆಚ್ಚು ಪರಿಚಿತವೆಂದು ಮಾತ್ರ ಹೇಳಬಹುದು. ಉಳಿದ ವಿಚಾರದಲ್ಲಿ ಎರಡು ಅಂಕಗಳೂ ಸಮಾನ.

ನಾಟಕವನ್ನು ಇಲ್ಲಿಗೇ ಕೊನೆಗಾಣಿಸಿದ್ದರೆ ಚೆನ್ನಾಗಿತ್ತೆಂದು ಒಂದು ವಾದ. ಅದನ್ನು ಇಲ್ಲಿ ವಿಚಾರಮಾಡುವುದು ಸೂಕ್ತವಾಗಿದೆ. ದುರಂತನಾಟಕಗಳು ಮಂಗಳಾಂತನಾಟಕಗಳಿಗಿಂತ ಚೆನ್ನಾಗಿ ಪ್ರೇಕ್ಷಕರ ಹೃದಯವನ್ನು ಮುಟ್ಟುತ್ತವೆಯೆಂದೂ ಸುಪ್ರಸಿದ್ಧರಾದ ಗ್ರೀಕ್ ಕವಿಗಳೂ ಇಂಗ್ಲೆಂಡಿನ ಷೇಕ್ಸ್‌ಪಿಯರ್ ಮಹಾಕವಿಯೂ ದುರಂತನಾಟಕಗಳನ್ನು ರಚಿಸಿಯೇ ಹೆಚ್ಚು ಪ್ರಸಿದ್ಧಿ ಪಡೆದಿರುವರೆಂದೂ ಹೇಳಲಾಗಿದೆ. ಇದರಂತೆ ಭಾರತೀಯ ಕವಿಶಿರೋಮಣಿಯಾದ ಕಾಳಿದಾಸನೂ ತನ್ನ ನಾಟಕರತ್ನವನ್ನು ದುರಂತ ನಾಟಕವನ್ನಾಗಿ ರಚಿಸಿದ್ದರೆ ಮತ್ತೂ ಪ್ರಸಿದ್ಧಿ ಪಡೆಯಬಹುದಾಗಿತ್ತೆಂದು ಇವರ ವಾದ. ನಾಟಕದ ಕತೆಗೆ ಸ್ವಾಭಾವಿಕವಾದ ದುರಂತಾಂಶವನ್ನು ಬಿಟ್ಟು, ಭಾರತೀಯ ಸಹಜವಾದ ಮಂಗಳಾಂತ ಮನೋಭಾವಕ್ಕೆ ಕಟ್ಟುಬಿದ್ದು ದುಷ್ಯಂತ ಶಕುಂತಲೆಯರ ಪುನಸ್ಸಮಾಗಮವನ್ನು ಏರ್ಪಡಿಸಿ ನಾಟಕವನ್ನು ಕೊನೆಗಾಣಿಸಿರುವುದು ಸರಿಯಲ್ಲವೆಂದು ಅಭಿಪ್ರಾಯ. ಇನ್ನೂ ಸ್ಪಷ್ಟವಾಗಿ ಹೇಳಬಹುದಾದರೆ ಕಡೆಯ ಎರಡು ಅಂಕಗಳನ್ನು ಪ್ರಯತ್ನಪೂರ್ವಕವಾಗಿ ಸೇರಿಸಿದಂತೆಯೂ ಕತೆಗೆ ಅದು ಅಸ್ವಾಭಾವಿಕವಾದ ಪರ್ಯವಸಾನವೆಂದೂ ಅಭಿಪ್ರಾಯಪಡಲಾಗಿದೆ. ಇದನ್ನು ವಿಮರ್ಶಿಸುವ ಮೊದಲು ದುರಂತ ನಾಟಕಗಳ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ.

ದುರಂತ ನಾಟಕಗಳನ್ನು ರಚಿಸಿದ ಹಿರಿಮೆಯು ಕಾಳಿದಾಸನಿಗೇಕೆ, ಒಟ್ಟಿನಲ್ಲಿ ಸಂಸ್ಕೃತಕವಿಗಳಿಗೇ ಸಲ್ಲುವುದಿಲ್ಲವೆಂಬ ಅಭಿಪ್ರಾಯವೂ ಇದೆ. ಇದನ್ನೇ ಮೊದಲು ವಿಮರ್ಶಿಸಬೇಕಾಗಿದೆ. ಮೊದಲಾಗಿ ಪಾಶ್ಚಾತ್ಯ ದುರಂತ

ನಾಟಕಗಳಿಗೆ ಸಲ್ಲುತ್ತಿರುವ ಪ್ರಶಂಸೆಗೆ ಅವುಗಳ ಅಮಂಗಳಾಂತ ಸ್ವರೂಪ (Tragic end)ವೇ ಕಾರಣವೇ ಅಥವಾ ಶೋಕರಸಾತ್ಮಕತ್ವವೇ ಕಾರಣವೇ ಎಂದು ಯೋಚಿಸಬೇಕು. ದುರಂತ ನಾಟಕಗಳಲ್ಲಿಯೂ ಅಮಂಗಳದ ಜೊತೆಗೆ ಕಡೆಯಲ್ಲಿ ಮನಸ್ಸಮಾಧಿಗೆ ಆವಶ್ಯಕವಾದ ಭಾವನೆಯು ಇದ್ದೇ ಇರಬೇಕೆಂದು ಪಾಶ್ಚಾತ್ಯರೇ ಅಭಿಪ್ರಾಯಪಡುತ್ತಾರೆ. ದುರಂತವು ಕೇವಲ ಅನ್ಯಾಯವಾಗಿರಬಾರದು. ಸಹಿಸುವಹಾಗಿರಬೇಕು. ಆದುದರಿಂದ ದುರಂತ ತೆಯೇ ಆ ನಾಟಕಗಳ ಯೋಗ್ಯತೆಯ ವೈಶಿಷ್ಟ್ಯವೆಂದು ಹೇಳಲಾಗದು. ಎಂದ ಮೇಲೆ ಶೋಕರಸಾತ್ಮಕತ್ವವು (Tragic element or sentiment) ದುರಂತತೆಗಿಂತ (Tragic end) ಮುಖ್ಯ. ಈ ದೃಷ್ಟಿಯಿಂದ ನೋಡಿದರೆ ಸಂಸ್ಕೃತ ನಾಟಕಗಳ ನ್ಯೂನತೆಯೆಂದು ಹೇಳಲಾಗಿರುವ ಅಂಶವು ಮಾಯ ವಾಗುವುದು. ಶೋಕರಸಾತ್ಮಕತ್ವವು ಇಲ್ಲಿಯೂ ವಿಶೇಷವಾಗಿದೆ. ಮಂಗಳ ಕರವಾದ ಕೊನೆಯಿದ್ದರೂ ನಾಟಕದ ಮಧ್ಯದಲ್ಲಿ ಮನಕರಗಿಸುವ ಸನ್ನಿವೇಶ ಗಳು ಬಂದೇ ಬರುತ್ತವೆ. ದುಃಖದ ಪರಿಚಯವು ಆಗಬೇಕಾದಷ್ಟು ಆಗಿಯೇ ಆಗುವುದು. ಜೊತೆಗೆ ದುರಂತ ನಾಟಕಗಳೂ (ಕೆಲವೇ ಆದರೂ) ಇವೆ. ಆದುದರಿಂದ ದುರಂತ ನಾಟಕಗಳ ಅಭಾವನಿಮಿತ್ತವಾದ ನ್ಯೂನತೆಯನ್ನು ಸಂಸ್ಕೃತಸಾಹಿತ್ಯಕ್ಕೆ ಆರೋಪಿಸುವುದು ಸರಿಯಲ್ಲ. ಇನ್ನು ಶಾಕುಂತಲದ ವಿಚಾರ.

ಶಾಕುಂತಲವನ್ನು ಐದನೆಯ ಅಂಕಕ್ಕೇ ಕೊನೆಗಾಣಿಸಿದ್ದರೆ ಅದರ ಗಣ್ಯತೆಗೆ ಕುಂದು ಬರುತ್ತಿತ್ತೆಂದು ಖಂಡಿತವಾಗಿ ಹೇಳಬಹುದು. ಶಾಕುಂತ ಲದ ರಚನೆಯಲ್ಲಿ ಕವಿಗಿದ್ದ ಆಶಯವನ್ನು ಹಿಂದೆಯೇ ವಿಶದಪಡಿಸಿದೆ. ದುಷ್ಯಂತ ಶಕುಂತಲೆಯರ ಪುನಸ್ಸಮಾಗಮವು ನಡೆಯದೇ ಇದ್ದಿದ್ದರೆ ಆ ಉತ್ತಮವಾದ ಆಶಯಕ್ಕೆ ಲೋಪ ಬರುತ್ತಿತ್ತು. ಪರಿಪಕ್ವವಾದ ಶುದ್ಧಪ್ರೇಮದ ಪರಿಚಯವು ಆಗುತ್ತಿರಲಿಲ್ಲ. 'ಉಚ್ಛೃಂಖಲವಾದ ಕಾಮಕ್ರೋಧಗಳನ್ನೆಬ್ಬಿ ಸುವ ಶೋಕಾಗ್ನಿಪರ್ವತಗಳನ್ನು ಪಶ್ಚಾತ್ತಾಪದ ಕಣ್ಣೀರಿನಿಂದ ಆರಿಸಿ' ದುದರ ಅನುಭವವು ಗಮನಕ್ಕೆ ಬರುತ್ತಿರಲಿಲ್ಲ. ಇದಲ್ಲದೆ, ನಾಟಕವು ಐದನೆಯ ಅಂಕಕ್ಕೇ ಮುಗಿದು ದುರಂತ ನಾಟಕವೆನಿಸಿಕೊಂಡಿದ್ದರೂ ಆದರ್ಶದುರಂತ ನಾಟಕವಾಗುತ್ತಿರಲಿಲ್ಲ. ಮನಸ್ಸು ಸಮಾಧಾನಹೊಂದುವ ಅವಕಾಶವಿಲ್ಲದೆ

ಇರುವುದರಿಂದ ಕೇವಲ ವಿಷಾದದಲ್ಲಿ ಕೊನೆಗಾಣಬೇಕಾಗಿತ್ತು. ಮೇಲೆ ತಿಳಿಸಿದಂತೆ ಐದನೆಯ ಅಂಕದ ಸಂಗತಿಗಳಿಂದ ಯಾವ ವಿಧವಾದ ಧರ್ಮ ನಿರ್ಣಯವೂ ಆದಂತಾಗುವುದಿಲ್ಲ. ನಾಯಕ ನಾಯಿಕೆಯರ ವಿಚ್ಛೇದದಲ್ಲಿ ಪರ್ಯವಸಾನಹೊಂದಿದರೂ ಅದು ಸಕಾರಣವಾದ, ನ್ಯಾಯವಾದ, ವಿಚ್ಛೇದ ವಾಗಿದ್ದರೆ, ನಾಟಕವು ಆದರ್ಶದುರಂತನಾಟಕವಾಗಬಹುದಾಗಿತ್ತು. ಆದರೆ ಧರ್ಮನಿರ್ಣಯವಾಗುವವರೆಗೂ ಕತೆ ಬೆಳೆಯದೆ ಇದ್ದರೆ ಇದು ಸಾಧ್ಯವಿಲ್ಲ. ಹೀಗೆ ಶಾಕುಂತಲವು ದುರಂತನಾಟಕವಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತೊ ಅದಕ್ಕಿಂತ ಸಾವಿರ ಪಾಲು ಈಗ ರಮ್ಯವಾಗಿದೆ. ಒಂದುಪಕ್ಷ ಕವಿಯು ಮನಸ್ಸುಮಾಡಿ ಇದನ್ನು ದುರಂತವನ್ನಾಗಿ ಮಾಡಿದ್ದರೆ ಆಗ ಸೊಗಸಾಗಿಯೇ ಇರುತ್ತಿತ್ತೇನೋ ಈಗ ಹೇಳಲಸಾಧ್ಯ. ಈಗಿರುವ ನಾಟಕವನ್ನು ಮಾತ್ರ ಐದನೆಯ ಅಂಕ ಪೂರ್ತಿ ಕತ್ತರಿಸಿದರೆ ರಮ್ಯವಾದ ದುರಂತ ನಾಟಕ ವಾಗುವುದೆನ್ನುವ ವಾದವನ್ನು ಖಂಡಿತ ಒಪ್ಪಲು ಸಾಧ್ಯವಿಲ್ಲ. ಕವಿಯು ಆಶಾವಾದಿಗಳ ಗುಂಪಿಗೆ ಸೇರಿದವನು. ಅವನ ಭಾಗಕ್ಕೆ 'ಮರ್ತ್ಯ'ವು 'ಸ್ವರ್ಗ' ವಾಗುವುದು ಸುಸಾಧ್ಯ. 'ಸ್ವಾಭಾವಿಕ ವರ್ತನೆ'ಗೂ 'ಸಂಯಮ' ಕ್ಕೂ ವಿರೋಧವಿಲ್ಲ. ಐಹಿಕ ಪ್ರೇಮವೂ ಸುಂದರವಾದುದು. ಆದರೂ ಅದು ದಿವ್ಯಪ್ರೇಮವೇ ಆಗಬೇಕು; ಆಗಬಲ್ಲುದು. 'ತರುಣವತ್ಸರದ ಪುಷ್ಪ' ಅರಳಿದ ಮೇಲೆಯೇ 'ಪರಿಣತವತ್ಸರದ ಫಲ'ಕ್ಕೆ ಅವಕಾಶ. 'ಪ್ರೇಮ' ಧರ್ಮಗಳ ಸಮನ್ವಯವು ಅತ್ಯವಶ್ಯ ಆಗಬೇಕು. ದುಷ್ಯಂತ ಶಕುಂತಲೆಯರಿಂದ ನಡೆದ ಧರ್ಮಲೋಪವು ಶಿಕ್ಷೆಗೆ ಅರ್ಹವಾದರೂ 'ವಿಚ್ಛೇದ'ವು ಆ ತಪ್ಪಿಗೆ ಬಹಳ ಕಠಿನವಾದ ಶಿಕ್ಷೆ. ಶಿಕ್ಷೆಯನ್ನು ಅನುಭವಿಸಿದ ಮೇಲೂ ಪಶ್ಚಾತ್ತಾಪವು ಅವರಲ್ಲಿ ಹುಟ್ಟಬೇಕು. ಆಗಲೇ ಅವರ ಹೃದಯ ಪವಿತ್ರವಾಗುವುದು. ಇದಲ್ಲದೆ 'ತಪ್ಪಿಗೆ ಶಿಕ್ಷೆಯಾಯಿತು. ಪುನಃ ಪಶ್ಚಾತ್ತಾಪವೇಕೆ?' ಎಂಬ ಭಾವನೆಯು ಬರಕೂಡದು. ಅದು 'ಸ್ವರ್ಗೀಯ'ಸ್ಥಿತಿಗೆ ಸಹಜವಲ್ಲ. ಇದನ್ನೆಲ್ಲ ಮನಸ್ಸಿ ನಲ್ಲಿಟ್ಟು ಕವಿಯು ನಾಟಕವನ್ನು ಮಂಗಳಾಂತವನ್ನಾಗಿ ಮಾಡಿರುವುದು. ಜೊತೆಗೆ, ನಾಟಕವು ದುರಂತನಾಟಕವಾದಲ್ಲಿ ಮೊದಲಿನ ಅನೇಕ ವಾಕ್ಯ ಗಳು ವಿಫಲವಾಗುವುವು. ಶಕುಂತಲೆಯ ಪ್ರತಿಕೂಲ ದೈವೋಪಶಮನಕ್ಕಾಗಿ ಕಾಶ್ಯಪರು ಪಟ್ಟ ಕಷ್ಟವೆಲ್ಲ ವ್ಯರ್ಥ. ಶಕುಂತಲೆಯು ಪತಿಗೃಹಕ್ಕೆ ಹೊರಡು

ವಾಗ ಅವರ ಆಶೀರ್ವಾದವು ಸುಳ್ಳಾಗಬೇಕಾಗುವುದು. ದುಷ್ಯಂತ ಶಕುಂತಲೆಯರಿಗೆ ಅಲ್ಲಲ್ಲಿ ಆಗುವ ಶಕುನಗಳೂ ಸುಳ್ಳಾಗುವುವು. ಮೊದಲಿನ ಅಂಕಗಳಲ್ಲಿ ಬರುವ ಈ ವಿಧವಾದ ಸೂಚನೆಗಳಿಂದ ಕವಿಯು ಮನಃಪೂರ್ವಕವಾಗಿ ಇದನ್ನು ಮಂಗಳಾಂತವನ್ನಾಗಿ ಮಾಡಿರುವನೇ ಹೊರತು ಸಂಪ್ರದಾಯಶರಣನಾಗಿ ಅಲ್ಲವೆಂಬುದನ್ನು ಸುಲಭವಾಗಿ ಮನಗಾಣಬಹುದು. ತತ್ವವಿಲ್ಲದ ದುರಂತನಾಟಕವಾಗಿರುವುದಕ್ಕಿಂತ ಅಮೂಲ್ಯ ವ್ಯಂಗ್ಯಾರ್ಥರೂಪದಲ್ಲಿ ಉತ್ತಮ ತತ್ವವನ್ನೊಳಗೊಂಡಿರುವ ಮಂಗಳಾಂತನಾಟಕವಾಗಿರುವುದು ಯಾರಿಗೆತಾನೆ ಹೆಚ್ಚು ರುಚಿಕರವಲ್ಲ?

ಆರು ಮತ್ತು ಏಳನೆಯ ಅಂಕಗಳಿಂದ ಕತೆಗೆ ಒಂದು ನಿರತಿಶಯವಾದ ಸೌಂದರ್ಯವು ಬಂದಿದೆ. ಐದನೆಯ ಅಂಕದ ಕರುಣಾಮಯ ಸನ್ನಿವೇಶಕ್ಕೆ ಆರನೆಯ ಅಂಕದ ಪ್ರವೇಶಕವು ಸರಿಯಾದ ಪರಿಹಾರ. ಇದು ಪ್ರೇಕ್ಷಕರಲ್ಲಿ ಹೊಸ ಉತ್ಸಾಹ ಆಸೆಗಳನ್ನು ಹುಟ್ಟಿಸುವುದು. ಇಲ್ಲಿಂದ ಮುಂದಕ್ಕೆ ನಡೆಯುವ ಸಂಗತಿಗಳೂ ಮನಸ್ಸನ್ನು ಕರುಣರಸದಲ್ಲಿ ಮುಳುಗಿಸುವುದರಿಂದ .ಮಧ್ಯದಲ್ಲಿರುವ ಈ ಹಾಸ್ಯಮಯ ಪ್ರವೇಶಕದಿಂದ ಎಷ್ಟು ಸಹಾಯವಾಗಿದೆಯೆಂಬುದನ್ನು ವರ್ಣಿಸಲು ಸಾಧ್ಯವಿಲ್ಲ. ಕಥಾವಸ್ತುವಿನೊಡನೆ ಹೊಂದಿದಂತೆ ಹಾಸ್ಯಮಯ ಸನ್ನಿವೇಶವಿರುವುದು ಹೆಚ್ಚುಗಾರಿಕೆ. ಉಂಗುರವು ಸಿಕ್ಕುವುದು; ವಿಧಿಯ ಬಲದಿಂದ ದೊರೆಗೆ ನೆನಪು ಬರುವುದು. ಹಿಂದೆ ನಡೆದ ಸಂಗತಿಗಳೆಲ್ಲ ಸ್ಪಷ್ಟವಾಗಿ ಜ್ಞಾಪಕಕ್ಕೆ ಬಂದು ಅವನಲ್ಲಿ ಉತ್ಕಟವಾದ ವೇದನೆ ಪಶ್ಚಾತ್ತಾಪಗಳನ್ನು ಹುಟ್ಟಿಸುವುವು. ಇದುವರೆಗೆ ಇವೆಲ್ಲ ಜನ್ಮಾಂತರ ಸಂಸ್ಕಾರಗಳಂತೆ ಸೂಕ್ಷ್ಮರೂಪದಲ್ಲಿ ಅಡಗಿದ್ದುವು. ರಮ್ಯವಾದ ಹಂಸಪದಿಕೆಯ ಗಾನವನ್ನು ಕೇಳಿದಾಗ ಸ್ಮರಣೆಗೆ ಬಂದಂತಾಗಿದ್ದರೂ ಸಂಗತಿಗಳೆಲ್ಲ ವಿಶದವಾಗಿ ಜ್ಞಾಪಕಕ್ಕೆ ಬಂದಿರಲಿಲ್ಲ. ತಿಳಿದೂ ತಿಳಿಯದವನಂತೆ ಆಗ 'ಪರ್ಯುತ್ಸುಕ' ನಾಗಿದ್ದ. ಆದರೆ ಈಗ ಆ ದಶೆಯು ಹೋಗಿ ಸಾಕ್ಷಾತ್ತಾಗಿ ಶಕುಂತಲಾವಿರಹದುಃಖವನ್ನು ಅನುಭವಿಸಲಾರಂಭಿಸಿದನು. ಅವಳನ್ನು ಕಟುವಾಗಿ ಟೀಕಿಸಿ, ಅವಮಾನಗೊಳಿಸಿ ನಿರಾಕರಿಸಿದುದೆಲ್ಲ ಈಗ ಶೂಲಪ್ರಾಯವಾಗಿ ಅವನನ್ನು ಹಿಂಸಿಸತೊಡಗಿತು. ಇಲ್ಲಿನ ಸನ್ನಿವೇಶವು ದುಷ್ಯಂತನನ್ನು ನಮ್ಮ ಹೆಚ್ಚಿನ ಮೆಚ್ಚುಗೆಗೆ ಗುರಿಮಾಡುವುದು. ಇಲ್ಲಿ ಅವನು ಅತಿ

ಮಾನುಷಪದವಿಗೇರುವನು. ವಿಪ್ರಲಂಭಶೃಂಗಾರದ ಪರಿಪೋಷವು ಚೆನ್ನಾಗಿ ನಡೆದಿದೆ. ಪ್ರಥಮಸಮಾಗಮದ ಗಾಂಧರ್ವವಿವಾಹಕ್ಕೆ ಮೊದಲಿನ ವಿಪ್ರಲಂಭಕ್ಕಿಂತ ಇಲ್ಲಿನ ವಿಪ್ರಲಂಭಶೃಂಗಾರವು ಕಡುತರವಾಗಿಯೂ ಹೆಚ್ಚು ಕರುಣಾವಹವಾಗಿಯೂ ಇದೆ. ವಿರಹದುಃಖದಲ್ಲಿ ಕೃಶನಾಗಿ ದುಷ್ಯಂತನು ಪುನಃ ಶಕುಂತಲೆಯನ್ನು ಹೊಂದಲು ಪ್ರಯತ್ನಿಸುವನು. ಆದರೆ ಈ ವೇಳೆಗೆ ಶಕುಂತಲೆಯು ತಪಸ್ಸನ್ನಾಚರಿಸಿ ಮಾನುಷತೆಯ ಲೋಪದೋಷಗಳನ್ನು ಕಳೆದುಕೊಂಡಿರುವಳು. ದೈವಾನುಗ್ರಹವಿಲ್ಲದೆ ಅವಳು ದುರ್ಲಭಳು. ಮರ್ತ್ಯಜೀವನದ ಕರ್ಕಶ ಅನುಭವಗಳನ್ನು ಹೊಂದಿಯೂ ಪತಿಯ ವಿಷಯದಲ್ಲಿ ಅಸಮಾಧಾನ ಹೊಂದದೆ ಮೊದಲಿನಂತೆ ಪ್ರೀತಿಗೌರವಗಳನ್ನು ಹೊಂದಿರುವಳು. ಅವನನ್ನು 'ಅನಾರ್ಯ'ನೆಂದು ಜರೆದ ಅಹಂಕಾರವೂ ಮಾಯವಾಗಿರುವುದು. 'ದೈವಮತ್ಸರ'ವೇ ತನ್ನ ದಶೆಗೆ ಕಾರಣವಾಗಿತ್ತೆಂದು ಈಗ ಅವಳಿಗೆ ನಂಬಿಕೆ ಬಂದಿದೆ. ಏಳನೆಯ ಅಂಕದಲ್ಲಿ ದುಷ್ಯಂತನನ್ನು ಕಾಣುವಾಗ ಹೇಳುವ 'ಪರಿತ್ಯಕ್ತಮತ್ಸರೇಣಾನುಕಂಪಿತಾಸ್ಮಿ ದೈವೇನ' ಎಂಬ ಮಾತು ಇದನ್ನು ಸಮರ್ಥಿಸುವುದು. ಹೀಗೆ ಮಾನುಷ ಅಭಿಮಾನ, ಸಂದೇಹಗಳನ್ನು ತೊರೆದು ಅವಳು ಪವಿತ್ರವಾದ ಮಾರೀಚಾಶ್ರಮದಲ್ಲಿ ನೆಲಸಿರುವಳು. ಅವಳ ಪತಿಪ್ರೇಮವು ವೈಷಯಿಕತೆಯನ್ನು ತ್ಯಜಿಸಿ ಶುದ್ಧವಾಗಿರುವುದು. ಇಂತಹವಳೊಡನೆ ಸಮಾಗಮ ಹೊಂದಲು ದುಷ್ಯಂತನು ಅಲ್ಲಿಗೇ ಹೋಗುವುದು ಸಹಜವಷ್ಟೆ. ಇದಕ್ಕೆ ತಕ್ಕಂತೆ ದುಷ್ಯಂತನ ಪಶ್ಚಾತ್ತಾಪವೂ ಕೊನೆಕೊನೆಗೆ ವಿಷಯಾಸಕ್ತಿಯ ಮಟ್ಟವನ್ನು ಮೀರುವುದು. ವಿವಾಹವು ದಂಪತಿಗಳ ಐಹಿಕ ಕಾಮೋಪಭೋಗಕ್ಕಾಗಿ ಮಾತ್ರವಲ್ಲ. ಪೂರ್ವಜರ ಸದ್ಗತಿಗೂ ದಂಪತಿಗಳ ಪಾರತ್ರಿಕ ಶ್ರೇಯಸ್ಸಿಗೂ ಅದು ಸಾಧನ. ಈ ತತ್ತ್ವವು ಇಲ್ಲಿ ರಮ್ಯವಾದ ರೀತಿಯಲ್ಲಿ ಪ್ರತಿಪಾದಿತವಾಗಿದೆ. ಶಕುಂತಲೆಯನ್ನು ನಿರಾಕರಿಸಿದುದರಿಂದ ಪಿತೃಋಣವನ್ನು ತೀರಿಸಲು ಪ್ರತಿಬಂಧಕವುಂಟಾಯಿತೆಂದೂ ಪಿತೃಗಳೂ ಇದನ್ನು ಕುರಿತು ಶೋಕಿಸುವರೆಂದೂ ಅವನಿಗೆ ತೋರುವುದು. ಈ ಭಾವನೆಯಿಂದ ಅವಳ ಪುನಸ್ಸಮಾಗಮವನ್ನು ಬಯಸುವುದೇ ಅವನ ಪ್ರೇಮವು ಶುದ್ಧಿಹೊಂದಿದುದಕ್ಕೆ ಸಾಕ್ಷಿ.

ಆರನೆಯ ಅಂಕವು ಎಲ್ಲ ಅಂಕಗಳಿಗಿಂತಲೂ ದೊಡ್ಡದು. ಹಿಂದಿನ

ಅಂಕಗಳಲ್ಲಿ ಪ್ರದರ್ಶಿತವಾದ ಸನ್ನಿವೇಶಗಳು ಮುಖ್ಯಕಥಾವಸ್ತುವಿನೊಡನೆ ಎಡೆಬಿಡದೆ ಹೊಂದಿಕೊಳ್ಳುವುದು ಈ ಅಂಕದಲ್ಲಿ. ಇದನ್ನು ಸಾಧಿಸುವುದರಲ್ಲಿ ಅಂಕವು ಬಹಳ ದೊಡ್ಡದಾಯಿತೆಂದು ಕವಿಯೂ ಗಮನಿಸಿರಬಹುದು. ಅನೇಕ ನೀಚಮಧ್ಯಮ ಪಾತ್ರಗಳ ಪ್ರವೇಶನಿರ್ಗಮಗಳು; ಪ್ರತಿಯೊಬ್ಬರೂ ತಮ್ಮ ಕರ್ತವ್ಯವನ್ನು ಮಾತ್ರ ಗಮನಿಸುತ್ತಿರುವರು. ರಂಗಕಾರ್ಯವು ಬೇಗ ಸಾಗುವುದು. ಆದ್ದರಿಂದಲೇ ಗೊತ್ತಾದ ಒಂದು ಧ್ಯೇಯಸಾಧನೆಗಾಗಿ ಪ್ರವೃತ್ತವಾಗಿರುವ ಇತರ ಅಂಕಗಳಲ್ಲಿರುವಂತೆ ಇಲ್ಲಿ ಅಂದ ಅಚ್ಚುಕಟ್ಟುಗಳಿಲ್ಲ. ಆದರೂ ಕವಿಯ ಸನ್ನಿವೇಶಯೋಜನಕ್ಲೇಶವು ದೊಡ್ಡದು.

ದುಷ್ಯಂತ ಶಕುಂತಲೆಯರ ದ್ವಿತೀಯಸಮಾಗವು ಹೇಮಕೂಟದಲ್ಲಿ ನೆರವೇರುವುದು; ಅಲ್ಲೂ ದಿವ್ಯರ್ಷಿ ಮಾರೀಚರ ಪವಿತ್ರವಾದ ಆಶ್ರಮದಲ್ಲಿ; ಇದರಲ್ಲಿ ಬಹಳ ಔಚಿತ್ಯವಿದೆ. ಮಾರೀಚಾಶ್ರಮದ ಸನ್ನಿವೇಶವು ಶುದ್ಧಾತ್ಮರಾದ ಪತಿಪತ್ನಿಯರ ಸಮಾಗಮಕ್ಕೆ ತಕ್ಕಂತೆ ಇದೆ. ಮಾನುಷ ಜೀವನದ ಗದ್ದಲವಿಲ್ಲಿಲ್ಲ. ಕಣ್ವಾಶ್ರಮಕ್ಕೂ ಮಾರೀಚಾಶ್ರಮಕ್ಕೂ ಬಹಳ ವ್ಯತ್ಯಾಸ. ಅಲ್ಲಿ ನಡೆಯುವ ಸಮಾಗಮಕ್ಕೂ ಇಲ್ಲಿನ ನಡವಳಿಕೆಗೂ ಬಹಳ ದೂರ. ಮೊದಲಿನಂತೆ ಇಲ್ಲಿ ತಾರುಣ್ಯಭರದ ಸೌಂದರ್ಯ ಪುಷ್ಟಿಗಳನ್ನನುಭವಿಸುತ್ತಿರುವ ರೂಪವತಿಯಾದ ಆರಣ್ಯಕ ತರುಣಿಯು ಪಟುಗಂಭೀರಾಕೃತಿಯುಳ್ಳ ನಾಗರಕನನ್ನಾಕರ್ಷಿಸಿ ತಾನೂ ಅವನ ರೂಪಿಗೆ ಮನಸೋಲುವುದಿಲ್ಲ. ಅನುತಾಪಗೊಂಡ ಅಪರಾಧಿಯೊಬ್ಬನು ಅನಂತ ಶೋಕದಿಂದಲೇ ತನ್ನನ್ನು ಪವಿತ್ರಗೊಳಿಸಿ ತಪಶ್ಚರ್ಯೆಯ ನಿಯಮಗಳಿಂದ ಶಾಂತಿ ಗಾಂಭೀರ್ಯಗಳನ್ನು ಪಡೆದ ಧರ್ಮಪತ್ನಿಯನ್ನು ಸೇರುವನು. ಮೊದಲು ಕಂಡಾಗ ಅವಳು ಅನಾಘ್ರಾತ ಪುಷ್ಪ, ಈಗ ತನ್ನ ಪವಿತ್ರ ಸೌರಭದಿಂದ ಪರ್ವತವನ್ನೇ ಆವರಿಸಿಕೊಂಡಿರುವ ವಿಕಸಿತಕುಸುಮ; ಜನನೀತ್ವದ ಗೌರವವನ್ನೂ ಸ್ತ್ರೀ ಜನ್ಮದ ಪರಮಧ್ಯೇಯವನ್ನೂ ಅರಿತ ಪ್ರೌಢೆ. ಕಣ್ವಾಶ್ರಮದಲ್ಲಿ ಶಕುಂತಲೆಯನ್ನು ಕಂಡಾಗ ಅವನು ಕಾಮುಕನಂತೆ ಕೃತ್ರಿಮ ವಿನಯ ಗಾಂಭೀರ್ಯಗಳಿಂದ ಉಪಚರಿಸುವನು. ಇಲ್ಲಿ ಅವಳನ್ನು ಕಂಡೊಡನೆ ನಮಸ್ಕರಿಸುವನು. ಅವಳ ನಿಯಮಕೃಶವಾದ, ಧೂಳಿಧೂಸರಿತವಾದ ಸೀರೆಯನ್ನುಟ್ಟ ಶರೀರವು ಇವನಲ್ಲಿ ದೇವತಾಭಾವನೆಯನ್ನುಂಟುಮಾಡುವುದು.

ಪ್ರಥಮಸಮಾಗಮವು ಪೂರ್ತಿ ಧರ್ಮಯುತವಲ್ಲ. ಆದರೆ ಎರಡನೆಯದನ್ನು ನೆರವೇರಿಸಲು ದೇವತೆಗಳೇ ಟೊಂಕ ಕಟ್ಟಿರುವರು. ದೇವೇಂದ್ರಪ್ರತಿನಿಧಿಯಾದ ಮಾತಲಿಯೇ ಸಾಕ್ಷಿಯಾಗಿ ಅಭಿನಂದಿಸುವನು; ದಿವ್ಯ ಮರ್ತ್ಯ ಸೃಷ್ಟಿಗಳ ಮಾತಾಪಿತೃಗಳು ಆಶೀರ್ವದಿಸುವರು. ಮೊದಲಿನದು 'ತರುಣ ವತ್ಸರದ ಪುಷ್ಪ' ಇದು 'ಪರಿಣತವತ್ಸರದ ಫಲ.' ಅದು 'ಮರ್ತ್ಯ'; ಇದು 'ಸ್ವರ್ಗ್ಯ'.

ದುಷ್ಯಂತನು ಮೊದಲು ಸರ್ವದಮನನನ್ನು ಕಾಣುವುದೂ ಕವಿಯ ಮೂಲ ಆಶಯವನ್ನೇ ಪೋಷಿಸುವುದು. ತಂದೆ ಮಕ್ಕಳ ಈ ಭೇಟಿಯು ಸಂಸ್ಕೃತನಾಟಕಸಾಹಿತ್ಯದಲ್ಲೆಲ್ಲಾ ಬಹಳ ಹೃದಯಾವರ್ಜಕವಾದುದು. ಸಾಮಾನ್ಯ ಬಾಲಕರಿಗಿಂತ ಬಹಳ ಮಟ್ಟಿನ ಪ್ರಭಾವವುಳ್ಳವನಾದರೂ ಸರ್ವದಮನನ ನಡವಳಿಕೆಯೆಲ್ಲ ಬಾಲ್ಯಕ್ಕನುಗುಣವಾದುದೆ. ತಂದೆಗೆ ಮಗನಲ್ಲಿರುವ ವಾತ್ಸಲ್ಯವು 'ಆಲಕ್ಷ್ಯದಂತಮುಕುಲಾನ್' ಎಂಬ ಅತ್ಯುತ್ತಮವಾದ ಶ್ಲೋಕದಲ್ಲಿ ನಿರತಿಶಯಚಾತುರ್ಯದಿಂದ ಚಿತ್ರಿತವಾಗಿದೆ. ಕ್ರಮ ಕ್ರಮವಾಗಿ ತಂದೆ ಮಕ್ಕಳಿಗೆ ಪರಿಚಯವಾಗುವುದನ್ನೂ ಬಹಳ ಚೆನ್ನಾಗಿ ನಿರ್ವಹಿಸಿದೆ. ಹೀಗೆ ವಿವಾಹ ಧರ್ಮದ ಮುಖ್ಯಧ್ಯೇಯವನ್ನು ಮನಗಂಡ ದುಷ್ಯಂತನು ಮೊದಲು ಪುತ್ರನನ್ನು ಕಂಡು ಅನಂತರ ಪತ್ನಿಯ ಪುನಸ್ಸಮಾಗಮವನ್ನು ಹೊಂದುವುದರಲ್ಲಿ ಬಹಳ ಔಚಿತ್ಯವಿದೆ.

ದುರ್ವಾಸಶಾಪವು ದುಷ್ಯಂತ ಶಕುಂತಲೆಯರಿಗೆ ತಿಳಿಯುವುದು ಏಳನೆಯ ಅಂಕದ ಒಂದು ರಮಣೀಯವಾದ ದೃಶ್ಯ. ಎರಡು ಆತ್ಮಗಳೂ ಎರಕಹೊಯ್ದಂತೆ ಸೇರುವುದಕ್ಕೆ ಇದು ಅತ್ಯಾವಶ್ಯಕ. ವರ್ಣಿಸಲಾರದ ಮೊಬ್ಬು ದುಷ್ಯಂತನನ್ನಾವರಿಸಿಕೊಂಡಿದ್ದುದರಿಂದ ಅವನು ಶಕುಂತಲೆಯನ್ನು ನಿರಾಕರಿಸಿದನೆಂಬ ವಿಚಾರವು ನಮಗೆಲ್ಲ ತಿಳಿದಿದ್ದರೂ ಅವನಿಗೇ ತಿಳಿದಿರಲಿಲ್ಲ. ಶಾಪವೃತ್ತಾಂತವು ಅವನಿಗೆ ತಿಳಿಯದೆಯೇ ಇದ್ದಿದ್ದರೆ ಸದ್ವೃತ್ತಳಾದ ಪತ್ನಿಯನ್ನು ನಿಷ್ಕಾರಣವಾಗಿ ನಿರಾಕರಿಸಿದ ಕೊರಗು ದುಷ್ಯಂತನನ್ನು ಯಾವಜ್ಜೀವವೂ ಪೀಡಿಸುತ್ತಿತ್ತು. ಆದರೆ ಅವರಿಬ್ಬರೂ ಸಮಾಗತರಾದ ಮೇಲೆಯೇ ಈ ವೃತ್ತಾಂತವು ಅವರಿಗೆ ತಿಳಿಯುವುದು. ಶಕುಂತಲೆಯು ಪತಿಯ ಅಪರಾಧವನ್ನು ಮರೆತು ತಾನಾಗಿಯೇ ಅವನನ್ನು ಕ್ಷಮಿಸಲು ಸಿದ್ಧಳಾಗಿದ್ದಳು.

ಶಾಪವೃತ್ತಾಂತವನ್ನು ಕೇಳುವುದಕ್ಕೆ ಮುಂಚೆಯೇ ಅವಳು ಗಂಡನ ವಿಷಯದಲ್ಲಿ ಮರುಗಿದ್ದುದು ಅವಳ ಹೃದಯದ ಉದಾತ್ತತೆಯನ್ನು ಸೂಚಿಸುವುದು. ಶಾಪವೃತ್ತಾಂತವನ್ನು ತಿಳಿದು, ಅನಂತರ ಕನಿಕರಗೊಂಡು ಸಮಾಗಮವನ್ನು ಬಯಸಿದ್ದರೆ ಹೇಗೋ, ಅದಕ್ಕಿಂತ ಈಗಿರುವ ಸಂವಿಧಾನವು ಹೆಚ್ಚು ಆಹ್ಲಾದಕರವಾಗಿದೆ.

ಹೀಗೆ ಆಶ್ರಮವಾತಾವರಣದಲ್ಲಿ ಅಂಕುರಿಸಿದ ಪ್ರೇಮವು ಆಶ್ರಮವಾತಾವರಣದಲ್ಲೇ ಪರಿಪೂರ್ಣತೆ ಹೊಂದುವುದು. ಒಟ್ಟು ನಾಟಕದಲ್ಲೂ ಆಶ್ರಮದ ಸಂಯಮಜೀವನಕ್ಕೆ ಪ್ರಾಶಸ್ತ್ಯವಿದೆ. ಸನ್ಯಾಸವೂ ಸಂಯಮಜೀವನವೂ ಪ್ರಾಪಂಚಿಕ ಸಮಸ್ಯೆಗಳನ್ನು ಬಿಟ್ಟು ದೂರವಾಗಿಲ್ಲ. ಜೀವನದ ಸಮಸ್ಯೆಗಳ ಪರಿಹಾರದಲ್ಲಿ ಇದೇ ಮುಖ್ಯಭಾಗ ವಹಿಸಬೇಕು. ಕೇವಲ ವಿರಕ್ತಿಮಾರ್ಗವು ಆಶಿಸತಕ್ಕುದಲ್ಲ; ಸಾಧ್ಯವೂ ಅಲ್ಲವೆಂದೇ ಕವಿಯ ಭಾವನೆಯಿದ್ದಿರಬೇಕು. ತಪೋನಿರತನಾದ ವಿಶ್ವಾಮಿತ್ರನಿಗೂ ಮೇನಕೆಯ ಸಹವಾಸ ತಪ್ಪಲಿಲ್ಲ. ಹಾಗೆಯೇ ಸಂಯಮಿಗಳಾದ ಕಣ್ವರಿಗೂ ಇನ್ನೊಂದು ರೀತಿಯಲ್ಲಿ ಶಕುಂತಲೆಯ ಸಂಪರ್ಕ ತಪ್ಪಲಿಲ್ಲ. ಕಡೆಗೆ ಮಾರೀಚಾಶ್ರಮದ ಮಹರ್ಷಿಗಳಿಗೂ ದುಷ್ಯಂತ ಶಕುಂತಲೆಯರ ಪ್ರೇಮವ್ಯವಹಾರದ ಸೋಂಕು ತಪ್ಪುವುದಿಲ್ಲ. ಒಂದೊಂದೂ ಒಂದೊಂದು ವಿಧವಾದ ಸಂಪರ್ಕವಾದರೂ ಲೋಕಹಿತಾರ್ಥವಾಗಿ ಆಗಬಹುದಾದ ಸಂಪರ್ಕಕ್ಕೆ ಮೇಲ್ಮೆ. ಇನ್ನೊಂದು ಕೋನದಿಂದ ನೋಡಿದರೆ ಆಶ್ರಮವಾಸ ನಗರವಾಸಗಳಿಗಿರುವ ವೈಲಕ್ಷಣ್ಯವು ಎದ್ದು ಕಾಣುವುದು. ಆಶ್ರಮವು ಎರಡು ಸಲವೂ ದುಷ್ಯಂತ ಶಕುಂತಲೆಯರ ಸಮಾಗಮ ಭೂಮಿಯಾಗುವುದು. ಆದರೆ ನಗರವು ಅವರ ವಿಯೋಗಕ್ಕೆ ಕಾರಣವಾಗುವುದು. ಅಲ್ಲಿ ಅಧರ್ಮ ಹೆಚ್ಚು. ಅಲ್ಲಿನ ಯಾವೊಂದು ಸ್ಥಿತಿಯೂ ಜುಗುಪ್ಸೆ ತಿರಸ್ಕಾರಗಳನ್ನು ಹುಟ್ಟಿಸುವಂತಹುದು. ಕೀಳುಮಟ್ಟದ ಬೆಸ್ತರ ಜೀವನ ಮೊದಲುಗೊಂಡು ರಾಜಾಸ್ಥಾನದ ಸಮುದಾಚಾರಗಳವರೆಗೆ ಎಲ್ಲವೂ ತಿರಸ್ಕಾರಯೋಗ್ಯ. ಬೆಸ್ತರ ಜಗಳ, ರಾಜಸ್ಥಾನದ ಅಧಿಕಾರಿಯ ವರ್ತನೆ, ನಗರ ರಕ್ಷಕರು ಬೆಸ್ತರನ್ನು ಕಾಣುವ ರೀತಿ; ಎಲ್ಲವೂ ನಾಗರಿಕ ಜೀವನದ ಅಧಾರ್ಮಿಕ ಪ್ರಕೃತಿಯನ್ನು ಮನಗಾಣಿಸುವುದು. ಹೀಗಿದ್ದರೂ ಯಾವ ಚೇತನಕ್ಕೂ ಈ ಅಂಶಗಳ ಸಂಬಂಧ ತಪ್ಪಿದ್ದಲ್ಲ. ದುಷ್ಯಂತ ಶಕುಂತಲೆಯರ

ಮೇಲೆ ಪ್ರಭಾವ ಬೀರುವ ಅಂಶಗಳನ್ನು ಪರಿಶೀಲಿಸುತ್ತ ಹೋದರೆ ಸಮಗ್ರ ಮಾನವಜೀವನವು ಸೃಷ್ಟಿಯಿಂದ ಪ್ರತ್ಯೇಕಿಸಲಾಗದ ಒಂದು ವಿಚಿತ್ರಘಟನೆ ಯೆಂದು ಊಹಿಸಬಹುದು. ಒಂದು ಹುಲ್ಲುಕಡ್ಡಿಗೂ ಜಗತ್ತಿನಲ್ಲಿ ಒಂದು ಸ್ಥಾನವಿದೆ; ಅದೂಕೂಡ ಮಾನವಜೀವನದಮೇಲೆ ತೀಕ್ಷ್ಣವಾದ ಪ್ರಭಾವ ಬೀರಲು ಸಾಧ್ಯ ಎಂಬ ಭಾವನೆಗಳು ಬಲಗೊಳ್ಳುವುವು. ಪ್ರಕೃತಿಗೂ ಮಾನ ವನಿಗೂ ಇರುವ ಸಂಬಂಧ ಅಂತಹುದು. ಇದೇ ರೀತಿ ಸ್ವರ್ಗ ಮರ್ತ್ಯ ಜೀವನಗಳ ಸಾಧರ್ಮ್ಯ ವೈಧರ್ಮ್ಯಗಳೂ ಗಮನಕ್ಕೆ ಬಾರದಿರವು. ಮರ್ತ್ಯ ಜೀವನದ ರೀತಿ ಬೇರೆ; ಸ್ವರ್ಗೀಯ ಜೀವನದ ರೀತಿ ಬೇರೆ. ಇಲ್ಲಿನ ನ್ಯಾಯ ಬೇರೆ; ಅಲ್ಲಿನ ನ್ಯಾಯ ಬೇರೆ. ಎಂದ ಮಾತ್ರಕ್ಕೆ ಇವೆರಡೂ ಕೂಡದ ದಾರಿ ಗಳಲ್ಲ; ಕೂಡುವ, ಕೂಡಬೇಕಾದ ದಾರಿಗಳು. ಇದಿನ್ನೊಂದು ದೃಷ್ಟಿ. ಹೀಗೆ ಆಲೋಚಿಸುತ್ತ ಹೋದರೆ ಅಮೂಲ್ಯವಾದ ಅನೇಕ ತತ್ವಗಳನ್ನು ಶಾಕುಂತಲದಲ್ಲಿ ಮನಗಾಣಬಹುದು. ಇದೇ ಮಹಾಕಾವ್ಯದ ವೈಶಿಷ್ಟ್ಯ. ಸಾಹಿತೀಯ ರಮ್ಯತೆಯ ಜೊತೆಗೆ ಇದರಲ್ಲಿ ತಾತ್ವಿಕರಮ್ಯತೆಯಿದೆ. ಸತ್ಯ, ಸೌಂದರ್ಯ, ಧರ್ಮ ಇವು ಮೂರು ಒಂದೇ ಪದಾರ್ಥದ ಬೇರೆ ಬೇರೆ ಮುಖ ಗಳೆಂದು ಹೇಳುವುದುಂಟು. ಸತ್ಯವಿದ್ದೆಡೆ ಸೌಂದರ್ಯ ಧರ್ಮಗಳನ್ನು ಕಾಣ ಬಹುದು. ಹೀಗೆಯೇ ಮಿಕ್ಕವುಗಳ ವಿಚಾರದಲ್ಲಿಯೂ. ಇವು ಮೂರರಲ್ಲಿ ಯಾವುದೊಂದೂ ಪ್ರತ್ಯೇಕವಾಗಿರಲು ಸಾಧ್ಯವಿಲ್ಲವೆಂದು ಅಭಿಪ್ರಾಯವಿದೆ. ಪ್ರಕೃತ, ಶಾಕುಂತಲದ ಸೌಂದರ್ಯವು ಸತ್ಯ, ಧರ್ಮಗಳಿಂದ ಅವಿರಹಿತ ವಾದ ಪೂರ್ಣಸೌಂದರ್ಯ. ಇದನ್ನು ಮನಗಾಣದೆ ಕೇವಲ ಸಾಹಿತ್ಯ ದೃಷ್ಟಿಯಿಂದ ಅದನ್ನು ವಿಮರ್ಶಿಸಲು ಯತ್ನಿಸುವುದೂ, ಅಲ್ಲಿ ವೇದಾಂತ ತತ್ವಗಳನ್ನು ಹುಡುಕುವುದು ಹಾಸ್ಯಾಸ್ಪದವೆಂದು ಹೇಳುವುದೂ ತಪ್ಪು.

ತುಲನಾತ್ಮಕ ವಿಮರ್ಶೆಯ ಸರಣಿಯಲ್ಲಿ ಶಾಕುಂತಲವನ್ನು ಗ್ರೀಕ್ ನಾಟಕಗಳಿಗೂ ಶಕುಂತಲೆಯನ್ನು ಷೇಕ್ಸ್‌ಪಿಯರ್ ಕವಿಯ ಪ್ರಖ್ಯಾತ ನಾಯಿಕೆಯರಾದ ಮಿರಾಂಡಾ, ಡೆಸ್ಡಿಮೋನಾ ಇವರುಗಳಿಗೂ ಹೋಲಿಸು ವುದು ವಾಡಿಕೆ. ಈ ಸಂದರ್ಭಗಳಲ್ಲಿ ಶಾಕುಂತಲದ ಮೇಲೆ ಕೆಲವು ಟೀಕೆಗಳೂ ಆಕ್ಷೇಪಗಳೂ ಎದ್ದಿವೆ. ಅವುಗಳಿಗೆ ಸಂಗ್ರಹವಾಗಿ ಉತ್ತರ ಹೇಳಬೇಕಾಗಿದೆ.

ವಿಶ್ವಸಾಹಿತ್ಯದ ಕಾವ್ಯರತ್ನಮಾಲೆಯಲ್ಲಿ ಬರುವ ಶಾಕುಂತಲ ಪೀಠಿಕೆಯಲ್ಲಿ ಈ ಕೆಲವು ನ್ಯೂನತೆಗಳು ಉದ್ಧೃತವಾಗಿವೆ.[1]

೧. "ಆಥೆನ್ಸ್‌ನ ನಾಟಕದ ಪರಿಪೂರ್ಣರೂಪವನ್ನು ಭಾರತೀಯ ಸಾಹಿತ್ಯವು ಎಂದೂ ಪಡೆಯಲಿಲ್ಲ."—ಇದು ಒಂದು ಆಕ್ಷೇಪ.

ಗ್ರೀಕ್ ನಾಟಕಗಳಿಗೂ ಭಾರತೀಯ ನಾಟಕಕ್ಕೂ ಇರುವ ಭೇದಕ್ಕೆ ಅಲ್ಲಿನ ಸಂಸ್ಕೃತಿ, ಜೀವನಗಳಿಗೂ ಇಲ್ಲಿನವಕ್ಕೂ ಇರುವ ವ್ಯತ್ಯಾಸವೇ ಕಾರಣ. ಆಯಾ ದೇಶದ ಸಾಹಿತ್ಯದಲ್ಲಿ ಅಲ್ಲಲ್ಲಿನ ಸಂಸ್ಕೃತಿಯು ಪ್ರತಿಬಿಂಬಿತವಾಗುವುದು ಸ್ವಾಭಾವಿಕ. ಇಂತಹ ಎರಡು ಭಿನ್ನಭಿನ್ನ ಸಂಸ್ಕೃತಿಗಳನ್ನು ಹೋಲಿಸುವಾಗ ಯಾವುದೊಂದನ್ನೂ ಪ್ರಧಾನ ಪ್ರಮಾಣವನ್ನಾಗಿ ಎಣಿಸುವುದು ಯುಕ್ತವಲ್ಲ; ಮತ್ತು ಆ ಒರೆಗಲ್ಲಿನಿಂದ ಮತ್ತೊಂದನ್ನು ಹಳಿಯುವುದೂ ಸರಿಯಲ್ಲ. ಇದೂ ಅಲ್ಲದೆ ಐರೋಪ್ಯ ಸಾಹಿತ್ಯದ ರೊಮ್ಯಾಂಟಿಕ್ ಯುಗದ ಲಕ್ಷಣಗಳು ಭಾರತೀಯ ರೂಪಕಗಳಲ್ಲೂ ತೋರುತ್ತವೆಯೆಂಬುದು ನಿರ್ವಿವಾದವಾಗಿದೆ. ಆದುದರಿಂದ ಮೇಲಿನ ಆಕ್ಷೇಪಕ್ಕೆ ಅವಕಾಶವಿಲ್ಲ. ಗ್ರೀಕ್ ನಾಟಕವು ಬೆಳೆದ ಸನ್ನಿವೇಶ ಬೇರೆ; ಅಲ್ಲಿನ ಮನೋಭಾವ ಬೇರೆ; ಆದರೆ ಇಲ್ಲಿನ ಮನೋಭಾವಕ್ಕನುಸಾರವಾಗಿ ಇಲ್ಲಿನ ನಾಟಕವು ಬೆಳೆದಿಲ್ಲವೆಂದು ಖಂಡಿತ ಹೇಳಲು ಸಾಧ್ಯವಿಲ್ಲ. ಆ ಅಳತೆಯಿಂದ ಇದನ್ನು ಅಳೆಯಲು ಪ್ರಯತ್ನಪಟ್ಟಲ್ಲಿ ಇಲ್ಲಿನ ನಾಟಕದ ಸೌಂದರ್ಯವು ಅಗೋಚರವಾಗುವುದು. (ಅಲ್ಲಿನದಕ್ಕೂ ಇದು ಅನ್ವಯಿಸುವುದು.) ಶಾಕುಂತಲದ ವಿಚಾರದಲ್ಲಂತೂ ಇದು ಅಕ್ಷರಶಃ ನಿಜ.[2]

---

1. The World's Great Classics — Hindu Literature, pp. 309—315.

2. ಈ ವಿಚಾರದಲ್ಲಿ ಪ್ರಸಿದ್ಧರಾದ ಪಾಶ್ಚಾತ್ಯ ವಿದ್ವಾಂಸರ ಬೆಂಬಲವು ಇದೆ. "Whoever would wish to put into this legend-drama, tenderly woven out of the finest threads, the measure of Greek Tragedy, will not deserve to understand its incomparable beauties."—Wintz-Gesh. Ind. Lit. III, p. 216 "A multitude of elevated rather than soft ideas find themselves here which one would seek for in vain in a Greek Drama." — Herder quoted by Hillebrandt.—Kālidāsa, p. 78.

೨. "ಶಾಕುಂತಲ ನಾಟಕದ ಕಥಾವಸ್ತುವಿನ ಬೇರೆ ಬೇರೆ ಎಳೆಗಳು ಒತ್ತಾಗಿ ಹೊಂದಿಕೊಂಡಿಲ್ಲ"—ಎಂಬುದೊಂದು ಆಕ್ಷೇಪ. ನಾಟಕದ ವಿಮರ್ಶೆಯಲ್ಲಿ ಇದಕ್ಕೆ ಉತ್ತರವನ್ನು ಉದಾಹರಣೆಯ ಸಹಿತ ವಿವರಿಸಿದೆ. ಶಾಕುಂತಲದ ವಿಚಾರದಲ್ಲಿ ಯಾವ ಆಕ್ಷೇಪಕ್ಕೆ ಅವಕಾಶವಿದ್ದರೂ ಇದಕ್ಕೆ ಮಾತ್ರ ಅವಕಾಶ ಕೊಂಚವೂ ಇಲ್ಲ. ಕಥಾವಸ್ತುವಿನ ಯಾವ ಎಳೆಯೂ ಹೊಂದದಂತಿಲ್ಲ.[1]

೩. "ನಾಟಕದಲ್ಲಿ ಅಂಗಾಭಿನಯಕ್ಕೆ ಅವಕಾಶ ಕಡಿಮೆ"—ಇದು ಒಂದು ನ್ಯೂನತೆಯೆಂದು ಕೆಲವರ ಅಭಿಪ್ರಾಯ.

ಕಡೆಯ ಮೂರು ಅಂಕಗಳಿಗೆ ಇದು ಹೇಗೂ ತಟ್ಟುವುದಿಲ್ಲ. ಆದುದ ರಿಂದ ಮೊದಲಿನ ಅಂಕಗಳನ್ನು ಕುರಿತು ಇದು ಹೊರಟಿರಬೇಕು. ಏಕೆಂದರೆ ಒಂದೊಂದು ಅಂಕದಲ್ಲೂ ಒಂದು ಮುಖ್ಯ ಗುರಿಯನ್ನು ಸಾಧಿಸುವ ಸಲುವಾಗಿ ಮಿತವಾದ ಪಾತ್ರಗಳ ಪ್ರವೇಶ ನಿರ್ಗಮಗಳನ್ನು ಜೋಡಿಸಿದಂತಿದೆ. ಜೊತೆಗೆ ಸಂಭೋಗ ಶೃಂಗಾರದ ಪ್ರಾಧಾನ್ಯವಿದೆ. ಇದರಿಂದ ವೈನವಿರೇಳುವ ಆಶ್ಚರ್ಯ ಕರ ಸನ್ನಿವೇಶಗಳಾಗಲಿ ನಾನಾ ವಿಧವಾದ ನಡೆವಳಿಕೆಗಳ ಜಟಿಲ ಗೊಂದಲ ವಾಗಲಿ ಅಲ್ಲಿ ಕಾಣಬರುವುದಿಲ್ಲ. ಕತೆಯು ಸಾವಕಾಶವಾಗಿ ನಡೆಯುವಂತೆ ತೋರುತ್ತದೆ. ಆದರೆ ಇಲ್ಲೂ ಲಲಿತವಾದ ಅಂಗಾಭಿನಯಕ್ಕೆ ಅವಕಾಶವಿದ್ದೇ ಇದೆ. ಹೆಚ್ಚಾದ ಉತ್ಸಾಹ, ಔದ್ಧತ್ಯಗಳಿಲ್ಲದಿದ್ದರೂ ನೈಜತೆ, ಮಾರ್ದವ ಗಳಿವೆ. ಇದಲ್ಲದೆ ಶೃಂಗಾರಕ್ಕೆ ಹಾಸ್ಯಸಂಪರ್ಕವೂ ಇರುವುದರಿಂದ ಲಲಿತ ವಾದ ಅಂಗಾಭಿನಯಕ್ಕೆ ಅವಕಾಶವಿದ್ದೇ ಇದೆ. ಬೇಟೆಗಾಗಿ ಹೊರಟ ದುಷ್ಯಂತನು ರಥದಲ್ಲಿ ಬರುವುದು, ಬಾಣ ಹೂಡುವುದು, ಆಶ್ರಮದ ಬಾಗಿಲಿಗೆ ಬಂದೊಡನೆ ಸಂಭ್ರಮದಿಂದ ತಾಪಸರು ಕೂಗಿಕೊಳ್ಳಲು ಬಾಣವನ್ನು ತಡೆ ಗಟ್ಟುವುದು, ರಥದಿಂದಿಳಿದು ವೇಷವನ್ನು ಬದಲಾಯಿಸಿಕೊಂಡು ಆಶ್ರಮವನ್ನು ಪ್ರವೇಶಿಸುವುದು, ಆನೆಯ ಹಾವಳಿಯ ಸಂದರ್ಭ, ದುರ್ವಾಸರ ಶಾಪ,

1. **ಇದಕ್ಕೂ ಪಾಶ್ಚಾತ್ಯರ ಸಮಾಧಾನವಿದ್ದೇ ಇದೆ.**—"All the scenes have been knit with flowery chains; each springs itself naturally out of the situation itself like a beautiful plant."—Herder as quoted by Hillebrandt; Kālidāsa, p. 78.

*Cf.* also Ryder—Everyman's Library Series, p. 103.

ಸಖಿಯರು ಗಾಬರಿಗೊಳ್ಳುವುದು, ಸಾನುಮತಿಯು ಅಪ್ಸರಸ್ತೀರ್ಥದಿಂದ ಬಂದು ದುಷ್ಯಂತನ ವಿರಹವನ್ನು ಕಣ್ಣಾರೆ ನೋಡುವುದು, ಮಾತಲಿಯ ಆಗಮನದ ಸನ್ನಿವೇಶ, ಸರ್ವದಮನನು ಸಿಂಹದೊಡನೆ ಆಡುವುದು—ಇವೇ ಮೊದಲಾದ ಕಡೆಗಳಲ್ಲಿ ಸಾಕಷ್ಟು ಅಂಗಾಭಿನಯಕ್ಕೆ ಅವಕಾಶವಿರುವುದು. ಈ ಕಾರಣ ಗಳಿಂದ ಶಾಕುಂತಲಕ್ಕೆ ಮೇಲ್ಕಂಡ ಆಕ್ಷೇಪವು ತಟ್ಟುವುದಿಲ್ಲ.[1]

ಳ. "ಅತಿಮಾನುಷ ಸನ್ನಿವೇಶಗಳ ಹಾವಳಿಯು ಹೆಚ್ಚಿ ಪಾತ್ರ ಪರಿಪೋಷಕ್ಕೆ ಅವಕಾಶ ಕಡಿಮೆ. ಪಾತ್ರಗಳು ದೈವಯಂತ್ರದಲ್ಲಿ ಸಿಕ್ಕಿಕೊಂಡು ಸ್ವಾತಂತ್ರ್ಯವಿಲ್ಲದೆ ಅದು ಕುಣಿಸಿದಂತೆ ಕುಣಿಯುವ ಸೂತ್ರದ ಗೊಂಬೆಗಳು. ಮಾನುಷ ಶಕ್ತಿ ಸಾಹಸಗಳಿಗೆ ಸಲ್ಲಬೇಕಾದ ಪ್ರಾಶಸ್ತ್ಯ ಸಂದಿಲ್ಲ." ಇದೂ ಒಂದು ಮುಖ್ಯವಾದ ಆಕ್ಷೇಪ. ಇದು ಮನೋಭಾವಕ್ಕೆ ಸಂಬಂಧಿಸಿದ ವಿಚಾರ. ಮಾನುಷ ಶಕ್ತಿ ಸಾಹಸಗಳಲ್ಲೇ ನಂಬಿಕೆಯಿಟ್ಟು ದೈವದ ಪ್ರಭಾವವೇ ಇಲ್ಲ ವೆನ್ನುವುದು ಒಂದು ದೃಷ್ಟಿ. ದೈವದ ಮಹಿಮೆಯಲ್ಲಿ ಮಾತ್ರ ನಂಬಿಕೆಯಿಟ್ಟು ಮಾನುಷ ಸಾಹಸಗಳಿಗೆ ಬೆಲೆಕಟ್ಟದ ದೃಷ್ಟಿ ಮತ್ತೊಂದು. ಇವೆರಡರಲ್ಲಿ ಯಾವುದು ಸರಿ ಯಾವುದು ತಪ್ಪೆಂದು ಯಾರೂ ನಿರ್ಣಯಿಸಿಲ್ಲ. ಆದುದರಿಂದ ಸದ್ಯಕ್ಕೆ ದೈವ ಮಾನುಷಗಳಿಗೆರಡಕ್ಕೂ ಸಮವಾದ ಪ್ರಾಶಸ್ತ್ಯಕೊಡುವ ಮಧ್ಯದೃಷ್ಟಿಯು ಅನೇಕರಿಗೆ ಒಪ್ಪಿದೆ. ಅದು ತಾತ್ವಿಕವಾಗಿ ಸರಿಯೇ, ಸಾಧ್ಯವೇ ಎಂಬ ವಿಚಾರ ಇಲ್ಲಿ ಅಪ್ರಸಕ್ತ. ಅಂತು ಕಾಳಿದಾಸನ ಮನೋ ಭಾವವು ಇಂತಹುದೆಂದು ಹೇಳಬಹುದು. ಸಾಮಾನ್ಯ ಜನಜೀವನದಲ್ಲಿ ಆಕಸ್ಮಿಕವಾಗಿಯಾದರೂ ಅತಿಮಾನುಷ ಘಟನೆಗಳು ಸಂಭವಿಸುವುದುಂಟು. ಇದೆಲ್ಲ ಪ್ರಕೃತಿನಿಯಮಕ್ಕೆ ಸೇರಿದ್ದು. ಮಾನುಷಜೀವನವೂ ಪ್ರಕೃತಿ ನಿಯ ಮಕ್ಕೆ ಒಳಪಟ್ಟಿದೆ. ಅಲ್ಲಿನ ಸಂಬಂಧವನ್ನು ತಪ್ಪಿಸಿಕೊಳ್ಳುವಷ್ಟು ಸ್ವಾತಂತ್ರ್ಯ ಮಾನುಷಶಕ್ತಿಗಿಲ್ಲ. ಆದರೂ ಆ ನಿಯಮಕ್ಕೊಳಪಟ್ಟಂತೆ ಇದಕ್ಕೂ ಸ್ವಾತಂತ್ರ್ಯವಿದೆ. ದೈವ ಮಾನುಷಗಳಿಗೆ ಆಂತರ ನಿಕಟ ಸಂಬಂಧವಿರುವು

---

1. Ryder *op cit*, p. 101, also S. K. De. I. H. Q. XVI, ii, p. 402. "Not that his (Kālidāsa's) dramas do not possess the requisite qualities of a stage-play for his Sakuntalā has often been successfully staged."

ದೆಂಬುದು ಶಾಕುಂತಲದಿಂದ ಹೊರಪಡುವ ಅಮೂಲ್ಯ ಅರ್ಥಗಳಲ್ಲೊಂದು. ದೈವಶಕ್ತಿಯು ಮಾನುಷ ಜೀವನದಲ್ಲಿ ಪ್ರವರ್ತಿಸಿ ಸುಖದುಃಖಗಳನ್ನು ಕೊಡು ವುದೆಂದಮಾತ್ರಕ್ಕೆ ಮಾನುಷ ಶಕ್ತಿಗೆ ಕುಂದು ಬಂದಂತಲ್ಲ. ಶಾಕುಂತಲದಲ್ಲಿ ತೋರುವ ಅರ್ಥದ ಪ್ರಕಾರ ದೈವಶಕ್ತಿಯು ಕೇವಲ ನಿರಂಕುಶವಲ್ಲ; ಯುಕ್ತಾಯುಕ್ತ ವಿವೇಚನೆಯಿಲ್ಲದ ಅಂಧಶಕ್ತಿಯಲ್ಲ. ಮಾನುಷಪ್ರಕೃತಿ ಯನ್ನು ಚೆನ್ನಾಗಿ ತಿಳಿದು ಅವರ ತಪ್ಪುಗಳನ್ನು ತಿದ್ದಿ ಬುದ್ಧಿ ಕಲಿಸುವ ಶಕ್ತಿ. ಅವರ ಶ್ರೇಯಸ್ಸನ್ನೂ ಪ್ರಪಂಚದ ಶ್ರೇಯಸ್ಸನ್ನೂ ಮನಸ್ಸಿನಲ್ಲಿಟ್ಟು, ಅವರ ಲೋಪದೋಷಗಳನ್ನು ತೊಳೆದು ಶುದ್ಧಿಗೊಳಿಸುವ ಕರುಣಾಮಯ ದೈವಶಕ್ತಿ ಇಂತಹ ಶಕ್ತಿಗೆ ಪ್ರಾಶಸ್ತ್ಯಕೊಟ್ಟಲ್ಲಿ ಮಾನುಷ ಶಕ್ತಿಯನ್ನು ತೃಣೀಕರಿಸಿ ದಂತಾದೀತೆ? ಮಾನುಷ ಕಲ್ಪನೆಯಿಂದಲೇ ಸೃಷ್ಟಿಹೊಂದಿದ ಈ ಶಕ್ತಿಗೆ ತಲೆಬಾಗುವುದು ಪ್ರಗತಿಪರ ಭಾವನೆಯಲ್ಲದೆ ಮತ್ತೇನು? ಈ ಸಂದರ್ಭದಲ್ಲಿ ಅತಿಮಾನುಷ ಸನ್ನಿವೇಶವೆಂದರೆ ಎಂತಹುದೆಂಬುದನ್ನೂ ಸ್ವಲ್ಪ ವಿಚಾರಿಸು ವುದು ಆವಶ್ಯಕ. ಮಹಾಭಾರತದಲ್ಲಿ ಮೂಲಕತೆಯಲ್ಲಿ ಬರುವಂತೆ ಆಕಾಶ ಭಾಷಿತ ರೂಪವಾಗಿಯೋ, ಹಠಾತ್ತಾಗಿ ಜರುಗುವ ಅಸಂಭಾವಿತ ಸಂಗತಿಗಳ ರೂಪವಾಗಿಯೋ ಅತಿಮಾನುಷ ಸನ್ನಿವೇಶವು ನಾಟಕಾದಿಗಳಲ್ಲಿ ಉಪಾತ್ತ ವಾದರೆ ಸಹೃದಯರಿಗೆ ರುಚಿಸದೆ ಹೋಗಬಹುದು. ಇದಕ್ಕೆ ಅಲ್ಲಿನ ಅಸಂಭಾವಿ ತತ್ವವೇ ಕಾರಣ. ನಾಟಕವನ್ನು ನೋಡುವಾಗ ಬುದ್ಧಿಯೂ ತಕ್ಕಮಟ್ಟಿಗೆ ಕೆಲಸಮಾಡುತ್ತಿರುತ್ತದೆ. ಅಲ್ಲಲ್ಲಿ ನಡೆಯುವ ಕೆಲಸಗಳಲ್ಲಿ ಕಾರ್ಯಕಾರಣ ಭಾವವನ್ನು ಮನಗಂಡು ಸರಿಯಾಗಿ ಮನವೊಪ್ಪುವಂತೆ ಎಲ್ಲವನ್ನೂ ಜೋಡಿಸಿಕೊಳ್ಳುವುದು ಬುದ್ಧಿಯ ಕೆಲಸ. ಈ ಯುಕ್ತಿಗೆ ಲೋಪಬಂದರೆ ಬುದ್ಧಿ ಬೇಸರಗೊಳ್ಳುವುದು. ಇದೇ ಅರುಚಿಗೆ ಮೂಲ. ಇದನ್ನು ಬಿಟ್ಟು ಅತಿಮಾನುಷ ಸನ್ನಿವೇಶಗಳನ್ನೂ ಯುಕ್ತಿಯುಕ್ತವಾಗುವಂತೆ ಹೊಂದಿಸಿ ಕೊಂಡರೆ ಯಾವ ಕಾರಣದಿಂದಲೂ ಬೇಸರ ಹುಟ್ಟುವುದಿಲ್ಲ. ಈ ದೃಷ್ಟಿ ಯಿಂದ ನೋಡಿದರೆ ಶಾಕುಂತಲದಲ್ಲಿ ಕೇವಲ ಅತಿಮಾನುಷವಾದ ಸನ್ನಿವೇಶ ಯಾವುದೂ ಇಲ್ಲ. ದುರ್ವಾಸ ಶಾಪ, ಉಂಗುರದ ವೃತ್ತಾಂತ ಇವುಗಳೆಲ್ಲ ಸ್ವಾಭಾವಿಕವಾಗಿ ನಡೆಯಬಹುದಾದ, ನಂಬಬಹುದಾದ ಸಂಗತಿಗಳೇ ಆಗಿವೆ. ಐದನೆಯ ಅಂಕದ ಕೊನೆಯಲ್ಲಿ ಶಕುಂತಲೆಯನ್ನು ದಿವ್ಯಜ್ಯೋತಿಯು ಎತ್ತಿ

ಕೊಂಡು ಹೋಗುವುದರಲ್ಲಿ ಮಾತ್ರ ಅತಿಮಾನುಷತೆ ಇದೆಯೆನ್ನಬಹುದು. ಅದನ್ನು ರಂಗಸ್ಥಳದಲ್ಲಿ ನಡೆಯದಂತೆ ಏರ್ಪಡಿಸಿ ಪುರೋಹಿತನ ಮಾತಿನಿಂದ ಪ್ರೇಕ್ಷಕರಿಗೆ ತಿಳುವಳಿಕೆ ಕೊಡಿಸಿರುವುದರಿಂದ ಈ ದೋಷವೂ ಮಾಯವಾಗಿದೆ.[1] ಒಟ್ಟಿನಲ್ಲಿ ಭಾರತೀಯ ಹೃದಯಕ್ಕೆ ಮೇಲೆ ನಿರೂಪಿಸಿದಂತಹ ದೈವಶಕ್ತಿಯು ಅಚ್ಚುಮೆಚ್ಚಾಗಿ ಒಪ್ಪಿದೆ. ಶಾಕುಂತಲದಲ್ಲಿ ಭಾರತ ಸಂಸ್ಕೃತಿಯ ಈ ಅಸಾಧಾರಣ ಲಕ್ಷಣವು ಸುಕುಮಾರವಾದ ಕವಿಪ್ರತಿಭೆಯ ಮೂಲಕ ಹೊರಪಟ್ಟಿದೆ. ಇದರ ಜೊತೆಗೆ ವಿಶ್ವಾನುಭವಗಳಲ್ಲಿ ಸೇರಿದ ಪ್ರೇಮಸಮಾಗಮ, ವಿಯೋಗದುಃಖ, ಅಪತ್ಯಪ್ರೇಮ, ಧಾರ್ಮಿಕದೃಷ್ಟಿ ಮೊದಲಾದುವೂ ಏಕಕಾಲದಲ್ಲೇ ಹೃದಯಂಗಮವಾಗಿ ಪ್ರತಿಪಾದಿತವಾಗಿರುವುದರಿಂದ ಈ ನಾಟಕವು ವಿಶ್ವಸಾಹಿತ್ಯದ ಗ್ರಂಥರತ್ನಗಳಲ್ಲೊಂದಾಗಿ ಎಣಿಸಲ್ಪಟ್ಟಿದೆ. ಇದರಲ್ಲಿ ಹೊರಪಡುವ ಅರ್ಥಗಳು ವಿಶ್ವಾನುಭವಗಳಲ್ಲಿ ಸೇರಿ ಶಾಶ್ವತವಾದ ಅಮೂಲ್ಯತೆಯನ್ನು ಹೊಂದಿದ್ದರೂ, ಯಾವತ್ತಿಗೂ ಹಳೆಯದಾಗುವುದಿಲ್ಲ. ಅದೇ ರಮಣೀಯತೆಗೆ ಗುರುತು.

"ಕ್ಷಣೇ ಕ್ಷಣೇ ಯನ್ನವತಾಮುಪೈತಿ ತದೇವ ರೂಪಂ ರಮಣೀಯತಾಯಾಃ."

---

1. ಡಾ|| ಸಿಲ್ವೆನ್ ಲೆವಿಯವರ ಅಭಿಪ್ರಾಯವು ಹೀಗಿದೆ—"The supernatural element which permeates the entire (?) story threatens to enfeeble the play of human passions and diminish the interest. But Kālidāsa has assigned it a secondary role and almost avoided it except at the denoument in regard to which theory and *taste* accord in admitting its use. ...... The gods intervene only in order to unravel the plot."— Le Theatre Indien, p. 175. *Cf.* also. S. K. De. I. H. Q. XVI. ii—part 1, pp. 409-10; ಇದರಿಂದ ಎಚ್. ಓಲ್ಡೆನ್‌ಬರ್ಗ್ ಅವರ ಕಟುವಾದ ಟೀಕೆ (Massen Oursel ಅವರ 'Ancient India', pp. 310—311 ರಲ್ಲಿ ಇದು ಉದ್ಧೃತವಾಗಿದೆ) ಗೂ ಸಮಾಧಾನ ಹೇಳಿದಂತಾಯಿತು.

# ಪರಿಶಿಷ್ಟ

## ಶಾಕುಂತಲದ ಪಾಠಾಂತರಗಳು

. ಶಾಕುಂತಲದ ಪಾಠದಲ್ಲಿ ಮುಖ್ಯವಾಗಿ ಬಂಗಾಳಿ, ಕಾಶ್ಮೀರಿ, ದೇವನಾಗರಿ ದಕ್ಷಿಣಭಾರತೀಯ ಎಂದು ನಾಲ್ಕು ಭೇದಗಳಿವೆ. ಐದನೆಯ ಪಾಠವೊಂದೂ ಸಿಕ್ಕಬಹುದೆಂದು ಡಾ॥ ಕೀತ್ ಅವರು ಅಭಿಪ್ರಾಯಪಡುವರು.[1] (ಸಂಸ್ಕೃತ ನಾಟಕ, ಕೀತ್, ಪು. 154). ಕಾಳಿದಾಸನಿಂದ ರಚಿತವಾದ ಮೂಲವು ಯಾವುದಿರಬಹುದೆಂದು ವಿವಾದಕ್ಕೆ ಅವಕಾಶವಾಯಿತು. ದಕ್ಷಿಣ ಭಾರತದ ಪಾಠವು ಬಹಳ ಸಂಕೀರ್ಣವೆಂದು ಪಿಷೆಲ್ ಅವರ ಅಭಿಪ್ರಾಯ. ಬಂಗಾಳದ ಪಾಠವು ಅವಿಶ್ವಸನೀಯವೆಂದು ಮಾನಿಯರ್ ವಿಲಿಯಂಸ್ ಅವರು ಹೇಳುವರು, ದೇವನಾಗರಿ ಪಾಠವು ಪ್ರಾಮಾಣಿಕವೆಂದು ಇವರ ಅಭಿಪ್ರಾಯ.

ಪಾಠಭೇದಗಳು ಉಂಟಾಗುವುದಕ್ಕೆ ಕಾರಣಗಳನ್ನು ಪರಿಶೀಲಿಸಿದರೆ ಈ ವಿವಾದಕ್ಕೆ ಕೆಲವರು ಕೊಟ್ಟಿರುವ ಪ್ರಾಧಾನ್ಯವು ಅತಿಯೆನ್ನಿಸುವುದು. ನಿರ್ವಿವಾದವಾಗಿ ಉತ್ಕೃಷ್ಟವೆನ್ನಿಸಿಕೊಂಡಿರುವ ಭಾಗಗಳ ವಿಷಯದಲ್ಲಿ ಎಲ್ಲ ಪಾಠಗಳಲ್ಲೂ ಹೆಚ್ಚು ವ್ಯತ್ಯಾಸವಿಲ್ಲದಿರುವುದರಿಂದ ಪಾಠಭೇದಗಳಿಗೆ ಇರುವ ವ್ಯತ್ಯಾಸಕ್ಕಾಗಿ ಕಲಹವಾಗುತ್ತಲೇ ಇದ್ದರೂ ನಾಟಕದ ಪ್ರಧಾನಾಂಶಕ್ಕೆ ಯಾವ ಚ್ಯುತಿಯೂ ಇಲ್ಲವೆಂದು ತೋರುವುದು.

ಆದರೂ ವಿಮರ್ಶಕರ ದೃಷ್ಟಿಯಿಂದ 'ನಾಲ್ಕು ಶಾಕುಂತಲಗಳು' ಸಮಕಕ್ಷ್ಯೆಯಲ್ಲಿರುವುದು ಸಹ್ಯವಲ್ಲ, ಆವಶ್ಯಕವೂ ಅಲ್ಲ ಎಂದು ಕೆಲವರ

---

1. ಕಾಶ್ಮೀರಿ ಮತ್ತು ಬಂಗಾಳಿ ಮಾತೃಕೆಗಳಲ್ಲಿ ದಕ್ಷಿಣಭಾರತ, ದೇವನಾಗರೀ ಪಾಠಗಳಲ್ಲಿಲ್ಲದ ವಿಸ್ತಾರವಾದ ಶೃಂಗಾರ ದೃಶ್ಯವು ಮೂರನೆಯ ಅಂಕದಲ್ಲಿದೆ. ಹ್ರಸ್ವತಮವಾದ ಪಾಠಕ್ಕೂ ದೀರ್ಘತಮವಾದ ಪಾಠಕ್ಕೂ ಸುಮಾರು ಒಂದಕ್ಕೆ ನಾಲ್ಕರಷ್ಟು ವ್ಯತ್ಯಾಸವಿದೆ. ಡಾ॥ ಸಿಲ್ವೇನ್ ಲೆವಿ ಅವರು ಸೂಚಿಸಿರುವ ಮಾರ್ಗವನ್ನನುಸರಿಸಿ ಡಾ॥ ಬೆಲ್ವಲ್ಕರ್ ಅವರು ಎರಡಕ್ಕೂ ಮಧ್ಯಸ್ಥವಾದ ಪಾಠವೊಂದನ್ನು ನಿರ್ಣಯಿಸಿರುವರು. ಇವರ ವಾದವನ್ನು—P. O. C. IV, pp. 157—85 ಅಲ್ಲಿ ನೋಡಬಹುದು.

ಅಭಿಪ್ರಾಯ. ಆದುದರಿಂದ ರೂಪಕ ನಿರ್ಮಾಣದಲ್ಲಿ ಕವಿಗಿದ್ದ ಚಾತುರ್ಯವು ಯಾವ ಪಾಠದಲ್ಲಿ ಉತ್ತಮರೀತಿಯಲ್ಲಿ ಆವಿಷ್ಕೃತವಾಗುವುದೋ ಅದನ್ನೇ ಮೂಲಪಾಠವನ್ನಾಗಿ ಸ್ವೀಕರಿಸಬೇಕೆಂದು ಇವರು ವಾದಿಸುವರು. ಈ ಪ್ರಕಾರ ನಾಟಕದ ಕೆಲವು ಭಾಗಗಳ ಪಾಠಗಳನ್ನು ಪುನಃ ರಚಿಸುವುದಕ್ಕೂ ತೊಡಗಿರುವರು. ಇಲ್ಲೂ ಅನೇಕ ತೊಡಕು ತೊಂದರೆಗಳಿವೆ. ಯಾವ ಬದಲಾವಣೆಯನ್ನೂ ಸ್ವತಂತ್ರವಾಗಿ ಮಾಡುವಂತಿಲ್ಲ. ಮಾತೃಕೆಗಳ ಆಧಾರ ವಿದ್ದೇ ಇರಬೇಕಾಗುತ್ತದೆ. ಆದರೆ ಮಾಡಬೇಕಾದ ಬದಲಾವಣೆಗೆ ಯಾವ ಮಾತೃಕೆಗಳೂ ಸರಿಯಾದ ಆಧಾರವನ್ನೊದಗಿಸದೆ ಹೋಗುವುದುಂಟು. ನಾಟಕದ ಶ್ಲೋಕಗಳನ್ನು ತೆಗೆದು ತಮ್ಮ ಗ್ರಂಥಗಳಲ್ಲಿ ಉದ್ಧರಿಸಿರುವ ಆಲಂಕಾರಿಕರ ಸಹಾಯವು ಸ್ವಲ್ಪಮಟ್ಟಿಗೆ ಅನುಕೂಲವಾಗಿದ್ದರೂ ಅಲ್ಲೂ ಪಾಠಭೇದಕ್ಕೆ ಅವಕಾಶವಿದ್ದೇ ಇದೆ. ಹೀಗಿದ್ದರೂ ವಿಮರ್ಶಕರು ಪಾಠ ನಿರ್ಣಯಕ್ಕಾಗಿ ನಿರಂತರ ಶ್ರಮಿಸುತ್ತಿರುವುದು ಶ್ಲಾಘನೀಯವಾಗಿದೆ. ಫಲವೂ ಸಮರ್ಪಕವಾಗಿದೆಯೆನ್ನಲು ಸಂಶಯವಿಲ್ಲ.

---

# ರಘುವಂಶ

ರಘುವಂಶವು ಕಾಳಿದಾಸನ ಪೂರ್ಣ ಪ್ರತಿಭೆಯ ಪರಿಪಕ್ವ ಫಲವೆನ್ನ ಬಹುದು. ಹತ್ತೊಂಬತ್ತು ಸರ್ಗಗಳನ್ನೊಳಗೊಂಡು ವಿಶಾಲವಾಗಿಯೂ ವಿವಿಧವಾಗಿಯೂ ಇರುವುದರಿಂದ ಕಾಳಿದಾಸನ ಕಾವ್ಯಗಳಲ್ಲೆಲ್ಲ ಇದಕ್ಕೆ ಪ್ರತ್ಯೇಕವಾದ ಸ್ಥಾನವಿದೆ. ವಾಕ್ಪತಿರಾಜನು ಕಾಳಿದಾಸನನ್ನು 'ರಘುಕಾರ' ನೆಂದು ಕರೆದಿರುವುದೂ ತ್ರಿಕಾಂಡ ಶೇಷದಲ್ಲಿ 'ರಘುಕಾರ' ಎಂಬುದನ್ನು ಕಾಳಿದಾಸ ಶಬ್ದದ ಪರ್ಯಾಯವಾಗಿ ಕೊಟ್ಟಿರುವುದೂ ಸಂಪ್ರದಾಯದಲ್ಲಿ ರಘುವಂಶ ಮಹಾಕಾವ್ಯಕ್ಕಿರುವ ಪ್ರಾಶಸ್ತ್ಯದ ಕುರುಹುಗಳು. ಬಹಳ ಹಿಂದೆಯೇ ಇದು ಜಾವ, ಬಲಿ ದ್ವೀಪಗಳಿಗೂ ಸೇರಿ ಅಲ್ಲಿನ ಜನರ ಮನಸ್ಸನ್ನು ಸೆಳೆದಿದೆ. ಈಚೆಗೆ ಲ್ಯಾಟಿನ್, ಜರ್ಮನ್, ಫ್ರೆಂಚ್, ಇಂಗ್ಲಿಷ್ ಮೊದಲಾದ ಭಾಷೆಗಳಿಗೂ ಪರಿವರ್ತಿತವಾಗಿ ಖ್ಯಾತಿಪಡೆದಿದೆ. ಒಟ್ಟಿನಲ್ಲಿ, ಸರಳವಾಗಿಯೂ


ರಘುವಿನ ದಿಗ್ವಿಜಯ ಯಾತ್ರೆ
ಪರ್ಷಿಯ
ಅಫಘಾನಿಸ್ಥಾನ
ಕಾಶ್ಮೀರ
ಗಿರಿನಿವಾಸಿಗಳು
ಹಿಮಾಲಯ ಪರ್ವತಗಳು
ಟಿಬೆಟ್
(ಉತ್ಸವಸಂಕೇತರು)
ಶತದ್ರು
ಸಿಂಧೂ
ಬ್ರಹ್ಮಪುತ್ರಾ
ಅಯೋಧ್ಯೆ
ಕಾಮರೂಪ
ಕಾಶಿಗುಡ್ಡಗಳು
ವಂಗ
ಕಾಶಿ
ಗಂಗಾ
ರೂಪನಾರಾಯಣ
ಕಪಿಶಾ
ಸುಹ್ಮ
ಟಾಮ್ಲುಕ್
ಬಾಲಸೂರು
ಉತ್ಕಲ
ಮಹೇಂದ್ರಪರ್ವತ
ಕಳಿಂಗ
ವಿಶಾಖಪಟ್ಟಣ
ಅರೇಬಿಯ
ಮುಂಬಯಿ
ಅಪರಾಂತ
ಸಹ್ಯಾದ್ರಿ
ಅರಬ್ಬಿ ಸಮುದ್ರ
ಬಂಗಾಳಾ ಕೊಲ್ಲಿ
ಮಲಬಾರ್
ಕಂಚಿ
ಸೇಲಂ
ಕಾವೇರಿ
ಕೊಯಮತ್ತೂರು
ತಾಮ್ರಪರ್ಣಿ

ಭಾವಗರ್ಭಿತವಾಗಿಯೂ ಇರುವುದರಿಂದ ಇದು ಆಬಾಲವೃದ್ಧರಿಗೂ ರುಚಿಸಿದೆ ಯೆಂದರೆ ಅತಿಶಯೋಕ್ತಿಯಾಗಲಾರದು.

ಹೆಸರೇ ಸೂಚಿಸುವಂತೆ ಇದು ರಘುವಂಶದ ದೊರೆಗಳನ್ನು ಕುರಿತ ಮಹಾಕಾವ್ಯ, ಒಬ್ಬ ನಾಯಕ ನಾಯಿಕೆಯರ ಜೀವನದ ಕತೆಯಲ್ಲ.[1] ಇಲ್ಲಿ ಅನೇಕ ವ್ಯಕ್ತಿಗಳ ಅಥವಾ ಸಂದರ್ಭಗಳ ಚಿತ್ರಗಳು ಕಣ್ಣಮುಂದೆ ನಿಲ್ಲುವುವು. ಕವಿಪ್ರತಿಭೆಯು ಸ್ವತಂತ್ರವಾಗಿ ವಿಹರಿಸಿದೆ. ಅದರ ಶಕ್ತಿಯ ವೈಪುಲ್ಯ ವೈವಿಧ್ಯ ಗಳು ಇಲ್ಲಿ ಸ್ಪಷ್ಟವಾಗಿ ಗೋಚರಿಸುವುವು. ಸಮಗ್ರ ರಾಮಾಯಣದ ಕತೆಯು ಸುಮಾರು ನೂರು ಶ್ಲೋಕಗಳಲ್ಲಿ ಅಡಗಿದ್ದರೆ ಅಜವಿಲಾಪವು ಒಂದು ಸರ್ಗ ಪೂರ್ತಿ ತುಂಬಿದೆ. ಒಂದೊಂದು ಸರ್ಗದಲ್ಲೂ ಆಕರ್ಷಕವಾದ ಒಂದೊಂದು ಅಂಶವಿದೆ. ಕಥಾಭಾಗವೂ ವರ್ಣನೆಯೂ ಹಾಸುಹೊಕ್ಕಿನಂತೆ ಹೊಂದಿಕೊಂಡು ಕಾವ್ಯಕ್ಕೆ ಅಸ್ವಾದ್ಯಶವಾದ ಸೊಬಗು ಒದಗಿದೆ. ರಸಗಳೆಲ್ಲ ಒಂದೊಂದು ಒಂದೊಂದುಕಡೆ ತನ್ಮಯತ್ವವನ್ನುಂಟುಮಾಡುವಷ್ಟು ತೀವ್ರವಾಗಿ ಪರಿಪೋಷ ಹೊಂದಿವೆ. ನವರತ್ನಖಚಿತವಾದ ಮುಕ್ತಾಹಾರದಂತೆ ಕಾವ್ಯವು ಎಲ್ಲ ವಿಧವಾದ ಸೌಂದರ್ಯದಿಂದಲೂ ಕೂಡಿ ಸಹೃದಯರ ಪ್ರೀತಿಗೆ ಪಾತ್ರವಾಗಿದೆ.

## ಒಂದನೆಯ ಸರ್ಗ

"ಶಬ್ದಾರ್ಥಗಳಂತೆ ಎಡೆಬಿಡದೆ ಕೂಡಿಕೊಂಡಿರುವ ಜಗನ್ಮಾತಾಪಿತೃ ಗಳಾದ ಪಾರ್ವತೀಪರಮೇಶ್ವರರನ್ನು ಶಬ್ದಾರ್ಥಸ್ಫೂರ್ತಿಗಾಗಿ ವಂದಿಸುವೆನು" ಹೀಗೆಂದು ಕವಿಯ ಮಂಗಳಾಚರಣೆ.[2] ಕಾವ್ಯಾರಂಭಕ್ಕೆ ಎಷ್ಟು ಉಚಿತವಾದ ನಮಸ್ಕಾರ! ಶಬ್ದ ಮತ್ತು ಅರ್ಥಗಳ ಸಂಬಂಧ ಪಾರ್ವತಿ ಪರಮೇಶ್ವರರ ಸಂಬಂಧವಿದ್ದಂತೆ ಅವಿಚ್ಛೇದ್ಯ ಮತ್ತು ಅಯುತಸಿದ್ಧ. ಶಬ್ದಗಳು ಸ್ಫುರಿಸಿ ಅರ್ಥ ಹೊಂದದಿದ್ದರೂ ಪ್ರಯೋಜನವಿಲ್ಲ. ಅರ್ಥವು ಗೋಚರವಾಗಿ ಶಬ್ದವು ಸಿಕ್ಕದಿದ್ದರೂ ಸಾಲದು. "ಶಬ್ದಾರ್ಥೌ ಸಹಿತೌ ಕಾವ್ಯಂ". ಪರಸ್ಪರ

1. ರಾಮಕಥೆಯೇ ರಘುವಂಶದ ಮುಖ್ಯ ವಸ್ತುವೆಂದೂ ಆದುದರಿಂದ ರಾಮನೇ ನಾಯಕನೆಂದೂ ಒಂದು ವಾದವಿದೆ. ಇದನ್ನು ಒಪ್ಪಲು ಸಾಧ್ಯವಿಲ್ಲ.

2. ಇದನ್ನು ವಿಷ್ಣುಪರವಾಗಿ ಕೆಲವರು ತಿರುಗಿಸಲೆಳಸಿ ಪಾರ್ವತೀಪ ರಮೇಶ್ವರೌ ಎಂದು ಪದವಿಭಾಗಮಾಡುವರು. ಇದು ಸರಿಯಲ್ಲ. ಕಾಳಿದಾಸನ ಇತರ ಗ್ರಂಥಗಳ

ಪ್ರೀತಿಯಿಂದ ಒಬ್ಬರನ್ನೊಬ್ಬರು ಬಿಟ್ಟಿರಲಾರದೆ 'ಅರ್ಧನಾರೀಶ್ವರ' ರೂಪದಲ್ಲಿ ಹೊಂದಿಕೊಂಡಡಗಿದ ಪಾರ್ವತೀಪರಮೇಶ್ವರರಂತೆ ಶಬ್ದ ಮತ್ತು ಅರ್ಥಗಳು ಹೊಂದಿಕೊಂಡಿರುವುದೇ ಸರ್ವಶ್ಲಾಘ್ಯ. ಈ ಸಿದ್ಧಿಯು ಪಾರ್ವತೀಪರಮೇಶ್ವರರ ಅನುಗ್ರಹದಿಂದ ಮಾತ್ರ ಸಾಧ್ಯವೆಂದು ಕವಿಯ ಆಶಯ; ಒಂದೇ ಒಂದು ಉಪಮಾನದಿಂದ ಕವಿಯು ಎಷ್ಟು ಹೃದಯಂಗಮವಾದ ಮತ್ತು ಉದಾತ್ತವಾದ ಭಾವನೆಗಳನ್ನು ಹೊರಗೆಡಹಿರುವನೆಂಬುದನ್ನು ಪರಿಶೀಲಿಸಿದರೆ ಅವನ ಅದ್ಭುತಶಕ್ತಿ ವೇದ್ಯವಾಗದಿರದು. ಮುಂದಿನ ಪೀಠಿಕಾ ಶ್ಲೋಕಗಳಲ್ಲಿ ಕವಿಯು ತನ್ನ ವಿನಯ, ಅಧೈರ್ಯಗಳನ್ನು ಸೂಚಿಸಿರುವನು. ತನ್ನ ಕೆಲಸ ಬಹಳ ದೊಡ್ಡದು; ಅದನ್ನು ಸಾಧಿಸಲು ಬೇಕಾದ ಶಕ್ತಿ ತನ್ನಲ್ಲಿದೆಯೋ ಇಲ್ಲವೋ ಎಂದು ಸಂಶಯಪಡುವಂತೆ ತೋರುವುದು. ಇದನ್ನು ರಮ್ಯವಾದ ಎರಡು ಉಪಮಾನಗಳಿಂದ ವ್ಯಕ್ತಗೊಳಿಸುವನು. "ವಿಶಾಲವಾದ ಸಮುದ್ರವನ್ನು ದಾಟಲು ತೆಪ್ಪದಲ್ಲಿ ಹೊರಟಂತೆ; ಎತ್ತರದಲ್ಲಿರುವ ಹಣ್ಣಿಗಾಗಿ ಕುಳ್ಳನು ಕೈ ಚಾಚಿದಂತೆ" ತನ್ನ ಉದ್ಯಮವೆಂದು ಕವಿಯ ಭಾವನೆ. ಆದರೂ ಒಂದು ಧೈರ್ಯವಿದೆ ಅವನಿಗೆ. ರಘುವಂಶದ ದೊರೆಗಳ ಪ್ರಖ್ಯಾತವಾದ ಗುಣಗಳು ಇವನ ಕಿವಿಗೆ ಬಿದ್ದು ಅವರಮೇಲಿನ ಭಕ್ತಿ ಗೌರವಗಳು ಹೃದಯವನ್ನು ತುಂಬಿಕೊಂಡು ತಾವಾಗಿಯೇ ತುಳುಕುತ್ತಿರುವುವಂತೆ. ಇದಲ್ಲದೆ, ಹಿಂದಿನವರ ದಾರಿಯನ್ನು ಹಿಡಿದು ವಜ್ರ ಕೊರೆದ ಮಣಿ ರಂಧ್ರದ ಮೂಲಕ ದಾರವು ಪ್ರವೇಶಿಸುವಂತೆ ಸುಲಭವಾಗಿ ನಡೆಯಬಹುದೆಂಬ ನಂಬಿಕೆಯೂ ಇದೆ.

ಕಾವ್ಯದ ವಸ್ತುವು ರಘುವಂಶದ ದೊರೆಗಳ ಸಾಮಾನ್ಯ ಗುಣವರ್ಣನೆಯಿಂದ ಪ್ರಾರಂಭವಾಗುವುದು. ರಘುಗಳೆಲ್ಲ ಶಾಸ್ತ್ರೋಕ್ತ ಸಂಸ್ಕಾರಗಳನ್ನು

---

ಮಂಗಳಾಚರಣೆಯಂತೆ ಇದೂ ಶಿವಪರವೆಂಬುದರಲ್ಲಿ ಸಂದೇಹವಿಲ್ಲ. *Cf.* ಎಂ. ಟಿ. ನರಸಿಂಹೈಯ್ಯಂಗಾರ್. Ind. Ant., Vol. 39, p. 240. D. T. Tatacharyar, Madras Oriental Conference. Summaries of Papers, p. vii, ಇದಲ್ಲದೆ ಈ ಶ್ಲೋಕವು ಪ್ರಕ್ಷಿಪ್ತವೆಂದು ಒಂದು ಅಭಿಪ್ರಾಯವಿದೆ. *Cf.* ಆರ್. ಕೃಷ್ಣಮಾಚಾರ್ಯ, ರಘುವಂಶ ವಿಮರ್ಶೆ. New Indian Antiquary. April 1943. ಪ್ರಶ್ನೋತ್ತರಮಾಲಾ of Krishna Bhatta by Dr. C. Kunhan Raja of Madras.

ಪಡೆದವರು, ಸಮುದ್ರದವರೆಗೆ ರಾಜ್ಯವನ್ನು ವಿಸ್ತರಿಸಿದವರು, ಸ್ವರ್ಗದವರೆಗೂ ತಮ್ಮ ರಥದಲ್ಲೇ ಸಂಚರಿಸುವ ಶಕ್ತಿ ಇವರಿಗಿದೆ, ಯಾಗಾದಿಗಳನ್ನು ನಡೆಸುತ್ತ, ದುಷ್ಟಶಿಕ್ಷಣ, ಶಿಷ್ಟಪರಿಪಾಲನ, ದಾನಧರ್ಮಗಳಲ್ಲಿ ಅನವರತ ನಿರತರಾಗಿರುವರು. ದಾನಕ್ಕಾಗಿಯೇ ದ್ರವ್ಯಸಂಪಾದನೆ (ತನ್ನ ಭೋಗಕ್ಕಲ್ಲ). ಸತ್ಯ ಪರಿಪಾಲನೆಗಾಗಿಯೇ ಮಿತಭಾಷಣ (ಮೂಢತನವನ್ನು ಮರೆಮಾಚುವುದಕ್ಕಲ್ಲ). ಕೀರ್ತಿಗಾಗಿ ದಿಗ್ವಿಜಯ (ಇತರರ ಹಿಂಸೆಗಾಗಲಿ ಲೂಟಿಗಾಗಲಿ ಅಲ್ಲ). ವಂಶಾಭಿವೃದ್ಧಿಗಾಗಿ ಗೃಹಸ್ಥಾಶ್ರಮಸ್ವೀಕಾರ (ಕೇವಲ ಕಾಮೋಪಭೋಗಕ್ಕಲ್ಲ). ಕಾಲಕ್ಕೆ ತಕ್ಕಂತೆ ಬಾಲ್ಯದಲ್ಲಿ ವಿದ್ಯಾಭ್ಯಾಸ, ಯೌವನದಲ್ಲಿ ವಿಷಯೋಪಭೋಗ, ಮುಪ್ಪಿನಲ್ಲಿ ಮುನಿವೃತ್ತಿ, ನಿರ್ವಿಕಲ್ಪಕ ಸಮಾಧಿಯ ಮೂಲಕ ಶರೀರತ್ಯಾಗ.

ಹೀಗೆ ಆದರ್ಶ ವ್ಯಕ್ತಿಗಳಾದ ಇವರ ವಂಶವು ಸೂರ್ಯನಿಂದ ಉದ್ಭವಿಸಿ ಪ್ರಸಿದ್ಧವಾಗಿದ್ದರೂ ಕಾಳಿದಾಸನು ಮನ್ವಂತರಾಧಿಪನಾದ ವೈವಸ್ವತನಿಂದ ಕಾವ್ಯವನ್ನು ಪ್ರಾರಂಭಿಸುವನು. ವೈವಸ್ವತನು ವೇದಗಳಲ್ಲಿ ಪ್ರಣವವಿದ್ದಂತೆ. 'ಕ್ಷೀರಸಾಗರ'ದಂತೆ ಪರಿಶುದ್ಧವಾದ ಇವನ ವಂಶದಲ್ಲಿ ಇನ್ನೂ ಹೆಚ್ಚು ಪರಿಶುದ್ಧನಾದ ದಿಲೀಪನೆಂಬ 'ರಾಜಚಂದ್ರ'ನು ಹುಟ್ಟುವನು. ವಿಶಾಲವಾದ ಎದೆ, ಎತ್ತರವಾದ ಆಕಾರ, ಉಬ್ಬಿದ ಭುಜ, ನೀಳವಾದ ತೋಳುಗಳು, ಇದಕ್ಕನುಗುಣವಾದ ಬುದ್ಧಿ ಮತ್ತು ಶಾಸ್ತ್ರಾಭ್ಯಾಸ. ಹೀಗೆ ಎಲ್ಲ ವಿಷಯಗಳಲ್ಲೂ ದಿಲೀಪನು ಕ್ಷತ್ರಿಯಧರ್ಮವೇ ಮೂರ್ತಿವೆತ್ತಂತಿರುವನು. ದುಷ್ಟರು ಇವನನ್ನೆದುರಿಸಲು ಅಂಜುತ್ತಿದ್ದಂತೆ, ಸತ್ಪುರುಷರು ನಿರ್ಭಯವಾಗಿ ಇವನನ್ನಾಶ್ರಯಿಸುತ್ತಿದ್ದರು. ಇವನಿಗೆ ಮಗಧ ವಂಶದಲ್ಲಿ ಹುಟ್ಟಿದ ಅನುರೂಪಳಾದ ಸುದಕ್ಷಿಣೆಯೆಂಬ ರಾಣಿ. ಈ ರಾಜ ದಂಪತಿಗಳು ತಮಗೆ ಬಹುಕಾಲ ಮಕ್ಕಳಾಗದಿರಲು ಕಾರಣ ಮತ್ತು ಇದಕ್ಕೆ ಪ್ರತೀಕಾರಗಳನ್ನು ತಿಳಿಯಬೇಕೆಂದು ಕುಲಗುರುಗಳಾದ ವಸಿಷ್ಠರ ಆಶ್ರಮಕ್ಕೆ ಹೊರಡುವರು. ಶುಭ ಶಕುನಗಳು ಕಾಣಿಸುವುವು. ಪ್ರಯಾಣವು ಸುಖಮಯವಾಗಿ ಸವೆಸಿದ ದಾರಿಯೇ ತಿಳಿಯದಂತೆ ಸಂಜೆಯ ವೇಳೆಗೆ ಆಶ್ರಮವನ್ನು ತಲಪುವರು. ಋಷಿಗಳು ಆದರದಿಂದ ದೊರೆಯನ್ನು ಸ್ವಾಗತಿಸುವರು. ಸ್ವಲ್ಪಕಾಲದ ನಂತರ ದೊರೆಯು ಗುರು ಗುರುಪತ್ನಿಯರಿಗೆ ನಮಸ್ಕರಿಸಿ

ತನ್ನ ರಾಜ್ಯದ ಯೋಗಕ್ಷೇಮವನ್ನು ತಿಳಿಸಿ ತಾನು ಬಂದ ಕೆಲಸವನ್ನು ಕುರಿತು ಪ್ರಸ್ತಾಪಿಸುವನು. ತನ್ನ ಕಾಲಾನಂತರ ವಂಶವು ವಿಚ್ಛಿನ್ನವಾಗುವುದೆಂದೂ ಪಿತೃಋಣವು ತೀರದೆ ತನಗೆ ಸದ್ಗತಿಯಿಲ್ಲವೆಂದೂ ಹೇಳಿ ದಿಲೀಪನು ದುಃಖಪಡುವನು. ವಸಿಷ್ಠರು ಶಿಷ್ಯನ ಕೊರತೆಗೆ ಮರುಗಿ ಸಂತತಿವಿಚ್ಛೇದಕ್ಕೆ ಕಾರಣವನ್ನು ಧ್ಯಾನಬಲದಿಂದ ಕಂಡುಹಿಡಿಯುವರು. ಹಿಂದೆ ಒಂದು ಸಲ ಇಂದ್ರನ ಭೇಟಿಮಾಡಿಕೊಂಡು ಹಿಂತಿರುಗುತ್ತಿದ್ದಾಗ ಕಾಮಧೇನುವನ್ನು ನಮಸ್ಕರಿಸದೆ ಅವಸರದಲ್ಲಿ ಬಂದದ್ದೇ ಅದರ ಈ ಶಾಪಕ್ಕೆ ಕಾರಣವಾಯಿತೆಂದೂ ಅದನ್ನು ಪರಿಹರಿಸಿ ಸಂತಾನ ಹೊಂದಬೇಕಾದರೆ ಅದರ ಕರು 'ಸುರಭಿ' ಯನ್ನು ಆರಾಧಿಸಬೇಕೆಂದೂ ವಸಿಷ್ಠರು ತಿಳಿಸುವರು. ಅಷ್ಟರಲ್ಲಿ 'ಸುರಭಿ' ಯು ಬರುವುದು. ಅದನ್ನೇ ಕಾರ್ಯಸಿದ್ಧಿಯನ್ನು ಸೂಚಿಸುವ ಶುಭಶಕುನವನ್ನಾಗಿ ಭಾವಿಸಿ ದೊರೆಯು ಗುರುಗಳ ಆಜ್ಞೆಯನ್ನು ಸ್ವೀಕರಿಸುವನು. ಆಶ್ರಮನಿಯಮದ ಪರಿಚಯವಾಗಲೆಂದು ವಸಿಷ್ಠರು ವನ್ಯಾಹಾರದಿಂದಲೇ ಅವನನ್ನು ಸತ್ಕರಿಸುವರು. ದೊರೆಯೂ ಪತ್ನೀಸಮೇತನಾಗಿ ದರ್ಭಶಯನದಲ್ಲಿ ಮಲಗಿದ್ದು ಮುಂಜಾನೆ ಎದ್ದು ವ್ರತವನ್ನಾರಂಭಿಸುವನು.

## ಎರಡನೆಯ ಸರ್ಗ

ಪತಿ ಪತ್ನಿಯರಿಬ್ಬರೂ ತಮ್ಮ ಪ್ರಾತಃಕಾಲದ ಆಹ್ನಿಕಗಳನ್ನು ಮುಗಿಸಿ ಸುರಭಿಯನ್ನು ಹಾಲುಕರೆದು ಕರುವನ್ನು ಕಟ್ಟಿಹಾಕುವರು. ರಾಣಿಯು ಅದನ್ನು ಪೂಜಿಸಿದಮೇಲೆ ದೊರೆಯು ಅದನ್ನು ಮೇಯಿಸುವುದಕ್ಕಾಗಿ ಕಾಡಿಗೆ ಅಟ್ಟಿಕೊಂಡು ಹೊರಡುವನು. ಸ್ಮೃತಿಯು ಶ್ರುತ್ಯರ್ಥವನ್ನನುಸರಿಸುವಂತೆ ಸುದಕ್ಷಿಣೆಯೂ ಸ್ವಲ್ಪದೂರ ಸುರಭಿಯನ್ನನುಸರಿಸಿ ಹಿಂದಿರುಗುವಳು. ಅನಂತರ ದಿಲೀಪನು ಅದನ್ನು ಜಾಗರೂಕತೆಯಿಂದ ನೋಡಿಕೊಳ್ಳುತ್ತ ಹಿಡಿಹಿಡಿಯಾಗಿ ಹುಲ್ಲು ತಿನ್ನಿಸುವುದು, ನೀರು ಕುಡಿಸುವುದು, ಅದು ಹೋದಲ್ಲಿಗೆ ನೆರಳಿನಂತೆ ಹಿಂಬಾಲಿಸುವುದು ಹೀಗೆ ಆದರದಿಂದ ಆರಾಧಿಸುವನು. ರಾಜಪದವಿಯ ಲಾಂಛನಗಳನ್ನೆಲ್ಲ ಬಿಟ್ಟಿದ್ದರೂ ಅವನ ರಾಜತೇಜಸ್ಸು ಅಳಿಯಲಿಲ್ಲ. ಕಾಡಿನ ಗಿಡಬಳ್ಳಿಗಳೂ ಇವನಿಗೆ ರಾಜೋಪಚಾರವನ್ನು ಸಲ್ಲಿಸುವುವು. ಹೀಗೆ ಸಂಜೆಯವರೆಗೆ ಕಾಡಿನಲ್ಲಿ ಅದನ್ನುಪಚರಿಸಿ ಹಿಂತಿರುಗುವಾಗ ಶ್ರದ್ಧೆಯು

ವಿಧಿಯನ್ನು ಅನುಸರಿಸುವಂತೆ ಕಾಣುವುದು. ಸುದಕ್ಷಿಣೆಯು ಕುತೂಹಲ ದಿಂದ ಮುಂದೆ ಬಂದು ನಂದಿನಿಯನ್ನೆದುರುಗೊಂಡು ಪೂಜಿಸುವಳು. ಕರು ವನ್ನು ನೋಡಲು ಹಂಬಲಿಸುತ್ತಿದ್ದರೂ ನಂದಿನಿಯು ತಮ್ಮ ಪೂಜೆಯನ್ನು ಸ್ವೀಕರಿಸುವುದನ್ನು ನೋಡಿ ರಾಜದಂಪತಿಗಳಿಗೆ ಸಂತೋಷವಾಗುವುದು. ಕೂಡಲೆ ಸಂಧ್ಯಾವಂದನಾದಿಗಳನ್ನು ಮುಗಿಸಿ ದಿಲೀಪನು ಪುನಃ ಅದರ ಶುಶ್ರೂಷೆಗೆ ಸಿದ್ಧನಾಗುವನು. ಅದು ಮಲಗಿದಮೇಲೆ ಮಲಗುವುದು, ಏಳುವುದಕ್ಕೆ ಮುಂಚೆ ಏಳುವುದು ಇದೇ ಅವನ ಸಂಪ್ರದಾಯ. ಹೀಗೆ ಇಪ್ಪತ್ತೊಂದು ದಿನಗಳು ಕಳೆದುವು.

ಮರುದಿನ ಅಕಸ್ಮಾತ್ತಾಗಿ ನಂದಿನಿಯು ಹಿಮವತ್ಪರ್ವತದ ಗುಹೆ ಯೊಂದನ್ನು ಪ್ರವೇಶಿಸುವುದು. ದೊರೆಯು ಮೈಮರೆತಂತೆ ಒಂದು ಕ್ಷಣ ಮಾತ್ರ ಪರ್ವತದ ಸೊಬಗನ್ನು ನೋಡುತ್ತಿದ್ದನೋ ಇಲ್ಲವೋ ಅಷ್ಟರಲ್ಲಿ ಒಂದು ಸಿಂಹವು ಹಸುವಿನಮೇಲೆ ಬೀಳುವುದು. ಹಸುವಿನ ಆರ್ತನಾದ ವನ್ನು ಕೇಳಿ ದೊರೆಯು ಚಕಿತನಾಗಿ ಬಿಲ್ಲನ್ನು ತೆಗೆದು ಬಾಣಕ್ಕಾಗಿ ಬತ್ತಳಿಕೆಗೆ ಕೈ ಹಾಕುವನು. ಆದರೆ ಆ ಕೈ ಅಲ್ಲೇ ಸಿಕ್ಕಿಕೊಳ್ಳುವುದು. ಪಾಪ! ಮುಂದೇನೂ ಮಾಡಲಾರದೆ ದಿಲೀಪನು ಸರ್ಪದಂತೆ ರೋಷಗೊಳ್ಳುವನು. ಆಗ ಆಶ್ಚರ್ಯಗೊಳಿಸುವಂತೆ ಸಿಂಹವು ಮಾತನಾಡಿ ಇವನಿಗೆ ಹೀಗೆಂದು ಹೇಳುವುದು.— "ರಾಜನೇ! ವೃಥಾ ಶ್ರಮಿಸಬೇಡ. ನೀನು ಅಸ್ತ್ರವನ್ನು ಬಿಟ್ಟರೂ ಅದು ವ್ಯರ್ಥವಾಗುವುದು. ಗಾಳಿಯ ಶಕ್ತಿ ಬೆಟ್ಟದಮೇಲೆ ನಡೆ ಯುವುದೆ? ಅಗೋ! ಅಲ್ಲಿ ಕಾಣುವ ದೇವದಾರುವೃಕ್ಷವು ಹರನ ಸಾಕು ಮಗ. ಪಾರ್ವತಿಯು ಅದನ್ನು ಬಹಳ ಅಕ್ಕರೆಯಿಂದ ಸಾಕಿರುವಳು. ಒಂದು ದಿನ ಕಾಡಾನೆಯೊಂದು ಅದಕ್ಕೆ ಮೈಯನ್ನುಜ್ಜಿ ಅದರ ತೊಗಟೆಯನ್ನೆಬ್ಬಿಸಲು ಪಾರ್ವತಿಯು ಬಹಳ ದುಃಖಪಟ್ಟಳು. ಅಂದಿನಿಂದ ಹರನು ನನಗೆ ಈ ರೂಪ ಕೊಟ್ಟು ಕಾವಲಿರಿಸಿರುವನು. ನನ್ನ ಹೆಸರು ಕುಂಭೋದರ. ನನ್ನ ಹತ್ತಿರಕ್ಕೆ ಬಂದ ಪ್ರಾಣಿಗಳೇ ನನಗೆ ಆಹಾರವೆಂದು ಹರನ ಅಪ್ಪಣೆ. ಆದುದರಿಂದ ಹಸುವಿನಾಸೆಯನ್ನು ಬಿಟ್ಟು ಹೊರಡು. ನಿನ್ನ ಕೈಲಾದಷ್ಟು ನೀನೂ ಸೇವೆ ಮಾಡಿರುವೆ. ಅಸಾಧ್ಯವಾದುದನ್ನು ರಕ್ಷಿಸದಿದ್ದರೆ ಕೀರ್ತಿಗೇನೂ ಕುಂದಕ ವಿಲ್ಲ." ಇದನ್ನು ಕೇಳಿದೊಡನೆ ಶಿವಪ್ರಭಾವದಿಂದ ತನ್ನ ಶಕ್ತಿ ಕುಗ್ಗಿತೆಂದು

ದೊರೆಯ ನಾಚಿಕೆಯು ಸ್ವಲ್ಪ ಹಿಂದಾಗುವುದು. ಆದರೂ ಸಿಂಹವನ್ನು ಕುರಿತು ದೊರೆಯು—"ಪರಮೇಶ್ವರನಲ್ಲಿ ನನಗೂ ಭಕ್ತಿಯುಂಟು. ಆದರೆ ಕಣ್ಣೆದುರಿಗೇ ಗುರುಗಳ ಸ್ವತ್ತನ್ನು ಅಪಹರಿಸುತ್ತಿರುವಾಗ ಸುಮ್ಮನಿರಲಾಗುವುದೆ? ನಿನ್ನ ಹಸಿವನ್ನು ನನ್ನ ದೇಹದಿಂದ ತೀರಿಸಿಕೊ. ಋಷಿಗಳ ಹಸುವನ್ನು ಬಿಟ್ಟುಬಿಡು. ಸಂಜೆಗೆ ಅದನ್ನು ನೋಡಲು ಅದರ ಕರು ಹಂಬಲಿಸುತ್ತಿರುವುದು" ಎನ್ನುವನು. ಸಿಂಹವು ಆದರೂ ಒಪ್ಪದೆ ದೊರೆಗೆ ಉಪದೇಶಮಾಡತೊಡಗುವುದು. "ಏಕಚ್ಛತ್ರಾಧಿಪತ್ಯ, ಉಕ್ಕುವ ಪ್ರಾಯ, ಸುಂದರವಾದ ದೇಹ; ಇದನ್ನೆಲ್ಲ ಬಿಡುವುದು ಮೌಢ್ಯ. ನೀನು ಸತ್ತರೆ ಹಸು ಮಾತ್ರ ಬದುಕುವುದು. ನೀನು ಬದುಕಿದರೆ ತಂದೆಯಂತೆ ಎಲ್ಲರನ್ನೂ ರಕ್ಷಿಸುವೆ........ಗುರುವಿಗೆ ಕೋಪ ಬರುವುದೆಂದು ಭಯಪಡುವೆಯಾದರೆ ಒಂದಕ್ಕೆ ಕೋಟಿ ಹಸುಗಳನ್ನು ಕೊಡುವ ಶಕ್ತಿ ನಿನಗಿದೆ. ಆದ್ದರಿಂದ ನಿನ್ನ ದೇಹವನ್ನುಳಿಸಿಕೊ" ಹೀಗೆಂದು ಅದು ಹೇಳಲಾಗಿ ಈ ಮಾತುಗಳು ಬೆಟ್ಟದ ಗುಹೆಗಳಲ್ಲೆಲ್ಲ ಮರುದನಿಗೈಯುವುದು. ದಿಲೀಪನು ಪುನಃ ಉತ್ತರಕೊಡುವನು.—" 'ಪೆಟ್ಟಿನಿಂದ ರಕ್ಷಿಸುವವನು' ಎಂಬ ಅರ್ಥದಲ್ಲೇ 'ಕ್ಷತ್ರಿಯ' ಶಬ್ದವನ್ನು ಪ್ರಯೋಗಿಸುವುದು. ಇದಕ್ಕೆ ವಿರುದ್ಧವಾಗಿ ವರ್ತಿಸುವವನಿಗೆ ರಾಜ್ಯವೇಕೆ? ಬದುಕೇಕೆ? ನನ್ನ ಜೀವವು ಸುರಭಿಗೆ ಕಡಿಮೆಯಲ್ಲ. ಆದ್ದರಿಂದ ಇದನ್ನು ಒಪ್ಪಿಸಿ ಸುರಭಿಯನ್ನು ರಕ್ಷಿಸುವುದೇ ಯುಕ್ತ. ಮುನಿಕಾರ್ಯವೂ ಕೆಡದು; ನಿನಗೆ ಪಾರಣೆಯೂ ತಪ್ಪದು. ಪರಾಧೀನನಾದ ನಿನಗೆ ಇದು ತಿಳಿದೇ ಇದೆ. ನೋಡಿಕೊಳ್ಳೆಂದು ಹೇಳಿಕೊಟ್ಟ ದೇವದಾರು ವೃಕ್ಷವನ್ನು ಕಳೆದು ಸ್ವಾಮಿಯಮುಂದೆ ನಿಲ್ಲಲು ನಿನಗೆ ಮನಸ್ಸು ಬರುವುದೆ?

ನನ್ನನ್ನು ಕೊಲ್ಲಲು ಮನಸ್ಸು ಬರದಿದ್ದರೆ ನನ್ನ ಯಶಶ್ಶರೀರದ ಮೇಲೆ ದೃಷ್ಟಿಯಿಡು. ನಮ್ಮಂತಹವರಿಗೆ ನಶ್ವರವಾದ ಭೌತಿಕ ಶರೀರದ ವಿಷಯದಲ್ಲಿ ಖಂಡಿತವಾಗಿಯೂ ಜುಗುಪ್ಸೆ. ಅದ್ದರಿಂದ (ನೀನು ಈಗಾಗಲೇ ಸ್ನೇಹಿತನಾಗಿದ್ದೀಯೆ), ಸ್ನೇಹಿತನಾದ ನನ್ನ ಪ್ರಾರ್ಥನೆಯನ್ನು ಸಲ್ಲಿಸು" ಹೀಗೆಂದು ಸಿಂಹವನ್ನು ಒಪ್ಪಿಸಿ ದಿಲೀಪನು ಶಸ್ತ್ರಗಳನ್ನು ತೆಗೆದಿಟ್ಟು ಸಿಂಹದ ಬಾಯಿಗೆ ತುತ್ತಾಗಲು ಸಿದ್ಧನಾಗುವನು. ಆಗ ವಿದ್ಯಾಧರರು ಅವನ ತಲೆಯಮೇಲೆ ಹೂಮಳೆ ಸುರಿಸುವರು. "ಏಳು ಮಗು" ಎಂಬ ಅಮೃತಪ್ರಾಯವಾದ

ಮಾತು ಕೇಳಬರುವುದು. ತಲೆಯೆತ್ತಿ ನೋಡಲಾಗಿ ಹಸುವು ಮಾತ್ರ ಕಾಣಿಸುವುದು. ವಿಸ್ಮಿತನಾದ ದೊರೆಯನ್ನು ಕುರಿತು ಅದು ಹೇಳುವುದು.— "ನಿನ್ನ ಗುರುಭಕ್ತಿಗೂ ನೀನು ನನಗೆ ತೋರಿಸಿದ ದಯೆಗೂ ಮೆಚ್ಚಿದೆನು. ನಾನು ಹಾಲನ್ನು ಮಾತ್ರ ಕೊಡಬಲ್ಲ ಹಸುವಲ್ಲ. ಪ್ರಸನ್ನಳಾದರೆ ಎಲ್ಲ ಇಷ್ಟಾರ್ಥಗಳನ್ನೂ ಕೊಡಬಲ್ಲೆನು. ಕೇಳು" ಎಂದು. ಆಗ ದೊರೆಯು ಕೈ ಜೋಡಿಸಿಕೊಂಡು ತನ್ನ ವಂಶವನ್ನು ಮುಂದಕ್ಕೆ ತಂದು ಶಾಶ್ವತಕೀರ್ತಿಯನ್ನು ಗಳಿಸುವ ಮಗನನ್ನು ಕರುಣಿಸಬೇಕೆಂದು ಪ್ರಾರ್ಥಿಸುವನು. ತನ್ನ ಹಾಲನ್ನು ಕರೆದು ಕುಡಿಯಬೇಕೆಂದು ನಂದಿನಿ ಹೇಳುವುದು. "ಕರುವು ಕುಡಿದು ಹೋಮಕ್ಕೆ ಉಪಯೋಗಿಸಿ ಮಿಗುವ ಹಾಲನ್ನು ಋಷಿಗಳ ಅಪ್ಪಣೆ ಪಡೆದು ಕುಡಿಯುವೆನು" ಎಂದು ದಿಲೀಪನು ಹೇಳಲು ನಂದಿನಿಯು ಮತ್ತೂ ಸಂತೋಷಗೊಂಡು ಮೆಲ್ಲನೆ ಗುಹೆಯಿಂದ ಹಿಂದಿರುಗುವುದು. ನಂದಿನಿಯ ಅಪ್ಪಣೆಯನ್ನು ಗುರುವಿಗೂ ಹೆಂಡತಿಗೂ ತಿಳಿಸಿ ಹೋಮಶೇಷವಾದ ಕ್ಷೀರವನ್ನು ಋಷಿಗಳ ಅಪ್ಪಣೆಪಡೆದು ಕುಡಿಯುವನು. ಮಾರನೆಯ ದಿನ ವ್ರತವನ್ನು ಮುಗಿಸಿ ಪಾರಣೆಯನ್ನು ಮಾಡಿದಮೇಲೆ ವಸಿಷ್ಠರು ಇವರನ್ನು ಆಶೀರ್ವದಿಸಿ ಕಳುಹಿಸಿಕೊಡುವರು. ಋಷಿದಂಪತಿಗಳಿಗೂ ಯಜ್ಞೇಶ್ವರ ನಂದಿನಿಯರಿಗೂ ನಮಸ್ಕರಿಸಿ ದೊರೆಯು ಹರ್ಷಚಿತ್ತನಾಗಿ ರಾಜಧಾನಿಗೆ ಬರುವನು. ರಾಣಿಯು ಗರ್ಭವನ್ನು ಧರಿಸುವಳು.

## ಮೂರನೆಯ ಸರ್ಗ

ಗರ್ಭವು ತೇಜಸ್ವಿ, ಭಾಗ್ಯಶಾಲಿ ಮತ್ತು ಪರಿಶುದ್ಧವೆಂದು ಸೂಚಿಸುವಂತೆ ಸುದಕ್ಷಿಣೆಯಲ್ಲಿ ಅಪೂರ್ವ ತೇಜಸ್ಸು ಮೂಡಿತು. ಅಂತಸ್ತಿಗೆ ತಕ್ಕ ವಿಜೃಂಭಣೆಯಿಂದ ಪುಂಸವನಾದಿ ಕಾರ್ಯಗಳು ನೆರವೇರುವುವು. ಕಾಲಕ್ರಮದಲ್ಲಿ ಐದು ಗ್ರಹಗಳು ಅಸ್ತವಾಗದೆ ಉಚ್ಚಸ್ಥಾನಗಳಲ್ಲಿರುವಾಗ ಶುಭಲಗ್ನದಲ್ಲಿ ರಾಣಿಯು ಗಂಡುಮಗುವನ್ನು ಹೆರುವಳು. ಮಗುವಿನ ಕಾಂತಿಯೇ ಸೂತಿಕಾಗೃಹವನ್ನು ಬೆಳಗುವುದು. ಮಹಾಪುರುಷಜನ್ಮಕ್ಕನುಗುಣವಾದ ಶುಭಲಕ್ಷಣಗಳು ಕಾಣಿಸಿಕೊಳ್ಳುವುವು. ದೊರೆಯ ಸಂತೋಷ ಎಲ್ಲೆ ಮೀರಿತ್ತು. ಪುತ್ರೋತ್ಸವದ ಸುದ್ದಿಯನ್ನು ತಂದವರಿಗೆ ಅಧಿಕವಾದ ಬಹು

ಮಾನವನ್ನು ಕೊಡುವನು. ವಸಿಷ್ಠರೇ ತಪೋವನದಿಂದ ಆಗಮಿಸಿ ಜಾತ ಕರ್ಮಾದಿಗಳನ್ನು ನಡೆಸಲಾಗಿ ಮಗುವು ಮೆರಗುಕೊಟ್ಟ ರತ್ನದಂತೆ ಪ್ರಕಾಶಿಸುವುದು. ದೊರೆಗೆ ಪಿತೃಋಣದಿಂದ ಬಿಡುಗಡೆಯಾದಂತೆ ಸೆರೆಮನೆಯಲ್ಲಿದ್ದವರಿಗೆಲ್ಲ ಬಿಡುಗಡೆಯಾಗುವುದು. ಮಗುವಿಗೆ 'ರಘು' ವೆಂದು ನಾಮಕರಣವಾಗುವುದು. ಪ್ರೀತಿಗೆ ಪಾಲುಗಾರನಾದ ಮಗನು ಹುಟ್ಟಿದರೂ ದಂಪತಿಗಳ ಪರಸ್ಪರಪ್ರೀತಿಯು ಕುಗ್ಗುವುದಕ್ಕೆ ಬದಲಾಗಿ ಮೊದಲಿಗಿಂತ ಹೆಚ್ಚುವುದು. ಕಾಲಕ್ರಮದಲ್ಲಿ ರಘುವು ಮಂತ್ರಿಪುತ್ರರೊಡನೆ ವಿದ್ಯಾಭ್ಯಾಸ ಹೊಂದುವನು. ಧನುರ್ವಿದ್ಯೆಯಲ್ಲಿ ತಾನೇ ಅದ್ವಿತೀಯನಾಗಿದ್ದುದರಿಂದ ದಿಲೀಪನು ಮಗನಿಗೆ ಮಂತ್ರಗಳನ್ನು ಉಪದೇಶಿಸುವನು. ಹೀಗೆ ರಘುವು ಗಾಂಭೀರ್ಯ ಸೌಂದರ್ಯಗಳಿಂದ ಕೂಡಿದ ತರುಣನಾಗಿ ತಂದೆಯನ್ನು ಮೀರಿಸಿದರೂ ವಿನಯದಿಂದ ಅವನಿಗೆ ತಗ್ಗಿ ನಡೆಯುವನು.

ರಾಜಕುಮಾರನಿಗೆ ವಯಸ್ಸು ಬಂದ ಕೂಡಲೆ ವಿವಾಹವೂ ಯೌವರಾಜ್ಯಾಭಿಷೇಕವೂ ನಡೆಯುವುವು. ಇತರ ರಾಜಕುಮಾರರೊಡನೆ ಯಜ್ಞಾಶ್ವರಕ್ಷಣೆಯನ್ನು ಮಾಡಿ ರಘುವು ದಿಲೀಪನ ೯೯ ಅಶ್ವಮೇಧ ಯಾಗಗಳಿಗೂ ಸಹಾಯಮಾಡುವನು. ಇಂದ್ರಪದವಿಯನ್ನು ಕೊಡುವ ನೂರನೆಯ ಯಾಗಕ್ಕಾಗಿ ಕುದುರೆಯನ್ನು ಬಿಟ್ಟಾಗ ಇಂದ್ರನು ಅಸೂಯೆಗೊಂಡು ರೂಪ ಮರೆಸಿಕೊಂಡು ಬಂದು ಅದನ್ನು ಕದಿಯುವನು. ಅಕಸ್ಮಾತ್ ನಂದಿನಿಯು ಆಗ ಅಲ್ಲಿಗೆ ಬರಲಾಗಿ ಅದರ ದೆಸೆಯಿಂದ ರಘುವಿಗೆ ಅತೀಂದ್ರಿಯ ಜ್ಞಾನವುಂಟಾಗುವುದು. ಕಳ್ಳತನದಿಂದ ಓಡಿಹೋಗುತ್ತಿದ್ದ ಇಂದ್ರನನ್ನು ಕೂಗಿ ರಘುವು ಹೀಯಾಳಿಸುವನು. ಇಂದ್ರನು ರಥವನ್ನು ಹಿಂದಿರುಗಿಸಿ ಕುಮಾರನನ್ನು ಕುರಿತು.—"ಶತಕ್ರತು (ನೂರು ಯಾಗ ಮಾಡಿದವನು) ವೆಂಬ ಕೀರ್ತಿಯು ನನಗೇ ಸೇರಿರತಕ್ಕದ್ದು. ಅದನ್ನು ನಿಮ್ಮ ತಂದೆಯು ಅಪಹರಿಸಲು ಯತ್ನಿಸಿರುವುದು ಸರಿಯಲ್ಲ. ವೃಥಾ ಶ್ರಮಪಟ್ಟು ಸಗರನ ಮಕ್ಕಳ ಗತಿಗೀಡಾಗಬೇಡ" ಎನ್ನುವನು. ರಘುವು ಸುಮ್ಮನಾಗದೆ ಯುದ್ಧಕ್ಕೆ ತೊಡಗುವನು. ಇವನನ್ನು ಜಯಿಸಲು ಇಂದ್ರನಿಗೆ ಸಾಧ್ಯವಾಗದೆ ಹೋಗುವುದು. ಆಗ ಇವನ ಪರಾಕ್ರಮಕ್ಕೆ ಮೆಚ್ಚಿದ ಇಂದ್ರನು "ಕುದುರೆಯಲ್ಲದೆ ಬೇರೇನು ಬೇಕು?" ಎಂದು ಕೇಳಿ ಒಂದು ವರವನ್ನು ಕೊಡುವನು. ದೀಕ್ಷೆಯನ್ನು ಕೈಕೊಂಡಿರುವ

ತನ್ನ ತಂದೆಗೆ ಯಜ್ಞದ ಪೂರ್ಣಫಲವು ದೊರಕಬೇಕೆಂದು ರಘುವು ಪ್ರಾರ್ಥಿಸ ಲಾಗಿ ಆದರಂತೆ ದಿಲೀಪನಿಗೆ ಸ್ವರ್ಗಕ್ಕೇರಲು ಅಶ್ವಮೇಧಗಳ ನೂರು ಮೆಟ್ಟಿಲುಗಳು ಸಿದ್ಧವಾಗುವುವು. ಶ್ವೇತಚ್ಛತ್ರವನ್ನು ಮಗನಿಗೊಪ್ಪಿಸಿ ದಿಲೀ ಪನು ಪತ್ನೀಸಮೇತನಾಗಿ ಕುಲವ್ರತವನ್ನಾಚರಿಸುತ್ತ ಕಾಡಿಗೆ ತೆರಳುವನು.

## ನಾಲ್ಕನೆಂಯ ಸರ್ಗ

ತಂದೆಯಿಂದ ರಾಜ್ಯವನ್ನು ಪಡೆದಮೇಲೆ ರಘುವು ಮೊದಲಿಗಿಂತ ಹೆಚ್ಚು ತೇಜಸ್ವಿಯಾಗುವನು. ಶತ್ರುಗಳಿಗೆ ಭಯ ಹೆಚ್ಚುವುದು. ಹಾಗೆಯೇ ಮಿತ್ರರಿಗೆ ಸಂತೋಷ ಹೆಚ್ಚುವುದು. ತನ್ನ ಅಧಿಕವಾದ ಗುಣಗಳಿಂದ ರಘುವು ಪ್ರಜೆಗಳ ಮನಸ್ಸನ್ನು ಗೆದ್ದು ಅವರಲ್ಲಿದ್ದ ದಿಲೀಪನ ನೆನಪನ್ನೂ ಕಡಿಮೆ ಮಾಡುವನು. ಹೊಸ ದೊರೆಯ ಆಳಿಕೆಯಲ್ಲಿ ಎಲ್ಲವೂ ಹೊಸದಾದಂತೆ ತೋರು ವುದು. ಹೀಗೆ ರಾಜ್ಯದಲ್ಲಿ ಶಾಂತಿ ಸ್ಥೈರ್ಯಗಳನ್ನು ಏರ್ಪಡಿಸಿ, ಮಳೆಗಾಲವು ಕಳೆಯಲಾಗಿ ರಘುವು ದಿಗ್ವಿಜಯ ಯಾತ್ರೆಗಾಗಿ ಧನುಸ್ಸನ್ನು ಹಿಡಿಯುವನು. ಶರದೃತುವು ತನ್ನ 'ಕಾಶ' ಚಾಮರಗಳಿಂದ ಅವನನ್ನು ಬೀಸಿ ಗೌರವಿಸುವುದು. ಹೊರಡುವಾಗ ರಾಜಧಾನಿಯ ವೃದ್ಧಸುಮಂಗಲಿಯರು ಅವನಮೇಲೆ ಅರಳನ್ನೆರಚಿ ಜಯವನ್ನು ಕೋರುವರು.

ಶತ್ರುಗಳನ್ನು ಹೆದರಿಸುವುದಕ್ಕೆ ರಘುವಿನ ಬಾವುಟವೇ ಸಾಕಾಗಿತ್ತು. ರಥಸಂಚಾರದಿಂದೆದ್ದ ಧೂಳು ದಟ್ಟವಾಗಿ ಹರಡಿ ಅಂತರಿಕ್ಷವನ್ನು ಭೂಮಿ ಯನ್ನಾಗಿಸಿತು. ಮೋಡಗಳಂತೆ ಕಪ್ಪಾದ ಇವನ ಆನೆಗಳು ಭೂಮಿಯನ್ನೇ ಅಂತರಿಕ್ಷವನ್ನಾಗಿಸಿತು. ಅಪಾರವಾದ ಸೈನ್ಯದಿಂದೊಡಗೂಡಿ ರಘುವು ಪೂರ್ವ ದಿಕ್ಕಿಗೆ ಹೊರಡುವನು. ಬಹಳ ಬೇಗ ಅಲ್ಲಿನ ಜನಪದಗಳನ್ನೆಲ್ಲ ಸೋಲಿಸಿ ತಾಳೆಯ ಮೆಳೆಗಳಿಂದ ಹಸುರಾಗಿದ್ದ ಸಮುದ್ರತೀರಕ್ಕೆ ಬರುವನು. ನದೀ ಪ್ರವಾಹದಂತೆ ವೇಗವಾಗಿ ಬರುತ್ತಿದ್ದ ರಘುವಿನ ಹಾವಳಿಯನ್ನು ಸುಹ್ಮದೇಶ ದವರು 'ನೀರುಬನ್ನಿ' ಯಂತೆ ತಲೆಬಾಗಿ ತಪ್ಪಿಸಿಕೊಳ್ಳುವರು. ಅನಂತರ ಅಪಾರವಾದ ನೌಕಾಶಕ್ತಿಯನ್ನು ಪ್ರಯೋಗಿಸಿದ ವಂಗರನ್ನು ಸೋಲಿಸಿ ರಘುವು ಗಂಗಾಪ್ರವಾಹದಲ್ಲಿ ಜಯಸ್ತಂಭಗಳನ್ನು ನೆಡಿಸುವನು. ಉತ್ಕಲದ ಮಾರ್ಗವಾಗಿ ಕಳಿಂಗದೇಶದ ಕಡೆಗೆ ತಿರುಗಿದಾಗ ಕಳಿಂಗರಾಜನ ಬಾಣಗಳ

ಮಳೆಯಿಂದ ರಘುವಿಗೆ ಜಯಪ್ರದವಾದ ಮಂಗಳಸ್ನಾನವಾದಂತಾಗುವುದು. ಇವನ ಸೈನಿಕರು ಅಲ್ಲಿ ತೆಂಗಿನಹೆಂಡದ ಪಾನಗೋಷ್ಠಿಯಿಂದ ಸುಖಿಸುವರು. ದೊರೆಯಾದ ಮಹೇಂದ್ರನಾಥನು ಶರಣಾಗತನಾಗಲು ರಘುವು ಅವನ ಸಂಪತ್ತನ್ನು ಮಾತ್ರ ಕಿತ್ತುಕೊಂಡು ರಾಜ್ಯವನ್ನುಳಿಸಿಕೊಡುವನು. ಅಲ್ಲಿಂದ ದಕ್ಷಿಣಕ್ಕೆ ತಿರುಗಿ ಕಾವೇರಿ ತೀರಕ್ಕೆ ಬಂದು ಮಲಯಪರ್ವತದ ತಪ್ಪಲಿನಲ್ಲಿ ಬಿಡಾರಮಾಡಲಾಗಿ ರಘುಸೈನ್ಯದ ಕುದುರೆಗಳು ಅಲ್ಲಿನ ಏಲಕ್ಕಿ ತೋಟಗಳನ್ನೆಲ್ಲ ನೆಲಸಮಮಾಡುವುವು. ಸೂರ್ಯನ ಪ್ರತಾಪವೂ ದಕ್ಷಿಣ ದಿಕ್ಕಿನಲ್ಲಿ ತಗ್ಗುವುದಂತೆ. ಆದರೂ ರಘುವಿನ ಪ್ರತಾಪವು ಪಾಂಡ್ಯರಿಗೆ ಹೆಚ್ಚು ದುಃಸಹವಾಗುವುದು. ತಾಮ್ರಪರ್ಣೀ ಸಮುದ್ರಗಳ ಸಂಗಮದಲ್ಲಿ ಸಿಕ್ಕುವ ಶ್ರೇಷ್ಠವಾದ ಮುತ್ತುಗಳನ್ನು ಕಾಣಿಕೆಯಾಗಿ ಒಪ್ಪಿಸಿ ಪಾಂಡ್ಯರು ಸೋಲನ್ನೊಪ್ಪಿಕೊಳ್ಳುವರು. ಗಂಧದ ಮರಗಳ ನೆಲೆಯಾದ ಮಲಯದರ್ದುರಗಳೆಂಬ ಬೆಟ್ಟಗಳಲ್ಲಿ ರಘುವು ಮನಃಪೂರ್ತಿ ವಿಹರಿಸಿ ಸಹ್ಯಪರ್ವತಕ್ಕೆ ಬರುವನು. ಕೇರಳದೇಶದವರೊಡನೆ ಯುದ್ಧ ನಡೆಯುವುದು. ಆಭರಣಗಳನ್ನು ತೆಗೆದಿಟ್ಟು ಗಾಬರಿಯಿಂದ ಓಡುವಾಗ ಕೇರಳವನಿತೆಯರ ಮುಂಗುರುಳುಗಳನ್ನು ಅಲಕಚೂರ್ಣಕ್ಕೆ ಬದಲಾಗಿ ಸೈನ್ಯದ ಧೂಳು ಮುಚ್ಚುವುದು. ಅಲ್ಲಿನ ತಾಳೆಯ ಪರಾಗಗಳು ರಘುವಿನ ಭಟರಿಗೂ ಆನೆಗಳಿಗೂ ಸೌರಭವನ್ನೊದಗಿಸುವುವು. ಅಲ್ಲಿ ಆನೆಗಳ ಕೊಂಬುಗಳಿಂದ ಗುರ್ತಿಸಿದ್ದ ತ್ರಿಕೂಟಪರ್ವತವೇ ರಘುವಿನ ಜಯಸ್ತಂಭವಾಗುವುದು. ಅನಂತರ ಪಾರಸೀಕರನ್ನು ಗೆಲ್ಲಬೇಕೆಂದು ರಘುವು ಸ್ಥಲಮಾರ್ಗದಲ್ಲೇ ಹೊರಡುವನು. ಯವನರಮೇಲೆ ದೊಡ್ಡ ಯುದ್ಧವಾಗುವುದು. ಭಲ್ಲೆಯು ನಾಟಿದ ಉದ್ದವಾದ ಗಡ್ಡಗಳುಳ್ಳ ಅವರ ತಲೆಗಳಿಂದ ಭೂಮಿಯು ಮುಚ್ಚಲ್ಪಡುವುದು. ಸತ್ತುಳಿದ ಪಾರಸೀಕರೆಲ್ಲ ಶರಣಾಗತರಾದ ಮೇಲೆ ರಘುಸೈನಿಕರು ದ್ರಾಕ್ಷಿಬಳ್ಳಿಗಳ ನೆರಳಿನಲ್ಲಿ ಕುಳಿತು ಮಧುಪಾನದಿಂದ ಮದಿಸುವರು. ವಿಜಯಶ್ರಮವೆಲ್ಲ ಮಾಯವಾಗುವುದು. ಅನಂತರ ಉತ್ತರದಿಕ್ಕಿನ ಕಡೆಗೆ ಪ್ರಯಾಣ ಬೆಳೆಯುವುದು. ಶ್ರಮಪರಿಹಾರಕ್ಕಾಗಿ ಕುದುರೆಗಳು ಸಿಂಧುನದಿಯ ತೀರದಲ್ಲಿ ಹೊರಳಾಡುವುವು. ಆಗ ಅವುಗಳ ಮೈಗೆಲ್ಲ ಕುಂಕುಮಕೇಸರ ಅಂಟಿಕೊಳ್ಳುವುದು. ಹೂಣರನ್ನು ಜಯಿಸಿಯಾಗುವುದು. ಕಾಂಬೋಜರು ತಲೆ ತಗ್ಗಿಸುವರು. ಶ್ರೇಷ್ಠವಾದ ಕುದುರೆ

ಗಳೂ ಧನರತ್ನಾದಿಗಳೂ ಕಾಣಿಕೆಯಾಗಿ ಸಿಕ್ಕುವುವು. ಇದನ್ನೆಲ್ಲ ತೆಗೆದು ಕೊಂಡು ರಘುವು ಕುದುರೆಯನ್ನೇರಿ ಹಿಮಾಲಯಕ್ಕೆ ಹೊರಡುವನು. ನಮೇರುಗಳ ನೆರಳಿನಲ್ಲಿ ಕಸ್ತೂರಿ ಮೃಗಗಳು ಮೈಯುಜ್ಜಿ ಸುವಾಸಿತವಾಗಿದ್ದ ಬಂಡೆಗಳ ಮೇಲೆ ಕುಳಿತು ಸೈನ್ಯವು ವಿಶ್ರಮಿಸಿಕೊಳ್ಳುವುದು. ಅನಂತರ ಅಲ್ಲಿನ ಕಾಡುಜನರೊಡನೆ ಉಗ್ರವಾದ ಯುದ್ಧ ನಡೆಯುವುದು. ಆಯುಧಗಳ ತಿಕ್ಕಾಟದಿಂದ ಬೆಂಕಿಯೇಳುವುದು. ಇವರನ್ನೂ ಅನಂತರ ಉತ್ಸವ ಸಂಕೇತ ರೆಂಬ ಜನರನ್ನೂ ಸೋಲಿಸಿ ಅವರ ಅಮೂಲ್ಯ ವಸ್ತುಗಳನ್ನು ವಶಪಡಿಸಿ ಕೊಳ್ಳಲಾಗುವುದು. ಅಲ್ಲಿ ತನ್ನ ಶಾಶ್ವತ ಕೀರ್ತಿಯನ್ನು ನೆಟ್ಟು ರಘುವು ಹಿಂದಿರುಗುವನು. ಮಾರ್ಗದಲ್ಲಿ ಪ್ರಾಗ್ಜ್ಯೋತಿಷದ ದೊರೆಯು ನಡುಗಿ ಇತರ ರೊಡನೆ ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಆನೆಗಳನ್ನೆಲ್ಲ ಇವನಿಗೆ ಕಾಣಿಕೆ ಯಾಗಿ ಒಪ್ಪಿಸುವನು. ಕಾಮರೂಪದ ದೊರೆಯೂ ಶರಣಾಗತನಾಗಿ ರತ್ನ ಕಾಣಿಕೆಯನ್ನು ಸಲ್ಲಿಸುವನು. ಹೀಗೆ ದಿಕ್ಕುಗಳನ್ನೆಲ್ಲ ಗೆದ್ದು ರಘುವು ಏಕ ಚ್ಛತ್ರಾಧಿಪತಿಯಾಗಿ ವಿಶ್ವಜಿದ್ಯಾಗವನ್ನು ನಡೆಸುವನು. ಸರ್ವಸ್ವವನ್ನೂ ದಕ್ಷಿಣೆ ಯಾಗಿ ಕೊಟ್ಟು ತಾನು ಸೋಲಿಸಿದ್ದ ರಾಜರನ್ನೆಲ್ಲ ಆಹ್ವಾನಿಸಿ ಗೌರವಿಸುವನು.

## ಐದನೆಯ ಸರ್ಗ

'ವಿಶ್ವಜಿತ್' ಯಾಗದಲ್ಲಿ ನಡೆಸಿದ ದಾನಗಳಿಂದ ರಘುವಿನ ಬೊಕ್ಕಸವು ಬರಿದಾಗಿದೆ. ಆ ಸಮಯಕ್ಕೆ ಸರಿಯಾಗಿ ವರತಂತುಶಿಷ್ಯನಾದ ಕೌತ್ಸನು ವಿದ್ಯಾರ್ಜನೆಯನ್ನು ಮುಗಿಸಿ ಗುರುದಕ್ಷಿಣೆಗಾಗಿ ಹಣವನ್ನು ಬೇಡುವುದಕ್ಕೆ ಬರುವನು. ಅರ್ಘ್ಯನೀಡಲು ಉಪಯೋಗಿಸಿದ ಮಣ್ಣಿನ ಪಾತ್ರೆಯಿಂದಲೇ ರಘುವಿನ ಸ್ಥಿತಿ ಅವನಿಗೆ ತಿಳಿಯುವುದು. ಇದರಿಂದ ಹಣ ಬೇಡಲು ಮನಸ್ಸು ಬಾರದೆ ಕೌತ್ಸನು ರಘುವಿನ ಉದಾರವಾದ ಮಾತುಗಳಿಂದಲೇ ತೃಪ್ತನಾಗಿ ಹೊರಡಲೆಳಸುವನು. ಆದರೂ ರಘುವು ಅವನನ್ನು ತಡೆದು ದಕ್ಷಿಣೆಯಾಗಿ ಕೊಡಬೇಕಾಗಿದ್ದ ಹಣದ ಮೊತ್ತವನ್ನು ತಿಳಿದುಕೊಳ್ಳುವನು. ಅನಂತರ ಮೂರು ದಿನ ಅವಕಾಶ ಹೊಂದಿ ಅಲ್ಲಿನವರೆಗೆ ಕೌತ್ಸನನ್ನು ತನ್ನ ಅಗ್ನಿಗೃಹ ದಲ್ಲಿರುವಂತೆ ಹೇಳಿ ಹಣ ಸಂಪಾದಿಸಲು ಯತ್ನಿಸುವನು. ಬೇರಾವ ಉಪಾಯವೂ ತೋರದೆ ಕುಬೇರನ ಬೊಕ್ಕಸದಿಂದಲೇ ಹಣ ಕಸಿಯಬೇಕೆಂದು

ಯೋಚಿಸಿ ರಘುವು ಅಲ್ಲಿಗೆ ಮುತ್ತಿಗೆಯಿಡಲು ಸಂಕಲ್ಪಿಸುವನು. ಮರುದಿನ ಹೊರಡಬೇಕೆಂದಿರುವಲ್ಲಿ ಆ ರಾತ್ರಿಯೇ ಕುಬೇರನು ಹೆದರಿ ಇವನ ಖಜಾನೆಯಲ್ಲಿ ಸುವರ್ಣವೃಷ್ಟಿಯನ್ನು ಸುರಿಸುವನು. ದೊರೆಯು ಎಲ್ಲವನ್ನೂ ಕೌತ್ಸನಿಗೊಪ್ಪಿಸಿದರೂ ಕೌತ್ಸನು ಮಾತ್ರ ತನಗೆ ಬೇಕಾದ್ದಕ್ಕಿಂತ ಹೆಚ್ಚು ಹಣವನ್ನು ಸ್ವೀಕರಿಸನು. ಹೀಗಾಗಿ ಹೆಚ್ಚು ಹಣವನ್ನೊಲ್ಲದ ಋಷಿಯಾಚಕನೂ ಕೇಳಿದ್ದಕ್ಕಿಂತ ಹೆಚ್ಚುಕೊಡುವ ದೊರೆ ರಘುವೂ ಪ್ರಜೆಗಳ ಸ್ತುತಿಗೆ ಪಾತ್ರರಾಗುವರು. ಹೊರಡುವಾಗ ಕೌತ್ಸನು "ಎಲ್ಲವನ್ನೂ ಪಡೆದಿರುವ ನೀನು ಇನ್ನೇನನ್ನೂ ಆಶಿಸುವಂತಿಲ್ಲ. ನಿನ್ನಂತೆ ಗುಣಾಢ್ಯನಾದ ಮಗನನ್ನು ಪಡೆ" ಎಂದು ದೊರೆಯನ್ನು ಆಶೀರ್ವದಿಸಿ ಗುರುವಿನ ಬಳಿಗೆ ತೆರಳುವನು.

ಇದಕ್ಕೆ ತಕ್ಕಂತೆ ಶೀಘ್ರವಾಗಿ ರಾಣಿಯು ಬ್ರಾಹ್ಮ ಮುಹೂರ್ತದಲ್ಲಿ ಷಣ್ಮುಖನಂತಹ ಕುಮಾರನನ್ನು ಹೆರುವಳು. ಮಗುವಿಗೆ 'ಅಜ' ನೆಂದು ಉಚಿತವಾದ ನಾಮಕರಣವಾಗುವುದು. ಅದೇ ರೂಪ, ಅದೇ ತೇಜಸ್ಸು, ಅದೇ ನೈಸರ್ಗಿಕವಾದ ಮಹತ್ವ. ಹೀಗೆ ದೀಪದಿಂದ ಹೊತ್ತಿಸಿದ ದೀಪದಂತೆ ಅಜನು ತಂದೆಯನ್ನೇ ಹೋಲುವನು. ಕಾಲಕ್ರಮದಲ್ಲಿ ಅಜನಿಗೆ ವಿವಾಹಕ್ಕೂ ಯುವರಾಜಪದವಿಗೂ ಅರ್ಹತೆ ಬರುವುದು. ಕ್ರಥಕೈಶಿಕದ ದೊರೆ ಭೋಜನು ತನ್ನ ತಂಗಿ ಇಂದುಮತಿಯ ಸ್ವಯಂವರಕ್ಕೆ ಅಜಕುಮಾರನನ್ನು ಆಹ್ವಾನಿಸುವನು. ಉಚಿತಜ್ಞನಾದ ರಘುವು ಮಗನನ್ನು ಸೇನೆಯೊಡನೆ ಕಳುಹಿಸಿಕೊಡುವನು. ಸೈನ್ಯವು ಒಂದು ದಿನ ನರ್ಮದಾ ನದಿಯ ತೀರದಲ್ಲಿ ಬಿಡಾರ ಮಾಡಿದ್ದಾಗ ಅಕಸ್ಮಾತ್ತಾಗಿ ಸಲಗವೊಂದು ನದಿಯಿಂದೇಳುವುದು. ಅದನ್ನು ನೋಡಿದ ಕೂಡಲೆ ಸೈನ್ಯದ ಆನೆಗಳು ಹತೋಟಿ ಮೀರಿ ಶಿಬಿರದಲ್ಲಿ ದೊಡ್ಡ ಗಲಭೆಯಾಗುವುದು. ಕುದುರೆಗಳು ಕಟ್ಟುಗಳನ್ನು ಕಿತ್ತು ಓಡುವುವು. ರಥಗಳೆಲ್ಲ ಮುರಿದುಬೀಳುವುವು. ಭಟರೆಲ್ಲ ಗಾಬರಿಗೊಳ್ಳುವರು. ಆಗ ಅಜನು ಆ ಸಲಗನನ್ನು ಓಡಿಸಬೇಕೆಂದು ಮೆಲ್ಲನೆ ಸೋಕುವಂತೆ ಒಂದು ಬಾಣವನ್ನು ಬಿಡುವನು. ಅಜನ ಬಾಣವು ತಾಕಿದ ಕೂಡಲೆ ಆನೆಯು ತನ್ನ ರೂಪವನ್ನು ತ್ಯಜಿಸಿ ಸುಂದರವಾದ ದೇವತಾರೂಪವನ್ನು ತಾಳುವುದು. ಆ ದೇವತೆಯು ಅಜನಮೇಲೆ ಹೂಮಳೆ ಕರೆದು ತನ್ನ ಪೂರ್ವದ ಶಾಪವೃತ್ತಾಂತವನ್ನು ವಿವರಿಸುವುದು. ಮತ್ತು ಈಗ ಶಾಪದಿಂದ ಬಿಡುಗಡೆಮಾಡಿದ್ದಕ್ಕಾಗಿ ಅಜನಿಗೆ

'ಸಂಮೋಹನ' ವೆಂಬ ಅಸ್ತ್ರವನ್ನು ಬಹುಮಾನವಾಗಿ ನೀಡಿ ಸ್ವೀಕರಿಸ ಬೇಕೆಂದು ಬೇಡುವುದು. ಅಜನು ನರ್ಮದೆಯಲ್ಲಿ ಆಚಮನಮಾಡಿ ದೇವತೆ ಯಿಂದ ಮಂತ್ರಪೂರ್ವಕವಾಗಿ ಅಸ್ತ್ರೋಪದೇಶವನ್ನು ಹೊಂದುವನು. ಅನಂತರ ವಿದರ್ಭನ ರಾಜಧಾನಿಗೆ ಪ್ರಯಾಣ ಬೆಳಸಲಾಗಿ ವಿದರ್ಭನು ಅಜನನ್ನು ಹರ್ಷದಿಂದ ಸ್ವಾಗತಿಸಿ ಅರಮನೆಯೊಂದರಲ್ಲಿ ಬಿಡಾರಮಾಡಿಸು ವನು. ಇಂದುಮತಿಯ ಆಶಯವನ್ನು ತಿಳಿಯದಿದ್ದುದರಿಂದ ಅಜಕುಮಾರ ನಿಗೆ ಆ ರಾತ್ರಿ ಬಹಳ ಹೊತ್ತಿನಮೇಲೆ ನಿದ್ರೆ ಬರುವುದು. ವಂದಿಗಳು ಉಷಃಕಾಲದಲ್ಲಿ ಹೊಗಳಲಾಗಿ ಅಜನು ಎದ್ದು ಬೆಳಗಿನ ಆಹ್ನಿಕಗಳನ್ನು ಮುಗಿಸಿ ಉಚಿತವಾದ ವೇಷವನ್ನು ಧರಿಸಿ ಸ್ವಯಂವರ ಮಂಟಪದಲ್ಲಿ ನೆರೆದಿದ್ದ ರಾಜಸಭೆಗೆ ಬರುವನು.

## ಆರನೆಯ ಸರ್ಗ

ದೇವತೆಗಳಂತೆ ದಿವ್ಯವಸ್ತ್ರಾಭರಣಭೂಷಿತರಾಗಿ ಅನೇಕ ರಾಜರು ಸಿಂಹಾಸನಗಳಲ್ಲಿ ನೆರೆದಿರುವರು. ಆದರೂ ಕಲ್ಪವೃಕ್ಷಗಳಲ್ಲಿ ಪಾರಿಜಾತದಂತೆ ಅವರಲ್ಲೆಲ್ಲ ಅಜನೇ ಹೆಚ್ಚು ಪ್ರಕಾಶಿಸುವನು. ನಾಗರರೆಲ್ಲ ಇವನನ್ನೇ ದಿಟ್ಟಿಸಿ ನೋಡುವರು. ಪುನರುಜ್ಜೀವಿತನಾದ ಕಾಮನಂತಿರುವ ಅಜನು ಸಭೆಯನ್ನು ಅಲಂಕರಿಸಿದ ಕೂಡಲೆ, ಇಂದುಮತಿಯು ತಮಗೆ ಸಿಕ್ಕಳೆಂದು ಉಳಿದ ರಾಜರೆಲ್ಲ ನಿರಾಶರಾದರು.

ಮಂಗಳತೂರ್ಯವು ಮೊಳಗುವುದು. ಅಗರುಧೂಪವು ಬಾವುಟ ಗಳ ತುದಿಯವರೆಗೂ ಹಬ್ಬುವುದು. ವಿವಾಹವೇಷವನ್ನು ಧರಿಸಿದ ಇಂದು ಮತಿಯು ಪಲ್ಲಕ್ಕಿಯಲ್ಲಿ ಕುಳಿತು ಬರುವಳು. ರಾಜರ ಮನಸ್ಸುಗಳೆಲ್ಲ ಆ ಲೋಕೋತ್ತರ ಸುಂದರಿಯಲ್ಲೇ ನೆಟ್ಟುಹೋಗಿ ದೇಹಗಳು ಮಾತ್ರ ಪೀಠಗಳಲ್ಲಿ ನಿಲ್ಲುವುವು. ಒಬ್ಬೊಬ್ಬರು ಒಂದೊಂದು ವಿಧವಾಗಿ ನಟಿಸುತ್ತ ಶೃಂಗಾರ ಚೇಷ್ಟೆಗಳನ್ನು ಪ್ರದರ್ಶಿಸುವರು. ಸುನಂದೆಯು ಇಂದುಮತಿಯ ಪ್ರತೀಹಾರಿ. ರಾಜವಂಶಾವಳಿಯನ್ನು ತಿಳಿದವಳು. ಗಂಡಸರಂತೆ ದಿಟ್ಟಳು. ಇವಳು ಕುಮಾರಿ ಇಂದುಮತಿಯನ್ನು ಕರೆದೊಯ್ಯುತ್ತ ಮಗಧರಾಜನ ಬಳಿಗೆ ಬಂದು ಅವನನ್ನು ಹೀಗೆ ವರ್ಣಿಸುವಳು. "ಇವನು ಮಗಧ

ರಾಜನಾದ ಪರಂತಪನು. ಹೆಸರಿಗೆ ತಕ್ಕ ಗುಣವುಳ್ಳವನು. ಗಂಭೀರ ಸ್ವಭಾವದವನು. ಪ್ರಜೆಗಳನ್ನು ಸಂತೋಷಪಡಿಸುವುದರಲ್ಲಿ ನಿಸ್ಸೀಮನು. ಭೂಮಿಯ ಮೇಲೆ ಸಾವಿರಾರು ರಾಜರಿದ್ದರೂ ಭೂ ಮಾತೆಗೆ ' ರಾಜನ್ವತೀ ' ಎಂಬ ಹೆಸರು ಇವನೊಬ್ಬನಿಂದಲೇ ಸಲ್ಲುವುದು. ಅನವರತ ಯಾಗಗಳನ್ನಾ ಚರಿಸುತ್ತ ಇಂದ್ರನನ್ನು ಬರಮಾಡಿಕೊಂಡು ಇವನು ಶಚಿಗೆ ವಿರಹವನ್ನುಂಟು ಮಾಡಿರುವನು. ಇವನನ್ನು ನೀನು ವರಿಸಿದರೆ ಪುಷ್ಪಪುರದ ಸ್ತ್ರೀಯರು ಉಪ್ಪರಿಗೆಗಳ ಕಿಟಕಿಗಳಿಂದ ನಿನ್ನನ್ನು ನೋಡಿ ಆನಂದಿಸುವರು." ಇದನ್ನು ಕೇಳಿ ಇಂದುಮತಿಯು ಏನನ್ನೂ ಹೇಳುವುದಿಲ್ಲ. ಗರಿಕೆಯಂತಿದ್ದ ಮಧೂಕ ಮಾಲೆಯನ್ನು ಬಿಚ್ಚುವುದರಿಂದಲೇ ತನ್ನ ಅನಭಿಮತವನ್ನು ಸೂಚಿಸುವಳು. ಮುಂದಿನ ದೊರೆ ಅಂಗರಾಜ. " ಸುರಾಂಗನೆಯರೂ ಆಶಿಸುವ ಯೌವನವುಳ್ಳ ವನು. ಇವನ ಪರಾಕ್ರಮಕ್ಕೆ ಸೋತ ಶತ್ರುಗಳ ಹೆಂಡತಿಯರಿಗೆ ಕಣ್ಣೀರಿನ ಹನಿಗಳೇ ದಾರವಿಲ್ಲದ ಮುಕ್ತಾಹಾರವಾಗಿದೆ. ಲಕ್ಷ್ಮಿ ಸರಸ್ವತಿಯರಿಬ್ಬರೂ ಇವನೊಬ್ಬನನ್ನೇ ಆಶ್ರಯಿಸಿರುವುದೂ ಇನ್ನೊಂದು ಹೆಚ್ಚುಗಾರಿಕೆ." ಹೀಗೆಂದು ವರ್ಣಿಸಿ " ಇಂಥವನಿಗೆ ಮೂರನೆಯ ಹೆಂಡತಿಯಾಗಲು ನೀನೇ ಅರ್ಹಳು " ಎಂದು ಸುನಂದೆಯು ಹೇಳಲಾಗಿ ಇಂದುಮತಿಯು ದೃಷ್ಟಿಯನ್ನು ಬೇರೆ ಕಡೆ ತಿರುಗಿಸಿ ಹೊರಡುವಳು. ಅವನಿಗೆ ರೂಪವಿಲ್ಲದೆ ಇಲ್ಲ. ಇವಳಿಗೆ ವಿವೇಚನೆ ಇಲ್ಲದೆ ಇಲ್ಲ. ಆದರೂ ಲೋಕವು ಭಿನ್ನರುಚಿಯುಳ್ಳದ್ದು. ಅನಂತರ ಸುನಂದೆಯು ಅವಂತಿರಾಜನ ಬಳಿಗೆ ಇವಳನ್ನು ಕರೆದೊಯ್ದು ಅವನನ್ನು ವರ್ಣಿಸುವಳು. ಅವಂತಿರಾಜನು ಅತಿಶೂರ. ಆಗತಾನೆ ಹುಟ್ಟಿದ ಚಂದ್ರ ನಂತೆ ಸುಂದರನು. ಇವನ ಸೈನ್ಯದ ಧೂಳು ಸಾಮಂತರಾಜರ ಕಿರೀಟದ ರತ್ನಗಳ ಕಾಂತಿಯನ್ನಳಿಸುವುದು. ಮಹಾಕಾಲದ ಚಂದ್ರಮೌಳಿಯು ಸಮೀಪದಲ್ಲೇ ಇರುವುದರಿಂದ ಇವನಿಗೆ ಕೃಷ್ಣಪಕ್ಷದಲ್ಲೂ ಪ್ರಿಯೆಯರೊಡನೆ ವಿಹರಿಸುವಾಗ ಪ್ರದೋಷಕಾಲದ ವೇಳೆಗೆ ಸರಿಯಾಗಿ ಬೆಳದಿಂಗಳು ಸಿಕ್ಕು ವುದು. ಆದರೇನು ? ಈ ತರುಣ ರಾಜನೊಡನೆ ವಿಹರಿಸುವುದಕ್ಕೆ ಇಂದು ಮತಿಗೆ ಇಷ್ಟವಿಲ್ಲ. ನೈದಿಲೆಯ ಮನಸ್ಸು ಸೂರ್ಯನ ಕಡೆಗೆ ತಿರುಗುವುದೇ ? ಮುಂದೆ ಅನೂಪರಾಜನ ಬಳಿಗೆ ಸರಿಯುವರು. ಅವನ ಹೆಸರು ಪ್ರತೀಪನೆಂದು. ಪ್ರಸಿದ್ಧನಾದ ಕಾರ್ತವೀರ್ಯನ ವಂಶದವನು. ಜ್ಞಾನವೃದ್ಧರಲ್ಲಿ ಇವನಿಗೆ

ಬಹಳ ಭಕ್ತಿ. ಲಕ್ಷ್ಮೀಗೆ ಬಂದಿರುವ 'ಚಂಚಲೆ' ಯೆಂಬ ಅಪವಾದವು ಇವನಿಂದ ಅಳಿಸಿರುವುದು. ಯುದ್ಧದಲ್ಲಿ ಅಗ್ನಿಯು ಕೂಡ ಇವನಿಗೆ ಸಹಾಯ ಮಾಡುವನು. ಇವನ ತೊಡೆಯನ್ನೇರಿದರೆ ಅರಮನೆಯಲ್ಲಿ ಕುಳಿತೇ ಮಾಹಿಷ್ಮತೀನಗರಕ್ಕೆ ಕಂದಕದಂತಿರುವ ನರ್ಮದಾ ನದಿಯನ್ನು ನೋಡ ಬಹುದು. ಹೀಗೆ ಅತಿಸುಂದರನಾದರೂ ಇಂದುಮತಿಯು ಇವನನ್ನೊಲ್ಲಳು. ಶರಚ್ಚಂದ್ರನು ಸುಂದರನಾದರೂ ನಳಿನಿಗೆ ಬೇಡ. ನಂತರ ಶೂರಸೇನರ ದೊರೆ ಸುಷೇಣನು ಸಿಕ್ಕುವನು. ಸುನಂದೆಯು ಎಂದಿನಂತೆ ಇವನನ್ನೂ ಪರಿಚಯಮಾಡಿಸುವಳು. ಸುಷೇಣನು ನೀಪವಂಶದವನು. ಅನೇಕ ಯಾಗ ಗಳನ್ನಾಚರಿಸಿದವನು. ಸತ್ವಾದಿ ಗುಣಗಳು ಇವನಲ್ಲಿ ವಿರೋಧವನ್ನು ತೊರೆ ದಿರುವುವು. ಇವನ ಅರಮನೆಗಳು ರಮ್ಯವಾಗಿವೆ. ಈ ತರುಣನನ್ನು ವರಿಸಿದರೆ ಹೂಚಿಗುರುಗಳಿಂದ ನಿರ್ಮಿತವಾದ ಮೃದುಶಯನದಲ್ಲಿ ಯೌವನಸುಖ ವನ್ನನುಭವಿಸಬಹುದು. ಆದರೆ ಇಂದುಮತಿಯ ಮನಸ್ಸು ಮತ್ತೊಬ್ಬನಲ್ಲಿ ನೆಟ್ಟಿದೆ. ಆದಕಾರಣ ಬೆಟ್ಟವನ್ನು ಬಿಟ್ಟು ಓಡುವ ನದಿಯಂತೆ ಇಂದುಮತಿ ಮುಂದೆ ನಡೆಯುವಳು. ಕಳಿಂಗರಾಜನು ಸುನಂದೆಯ ವರ್ಣನೆಗೆ ಪಾತ್ರನಾಗು ವನು. ಹೇಮಾಂಗದನೆಂದು ಇವನ ಹೆಸರು. ಬಹಳ ಶೂರ. ಮಹೇಂದ್ರ ಪರ್ವತಕ್ಕೂ ಮಹೋದಧಿಗೂ ಒಡೆಯ. ಇವನ ಮದಿಸಿದ ಗಜಸೈನ್ಯವು ಹೊರಟರೆ ಮಹೇಂದ್ರಪರ್ವತವೇ ಸರಿದಂತಾಗುವುದು. ಅರಮನೆಯ ಕಿಟಕಿ ಗಳಿಂದಲೇ ಕಾಣುವ ಸಮುದ್ರವು ತನ್ನ ಅಲೆಗಳ ಮಂದಧ್ವನಿಯಿಂದಲೇ ಇವನನ್ನೆಬ್ಬಿಸುವುದು. ಹೀಗಾಗಿ ಯಾಮತೂರ್ಯವು ಬೇಕಾಗುವುದೇ ಇಲ್ಲ. ಸಮುದ್ರತೀರದ ತಾಲೀವನದಲ್ಲಿ ವಿಹರಿಸುವಾಗ ದೇವಕುಸುಮದ ವಾಸನೆ ಯನ್ನು ಬೀರುವ ತಂಗಾಳಿಯು ಶ್ರಮವನ್ನು ಪರಿಹರಿಸುವುದು. ಹೀಗಿದ್ದರೂ, ಪುರುಷಕಾರದಿಂದ ಬರುವ ಲಕ್ಷ್ಮಿಯು ನಿರ್ಭಾಗ್ಯನನ್ನು ಬಿಟ್ಟು ಸರಿಯುವಂತೆ ವಿದರ್ಭನ ತಂಗಿಯು ಅವನನ್ನು ಬಿಟ್ಟು ಸರಿಯುವಳು. ಅನಂತರ ಉರಗ ಪುರದ ದೊರೆಯು ಸಮೀಪಿಸುವನು. ಪಾಂಡ್ಯರಾಜನಾದ ಈ ದೊರೆಯು ಹರಿಚಂದನವನ್ನು ಲೇಪಿಸಿಕೊಂಡು ಉದ್ದವಾದ ಹಾರವನ್ನು ಧರಿಸಿರುವನು. ಇವನು ಅಶ್ವಮೇಧಗಳನ್ನು ಮುಗಿಸಿ ಅವಭೃಥಸ್ನಾನಮಾಡುವಾಗ ಅಗಸ್ತ್ಯನೇ ಪ್ರೀತಿಯಿಂದ ಕುಶಲಪ್ರಶ್ನೆಮಾಡುವನು. ಜನಸ್ಥಾನಕ್ಕೆ ವಿಪತ್ತು ಬರುವು

ದೆಂದು ಹೆದರಿ ಹಿಂದೆ ರಾವಣನೂ ಇವನೊಡನೆ ಸಂಧಿಮಾಡಿಕೊಂಡಿರುವನು. ಇವನನ್ನು ಮದುವೆಯಾದರೆ ದಕ್ಷಿಣದೇಶಕ್ಕೆಲ್ಲ ರಾಣಿಯಾಗಬಹುದು. ರಮ್ಯವಾದ ಮಲಯವನಗಳಲ್ಲಿ ಸಂಚರಿಸಬಹುದು. ಗೋರೋಚನದಂತೆ ಬೆಳ್ಳಗಿದ್ದು ನೈದಿಲೆಯಂತೆ ಕಪ್ಪಗಿರುವ ಇವನನ್ನು ಸೇರಿದರೆ ಮೇಘ ಮಿಂಚುಗಳು ಸೇರಿದಂತಾಗಿ ಇಬ್ಬರ ಕಾಂತಿಯೂ ಹೆಚ್ಚುವಂತಾಗುವುದು. ಆದರೂ ಇಂದುಮತಿಗೆ ಸುನಂದೆಯ ಉಪದೇಶ ಹಿಡಿಯುವುದಿಲ್ಲ. ಸಂಚರಿಸುವ ದೀಪಶಿಖೆ (ಹೊತ್ತಿಗೆ) ಯಂತೆ ಅವಳು ಮುಂದೆಮುಂದೆ ನಡೆದಂತೆಲ್ಲ ಹಿಂದು ಹಿಂದಿನ ದೊರೆಗಳ ಮುಖಗಳೆಲ್ಲ ಕತ್ತಲೆ ಕವಿದ ಅರಮನೆಗಳಂತೆ ಕಳೆಗುಂದುವುವು.

ಅನಂತರ ರಾಜಕುಮಾರಿಯು ಅಜನ ಬಳಿಗೆ ಬರುವಳು. ಅಜನಿಗೆ ತನ್ನನ್ನು ವರಿಸುವಳೋ ಇಲ್ಲವೋ ಎಂದು ಸಂದೇಹವುಂಟಾಗುವುದು. ಆದರೆ ಇವನ ಬಲದೋಳು ಅದಿರಿ ಅದನ್ನು ಹೋಗಲಾಡಿಸುವುದು. ಇವನನ್ನು ನೋಡಿದೊಡನೆ ರಾಜಕುಮಾರಿಗೆ ಮುಂದೆ ಹೋಗಲು ಮನಸ್ಸು ಬರುವುದಿಲ್ಲ. ಇದನ್ನು ತಿಳಿದು ಸುನಂದೆಯು ವಿಸ್ತಾರವಾಗಿ ಹೇಳತೊಡಗುವಳು. ಇವನ ವಂಶ, ತಾತ ದಿಲೀಪನ ಸಾಹಸ, ತಂದೆಯು ನಡೆಸಿದ 'ವಿಶ್ವಜಿತ್' ಯಾಗದಲ್ಲಿ ಇವನು ಸಹಕರಿಸಿದ್ದು, ಎಲ್ಲವನ್ನೂ ವಿವರಿಸಿ ಅಜಕುಮಾರನ ಕೀರ್ತಿಯು ಸ್ವರ್ಗ ಮರ್ತ್ಯ ಪಾತಾಳಗಳನ್ನೂ ವ್ಯಾಪಿಸಿರುವುದೆಂದು ತಿಳಿಸುವಳು. ಕಡೆಯಲ್ಲಿ "ವಯಸ್ಸಿನಲ್ಲಿ ಚಿಕ್ಕವನಾದರೂ ಅಜನು ತಂದೆಯಂತೆಯೇ ದಕ್ಷನಾಗಿ ರಾಜ್ಯಭಾರವನ್ನು ನಿರ್ವಹಿಸುತ್ತಿರುವನು. ಕುಲ, ರೂಪು, ವಯಸ್ಸು, ವಿನಯಾದಿ ಗುಣಗಳು ಎಲ್ಲ ಅಂಶಗಳಲ್ಲೂ ನಿನಗೆ ಸಮಾನನಾದ ಇವನನ್ನು ವರಿಸು. ರತ್ನವು ಚಿನ್ನದೊಡನೆ ಕೂಡಲಿ" ಎಂದು ಹೇಳಲಾಗಿ ಇಂದುಮತಿಯು ಲಜ್ಜೆಯನ್ನು ದೂರಮಾಡಿ ಅಜನನ್ನು ಸಂತೋಷದಿಂದ ನೋಡುವಳು. ಅನುರಾಗವನ್ನು ಬಾಯ್ದೆರೆದು ಹೇಳುವ ದಿಟ್ಟತನ ಅವಳಲ್ಲಿಲ್ಲವಾದರೂ ಸರ್ವಾಂಗವ್ಯಾಪಿಯಾದ ರೋಮಾಂಚವೇ ಅದನ್ನು ವ್ಯಕ್ತಗೊಳಿಸುವುದು. ಇದನ್ನು ಕಂಡು ಚತುರೆ ಸುನಂದೆಯು ಹಾಸ್ಯದಿಂದ "ಸಖಿ, ನಡೆ ಮುಂದೆ ಹೋಗೋಣ" ಎನ್ನುವಳು. ಇಂದುಮತಿಯು ಕೋಪದಿಂದ ದೃಷ್ಟಿಯನ್ನು ತಿರುಗಿಸಿ ಮಂಗಳಮಾಲಿಕೆಯನ್ನು ಅವನ ಕೊರಳಿಗೆ ಹಾಕಿಸುವಳು. ಅಜನಿಗೆ ಆ ಮಂಗಳಮಾಲಿಕೆಯೇ ಇಂದುಮತಿಯ ಆಲಿಂಗನಸುಖವನ್ನು

ಕೊಟ್ಟಂತಾಗುವುದು. ಜ್ಯೋತ್ಸ್ನೆ (ಬೆಳದಿಂಗಳು) ಯು ಮೋಡಮುಚ್ಚದ ಚಂದ್ರನನ್ನೂ ಗಂಗೆಯು ಸಮುದ್ರವನ್ನೂ ಸೇರಿದಂತಾಯಿತೆಂದು ನಾಗರರೆಲ್ಲ ಸಂತುಷ್ಟರಾಗುವರು. ಉಳಿದ ರಾಜರು ದುಃಖಿತರಾಗುವರು.

## ಏಳನೆಯ ಸರ್ಗ

ವಿದರ್ಭನಾಥನು ತಂಗಿಯನ್ನು ಗಂಡನ ಬಿಡಾರದಲ್ಲಿ ಬಿಟ್ಟುಬರುವುದಕ್ಕಾಗಿ ಹೊರಡುವನು. ಭಗ್ನಮನೋರಥರಾದ ಉಳಿದ ರಾಜರು ಹಗಲು ಹೊತ್ತಿನ ಚಂದ್ರಾದಿ ಗ್ರಹಗಳಂತೆ ಕಳೆಗುಂದಿ ವೇಷ ಮರೆಸಿಕೊಂಡು ತಮ್ಮ ತಮ್ಮ ಶಿಬಿರಗಳಿಗೆ ತೆರಳುವರು. ಸ್ವಯಂವರಕ್ಕೆ ಶಚಿಯ ಅನುಗ್ರಹವಿದ್ದುದರಿಂದ ಇವರೆಲ್ಲ ಕೋಪಿಸಿಕೊಂಡರೂ ಯಾವ ತೊಂದರೆಗೂ ಅವಕಾಶವಾಗುವುದಿಲ್ಲ. ರಾಜಮಾರ್ಗವೆಲ್ಲ ಮಿಂಚಿನಂತೆ ಹೊಳೆಯುವ ತೋರಣಗಳಿಂದ ಅಲಂಕೃತವಾಗಿದೆ. ವಧೂವರರನ್ನು ನೋಡುವುದಕ್ಕಾಗಿ ಪುರವನಿತೆಯರು ಉಳಿದ ಕೆಲಸಗಳನ್ನೆಲ್ಲ ಬಿಟ್ಟು ಉಪ್ಪರಿಗೆಯ ಕಿಟಕಿಗಳಲ್ಲಿ ಗುಂಪು ಗುಂಪಾಗಿ ನೆರೆಯುವರು. ಅರ್ಧ ಅಲಂಕಾರಮಾಡಿಕೊಂಡು ಸೀರೆ ಬಿಚ್ಚಿ ಹೋಗಿರುವುದನ್ನಾಗಲಿ, ಕತ್ತಿನ ಮುತ್ತಿನಹಾರ ಕಿತ್ತುಹೋಗಿರುವುದನ್ನಾಗಲಿ ಗಮನಿಸದೆ ಒಬ್ಬೊಬ್ಬರು ಒಂದೊಂದು ವೇಷದಲ್ಲಿ ಬಂದಿರುವರು. ಇವರ ಮುಖಗಳಿಂದ ತುಂಬಿದ ಕಿಟಕಿಗಳು ಕಮಲಗಳಿಂದ ಅಲಂಕೃತವಾಗಿದ್ದಂತೆ ಕಾಣುವುವು. ಪ್ರೇಮಪೂರ್ವಕವಾಗಿ ನೋಡುತ್ತಿದ್ದ ಇವರ ಕಣ್ಣುಗಳಲ್ಲೇ ಉಳಿದ ಇಂದ್ರಿಯಗಳ ಶಕ್ತಿಯೂ ಅಡಗಿದಂತೆ ತೋರುವುದು. ಇಂತಹ ನಗರ ವನಿತೆಯರ ಶುಭಾಶಂಸನವನ್ನು ಕೇಳುತ್ತ ಅಜನು ಬಿಡಾರವನ್ನು ಸೇರುವನು. ಅನಂತರ ವಿಧಿವತ್ತಾಗಿ ಮದುವೆ ನಡೆಯುವುದು. ಅನಂತರ ಮೊಸಳೆಗಳನ್ನುಳ್ಳ ಶುಭ್ರವಾದ ತಿಳಿನೀರಿನ ಮಡುಗಳಂತೆ ಅಸೂಯೆಯನ್ನು ಹೊರಗೆ ತೋರ್ಪಡಿಸದೆ ನಟಿಸುತ್ತಿದ್ದ ರಾಜರು ವಧುವನ್ನಪಹರಿಸಬೇಕೆಂದು ಅಜನ ದಾರಿಯಲ್ಲಿ ಹೊಂಚುಹಾಕುವರು. ವೈದರ್ಭನು ವಧೂವರರನ್ನು ಮರ್ಯಾದೆಗಳೊಡನೆ ಬೀಳ್ಕೊಟ್ಟು ತಾನೂ ಜೊತೆಯಲ್ಲಿ ಸ್ವಲ್ಪ ದೂರ ಬಂದು ಮೂರು ದಿನಗಳಮೇಲೆ ಹಿಂದಿರುಗುವನು. ಈ ಸಮಯವನ್ನೇ ಕಾಯುತ್ತಿದ್ದ ಶತ್ರುರಾಜರು ಅಜನನ್ನು ತಡೆಯುವರು. ಅಜನು

ಇಂದುಮತಿಯ ರಕ್ಷಣೆಗಾಗಿ ಒಂದು ಸೈನ್ಯವನ್ನು ನಿಲ್ಲಿಸಿ ತಾನೇ ಯುದ್ಧಕ್ಕೆ ನಿಲ್ಲುವನು. ತುಮುಲವಾದ ಯುದ್ಧ ನಡೆದು ಅಜನು ಗೆಲ್ಲುವನು. ರಣರಂಗ ದಿಂದೆದ್ದ ಧೂಳು ಸೂರ್ಯನನ್ನೂ ಮುಚ್ಚಿತು. ಸ್ವಪಕ್ಷ ಪರಪಕ್ಷಗಳನ್ನು ಗುರ್ತಿಸುವುದಕ್ಕೇ ಆಗುತ್ತಿರಲಿಲ್ಲ. ಆನೆ, ಕುದುರೆ ಮತ್ತು ಭಟರ ಮೈಯಿಂದ ರಕ್ತಪ್ರವಾಹ ಹರಿಯಿತು. ರಥಿಗಳು ಸಾರಥಿಗಳಮೇಲೆ ಕೋಪಿಸಿಕೊಂಡರು. ನಿಪುಣರಾದ ಬಿಲ್ಲುಗಾರರ ಬಾಣಗಳು ತುದಿ ಕತ್ತರಿಸಿಹೋದರೂ ನಾಟಿ ಕೊಂಡುವು. ಗಜಯುದ್ಧದಲ್ಲಿ ಮಡಿದ ಮಾವಟಿಗಳ ತಲೆಗಳು ಹದ್ದುಗಳ ಉಗುರುಗಳಿಗಂಟಿಕೊಂಡಿದ್ದು ಬಹಳ ಹೊತ್ತಿನಮೇಲೆ ಕೆಳಗೆ ಬೀಳುತ್ತಿದ್ದುವು. ಅಂತರಿಕ್ಷದಲ್ಲಿ ಸುರವನಿತೆಯರು ಕಿಕ್ಕಿರಿದು ಸತ್ತ ವೀರಭಟರನ್ನು ಕಾಮಿಸಿ ವರಿಸುವರು. ಒಂದೇಸಲಕ್ಕೆ ಮಡಿದು ಅಮರ್ತ್ಯರಾದ ಇಬ್ಬರು ಯೋಧರನ್ನು ಒಬ್ಬಳೇ ಕಾಮಿಸಲಾಗಿ ಕೊನೆಗೂ ಅವರ ದ್ವೇಷ ತಪ್ಪುವುದೇ ಇಲ್ಲ. ತನ್ನ ಸೈನ್ಯವು ಮಡಿದರೂ ಅಜನು ಶತ್ರುಸೈನ್ಯದ ಎದುರಿಗೇ ಹೋಗುತ್ತಿದ್ದನು. ಬೆಂಕಿ ಹತ್ತಿದ ಹುಲ್ಲುಮೆದೆಗೆ ಗಾಳಿ ಬೀಸಿದರೆ ಹೊಗೆ ದೂರಹೋಗುವುದೇ ಹೊರತು ಬೆಂಕಿಯ ಜ್ವಾಲೆ ಹೋಗುವುದೆ? ಅದು ಮತ್ತೂ ಉಜ್ವಲವಾಗಿ ಉರಿಯುವುದು. ಹೀಗೆ ಅಜನು ಒಂಟಿಯಾದರೂ ಲೆಕ್ಕಿಸದೆ ಯುದ್ಧಮಾಡು ವನು. ರಣಭೂಮಿಯಲ್ಲೆಲ್ಲ ಹುಬ್ಬು ಗಂಟಿಕ್ಕಿ ಹಲ್ಲುಕಚ್ಚಿದ ಶತ್ರುಸೈನಿಕರ ತಲೆಗಳು ಹರಡಿದುವು. ಅಸ್ತ್ರಗಳ ಮಳೆ ಕರೆಯಲಾಗಿ ಅಜನನ್ನೂ ಬಾವುಟ ದಿಂದ ಮಾತ್ರ ಗುರ್ತಿಸಬಹುದಾಯಿತು. ಆಗ ಅಜನು ಸಂಮೋಹನಾಸ್ತ್ರ ವನ್ನು ಪ್ರಯೋಗಿಸಲಾಗಿ ಶತ್ರುಸೈನ್ಯವೆಲ್ಲ ಸ್ತಂಭೀಭೂತವಾಗಿ ನಿಂತು ಇವನಿಗೆ ವಿಜಯವು ಲಭಿಸಿತು. ಹೀಗೆ ಶತ್ರುಗಳನ್ನೆಲ್ಲ ಸದೆಬಡಿದು ಅಜನು ತನ್ನ ಕಡೆ ಯವರನ್ನೆಲ್ಲ ಎಚ್ಚರಗೊಳಿಸಿ ಹೊರಡುವನು. ಇಂದುಮತಿಯು ಪ್ರಸನ್ನಳಾಗಿ ಸಖಿಯರ ಮೂಲಕ ಪ್ರಿಯನನ್ನು ಅಭಿನಂದಿಸುವಳು. ರಘುವು ವಿಜಯಿ ಯಾದ ಪುತ್ರನನ್ನು ಸ್ವಾಗತಿಸಿ ಕುಟುಂಬಭಾರವನ್ನು ಅವನಿಗೊಪ್ಪಿಸಿ ಪದ್ಧತಿಯ ಪ್ರಕಾರ ಶಾಂತಿಮಾರ್ಗವನ್ನಾಶ್ರಯಿಸುವನು.

## ಎಂಟನೆಯ ಸರ್ಗ

ಹೀಗೆ ವಿವಾಹಕಂಕಣವು ಕೈಯಲ್ಲಿರುವಾಗಲೇ ಅಜನಿಗೆ ರಾಜ್ಯ

ಲಕ್ಷ್ಮಿಯೂ ಸಿಕ್ಕುವಳು. ರಾಜಪುತ್ರರು ಪಾಪವನ್ನಾದರೂ ಆಚರಿಸಿ ರಾಜ್ಯವನ್ನು ಸಂಪಾದಿಸುವರು. ಆದರೆ ಅಜನು ಮಾತ್ರ ತಂದೆಯ ಆಜ್ಞೆಯಿಂದೇ ಅದನ್ನು ವಹಿಸಿಕೊಳ್ಳುವನು. ಭೋಗಾಭಿಲಾಷೆಯಿಂದಲ್ಲ. ರಘುವೇ ಪುನಃ ಯೌವನವನ್ನು ಪಡೆದಿರುವನೆಂಬ ಭಾವನೆಯಿಂದ ಪ್ರಜೆಗಳು ಅಜನನ್ನು ಗೌರವಿಸುವರು. ಆಗತಾನೆ ಕೈಹಿಡಿದ ವಧುವನ್ನು ಕಾಣುವಂತೆ ಅಜನು ರಾಜ್ಯಲಕ್ಷ್ಮಿಯನ್ನು ಬಲಾತ್ಕರಿಸಿದರೆ ಹೆದರುವಳೆಂದು ದಯೆಯಿಂದಲೇ ಪಾಲಿಸುವನು. ಸಮುದ್ರವು ತನ್ನಲ್ಲಿಗೆ ಬಂದು ಸೇರುವ ನದಿಗಳಲ್ಲಿ ಯಾವುದನ್ನಾದರೂ ತಿರಸ್ಕರಿಸುವುದೆ? ಅದರಂತೆ ಅಜನೂ ತನ್ನ ಪ್ರಜೆಗಳೆಲ್ಲರನ್ನೂ ಸಮಾನಗೌರವದಿಂದ ಕಾಣುತ್ತಿದ್ದುದರಿಂದ ಒಬ್ಬೊಬ್ಬನೂ ತಾನೇ ದೊರೆಗೆ ಆಪ್ತನೆಂದು ಭಾವಿಸುವನು. ಮಧ್ಯಮವೃತ್ತಿಯನ್ನಾಶ್ರಯಿಸಿದ ಅಜನು ಗಾಳಿಯು ಮರಗಳನ್ನು ಬಗ್ಗಿಸುವಂತೆ, ದೊರೆಗಳನ್ನು ಸಂಪೂರ್ಣವಾಗಿ ನಾಶ ಮಾಡದೆ ತನಗೆ ವಶರನ್ನಾಗಿ ಮಾತ್ರ ಮಾಡಿಕೊಳ್ಳುವನು. ಮಗನ ಉತ್ತಮ ನೀತಿಯನ್ನೂ ಇವನಲ್ಲಿ ಪ್ರಜೆಗಳ ದೃಢಾನುರಾಗವನ್ನೂ ನೋಡಿ ರಘುವು ಸಂತೋಷಗೊಂಡು ದಿವ್ಯ ಸೌಖ್ಯದಲ್ಲೂ ನಿರಾಶನಾಗುವನು. ಅರಣ್ಯವಾಸಕ್ಕೆ ರಘುವು ಸಿದ್ಧನಾದಾಗ ಅಜನು ತನ್ನನ್ನು ಬಿಡಕೂಡದೆಂದು ತಂದೆಯನ್ನು ಬೇಡುವನು. ಇದಕ್ಕೊಪ್ಪಿದರೂ ರಘುವು ರಾಜ್ಯಸಂಪತ್ತನ್ನು ಮಾತ್ರ ಪುನಃ ಸ್ವೀಕರಿಸದೆ ಊರಿನಿಂದಾಚೆ ಆಶ್ರಮದಲ್ಲಿ ವಾಸಿಸುವನು. ಜಿತೇಂದ್ರಿಯನಾಗಿದ್ದ ಇವನನ್ನು ರಾಜ್ಯಲಕ್ಷ್ಮಿಯು ಸೊಸೆಯಂತೆ ಉಪಚರಿಸುವಳು.

ಹೀಗೆ ರಘುವು ಪ್ರಶಮದಲ್ಲಿದ್ದು ಅಜನು ಉದಯಿಸುತ್ತಿರುವಾಗ ಇಕ್ಷ್ವಾಕುವಂಶವು ಚಂದ್ರಾಸ್ತವಾಗಿ ಸೂರ್ಯೋದಯವಾದ ಆಕಾಶದಂತೆ ಶೋಭಿಸುವುದು. ಅನುಕ್ರಮವಾಗಿ ಯತಿಪಾರ್ಥಿವಚಿಹ್ನೆಗಳನ್ನು ಧರಿಸಿದ ರಘುರಾಘವರು ಜನಗಳಿಗೆ ಮೂರ್ತೀಭವಿಸಿದ್ದ ನಿವೃತ್ತಿ ಪ್ರವೃತ್ತಿ ಧರ್ಮಗಳಂತೆ ತೋರುವರು. ಇತ್ತ, ಗೆಲ್ಲದೆ ಉಳಿದಿದ್ದ ರಾಜ್ಯಗಳನ್ನು ಗೆಲ್ಲಬೇಕೆಂದು ಅಜನು ನೀತಿವಿಶಾರದರಾದ ಮಂತ್ರಿಗಳೊಡನೆ ಶ್ರಮಿಸಿದರೆ ಅತ್ತ ಅಕ್ಷಯ ಪದವಿಗಾಗಿ ರಘುವು ಯೋಗಿಗಳ ಸಹವಾಸದಲ್ಲಿ ಶ್ರಮಿಸುವನು. ತರುಣನಾದ ಅಜನು ಪ್ರಜಾಕ್ಷೇಮಕ್ಕಾಗಿ ಧರ್ಮಾಸನವನ್ನೇರಿದರೆ ವೃದ್ಧನಾದ ರಘುವು ಧಾರಣೆಯನ್ನು ಕಲಿಯುವುದಕ್ಕಾಗಿ ದರ್ಭಾಸನವನ್ನೇರುವನು.

ಒಬ್ಬನು ಪ್ರಭುಶಕ್ತಿಯಿಂದ ಇತರ ರಾಜರನ್ನು ವಶಪಡಿಸಿಕೊಂಡರೆ ಮತ್ತೊಬ್ಬನು ಧ್ಯಾನಶಕ್ತಿಯಿಂದ ಶರೀರದ ಪಂಚಾವಯವಗಳನ್ನು ವಶಪಡಿಸಿಕೊಳ್ಳುವನು. ಹೊಸದೊರೆಯು ಶತ್ರುಗಳ ಪ್ರಯತ್ನಗಳನ್ನು ವಿಫಲಗೊಳಿಸಿದರೆ ಹಳೆಯ ದೊರೆಯು ಜ್ಞಾನಾಗ್ನಿಯಿಂದ ಕರ್ಮಗಳನ್ನು ಸುಡಲು ಶ್ರಮಿಸುವನು. ಅಜನು ಫಲ ಸಿಕ್ಕುವವರೆಗೂ ದೃಢಸಂಕಲ್ಪದಿಂದ ಪ್ರಯತ್ನಿಸಿದರೆ ರಘುವು ಸ್ಥಿರಚಿತ್ತನಾಗಿ ಪರಮಾತ್ಮಸಾಕ್ಷಾತ್ಕಾರವಾಗುವವರೆಗೂ ಯೋಗಾಭ್ಯಾಸವನ್ನು ಬಿಡುವುದಿಲ್ಲ. ಹೀಗೆ ತಂದೆ ಮಕ್ಕಳಿಬ್ಬರೂ ತಮ್ಮ ತಮ್ಮ ಧ್ಯೇಯಗಳ ವಿಷಯದಲ್ಲಿ ಜಾಗರೂಕರಾಗಿ ವರ್ತಿಸುತ್ತ ತಮತಮಗೆ ಬೇಕಾದ ಶ್ರೇಯಸ್ಸು ಪ್ರೇಯಸ್ಸುಗಳನ್ನು ಪಡೆಯುವರು. ಸ್ವಲ್ಪಕಾಲದ ನಂತರ ರಘುವು ಯೋಗಸಮಾಧಿಯಿಂದ ಪರಮಪುರುಷನನ್ನು ಸೇರುವನು. ಅಜನು ವಿಶೇಷವಾಗಿ ಶೋಕಿಸಿ ಯತಿಗಳ ಸಹಾಯದಿಂದ ಅನಗ್ನಿಸಂಸ್ಕಾರವನ್ನೇ ನಡೆಸುವನು. ಯೋಗಸಮಾಧಿಯಿಂದ ಶರೀರವನ್ನು ತ್ಯಜಿಸಿದವರು ತಮ್ಮ ಸದ್ಗತಿಗೆ ಮಕ್ಕಳ ತರ್ಪಣಾದಿಗಳನ್ನು ಅಪೇಕ್ಷಿಸುವುದಿಲ್ಲವಷ್ಟೆ! ಅದೇ ರೀತಿ ರಘುವೂ ಕೂಡ ಶ್ರೇಷ್ಠಪದವಿಯನ್ನು ಹೊಂದಿದನೆಂದು ತತ್ವಜ್ಞಾನಿಗಳು ತಿಳಿಸಲಾಗಿ ಅಜನ ಶೋಕವು ಕಡಿಮೆಯಾಗುವುದು. ಅನಂತರ ತನ್ನ ಕಾರ್ಯಗಳಲ್ಲಿ ಆಸಕ್ತನಾಗಿ ಅಜನು ಲೋಕವನ್ನೇ ಜಯಿಸಿ ಸ್ವಾಧೀನಪಡಿಸಿಕೊಳ್ಳುವನು. ಇಂದುಮತಿಯು ದಶರಥನೆಂಬ ಪುತ್ರನನ್ನು ಪ್ರಸುವಿಸುವಳು.

ಹೀಗಿರುವಾಗ ಒಂದು ಸಲ ಅಜನು ಹೆಂಡತಿ, ಮಗ ಇವರೊಡನೆ ವಿಹಾರಕ್ಕಾಗಿ ಉಪವನಕ್ಕೆ ಹೋಗುವನು. ಆಗ ಗೋಕರ್ಣೇಶ್ವರನನ್ನು ಆರಾಧಿಸುವುದಕ್ಕಾಗಿ ಸಂಚರಿಸುತ್ತ ನಾರದರು ಬರುವರು. ಅವರ ವೀಣೆಯ ತುದಿಯಲ್ಲಿ ದಿವ್ಯಸುಮನಿರ್ಮಿತವಾದ ಮಾಲೆಯಿತ್ತು. ಅದರ ಸುವಾಸನೆಯನ್ನು ಬಯಸಿಯೋ ಎಂಬಂತೆ ಗಾಳಿಯು ಅದನ್ನು ಹಾರಿಸುವುದು. ಮಾಲೆಯು ಉದ್ಯಾನದಲ್ಲಿದ್ದ ರಾಣಿಯ ಎದೆಯಮೇಲೆ ಬೀಳುವುದು. ರಾಣಿಯು ಅದನ್ನು ಕ್ಷಣಮಾತ್ರ ನೋಡಿ ಇದ್ದಕ್ಕಿದ್ದಂತೆ ಕಣ್ಣುಗಳನ್ನು ಮುಚ್ಚುವಳು. ಮೆಲ್ಲಮೆಲ್ಲನೆ ಇಂದ್ರಿಯಶಕ್ತಿಯು ಕುಗ್ಗಿ ಸ್ವಲ್ಪ ಹೊತ್ತಿನೊಳಗೆ ಅವಳು ಮೃತಿಹೊಂದುವಳು. ಕೂಡಲೆ ಅಜನೂ ಕೆಳಗೆ ಬೀಳ್ಳುವನು. ಎಣ್ಣೆಯೂ ದೀಪದ ಉರಿಯೂ ಒಟ್ಟಿಗೆ ತಾನೇ ಕೊನೆಯಾಗುವುದು!

ಅನುಚರರ ಆರ್ತರವವನ್ನು ಕೇಳಿ ಸರೋವರದ ಪಕ್ಷಿಗಳೂ ಕೂಡ ದುಃಖ ಪಡುವುವು. ದೊರೆಯು ಉಪಚಾರಗಳಿಂದ ಮೂರ್ಛೆ ತಿಳಿದೇಳುವನು. ಆದರೆ ರಾಣಿಯ ಪ್ರಾಣಮಾತ್ರ ಉಳಿಯುವುದಿಲ್ಲ. ಚಿಕಿತ್ಸೆಯೆಲ್ಲ ವ್ಯರ್ಥವಾಗುವುದು. ಆಯುಸ್ಸು ಉಳಿದಿದ್ದರೆತಾನೆ ಚಿಕಿತ್ಸೆ ಫಲಿಸುವುದು !

ಸರಿಪಡಿಸಬೇಕಾದ ವೀಣೆಯಂತಿದ್ದ ಅವಳ ದೇಹವನ್ನು ಅಜನು ಪ್ರೀತಿಯಿಂದ ತೊಡೆಯಮೇಲಿಟ್ಟುಕೊಂಡು ವಿಲಾಪಿಸುವನು. ಅವನ ಸ್ವಾಭಾವಿಕವಾದ ಸ್ಥೈರ್ಯವೆಲ್ಲ ಮಾಯವಾಗುವುದು. ಕಾಯಿಸಿದಾಗ ಕಬ್ಬಿಣವೇ ಮೆತ್ತಗಾಗುವಲ್ಲಿ ಪ್ರಾಣಿಗಳು ತಪ್ತರಾದಾಗ ಮೃದುವಾಗುವುದೇನಾಶ್ಚರ್ಯ !

“ಮೈಮೇಲೆ ಬಿದ್ದ ಹೂಗಳೇ ಆಯುಸ್ಸನ್ನು ನೀಗಬಲ್ಲುವಾದರೆ ಕೊಲ್ಲಲೆಳಸುವ ವಿಧಿಗೆ ಬೇರಾವುದು ಸಾಧನವಾಗಲಾರದು ! ಬಹುಶಃ ಮೃದುವಾದ ವಸ್ತುಗಳನ್ನು ಕೊಲ್ಲಲು ಯಮನು ಮೃದುವಾದ ಪದಾರ್ಥಗಳನ್ನೇ ಉಪಯೋಗಿಸುವನೇನೊ ! ಮಂಜಿನಿಂದ ತಾವರೆ ಹಾಳಾಗುವುದಿಲ್ಲವೇ ! ಎದೆಗೆ ಸೋಕಿದ ಮಾತ್ರಕ್ಕೆ ಕೊಲ್ಲುವುದಾದರೆ ಇದು ನನ್ನನ್ನೇಕೆ ಕೊಲ್ಲದು ? ಈಶ್ವರೇಚ್ಛೆಯಿಂದ ಅಮೃತವೂ ವಿಷವಾಗಬಹುದು ; ವಿಷವೂ ಅಮೃತವಾಗಬಹುದು. ಒಂದು ವೇಳೆ ಇದು ನನ್ನ ದುರದೃಷ್ಟನಿಮಿತ್ತವಾಗಿ ವಿಧಿಯು ಸೃಷ್ಟಿಸಿದ ಸಿಡಿಲಿರಬಹುದು. ಅದಕ್ಕೇ ಅದು ಗಿಡವನ್ನುಳಿಸಿ ಅದಕ್ಕಂಟಿದ್ದ ಲತೆಯನ್ನು ನಾಶಮಾಡಿದೆ ”:—ಹೀಗೆಲ್ಲ ಅಜನು ಪ್ರಲಪಿಸುವನು. ಇಂದುಮತಿಯ ಪ್ರಾಣಹೋಗಿರುವುದೆಂದರಿಯದವನಂತೆ ಅವಳನ್ನು ಸಂಬೋಧಿಸಿ ಹುಚ್ಚುಹುಚ್ಚಾಗಿ ಪ್ರಶ್ನೆಮಾಡತೊಡಗುವನು. “ಶುಚಿಸ್ಮಿತೆ ! ಇದುವರೆಗೆ ಅನೇಕವೇಳೆ ತಪ್ಪುಮಾಡಿದ್ದರೂ ಕ್ಷಮಿಸಿ ಈಗ ಯಾವ ತಪ್ಪುಮಾಡದಿದ್ದರೂ ಏಕೆ ಮಾತನಾಡಿಸುವುದಿಲ್ಲ ? ಮೊದಲು ದಯಿತೆಯನ್ನನುಸರಿಸಿದ್ದೂ ನನ್ನ ಈ ಹಾಳು ಪ್ರಾಣವು ಏಕೆ ಉಳಿಯಿತು ? ನಾನು ಹೆಸರಿಗೆ ಮಾತ್ರ ಭೂಮಿಗೊಡೆಯ. ನನ್ನ ಸಹಜಪ್ರೀತಿಯು ನಿನ್ನಮೇಲೆಯೇ ಇರುವುದು. ಸುಂದರಿ ! ಹೂಗಳಿಂದಲಂಕೃತವಾದ ನಿನ್ನ ಬೈತಲೆಯನ್ನು ನೋಡಿದರೆ ನೀನು ಪುನಃ ಬದುಕಬಹುದೆಂದಾಶಿಸುವೆನು. ಪ್ರಿಯೆ ! ಬೇಗ ಎಚ್ಚೆತ್ತು ನನ್ನ ದುಃಖವನ್ನು ತೊಲಗಿಸು. ರಾತ್ರಿಯು ಪುನಃ ಚಂದ್ರನನ್ನು ಸೇರುವುದು. ಚಕ್ರವಾಕಿಯೂ ನಲ್ಲನನ್ನು ಕೂಡುವುದು. ಆದುದರಿಂದಲೇ ಅವು ವಿರಹವನ್ನು ಸಹಿಸಬಹುದು.

ನೀನು ಮಾತ್ರ ಹಿಂದಿರುಗಲವಕಾಶವಿಲ್ಲದೆ ಹೊರಟುಹೋಗಿರುವೆ. ಇನ್ನು ನನಗೆ ದುಃಖ ತಪ್ಪುವುದೆಂತು ? ಎಳಚಿಗುರಿನಮೇಲೆ ಮಲಗಿಯೂ ಕಂದುತ್ತಿದ್ದ ನಿನ್ನ ಮೃದುಶರೀರವು ಚಿತಾರೋಹಣವನ್ನು ಹೇಗೆ ಸಹಿಸಬಲ್ಲುದು? ಕೋಗಿಲೆಗಳಲ್ಲಿ ಕಲಭಾಷಣ, ಕಲಹಂಸಿಗಳಲ್ಲಿ ಮದಾಲಸಗಮನ, ಹರಿಣಿಗಳಲ್ಲಿ ಚಂಚಲದೃಷ್ಟಿ ಲತೆಗಳಲ್ಲಿ ವಿಭ್ರಮ–ಹೀಗೆ ನನ್ನ ಮೇಲಿನ ಕರುಣೆಯಿಂದ ಸ್ವರ್ಗಕ್ಕೆ ಹೊರಟಿದ್ದರೂ ಇವೆಲ್ಲವನ್ನೂ ಬಿಟ್ಟಿರುವೆ. ಆದರೆ ನನ್ನ ಹೃದಯದ ತೀವ್ರಶೋಕವನ್ನು ಇವು ಸಮಾಧಾನಗೊಳಿಸವು. ನೀನು ದೋಹದವನ್ನು ನಡೆಸಿದಮೇಲೆ ಅರಳಿ ಮುಂಗುರುಗಳನ್ನಲಂಕರಿಸುವ ಅಶೋಕವನ್ನು ನಿನ್ನ ನಿವಾಪಮಾಲಿಕೆಗೆ ಹೇಗೆ ಉಪಯೋಗಿಸಲಿ? ಸುಗಾತ್ರಿ! ನಿನ್ನ ನೂಪುರಶಬ್ದಸಹಿತವಾದ ಚರಣಾನುಗ್ರಹವನ್ನು ನೆನೆದು ಈ ಅಶೋಕವೂ ಕಂಬನಿ ಸುರಿಸುತ್ತಿದೆ. ಕಿನ್ನರಕಂಠಿ! ಸಮಸುಖದುಃಖರಾದ ಸಖಿಯರು; ಹುಣ್ಣಿಮೆಯ ಚಂದ್ರನಂತಿರುವ ಈ ಮಗ; ನಿನ್ನೊಬ್ಬಳಲ್ಲೇ ಅನುರಕ್ತನಾಗಿರುವ ನಾನು; ಆದರೂ ಇದೇಕೆ ಈ ನಿಷ್ಠುರಸಂಕಲ್ಪ? ಇನ್ನು ನನಗೆ ಸಂತೋಷವಿಲ್ಲ. ಕ್ರೀಡೆ ಸಂಗೀತಗಳಾವುವೂ ಬೇಕಿಲ್ಲ. ವಸಂತಾದಿ ಋತುಗಳೂ ಉತ್ಸವ ಶೂನ್ಯಗಳು. ಒಡವೆ ಬೇಡ; ನೀನಿಲ್ಲದೆ ಎಲ್ಲವೂ ನಿಷ್ಫಲ. ನೀನು ನನಗೆ ಗೃಹಿಣಿ, ಸಚಿವ, ಸಖಿ, ಲಲಿತಕಲೆಗಳನ್ನು ನನ್ನಲ್ಲಿ ಕಲಿತ ಪ್ರಿಯಶಿಷ್ಯೆ! ನಿನ್ನನ್ನಪಹರಿಸಿದ ಮೃತ್ಯುವು ನನಗೇನನ್ನು ತಾನೆ ಬಿಟ್ಟಿರುವುದು? ಮದಿರಾಕ್ಷಿ! ನೀನಿಲ್ಲದಿರುವುದರಿಂದ ಐಶ್ವರ್ಯವಿದ್ದರೂ ಅಜನಿಗೆ ಸುಖವಿಲ್ಲ. ನನ್ನ ಎಲ್ಲ ಭೋಗಗಳೂ ನಿನ್ನೊಬ್ಬಳಿಂದಲೇ.” ಹೀಗೆಲ್ಲ ಪ್ರಿಯಾನಿಮಿತ್ತವಾಗಿ ಕೋಸಲಾಧಿಪನು ಗೋಳಿಡಲಾಗಿ ಅಲ್ಲಿನ ಗಿಡಬಳ್ಳಿಗಳೂ ಕೂಡ ಕಣ್ಣೀರನ್ನು ಸುರಿಸಿದುವು. ಅನಂತರ ಬಲಾತ್ಕಾರದಿಂದ ಮುಂದಿನ ಸಂಸ್ಕಾರಗಳೆಲ್ಲ ನಡೆಯುವುವು. ಜನಾಪವಾದಕ್ಕೆ ಹೆದರಿ—ಬದುಕಬೇಕೆಂಬಾಸೆಯಿಂದಲ್ಲ—ಅಜನು ಪ್ರಿಯೆಯೊಡನೆ ಸಹಗಮನವನ್ನಾಚರಿಸಲಿಲ್ಲ. ಅಂತ್ಯಕ್ರಿಯೆಗಳನ್ನೆಲ್ಲ ನೆರವೇರಿಸಿ ಏಕಾಕಿಯಾಗಿ ಕಂದಿ, ಕಳೆಗುಂದಿ, ಹಿಂದಿರುಗಿದ ರಾಜನನ್ನು ನೋಡಿ ಪೌರರೆಲ್ಲರೂ ಕಣ್ಣೀರು ಸುರಿಸುವರು. ಈ ವೇಳೆಗೆ ವಸಿಷ್ಠರು ಧ್ಯಾನಬಲದಿಂದ ಶಿಷ್ಯನಾದ ಅಜನ ಶೋಕವನ್ನರಿತು ಸಮಾಧಾನವನ್ನು ಹೇಳಿ ಕಳುಹಿಸುವರು. ಸಂದೇಶದಲ್ಲಿ ಇಂದುಮತಿಯ ಪೂರ್ವಚರಿತ್ರೆಯನ್ನೆಲ್ಲ ವಿವರಿಸಿ

ಅವಳೀಗ ಮೃತಿಹೊಂದಿದ್ದಕ್ಕೆ ಕಾರಣವನ್ನೂ ತಿಳಿಸುವರು. ತೃಣಬಿಂದುವೆಂಬ ಋಷಿಯು ಉಗ್ರತಪಸ್ಸನ್ನಾಚರಿಸುತ್ತಿದ್ದಾಗ ಇಂದ್ರನು ಅವನ ಮನಸ್ಸನ್ನು ಚಂಚಲಗೊಳಿಸುವುದಕ್ಕಾಗಿ ಹರಿಣಿಯೆಂಬ ಸುರಾಂಗನೆಯನ್ನು ಕಳುಹಿಸಿದ್ದು; ಋಷಿಯು ಕೋಪದಿಂದ ಭೂಲೋಕದಲ್ಲಿ ಮಾನುಷಿಯಾಗೆಂದು ಅವಳನ್ನು ಶಪಿಸಿದ್ದು; ಅನಂತರ ಅವಳು ಶರಣಾಗತಳಾಗಿ ಕ್ಷಮೆ ಬೇಡಿದಾಗ ದಿವ್ಯ ಪುಷ್ಪವನ್ನು ಕಾಣುವವರೆಗೆ ಭೂಮಿಯಲ್ಲಿರಬೇಕೆಂದು ಮಾತ್ರ ವಿಧಿಸಿದ್ದು; ಇದನ್ನೆಲ್ಲ ತಿಳಿಸಿ ಇಂದುಮತಿಯು ಇದಕ್ಕನುಸಾರವಾಗಿ ಕ್ರಥಕೈಶಿಕ ವಂಶದಲ್ಲಿ ಹುಟ್ಟಿ, ದಿವ್ಯಮಾಲೆಯಿಂದ ಶಾಪನಿವೃತ್ತಿಯಾಗಿ ಹೋಗಿರುವಳೆಂದೂ ಅವಳಿಗಾಗಿ ಚಿಂತಿಸಿ ಫಲವಿಲ್ಲವೆಂದೂ ವಸಿಷ್ಠರು ಆಜ್ಞಾಪಿಸುವರು. "ಪ್ರಾಣಿಗಳಿಗೆ ಸಾವು ತಪ್ಪಿದ್ದಲ್ಲ. ಭೂಮಿಯನ್ನು ಸರಿಯಾಗಿ ಆಳು; ರಾಜರಿಗೆ ಅವಳೇ ಹೆಂಡತಿ. ಅಭ್ಯುದಯಕಾಲದಲ್ಲಿ ಮದಾಂಧನಾಗದೆ ನೀನು ಅಧ್ಯಾತ್ಮವಿದ್ಯೆಯನ್ನಾಶ್ರಯಿಸಿದೆ; ಈಗ ಮನಸ್ಸಿಗೆ ಕ್ಲೇಶವೊದಗಿರುವಾಗಲೂ ತಿರುಗಿ ಅದನ್ನೇ ಆಶ್ರಯಿಸು. ಅಳುವುದಿರಲಿ; ನೀನೂ ಅವಳ ಹಿಂದೆ ಸತ್ತರೂ ಅವಳು ನಿನಗೆ ಸಿಕ್ಕಳು. ತಮ್ಮ ತಮ್ಮ ಕರ್ಮಗಳಿಗನುಸಾರವಾಗಿ ಪರಲೋಕಕ್ಕೆ ಹೋದ ಜೀವರು ಬೇರೆಬೇರೆ ಮಾರ್ಗಗಳನ್ನು ಹಿಡಿಯುವರು. ಶೋಕವನ್ನು ದೂಡಿ ಹೆಂಡತಿಗೆ ಜಲಾಂಜಲಿಯನ್ನರ್ಪಿಸು. ನೆಂಟರು ಸುರಿಸುವ ಕಣ್ಣೀರು ಪ್ರೇತವನ್ನು ಸುಡುವುದು. ಪ್ರಾಣಿಗಳಿಗೆ ಸಾವೇ ಸ್ವಾಭಾವಿಕವಾದ ಅವಸ್ಥೆ. ಬದುಕಿರುವುದೇ ವಿಕೃತಾವಸ್ಥೆಯೆಂದು ಪ್ರಾಜ್ಞರು ಹೇಳುವರು. ಕ್ಷಣಮಾತ್ರ ಬದುಕಿದರೂ ಪ್ರಾಣಿಗಳಿಗೆ ಅದೇ ಲಾಭವೆನ್ನಿಸುವುದು. ಮೂಢರು ಮಾತ್ರ ಪ್ರಿಯಮರಣವನ್ನು ಹೃದಯವನ್ನಿರಿಯುವ ಬಾಣವನ್ನಾಗಿ ಭಾವಿಸುವರು. ಸಮಚಿತ್ತರು ಅದನ್ನು ಕುಶಲಕ್ಕೆ ಸಾಧನವಾದ ಶಲ್ಯೋದ್ಧಾರವೆಂದುಕೊಳ್ಳುವರು. ಶರೀರ ಶರೀರಿಗಳಿಗೆ ಸಂಯೋಗ ವಿಯೋಗಗಳುಂಟೆಂದಮೇಲೆ ಬಾಹ್ಯವಿಷಯಗಳಿಂದ ವಿರಹವು ಪ್ರಾಜ್ಞನನ್ನು ಪೀಡಿಸಬಹುದೆ? ಜಿತೇಂದ್ರಿಯರಲ್ಲಗ್ರಗಣ್ಯನಾದ ನೀನು ಪಾಮರರಂತೆ ಶೋಕಕ್ಕೆ ತುತ್ತಾಗಬಾರದು. ಗಾಳಿಯು ಬೀಸಿದಾಗ ಗಿಡ ಬೆಟ್ಟಗಳೆರಡೂ ಅಲುಗಿದರೆ ಅವುಗಳಿಗೇನು ವ್ಯತ್ಯಾಸ?" ಹೀಗೆಂಬ ಗುರುಗಳ ಉಪದೇಶವನ್ನು ಸ್ವೀಕರಿಸಿದಮೇಲೂ ಅಜನ ಮನಸ್ಸು ಸಮಾಧಾನಹೊಂದುವುದಿಲ್ಲ. ಸುಮಾರು ಎಂಟು ವರ್ಷ

ಗಳನ್ನು ಮಗನೊಡನೆ ಲೀಲೆಯಿಂದ ಕಳೆಯುವನು. ಶೋಕಬಾಣವು ತೀವ್ರವಾಗಿ ಅವನ ಹೃದಯವನ್ನು ಭೇದಿಸುವುದು. ವೈದ್ಯರ ಚಿಕಿತ್ಸೆಯೆಲ್ಲ ವ್ಯರ್ಥವಾಗುವುದು. ಮಗನಾದ ದಶರಥನು ದೊರೆತನಕ್ಕೆ ಅರ್ಹನಾಗಲು ಪ್ರಜೆಗಳನ್ನು ರಕ್ಷಿಸೆಂದು ಅವನಿಗಪ್ಪಣೆಯಿತ್ತು ಅಜನು ಅನಶನವ್ರತವನ್ನು ಕೈಕೊಳ್ಳುವನು. ಪ್ರಿಯೆಯನ್ನು ಹಿಂಬಾಲಿಸಲು ಕಾತರನಾಗಿದ್ದುದಕ್ಕೆ ತಕ್ಕಂತೆ ಗಂಗಾ ಸರಯೂ ಸಂಗಮದಲ್ಲಿ ಅಜನು ದೇಹತ್ಯಾಗಮಾಡಿ, ದೇವತ್ವವನ್ನು ಪಡೆದು ನಂದನವನದ ಲೀಲಾಗಾರಗಳಲ್ಲಿ ಮೊದಲಿಗಿಂತ ಹೆಚ್ಚು ಸುಂದರಳಾಗಿದ್ದ ಕಾಂತೆಯನ್ನು ಸೇರುವನು.

## ಒಂಭತ್ತನೆಯ ಸರ್ಗ

ತಂದೆಯ ಅನಂತರ ಸಂಯಮಿಯೂ ರಾಜಶ್ರೇಷ್ಠನೂ ಆದ ದಶರಥನು ಉತ್ತರಕೋಸಲಕ್ಕೊಡೆಯನಾಗುವನು. ಪರಾಕ್ರಮದಲ್ಲಿ ಕುಮಾರನಿಗೆ ಸಮನಾದರೂ ಪ್ರಜೆಗಳ ಅನುರಾಗಕ್ಕೆ ಪಾತ್ರನಾಗುವನು. ರಾಜ್ಯದಲ್ಲಿ ಯಾವ ತೊಂದರೆಗೂ ಅವಕಾಶವಿಲ್ಲದೆ ಸುಭಿಕ್ಷವಾಗಿರುವುದು. ದಶರಥನಿಗೆ ಮಗಧ, ಕೋಸಲ, ಕೇಕಯ ರಾಜರ ಪುತ್ರಿಯರಾದ ಮೂವರು ರಾಣಿಯರು............ ಹೀಗಿರುವಲ್ಲಿ ವಸಂತಋತು ತಲೆದೋರುವುದು. ವಿಲಾಸಿನಿಯರೊಡನೆ ಋತುಸಂಪತ್ತನ್ನು ಅನುಭವಿಸಿ ದಶರಥನು ಬೇಟೆಗಾಗಿ ಹೊರಡುವನು. ............ ಇವನು ಧನುಸ್ಸಿನ ಶಬ್ದವನ್ನು ಮಾಡಲಾಗಿ ಕಾಡಿನಲ್ಲಿದ್ದ ಸಿಂಹಗಳು ರೇಗಿಬೀಳುವುವು. ಹರಿಣಿಗಳು ಮಾತ್ರ ಬೇಗ ಸಂಚರಿಸಲೂ ಆರವು. ಗುಂಪನ್ನು ಹಿಂಬಾಲಿಸುತ್ತ ಅವುಗಳಮೇಲೆ ಗುರಿಯಿಟ್ಟಾಗ ಭಯಚಕಿತವಾದ ಅವುಗಳ ಕಣ್ಣುಗಳು ಪ್ರಿಯೆಯರ ದೃಷ್ಟಿಯನ್ನು ಜ್ಞಾಪಕಕ್ಕೆ ತರುವುವು................ ದೊರೆಯು ದುಷ್ಟಜಂತುಗಳನ್ನು ಮಾತ್ರ ಕೊಲ್ಲುತ್ತ ಇತರ ಜಂತುಗಳೊಡನೆ ವಿನೋದಹೊಂದುತ್ತ ಬೇಟೆಯನ್ನು ಮುಂದುವರಿಸುವನು. ಬಹಳ ಶ್ರಮವಾದರೂ ಆಸಕ್ತಿಯನ್ನು ಕಳೆದುಕೊಳ್ಳದೆ ಆ ರಾತ್ರಿಯನ್ನೆಲ್ಲ ಕಾಡಿನಲ್ಲಿ ಹೂಚಿಗುರುಗಳ ಹಾಸಿಗೆಯಮೇಲೆಯೇ ಕಳೆಯುವನು. ಮರುದಿನ ಒಂದು ಜಾತಿಯ ಚಿಂಕೆಯನ್ನು ಹಿಂಬಾಲಿಸುತ್ತ ತಮಸಾನದಿಯ ತೀರಕ್ಕೆ ಬರುವನು. ಸ್ವಲ್ಪ ದೂರದಲ್ಲಿ ಮಡಕೆಯೊಳಕ್ಕೆ ನೀರು ತುಂಬಿಕೊಳ್ಳುವ ಶಬ್ದ ಕೇಳಬರು

ವುದು. ಅದನ್ನು ಆನೆಯ ಕೂಗೆಂದು ಭ್ರಮಿಸಿ ದಶರಥನು 'ಶಬ್ದವೇಧಿ' (ಶಬ್ದವನ್ನನುಸರಿಸಿ ಹೋಗುವ) ಬಾಣವನ್ನು ಬಿಡುವನು. ಪ್ರಾಜ್ಞನಾದರೂ ದಶರಥನು ರಜೋಗುಣಪ್ರಾಧಾನ್ಯದಿಂದ ರಾಜನು ಮಾಡಬಾರದುದನ್ನು ಮಾಡುವನು. ಕೂಡಲೆ ಅಯ್ಯೋ! ಅಪ್ಪಾ! ಎಂಬ ಆರ್ತಧ್ವನಿಯು ಕೇಳುವುದು. ಅದರ ಮೂಲವನ್ನು ಹುಡುಕಲಾಗಿ ಬಾಣವಿದ್ಧನಾದ ಕೊಡವನ್ನು ಹಿಡಿದಿದ್ದ ಮುನಿಪುತ್ರನು ದಶರಥನಿಗೆ ಕಾಣಿಸುವನು. ಹೀಗಾದುದಕ್ಕಾಗಿ ವ್ಯಸನಪಟ್ಟು ದಶರಥನು ಮುನಿಪುತ್ರನನ್ನು ಬಾಣದೊಡನೆ ಆ ಋಷಿಯ ಬಳಿಗೆ ಕರೆದೊಯ್ಯುವನು. ಋಷಿಪುತ್ರನ ತಂದೆತಾಯಿಗಳಿಬ್ಬರೂ ಕುರುಡರು. ಬಾಯಾರಿಕೆಯನ್ನು ಹೋಗಲಾಡಿಸಿಕೊಳ್ಳುವುದಕ್ಕೆ ನೀರು ತರುವಂತೆ ಮಗನಿಗೆ ಹೇಳಿ ಅವನಿಗಾಗಿ ನಿರೀಕ್ಷಿಸುತ್ತಿದ್ದರು. ದಶರಥನು ಇವರನ್ನು ನೋಡಿ ತಾನು ಅಜ್ಞಾನದಿಂದಾಚರಿಸಿದುದಕ್ಕಾಗಿ ಕ್ಷಮೆ ಬೇಡುವನು. ಋಷಿದಂಪತಿಗಳು ಬಹಳ ಶೋಕಿಸಿ ಬಾಣವನ್ನು ಎದೆಯಿಂದ ಕೀಳಲು ಹುಡುಗನು ಸಾಯುವನು. ತಂದೆಋಷಿಯು ಕೈಲಿದ್ದ ಕಣ್ಣೀರಿನಿಂದಲೇ "ನನ್ನಂತೆ ನೀನೂ ಅಂತ್ಯಕಾಲದಲ್ಲಿ ಪುತ್ರಶೋಕದಿಂದ ಸಾಯುವೆ" ಎಂದು ದಶರಥನನ್ನು ಶಪಿಸುವನು. ನೊಂದ ಹಾವಿನಂತೆ ರೋಷಗೊಂಡಿದ್ದ ಋಷಿಗೆ ಮತ್ತೇನೂ ಹೇಳಲಾರದೆ ಅವನ ಅಪ್ಪಣೆಮೇರೆ ಪುತ್ರನೊಡನೆ ಸಹಗಮನಕ್ಕಾಗಿ ಚಿತೆಯನ್ನು ಸಿದ್ಧಪಡಿಸುವನು. ಋಷಿಯು ಸಪತ್ನೀಕನಾಗಿ ಬೆಂಕಿಯನ್ನು ಪ್ರವೇಶಿಸಿದ ಮೇಲೆ ದಶರಥನು ದುಃಖಿಸುತ್ತ ಸಮುದ್ರವು ಬಡಬಾಗ್ನಿಯನ್ನು ಧರಿಸುವಂತೆ ಆತ್ಮವಿನಾಶಕ್ಕೆ ಕಾರಣವಾದ ಶಾಪವನ್ನು ಧರಿಸಿ ಹಿಂದಿರುಗುವನು.

## ಹತ್ತನೆಯ ಸರ್ಗ

ಅನಂತರ ದಶರಥನು ಪೂರ್ಣವೈಭವದಿಂದ ಸುಮಾರು ಹತ್ತು ಸಾವಿರ ವರ್ಷ ರಾಜ್ಯಭಾರ ನಡೆಸುವನು. ಆದರೂ ಮಕ್ಕಳಾಗಲಿಲ್ಲವಾದ ಕಾರಣ ಋಷ್ಯಶೃಂಗ ಮೊದಲಾದ ಋಷಿಗಳು ಪುತ್ರೇಷ್ಟಿಯನ್ನು ಪ್ರಾರಂಭಿಸುವರು. ಆ ಸಮಯಕ್ಕೆ ಸರಿಯಾಗಿ ರಾವಣನಿಂದ ಪೀಡಿತರಾದ ದೇವತೆಗಳು ವಿಷ್ಣುವನ್ನು ಮರೆಹೋಗುವರು. ವಿಷ್ಣುವೂ ಕೂಡಲೆ ಯೋಗನಿದ್ರೆಯಿಂದೇಳಲಾಗಿ ದೇವತೆಗಳು ಅವನನ್ನು ಸ್ತುತಿಸುವರು. ಅನಂತರ ರಾಕ್ಷಸರಿಂದ ತಮಗೆ

ಸಂಭವಿಸಿದ್ದ ಅಪಾರವಾದ ವಿಪತ್ತನ್ನು ವಿವರಿಸುವರು. ಗಂಭೀರವಾದ ಧ್ವನಿಯಿಂದ ಹರಿಯು ಉತ್ತರಕೊಡುತ್ತ ತಾನೇ ದಶರಥನ ಮಗನಾಗಿ ಹುಟ್ಟಿ ಅವನನ್ನು ಸಂಹರಿಸುವುದಾಗಿ ಭರವಸೆಕೊಡುವನು. ದೇವತೆಗಳು ಸಂತುಷ್ಟರಾಗಿ ಬರುವರು.

ದೊರೆಯ ಯಾಗದ ಕೊನೆಯಲ್ಲಿ, ತನಗೂ ಹೊರಲಾಗದಂತಹ ಚರುವನ್ನೊಳಗೊಂಡ ಪಾತ್ರೆಯನ್ನು ಧರಿಸಿದ ಪುರುಷನು ಅಗ್ನಿಯಿಂದೇಳುವನು. ಋತ್ವಿಕ್ಕುಗಳೆಲ್ಲ ಚಕಿತರಾಗಿರುವಲ್ಲಿ ದೊರೆಯು ಆ ಪುರುಷನಿಂದ ಚರುವನ್ನು ಸ್ವೀಕರಿಸಿ ಕೌಸಲ್ಯೆ, ಕೈಕೆಯಿಯರಿಗೆ ಕೊಟ್ಟು ಸುಮಿತ್ರೆಗೂ ಹಂಚುವಂತೆ ಹೇಳುವನು. ಇಬ್ಬರು ರಾಣಿಯರೂ ತಮ್ಮ ಭಾಗದಲ್ಲಿ ಕಾಲುಕಾಲು ಭಾಗವನ್ನು ಸುಮಿತ್ರೆಗೆ ಕೊಡುವರು. ಹೀಗೆ ಎಲ್ಲರೂ ದೇವಾಂಶವನ್ನು ಗರ್ಭದಲ್ಲಿ ಧರಿಸಿ ಲೋಕೋತ್ತರವಾದ ಕಾಂತಿಯನ್ನು ಪಡೆಯುವರು. ಶಂಖಚಕ್ರಾದಿಗಳನ್ನು ಧರಿಸಿದ ಪುರುಷರು ತಮ್ಮನ್ನು ರಕ್ಷಿಸುತ್ತಿದ್ದಂತೆ ಮೂವರೂ ಕನಸು ಕಾಣುವರು. ಚಿನ್ನದ ರೆಕ್ಕೆಯ ಗರುಡನು ಇವರನ್ನೆತ್ತಿಕೊಂಡಿದ್ದಂತೆಯೂ ಕೌಸ್ತುಭವನ್ನು ಧರಿಸಿದ ಲಕ್ಷ್ಮಿಯು ಬೀಸಣಿಗೆಯಿಂದ ಬೀಸಿದಂತೆಯೂ ಸಪ್ತರ್ಷಿಗಳು ದಿವ್ಯಗಂಗೆಯಲ್ಲಿ ಸ್ನಾನಮಾಡಿ ಇವರನ್ನು ಪೂಜಿಸಿದಂತೆಯೂ ನಾನಾವಿಧವಾಗಿ ಕನಸುಗಳು ಬೀಳುವುವು. ಇದನ್ನು ಕೇಳಿ ದಶರಥನು ಸಂತೋಷದಿಂದ ಹೆಮ್ಮೆಪಡುವನು. ಹಿರಿಯ ರಾಣಿಯು ತಮಸ್ಸನ್ನು ದೂರಗೊಳಿಸುವ ಮಗನನ್ನು ಪಡೆಯುವಳು. ಇವನಿಗೆ 'ರಾಮ'ನೆಂದು ಹೆಸರಿಡಲಾಗುವುದು. ಅಪ್ರತಿಮತೇಜಸ್ಸುಳ್ಳ ಈ ರಘುವಂಶಪ್ರದೀಪವು ರಾಕ್ಷಸರ ಮನೆಗಳ ದೀಪಗಳನ್ನೆಲ್ಲ ಮಾರಿಸುವುದು. ಕೈಕೆಗೆ ಶೀಲವಂತನಾದ ಭರತನು ಹುಟ್ಟಲಾಗಿ ವಿನಯವು ಸಂಪತ್ತನ್ನು ಸೇರಿದಂತಾಗುವುದು. ಚೆನ್ನಾಗಿ ಕಲಿತ ವಿದ್ಯೆಯು ತತ್ವಜ್ಞಾನ ಇಂದ್ರಿಯ ಜಯಗಳನ್ನು ಕೊಡುವಂತೆ ಸುಮಿತ್ರೆಯು ಲಕ್ಷ್ಮಣ, ಶತ್ರುಘ್ನರೆಂಬ ಅವಳಿಮಕ್ಕಳನ್ನು ಪ್ರಸವಿಸುವಳು. ಗುಣವು ಮೂಡಲು ಲೋಕದ ದೋಷವೆಲ್ಲ ತೊಲಗಿ ಸ್ವರ್ಗವೇ ಭೂಮಿಯಲ್ಲವತರಿಸಿದಂತಾಗುವುದು. ದೇವದುಂದುಭಿಗಳು ಮೊಳಗುವುವು. ಕಲ್ಪವೃಕ್ಷಗಳು ದಶರಥನ ಅರಮನೆಯಲ್ಲಿ ಹೂಮಳೆಗರೆಯುವುವು. ಬಾಲಕರ ಸ್ವಾಭಾವಿಕ ವಿನಯವು ವಿದ್ಯಾಭ್ಯಾಸದಿಂದ ಮತ್ತೂ ಹೆಚ್ಚುವುದು. ಇವರ ಪರಸ್ಪರ ಪ್ರೀತಿ

ಯಿಂದ ರಘುವಂಶವು ಹೆಚ್ಚು ಪ್ರಕಾಶಿಸುವುದು. ಪ್ರಜೆಗಳಿಗೆ ಸಂತೋಷವಾಗಿ ಧರ್ಮಾರ್ಥಕಾಮಮೋಕ್ಷಗಳೇ ಮೂರ್ತಿವೆತ್ತಂತೆ ತೋರುವುದು.

## ಹನ್ನೊಂದನೆಯ ಸರ್ಗ

ಕಾಲಕ್ರಮದಲ್ಲಿ ಬಾಲಕರು ಬೆಳೆಯುತ್ತಿರುವಾಗ ಮಿಶ್ವಾಮಿತ್ರನು ದಶರಥನ ಬಳಿಗೆ ಬಂದು ಯಾಗರಕ್ಷಣೆಗಾಗಿ ರಾಮನನ್ನೇ ಕಳುಹಿಸಬೇಕೆಂದು ಕೇಳುವನು. ರಾಮನು ಇನ್ನೂ ಚಿಕ್ಕಹುಡುಗ. ಆದರೂ ವಿಶ್ವಾಮಿತ್ರನು ಅವನನ್ನೇ ಅಪೇಕ್ಷಿಸುವನು. ತೇಜಸ್ವಿಗಳ ವಿಷಯದಲ್ಲಿ ವಯಸ್ಸು ಗಣನೆಗೆ ಬರುವುದೆ ? ಬಹುಕಾಲದಮೇಲೆ ಪಡೆದುದರಿಂದ ಅತಿಶಯವಾದ ಆದರಕ್ಕೆ ಪಾತ್ರರಾಗಿದ್ದರೂ ದೊರೆಯು ರಾಮಲಕ್ಷ್ಮಣರನ್ನು ಮುನಿಗರ್ಪಿಸುವನು. ರಘುವಂಶದವರು ಕೇಳಿದವರಿಗೆ ಪ್ರಾಣವನ್ನಾದರೂ ಇಲ್ಲವೆನ್ನುವವರಲ್ಲ. ತಾಯಿಯರಿಗೆ ನಮಸ್ಕರಿಸಿ ರಾಜಕುಮಾರರು ಹೊರಡುವರು. ಈ ರಮ್ಯವಾದ ನೋಟವನ್ನು ನೋಡುವುದಕ್ಕೆ ರಾಜಬೀದಿಯ ಎರಡು ಪಕ್ಕಗಳಲ್ಲೂ ತೋರಣಗಳಂತೆ ಜನ ನೆರೆಯುವರು. ಮುನಿಯು ಉಪದೇಶಿಸಿದ ವಿದ್ಯೆಗಳ ಪ್ರಭಾವದಿಂದ ಶ್ರಮವನ್ನೇ ಕಾಣದೆ ಕುಮಾರರು ಪ್ರಯಾಣಮಾಡುವರು. ದಾರಿಯಲ್ಲಿ ಪಕ್ಷಿಗಳು, ಸರೋವರಗಳು, ತಂಗಾಳಿ, ಮೋಡಗಳು ಇವೆಲ್ಲ ಅವರನ್ನುಪಚರಿಸುವುವು. ತಪಸ್ವಿಗಳಿಗೆ ಇವರನ್ನು ನೋಡುತ್ತ ನೋಡುತ್ತ ಸಂತೋಷ ಹೆಚ್ಚುವುದು. ಬಿಲ್ಲನ್ನು ಹಿಡಿದ ರಾಮನು ಮದನವನವನ್ನು ಪ್ರವೇಶಿಸುವಾಗ ಮನ್ಮಥನ ಪ್ರತಿನಿಧಿಯಂತೆಯೇ ತೋರುವನು............ ಅನಂತರ ಬಹುಳ ಪಕ್ಷದ ರಾತ್ರಿಯಂತೆ ಕಪ್ಪಾಗಿದ್ದ ತಾಟಕಿಯು ಆವರಿಸಿಕೊಂಡಿದ್ದ ಮಾರ್ಗ ಸಿಕ್ಕುವುದು. ರಾಮನು ಬಿಲ್ಲಿಗೆ ಹೆದೆಯೇರಿಸುವನು. ಅದರ ಶಬ್ದವನ್ನು ಕೇಳಿದಕೂಡಲೆ ತಾಟಕಿಯು ಎದುರಿಗೆ ಬಂದು ಸ್ಮಶಾನವಾತದಂತೆ ರಾಮನನ್ನು ಬಿರುಸಾಗಿ ತಳ್ಳುವಳು. ಅವಳನ್ನು ಕಂಡಕೂಡಲೆ ರಾಮನು ಸ್ತ್ರೀವಧವಾಗುವುದಲ್ಲ ! ಎಂಬ ಮರುಕವನ್ನೂ ಬಾಣವನ್ನೂ ಒಟ್ಟಿಗೆ ಬಿಡುವನು. ರಾಮಬಾಣ ತಾಟಕಿಯ ಹೃದಯವನ್ನು ಭೇದಿಸಿ ರಂಧ್ರಮಾಡುವುದು. ರಾಕ್ಷಸರ ರಾಜ್ಯವನ್ನು ಪ್ರವೇಶಿಸಬೇಕೆಂದಿದ್ದ ಯಮನಿಗೆ ಬಾಗಿಲಾದಂತಾಗುವುದು. ಅವಳು ನೆಲದಮೇಲೆ ಬಿದ್ದಾಗ ಆ ವನಮಾತ್ರವಲ್ಲದೆ ಮೂರು

ಲೋಕಗಳನ್ನೂ ಜಯಿಸಿದ್ದ ರಾವಣನ ಸಂಪತ್ತೂ ನಡುಗುವುದು. ............ ಆಮೇಲೆ ವಾಮನಾಶ್ರಮದ ಮಾರ್ಗವಾಗಿ ವಿಶ್ವಾಮಿತ್ರನ ಆಶ್ರಮವನ್ನು ಸೇರುವರು. ಯಾಗವು ವಿಘ್ನವಿಲ್ಲದೆ ಸಾಗುವುದು. ಸುಬಾಹು, ಮಾರೀಚರು ರಾಮಬಾಣದ ರುಚಿ ನೋಡುವರು. ಅವಭೃಥಸ್ನಾನವಾದಮೇಲೆ ರಾಮ ಲಕ್ಷ್ಮಣರು ಋಷಿಗೆ ನಮಸ್ಕರಿಸಿ ಆಶೀರ್ವಾದ ಹೊಂದುವರು. ಈ ವೇಳೆಗೆ ಮಿಥಿಲೆಯ ದೊರೆಯು ವಿಶ್ವಾಮಿತ್ರನನ್ನು ಕರೆಕಳುಹುವನು. ಜನಕನ ಧನುಸ್ಸನ್ನು ನೋಡಲೆಳಸಿ ರಾಮಲಕ್ಷ್ಮಣರೂ ಹೊರಡುವರು. ಮಾರ್ಗದಲ್ಲಿ ಅಹಲ್ಯೆಯ ಶಾಪವಿಮೋಚನವಾಗುವುದು. ರಾಮನನ್ನು ನೋಡಿದೊಡನೆ ಜನಕನಿಗೆ ಮಗಳ ಶುಲ್ಕವೆಂದು ಗೊತ್ತಾಗಿದ್ದ ಧನುಸ್ಸು ನೆನಪಿಗೆ ಬರುವುದು. ಆದರೂ "ಮಹಾಗಜಗಳಿಗೇ ಅಸಾಧ್ಯವಾದ ಕಾರ್ಯವನ್ನು ಚಿಕ್ಕ ಆನೆಗಳಿಗೆ ಹೇಳಲು ಮನಸ್ಸು ಬರುವುದಿಲ್ಲ" ಎನ್ನುವನು. "ಹೇಳಿ ಪ್ರಯೋಜನವಿಲ್ಲ; ಅವನ ಶಕ್ತಿಯನ್ನು ನೋಡಿ ತಿಳಿದುಕೊ" ಎಂದು ವಿಶ್ವಾಮಿತ್ರನು ಹೇಳಲಾಗಿ ಜನಕನು ಧನುಸ್ಸನ್ನು ತರಿಸುವನು. ರಾಮನು ಅದನ್ನೆತ್ತಿಕೊಂಡು ಹೆದೆಯನ್ನು ಬಿಗಿಯುವನು. ಬಿಗಿಯಾಗಿ ಎಳೆದುದರಿಂದ ಮುರಿದ ಧನುಸ್ಸು ಪುನಃ ಕ್ಷತ್ರಿಯರು ಉದಯಿಸಿದರೆಂದು ಪರಶುರಾಮನಿಗೆ ಸೂಚಿಸಿದಂತಾಗುವುದು. ವೀರ್ಯಶುಲ್ಕವಾಗಿ ಜನಕನು ಮಗಳನ್ನು ರಾಮನಿಗೆ ಒಪ್ಪಿಸುವನು. ದಶರಥನಿಗೆ ಜನಕನ ಪುರೋಹಿತನ ಮೂಲಕ ವರ್ತಮಾನ ಹೋಗುವುದು. ಕನ್ಯೆಯನ್ನು ಹುಡುಕುತ್ತಿದ್ದ ದಶರಥನಿಗೆ ಒಳ್ಳೆಯ ವರ್ತಮಾನ ತಲಪಿ ಅವನೂ ಸೈನ್ಯದೊಡನೆ ಮಿಥಿಲೆಗೆ ಬರುವನು. ಮದುವೆ ವಿಜೃಂಭಣೆಯಿಂದ ನೆರವೇರುವುದು. ಜೊತೆಯಲ್ಲಿ ಲಕ್ಷ್ಮಣ ಮೊದಲಾದವರಿಗೂ ಮದುವೆಯಾಗುವುದು. ಮೈಥಿಲನು ದಶರಥ ಮೊದಲಾಗಿ ಎಲ್ಲರನ್ನೂ ಮರ್ಯಾದೆಯಿಂದ ಕಳುಹಿಸಿಕೊಡುವನು. ಮಾರ್ಗದಲ್ಲಿ ಅಪಶಕುನಗಳು ಕಾಣಿಸಿಕೊಳ್ಳುವುವು. ಗುರುವು ಅವುಗಳ ಪರಿಹಾರಕ್ಕಾಗಿ ಉಚಿತಕರ್ಮಗಳನ್ನು ನಡೆಸಿದರೂ ಸೈನ್ಯದೆದುರಿಗೆ ಧನುರ್ಯಜ್ಞೋಪವೀತಧಾರಿಯಾದ ತೇಜಸ್ಸು ನಿಲ್ಲುವುದು. ಕ್ಷತ್ರಿಯರನ್ನು ಇಪ್ಪತ್ತೊಂದು ಸಲ ತೊಡೆದಿದ್ದ ಪರಶುರಾಮನನ್ನು ನೋಡಿ ದಶರಥನಿಗೂ ಭಯವಾಗುವುದು. ಭಾರ್ಗವನು ರಾಮನನ್ನೇ ದುರುಗುಟ್ಟಿಕೊಂಡು ನೋಡುತ್ತ ಧನುಸ್ಸನ್ನು ಸಿದ್ಧಪಡಿಸಿಕೊಳ್ಳುವನು. "ನೀನು ನನ್ನ ವೈರಿ; ನಿನ್ನನ್ನು

ಜಯಿಸಿದಲ್ಲದೆ ನನ್ನ ಪರಾಕ್ರಮಕ್ಕೆ ಪ್ರಾಶಸ್ತ್ಯವಿಲ್ಲ. ಹರಧನುಸ್ಸನ್ನು ಬಗ್ಗಿಸಿದುದಿರಲಿ. ಈ ನನ್ನ ಧನುಸ್ಸಿಗೆ ಹೆದೆಯೇರಿಸು. ಆಗ ನನಗೆ ಸಮಬಲನಾಗಿ ನೀನು ಗೆಲ್ಲುವೆ. ಭಯವಾದರೆ ಅಭಯವನ್ನು ಬೇಡು" ಎಂದು ಪರಶುರಾಮನು ಹೀಯಾಳಿಸಲು ರಾಘವನು ಬಿಲ್ಲು ಹಿಡಿಯುವುದೇ ಸರಿಯಾದ ಉತ್ತರವೆಂದು ಭಾವಿಸಿ ಧನುಸ್ಸನ್ನು ತೊಡುವನು. ಪರಶುರಾಮನ ತೇಜಸ್ಸು ಕಡಿಮೆಯಾಗುವುದು. ಅದನ್ನು ಕಂಡು ರಾಘವನು "ಬ್ರಾಹ್ಮಣನಾದುದರಿಂದ ನಿನ್ನನ್ನು ಕೊಲ್ಲಲಾರೆನು. ಈ ಬಾಣದಿಂದ ನಿನ್ನ ಸಂಚಾರಶಕ್ತಿಯನ್ನು ತಡೆಯಲೋ ಪುಣ್ಯಲೋಕಪ್ರಾಪ್ತಿಯನ್ನು ನೀಗಲೋ?" ಎಂದು ಅವನನ್ನು ಕೇಳುವನು. ಪರಶುರಾಮನು ಹೀಗೆ ಉತ್ತರಕೊಡುವನು —"ನೀನು ಪುರಾಣ ಪುರುಷನೆಂದು ನಾನು ತಿಳಿಯದೆ ಇಲ್ಲ. ಭೂಮಿಯಲ್ಲವತರಿಸಿದಾಗ ನಿನ್ನ ವೈಷ್ಣವ ತೇಜಸ್ಸನ್ನು ನೋಡಲೆಳಸಿ ನಿನ್ನನ್ನು ಹೀಗೆ ರೇಗಿಸಿದೆನು. ನನಗೆ ಪರಮೇಷ್ಠಿಯಾದ ನಿನ್ನ ಕೈಯಲ್ಲಿ ಸೋಲೂ ಶ್ಲಾಘ್ಯವೇ ಆಗಿದೆ. ನನಗೆ ಸ್ವರ್ಗದಾಸೆಯಿಲ್ಲ. ಪುಣ್ಯತೀರ್ಥಗಳಿಗೆ ಹೋಗಲನುಕೂಲಿಸುವಂತೆ ನನ್ನ ಸಂಚಾರ ಶಕ್ತಿಯನ್ನುಳಿಸು." ಇದಕ್ಕೊಪ್ಪಿ ರಾಘವನು ಪೂರ್ವದಿಕ್ಕಿಗೆ ಬಾಣವನ್ನು ಬಿಡಲಾಗಿ ಅದು ಭಾರ್ಗವನ ಸ್ವರ್ಗದ ದಾರಿಗೆ ಅಡ್ಡವಾಗುವುದು. ರಾಘವನು ಆ ತಪೋನಿಧಿಯ ಕಾಲಿಗೆರಗುವನು. ಬಲಿಷ್ಠರು ಸೋತ ಶತ್ರುವಿಗೆ ನಮಸ್ಕರಿಸುವುದೂ ಕೀರ್ತಿಗೆ ಕಾರಣವಾಗುವುದು.

## ಹನ್ನೆರಡನೆಯ ಸರ್ಗ

ಕೈಕೆಯ ಹೆದರಿಕೆಯಿಂದಲೋ ಎಂಬಂತೆ ಮುಪ್ಪು ದಶರಥನ ಬಳಿಗೆ ಬಂದು "ರಾಮನಲ್ಲಿ ರಾಜ್ಯಲಕ್ಷ್ಮಿಯನ್ನಿಡು" ಎಂಬುದಾಗಿ ಕಿವಿಯಲ್ಲಿ ಹೇಳಿತಂತೆ. ಅದಕ್ಕೆ ತಕ್ಕಂತೆ ದಶರಥನು ರಾಮನಿಗೆ ರಾಜ್ಯಾಭಿಷೇಕಮಾಡಲೆಳಸುವನು. ವರ್ತಮಾನವು ಜನರನ್ನು ಮುಟ್ಟಿ ಸಂತೋಷಗೊಳಿಸುವುದು. ಆಗ ಕ್ರೂರನಿಶ್ಚಯಳಾದ ಕೈಕೆಯು ತನಗೆ ಬರಬೇಕಾಗಿದ್ದ ಎರಡು ವರಗಳನ್ನು ಕೇಳಿ ರಾಮನಿಗೆ ಹದಿನಾಲ್ಕು ವರುಷ ವನವಾಸವನ್ನೂ ಭರತನಿಗೆ ರಾಜ್ಯಾಭಿಷೇಕವನ್ನೂ ಅಪೇಕ್ಷಿಸುವಳು. 'ರಾಜ್ಯವನ್ನು ಹೊಂದು' ಎಂಬ ಆಜ್ಞೆಯನ್ನು ಅಳುತ್ತ ಸ್ವೀಕರಿಸಿದ್ದರೆ 'ಕಾಡಿಗೆ ಹೋಗು' ಎಂಬ ಅನುತರದ

ಅಪ್ಪಣೆಯನ್ನು ರಾಮನು ಸಂತೋಷದಿಂದ ಸ್ವೀಕರಿಸುವನು. ಮಂಗಳವಸ್ತ್ರವನ್ನುಟ್ಟಾಗಲೂ ನಾರುಮಡಿಯನ್ನುಟ್ಟಾಗಲೂ ಒಂದೇ ವಿಧವಾಗಿದ್ದ ರಾಮನ ಮುಖದ ಕಳೆಯನ್ನು ನೋಡಿ ಜನರು ವಿಸ್ಮಿತರಾಗುವರು. ಸೀತಾಲಕ್ಷ್ಮಣರೊಡನೆ ರಾಮನು ಕಾಡನ್ನೂ ಸತ್ಪುರುಷರ ಹೃದಯವನ್ನೂ ಏಕಕಾಲದಲ್ಲೇ ಪ್ರವೇಶಿಸುವನು. ಪುತ್ರವಿಯೋಗಪೀಡಿತನಾಗಿ ದಶರಥನು ಶಾಪವನ್ನು ನೆನೆಯುತ್ತ ಮೃತಿಹೊಂದುವನು. ರಾಜರಿಲ್ಲದೆ ರಾಜ್ಯವನ್ನು ಶತ್ರುಗಳು ಆಶಿಸುವಂತಾಗುವುದು. ಆಗ ಭರತನನ್ನು ಕರೆಯಿಸಿ ನಡೆದುದನ್ನೆಲ್ಲ ತಿಳಿಸಲಾಗಿ ಅವನಿಗೆ ತಾಯಿ, ರಾಜ್ಯ ಎರಡೂ ಬೇಡವಾಗುವುವು. ಸೈನ್ಯಪರಿವಾರದೊಡನೆ ಕಾಡಿನಲ್ಲಿ ರಾಮನನ್ನು ಹುಡುಕಿ ರಾಜ್ಯವನ್ನು ಅವನಿಗೊಪ್ಪಿಸುವನು. ರಾಮನು ಅದನ್ನು ಸ್ವೀಕರಿಸದೆ ಹೋಗಲಾಗಿ ಭರತನು ಅವನ ಪಾದುಕೆಗಳನ್ನು ಪಡೆದು ರಾಜ್ಯಾಧಿಕಾರವನ್ನು ಅವಕ್ಕೆ ಸಮರ್ಪಿಸುವನು. ತಾಯಿಯ ಪಾಪಕ್ಕೆ ಸರಿಯಾದ ಪ್ರಾಯಶ್ಚಿತ್ತದಂತೆ ಭರತನು ರಾಮನಲ್ಲಿ ದೃಢಭಕ್ತಿಯಿಟ್ಟು ನಂದಿಗ್ರಾಮದಲ್ಲಿದ್ದುಕೊಂಡು ರಾಜ್ಯವನ್ನು ರಾಮನ ನ್ಯಾಸದಂತೆ ಕಾಣುತ್ತ ಸಂರಕ್ಷಿಸುವನು.

ತರುಣನಾದರೂ ರಾಮನು ವೈದೇಹಿಯೊಡನೆ ವನ್ಯಾಹಾರಗಳನ್ನು ಸೇವಿಸುತ್ತ ವೃದ್ಧ ಇಕ್ಷ್ವಾಕುಗಳ ವ್ರತವನ್ನಾಚರಿಸುವನು. ಸ್ವಲ್ಪ ಕಾಲದ ಮೇಲೆ ತಪ್ಪುಮಾಡಿದ ಕಾಕಾಸುರನ ಕಣ್ಣನ್ನು ಕುಕ್ಕಿ ರಾಮನು ಚಿತ್ರಕೂಟಕ್ಕೆ ಹೊರಡುವನು. ದಾರಿಯಲ್ಲಿ ವಿರಾಧನ ಸಂಹಾರ ನಡೆಯುವುದು. ಅಗಸ್ತ್ಯರ ಸಲಹೆಯ ಪ್ರಕಾರ ಪಂಚವಟಿಯಲ್ಲಿ ತಂಗಿದಾಗ ಶೂರ್ಪಣಖೆಯು ರಾಮನನ್ನು ಕಾಮಿಸುವಳು. ಕಡೆಗೆ ಇವಳನ್ನು ಲಕ್ಷ್ಮಣನು ವಿರೂಪಗೊಳಿಸಿ ಓಡಿಸಬೇಕಾಗುವುದು. ಶೂರ್ಪಣಖೆಯು ರಾಕ್ಷಸರ ಈ ಮೊದಲನೆಯ ಸೋಲನ್ನು ಖರದೂಷಣಮೊದಲಾದವರಿಗೆ ತಿಳಿಸುವಳು. ಕುರೂಪಿಯಾದ ಇವಳನ್ನು ಮುಂದಿಟ್ಟುಕೊಂಡು ಹೊರಟದ್ದೇ ರಾಕ್ಷಸರ ಪರಾಜಯಸೂಚಕವಾದ ಅಮಂಗಳವಾಯಿತು. ಲಕ್ಷ್ಮಣನನ್ನು ಸೀತೆಯ ರಕ್ಷಣೆಗಾಗಿ ನಿಯಮಿಸಿ ರಾಮನು ಯುದ್ಧಮಾಡುವನು. ರಾಕ್ಷಸರ ಕಣ್ಣಿಗೆ ರಾಮನೊಬ್ಬನೇ ತಮ್ಮ ಸೈನ್ಯದಲ್ಲಿದ್ದಷ್ಟು ಜನರಂತೆ ಕಾಣಿಸುವನು. ಖರದೂಷಣತ್ರಿಶಿರರ ಆಯುಸ್ಸನ್ನು ರಾಮಬಾಣಗಳೂ ರಕ್ತವನ್ನು ಪಕ್ಷಿಗಳೂ ಹೀರುವುವು. ಸರಿ, ಈ ಸಂಗತಿ

ರಾವಣನನ್ನೂ ಮುಟ್ಟುವುದು. ಅವನು ಕೋಪಗೊಂಡು ಮೃಗರೂಪಿಯಾದ ಮಾರೀಚನ ಮೂಲಕ ರಾಮಲಕ್ಷ್ಮಣರನ್ನು ವಂಚಿಸಿ ಸೀತೆಯನ್ನಪಹರಿಸುವನು. ಮಾರ್ಗದಲ್ಲಿ ಜಟಾಯುವೂ ರಾವಣನನ್ನೆದುರಿಸಿ ಯುದ್ಧಮಾಡಿ ಸೋಲುವನು. ಸೀತೆಯನ್ನು ಹುಡುಕುತ್ತಾ ಬಂದ ರಾಮಲಕ್ಷ್ಮಣರಿಗೆ ರಾವಣನ ಮೋಸವನ್ನು ತಿಳಿಸಿ ಜಟಾಯು ಸಾಯುವನು. ರಾಮಲಕ್ಷ್ಮಣರು ಜಟಾಯುವಿಗೆ ಅಂತ್ಯಕ್ರಿಯೆಗಳನ್ನು ನಡೆಸುವರು.

ಅನಂತರ ಕಬಂಧನ ಶಾಪವಿಮೋಚನೆಯಾಗುವುದು. ಕಬಂಧನು ಸುಗ್ರೀವನೊಡನೆ ಸ್ನೇಹ ಬೆಳೆಸಬೇಕೆಂದು ರಾಮಲಕ್ಷ್ಮಣರಿಗೆ ಸೂಚಿಸುವನು. ಅದೇ ಪ್ರಕಾರ ರಾಮನು ವಾಲಿಯನ್ನು ಕೊಂದು ಸುಗ್ರೀವನ ಸ್ನೇಹ ಬೆಳೆಸಲಾಗಿ ಅವನ ಅಪ್ಪಣೆಯಂತೆ ಸೀತೆಯನ್ನು ಹುಡುಕುವುದಕ್ಕೆ ಕಪಿಗಳನ್ನು ಎಲ್ಲ ಕಡೆಗಳಿಗೂ ಕಳುಹಿಸಲಾಗುವುದು. ಸಂಪಾತಿಯಿಂದ ಸೀತಾವೃತ್ತಾಂತವು ತಿಳಿದಮೇಲೆ ಮಮಕಾರವನ್ನು ಬಿಟ್ಟವನು ಸಂಸಾರವನ್ನು ದಾಟುವಂತೆ ಮಾರುತಿಯು ಸಾಗರವನ್ನು ದಾಟಿ ಸೀತೆಯನ್ನು ಪತ್ತೆಮಾಡುವನು. ವಿಷಲತೆಗಳಿಂದ ಸುತ್ತಿದ ಮಹೌಷಧಿಯಂತಿದ್ದ ಸೀತೆಯನ್ನು ಕಂಡು ಅವಳಿಗೆ ರಾಮನ ಮುದ್ರೆಯುಂಗುರವನ್ನು ಕೊಟ್ಟು ಪ್ರಿಯವರ್ತಮಾನವನ್ನು ತಿಳಿಸುವನು. ಅನಂತರ ಲಂಕೆಯನ್ನೆಲ್ಲ ಲೂಟಿಮಾಡಿ ಅಕ್ಷಕುಮಾರನನ್ನು ಕೊಂದು ಊರಿಗೆಲ್ಲ ಬೆಂಕಿ ಹತ್ತಿಸಿ ವಾಪಸುಬರುವನು. ಸೀತೆಯು ಕೊಟ್ಟ ಉಂಗುರವನ್ನು ರಾಮನಿಗೆ ತಲಪಿಸಿದಾಗ ರಾಮನು ಸಂತೋಷಗೊಂಡು ಉತ್ಸಾಹಭರಿತನಾಗಿ ಶತ್ರುನಾಶಕ್ಕಾಗಿ ಸನ್ನಾಹಮಾಡುವನು. ಕಪಿಸೈನ್ಯಗಳೊಡನೆ ಸಮುದ್ರತೀರದಲ್ಲಿ ಬಿಡಾರಮಾಡಿದ್ದಾಗ ರಾಕ್ಷಸಲಕ್ಷ್ಮಿಯನ್ನುದ್ಧಾರಮಾಡಲೆಳಸಿ ವಿಭೀಷಣನು ಬರುವನು. ಅವನಿಗೆ ರಾಕ್ಷಸರಾಜ್ಯಾಧಿಪತ್ಯವನ್ನು ವಾಗ್ದಾನಮಾಡಿ, ರಾಮನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಲಂಕೆಯನ್ನು ಮುತ್ತುವನು. ದೊಡ್ಡಯುದ್ಧ ನಡೆಯುವುದು. ಇಂದ್ರಜಿತ್ತಿನ ಬಾಣದಿಂದ ರಾಮಲಕ್ಷ್ಮಣರು ಕ್ಷಣಕಾಲ ಮೂರ್ಛೆಹೊಂದುವರು. ಹನುಮಂತನು ಮಹೌಷಧಿಯನ್ನು ತಂದು ಅವರನ್ನುಜ್ಜೀವಿಸುವನು. ಕುಂಭಕರ್ಣ, ಮೇಘನಾದ ಮೊದಲಾದ ಶತ್ರುಪಕ್ಷದ ವೀರರೆಲ್ಲರೂ ಮಡಿಯುವರು. ರಾವಣನೇ ಯುದ್ಧಕ್ಕೆ ನಿಲ್ಲಬೇಕಾಗುವುದು. ಇಂದ್ರನು ರಾಮನಿಗೆ ಜೈತ್ರವೆಂಬ ರಥವನ್ನು ಸಜ್ಜು

ಗೊಳಿಸುವನು. ಮಾತಲಿಯು ಕವಚವನ್ನು ತೊಡಿಸುವನು. ರಾಮರಾವಣರಿಗೆ ಅಸಾಧಾರಣವಾದ ಯುದ್ಧ ನಡೆದು ರಾವಣನ ತಲೆಗಳ ಸಾಲು ಉರುಳಿ ಬೀಳುವುದು. ರಾಮನು ಅಗ್ನಿಶುದ್ಧಳಾದ ಸೀತೆಯನ್ನು ಪರಿಗ್ರಹಿಸಿ ವಿಭೀಷಣನಿಗೆ ಪಟ್ಟಕಟ್ಟಿ ಎಲ್ಲರೊಡನೆ ವಿಮಾನದಲ್ಲಿ ಅಯೋಧ್ಯೆಗೆ ಹಿಂದಿರುಗುವನು.

## ಹದಿಮೂರನೆಯ ಸರ್ಗ

ವಿಮಾನದಲ್ಲಿ ಕುಳಿತು ಬರುವಾಗ ಸಮುದ್ರದ ಸೌಂದರ್ಯವನ್ನು ಅನುಭವಿಸುತ್ತ ರಾಮನು ಅದರ ಸೊಬಗನ್ನು ಸೀತೆಗೆ ವರ್ಣಿಸಿ ಹೇಳುವನು.[1] ಮಾರ್ಗದಲ್ಲಿ ಸಿಕ್ಕುವ ಸ್ಥಳಗಳನ್ನೆಲ್ಲ ಹಿಂದಿನ ನೆನಪುಗಳೊಡನೆ ವರ್ಣಿಸುತ್ತ ದಾಟಿ ವಿಮಾನವು ಭರತಾದಿಗಳೆದುರಿನಲ್ಲಿ ಇಳಿಯುವುದು. ರಾಮನು ವಸಿಷ್ಠರಿಗೆ ನಮಸ್ಕರಿಸಿ ಭರತನನ್ನಪ್ಪಿಕೊಂಡು ವೃದ್ಧಮಂತ್ರಿಗಳನ್ನು ಪ್ರೀತಿಯಿಂದ ಮಾತನಾಡಿಸುವನು. ಭರತನಿಗೆ ವಿಭೀಷಣ ಮತ್ತು ಸುಗ್ರೀವರ ಪರಿಚಯವನ್ನು ರಾಮನೇ ಮಾಡಿಸುವನು. ಆನಂತರ ಭರತನು ಸೀತೆಗೆ ನಮಸ್ಕರಿಸುವನು. ಲಂಕೇಶ್ವರನ ನಮಸ್ಕಾರವನ್ನು ತಿರಸ್ಕರಿಸಿ ಪತಿವ್ರತಾಧರ್ಮವನ್ನು ರಕ್ಷಿಸಿದ್ದ ಸೀತೆಯ ಪಾದಗಳಿಗೂ ಅಣ್ಣನ ಮಾರ್ಗವನ್ನನುಸರಿಸಿ ಜಟೆಯನ್ನು ಧರಿಸಿದ್ದ ಭರತನ ತಲೆಗೂ ಉಂಟಾದ ಸಂಪರ್ಕವು ಪರಸ್ಪರ ಪರಿಶುದ್ಧಿಗೆ ಕಾರಣವಾಗುವುದು. ರಾಮನು ತಮ್ಮಂದಿರೊಡನೆ ವಿಮಾನವನ್ನೇರಿ ಅಯೋಧ್ಯೆಗೆ ಬಂದು ಶತ್ರುಘ್ನನು ಸಿದ್ಧಪಡಿಸಿದ್ದ ಉಪವನದ ಗೂಡಾರದಲ್ಲಿ ತಂಗುವನು.

## ಹದಿನಾಲ್ಕನೆಯ ಸರ್ಗ

ರಾಮಲಕ್ಷ್ಮಣರು ಶೋಚನೀಯಾವಸ್ಥೆಗೆ ಗುರಿಯಾಗಿದ್ದ ತಾಯಿಯರನ್ನು ಕಾಣುವರು. ಪುತ್ರರು ನಮಸ್ಕರಿಸಿದಾಗ ತಾಯಿಯರ ಕಣ್ಣುಗಳಲ್ಲಿ ನೀರು ತುಂಬಿಕೊಂಡು ದೃಷ್ಟಿಯು ಮಂಕಾಗುವುದು. ಮಕ್ಕಳನ್ನು ಕಂಡ ಆನಂದದಿಂದ ಅವರ ದುಃಖವು ಸ್ವಲ್ಪ ಕಡಿಮೆಯಾದಂತಾಗುವುದು. ರಾಮ

---

1. ಈ ವರ್ಣನೆ ಬಹಳ ವಿಸ್ತಾರವಾಗಿಯೂ ರಮ್ಯವಾಗಿಯೂ ಇದೆ. ಅದರ ಅನುವಾದಕ್ಕಾಗಲೀ ಸಂಗ್ರಹಕ್ಕಾಗಲೀ ಸ್ಥಳಾವಕಾಶ ಸಾಲದೆ ಇದ್ದುದರಿಂದ ಬಿಡಬೇಕಾಗಿದೆ.

ಲಕ್ಷ್ಮಣರ ಮೈಮೇಲಿನ ಗಾಯದ ಗುರುತುಗಳನ್ನು ನೋಡಿದಾಗ ಕ್ಷತ್ರಿಯಾಂಗನೆಯರೆಳಸುವ 'ವೀರಮಾತೆ' ಯೆಂಬ ಕೀರ್ತಿಯೂ ಅವರಿಗೆ ಬೇಡವೆನ್ನಿಸುವುದು. ಸೀತೆಯು ನಮಸ್ಕರಿಸಿದಾಗ ಅವರು "ಏಳು, ಮಗಳೇ, ಅನುಜಸಹಿತನಾದ ನಿನ್ನ ಗಂಡನು ಮಹಾವಿಪತ್ತಿನಿಂದ ಪಾರಾದುದು ನಿನ್ನ ಶುದ್ಧಶೀಲದಿಂದಲೇ" ಎಂದು ಪ್ರಿಯವಾದರೂ ಸುಳ್ಳಲ್ಲದ ಮಾತನ್ನಾಡುವರು. ಅಮಾತ್ಯವೃದ್ಧರು ಪಟ್ಟಾಭಿಷೇಕಕ್ಕೆ ಸಿದ್ಧಪಡಿಸುವರು. ತಾಪಸವೇಷದಲ್ಲೇ ಸುಂದರನಾಗಿದ್ದ ರಾಮನು ರಾಜವೇಷದಲ್ಲಿ ಮತ್ತೂ ಸುಂದರನಾಗಿ ಕಾಣುವನು. ಪುಣ್ಯೋದಕದಿಂದ ಅಭಿಷೇಕವಾದನಂತರ ರಾಮನು ಸೇನಾಸಮೇತನಾಗಿ ಅಲಂಕೃತವಾದ ರಾಜಧಾನಿಯನ್ನು ಪ್ರವೇಶಿಸುವನು. ಭರತನು ಛತ್ರವನ್ನು ಹಿಡಿಯುವನು. ಲಕ್ಷ್ಮಣ ಶತ್ರುಘ್ನರು ಚಾಮರವನ್ನು ಬೀಸುವರು. ಅತ್ತೆಯರಿಂದ ಅಲಂಕಾರಮಾಡಿಸಿಕೊಂಡು ಸೀತೆಯು ಪಲ್ಲಕ್ಕಿಯಲ್ಲಿ ಕುಳಿತು ಬರುವಾಗ ಸಾಕೇತನಾರಿಯರೆಲ್ಲ ಕೈಮುಗಿಯುವರು. ಅರಮನೆಯಲ್ಲಿ ಸಂಭ್ರಮವೋ ಸಂಭ್ರಮ. ಬಂಧುಗಳನ್ನೆಲ್ಲ ಉಚಿತವಾಗಿ ಸತ್ಕರಿಸಿ ರಾಮನು ತಂದೆಯ ಚಿತ್ರವು ಇಡಲ್ಪಟ್ಟಿದ್ದ ಮಂದಿರಕ್ಕೆ ಹೋಗುವನು. ತಂದೆಯ ಚಿತ್ರವನ್ನು ನೋಡಿ ಅವನ ಕಣ್ಣುಗಳಿಂದ ನೀರು ಸುರಿಯುವುದು. ರಾಮನು ಕೈಕೆಯನ್ನು ಕುರಿತು "ಅಮ್ಮ, ನಮ್ಮ ತಂದೆಯು ಸತ್ಯವನ್ನು ಕೈಬಿಡದಿದ್ದುದು ನಿನ್ನ ಪುಣ್ಯ" ಎಂದು ಕೈಮುಗಿದು ಬಿನ್ನವಿಸುವನು. ಪಟ್ಟಾಭಿಷೇಕಕ್ಕಾಗಿ ಬಂದಿದ್ದ ಅತಿಥಿಗಳೆಲ್ಲ ಸಾವಕಾಶವಾಗಿ ಹಿಂದಿರುಗುವರು. ರಾಜ್ಯಾಭಿಷೇಕವಾದಮೇಲೆ ರಾಮನು ಸದುಪದೇಶವನ್ನು ಮಾಡುವ ತಂದೆಯಂತೆಯೂ ಕ್ಲೇಶವನ್ನು ಪರಿಹರಿಸುವ ಮಗನಂತೆಯೂ ಪ್ರಜೆಗಳನ್ನು ಪಾಲಿಸುವನು. ಎಲ್ಲರಲ್ಲಿಯೂ ಅವನಿಗೆ ಸಮಪ್ರೀತಿ. ರಾಜಕಾರ್ಯಗಳಲ್ಲಿ ಶ್ರದ್ಧೆ; ಜಾಗರೂಕತೆ. ಸೀತೆಯೊಡನೆ ಆಗಾಗ ವಿಹಾರ. ಹಿಂದೆ ಅನುಭವಿಸಿದ ಕ್ಲೇಶಗಳೆಲ್ಲ ಈಗ ನೆನಪಿಗೆ ಬಂದು ಸುಖವನ್ನು ಕೊಡುವುವು. ಸೀತೆಯು ಗರ್ಭವನ್ನು ಧರಿಸಿ ರಾಮನಿಗೆ ಇನ್ನೂ ಹೆಚ್ಚಿನ ಸಂತೋಷವನ್ನುಂಟುಮಾಡುವಳು. ಅವಳು ನಾಚುತ್ತಿದ್ದರೂ ರಾಮನು ಗುಟ್ಟಾಗಿ ಅವಳ ಬಯಕೆಯನ್ನು ಕೇಳುವನು. ಗಂಗಾತೀರದ ತಪೋವನಗಳಿಗೆ ಸೀತೆಯು ಹೋಗಲೆಳಸಿದುದನ್ನು ತಿಳಿದು ಅದನ್ನು ನಡೆಸುವುದಾಗಿ ಮಾತುಕೊಡುವನು.

ಹೀಗಿರುವಲ್ಲಿ ಒಂದು ದಿನ ರಾಮನು ರಾಮಭದ್ರನೆಂಬ ಗೂಢಚಾರನನ್ನು ಕರೆದು ತನ್ನ ವಿಷಯದಲ್ಲಿ ಪ್ರಜೆಗಳಿಗಿದ್ದ ಭಾವನೆಯನ್ನು ತಿಳಿಯಲೆಳಸುವನು. ಬಹಳ ನಿರ್ಬಂಧಪಡಿಸಿದಮೇಲೆ ಗೂಢಚಾರನು "ರಾಕ್ಷಸನ ಮನೆಯಲ್ಲಿದ್ದ ಸೀತೆಯನ್ನು ಪರಿಗ್ರಹಿಸಿದುದು ಹೊರತು ಉಳಿದ ತಮ್ಮ ಎಲ್ಲ ನಡತೆಯನ್ನೂ ಪೌರರು ಸ್ತುತಿಸುವರು" ಎಂದು ಹೇಳುವನು. ಈ ಅಪಕೀರ್ತಿಯು ರಾಮನ ಹೃದಯವನ್ನು ಸೀಳುವುದು. ಅಪವಾದವನ್ನು ಉಪೇಕ್ಷಿಸುವುದೇ? ನಿರ್ದುಷ್ಟಳಾದ ಹೆಂಡತಿಯನ್ನು ಬಿಡುವುದೇ? ಯಾವುದನ್ನೂ ನಿಶ್ಚಯಿಸಲು ಸಾಧ್ಯವಿಲ್ಲದೆ ಅವನ ಮನಸ್ಸು ತೊಳಲುವುದು. ಕಡೆಗೆ ಅವನು ಪತ್ನೀಪರಿತ್ಯಾಗವನ್ನೇ ಸಂಕಲ್ಪಿಸುವನು. ಯಶೋಧನರಿಗೆ ಪತ್ನಿ ಮೊದಲಾದ ಇಂದ್ರಿಯಾರ್ಥಗಳಿರಲಿ, ತಮ್ಮ ದೇಹಕ್ಕಿಂತಲೂ ಯಶಸ್ಸೇ ದೊಡ್ಡದು. ರಾಮನು ತಮ್ಮಂದಿರನ್ನು ಬರಮಾಡಿ ಅವರೊಡನೆ ಹೀಗೆ ಶೋಕಿಸುವನು. "ಸೂರ್ಯನಿಂದ ಹುಟ್ಟಿದ ರಾಜರ್ಷಿವಂಶಕ್ಕೆ ಸದ್ವೃತ್ತನಾದ ನನ್ನಿಂದಲೇ ಎಂತಹ ಕಳಂಕವು ಪ್ರಾಪ್ತವಾಯಿತು! ಅಲೆಗಳ ಮಧ್ಯದಲ್ಲಿ ಬಿದ್ದ ತೈಲ ಬಿಂದುವನ್ನು ಹೇಗೋ ಹಾಗೆ ಪೌರರಲ್ಲಿ ಹರಡಿಕೊಳ್ಳುವ ಈ ಮೊದಲನೆಯ ಅಪವಾದವನ್ನೂ ನಾನು ಸಹಿಸಲಾರೆ. ಹಿಂದೆ ತಂದೆಯ ಅಪ್ಪಣೆಯ ಪ್ರಕಾರ ಭೂಮಿಯನ್ನು ಬಿಟ್ಟಂತೆ ಈಗಲೂ ಫಲಪ್ರಾಪ್ತಿಯು ಸನ್ನಿಹಿತವಾಗಿರುವಾಗ ಸೀತೆಯನ್ನು ಬಿಡಲಿರುವೆನು. ಅವಳು ಶುದ್ಧಳೆಂದು ನನಗೆ ಗೊತ್ತು. ಆದರೆ ಲೋಕಾಪವಾದವು ಪ್ರಬಲ. ಶುದ್ಧನಾದ ಚಂದ್ರನಲ್ಲೂ ಜನರು ಆರೋಪಿಸುವ ಕಳಂಕ ಭೂಮಿಯ ನೆರಳು ಮಾತ್ರ! ರಾಕ್ಷಸವಧ ಮೊದಲಾದ ನನ್ನ ಪ್ರಯಾಸವೆಲ್ಲ ವ್ಯರ್ಥವಲ್ಲ. ಅದು ಸೇಡು ತೀರಿಸಿಕೊಳ್ಳುವುದಕ್ಕಾಗಿ ನಡೆಸಿದುದು. ಕೋಪಗೊಂಡ ಸರ್ಪವು ತುಳಿದವರನ್ನು ಕಚ್ಚುವುದು ಅವರ ರಕ್ತವನ್ನು ಕುಡಿಯುವುದಕ್ಕೆ? ಅಪವಾದವು ಹೋಗಿ ನಾನು ಬದುಕಿರಬೇಕೆಂಬ ಆಸೆ ನಿಮಗಿದ್ದರೆ ನನ್ನ ಈ ಸಂಕಲ್ಪವನ್ನು ನಿರೋಧಿಸಬೇಡಿ." ಹೀಗೆಂದು ಹೇಳಿ ಲಕ್ಷ್ಮಣನನ್ನು ಮಾತ್ರ ಬೇರೆ ಕಡೆಗೆ ಕರೆದು ಸೀತೆಯನ್ನು ಕಾಡಿಗೆ ಕಳುಹಿಸುವುದಕ್ಕೆ ಅವನ ನೆರವನ್ನು ಕೋರುವನು. ಹಿಂದೆ ಅವಳಾಡಿದ್ದ ಬಯಕೆಯ ವಿಚಾರವನ್ನು ಅವನಿಗೆ ತಿಳಿಸಿ ಆ ನೆಪದಿಂದ ಸೀತೆಯನ್ನು ವಾಲ್ಮೀಕಿಯ ಆಶ್ರಮದಲ್ಲಿ ಬಿಟ್ಟುಬರುವಂತೆ ಆಜ್ಞಾಪಿಸುವನು. ಪರಶು

ರಾಮನು ತಾಯಿಯ ವಿಷಯದಲ್ಲಿ ತಂದೆಯ ಆಜ್ಞೆಯನ್ನು ಗೌರವಿಸಿದಂತೆ ಲಕ್ಷ್ಮಣನು ಅಣ್ಣನ ಅಪ್ಪಣೆಯನ್ನು ಸ್ವೀಕರಿಸುವನು. ಹಿರಿಯರ ಅಪ್ಪಣೆಯನ್ನು ವಿಮರ್ಶಿಸಬಹುದೆ?

ಲಕ್ಷ್ಮಣನು ಸೀತೆಯನ್ನು ರಥದಲ್ಲಿ ಕರೆದೊಯ್ಯುವನು. ತನಗೆ ಪ್ರಿಯವಾದುದನ್ನೇ ಗಂಡನು ನಡೆಸುತ್ತಿರುವನೆಂದು ಸೀತೆಗೆ ಸಂತೋಷ! ಆದರೆ ತನ್ನ ವಿಷಯದಲ್ಲಿ ಅವನೀಗ ಹಿಂದಿನಂತೆ 'ಕಲ್ಪವೃಕ್ಷ'ವಲ್ಲ; 'ಕತ್ತಿಯ ಅಲುಗು' ಎಂಬುದನ್ನು ಅವಳರಿಯಳು. ಅವಳ ಬಲಗಣ್ಣು ಅದಿರಿ ಮುಂದೆ ಬರಲಿದ್ದ ಮಹಾಶೋಕವನ್ನು ಸೂಚಿಸುವುದು. ಕೂಡಲೆ ಸೀತೆಯು ಅನುಜ ಸಹಿತನಾದ ದೊರೆಗೆ ಮಂಗಳವಾಗಲೆಂದು ಆಶಿಸುವಳು! ಎದುರಿಗೆ ಕಾಣಿಸುತ್ತಿದ್ದ ಗಂಗೆಯು ಅಲೆಗಳೆಂಬ ಕೈಗಳಿಂದ ಲಕ್ಷ್ಮಣನನ್ನು ತಡೆಯುವಂತೆ ತೋರಿತು. ಲಕ್ಷ್ಮಣನು ರಥವನ್ನು ನಿಲ್ಲಿಸಿ ಅತ್ತಿಗೆಯೊಡನೆ ದೋಣಿಯಲ್ಲಿ ನದಿಯನ್ನು ದಾಟುವನು. ತೊದಲುತ್ತಿದ್ದ ನಾಲಿಗೆಯನ್ನು ಬಹಳ ಶ್ರಮದಿಂದ ಸರಿಪಡಿಸಿಕೊಂಡು ಪ್ರಳಯಕಾಲದ ಕಲ್ಲುಮಳೆಯಂತೆ ಕಠಿನವಾದ ದೊರೆಯ ಅಪ್ಪಣೆಯನ್ನು ಲಕ್ಷ್ಮಣನು ಅವಳಿಗೆ ಹೇಳುವನು. ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಹೂಗಳುದುರಿ ಕೆಳಗೆ ಬೀಳುವ ಬಳ್ಳಿಯಂತೆ ಕ್ಲೇಶಕ್ಕೀಡಾದ ಸೀತೆಯು ತಟ್ಟನೆ ಭೂಮಿಯನ್ನಾಶ್ರಯಿಸುವಳು. ಅವಳ ಶರೀರಕ್ಕೆ ಭೂಮಿಯೇ ಮೂಲವಷ್ಟೆ! "ಇಕ್ಷ್ವಾಕುವಂಶದಲ್ಲಿ ಹುಟ್ಟಿ ಆರ್ಯವೃತ್ತನಾದ ಗಂಡನು ಕಾರಣವಿಲ್ಲದೆ ಇವಳನ್ನು ಬಿಟ್ಟಿರಲಾರ"ನೆಂದು ಸಂದೇಹಪಟ್ಟವಳಂತೆ ಭೂಮಿತಾಯಿಯು ಅವಳಿಗೆ ಮೊದಲು ಅವಕಾಶ ಕೊಡಲಿಲ್ಲವಂತೆ! ಮೂರ್ಛಿತಳಾಗಿದ್ದಾಗ ದುಃಖವನ್ನರಿಯದೆ ಪ್ರಜ್ಞೆ ಬಂದಮೇಲೆ ಅವಳು ಒಳಗೇ ದುಃಖಿಸುವಳು. ಲಕ್ಷ್ಮಣನು ಪ್ರಯತ್ನಪಟ್ಟು ಪ್ರಜ್ಞೆ ಬರಿಸಿದರೂ ಮೂರ್ಛೆಗಿಂತ ಪ್ರಬೋಧ (ಎಚ್ಚರ) ವೇ ಕ್ಲೇಶಕರವಾಗುವುದು. ತಪ್ಪಿಲ್ಲದಿದ್ದರೂ ನಿರಾಕರಿಸಿದ ಗಂಡನಮೇಲೆ ಯಾವ ದೋಷವನ್ನೂ ಆರೋಪಿಸದೆ ಸೀತೆಯು ತನ್ನನ್ನೇ ಜರಿದುಕೊಳ್ಳುವಳು. ಲಕ್ಷ್ಮಣನು ಅವಳನ್ನು ಸಂತೈಸಿ ವಾಲ್ಮೀಕಿಯ ಆಶ್ರಮಕ್ಕೆ ದಾರಿತೋರಿಸುತ್ತ "ದೇವಿ, ಸ್ವಾಮಿಯ ಅಧೀನನಾಗಿ ನಾನು ತೋರಿಸುತ್ತಿರುವ ಕ್ರೌರ್ಯವನ್ನು ಕ್ಷಮಿಸು" ಎಂದು ನಮಸ್ಕರಿಸುವನು. ಸೀತೆಯು 'ನಿನ್ನ ನಡತೆಗೆ ಮೆಚ್ಚಿರುವೆನು; ಹೆಚ್ಚು ಕಾಲ

ಬಾಳು' ಎಂದು ಅವನನ್ನಾಶೀರ್ವದಿಸಿ ಒಂದು ಸಂದೇಶವನ್ನು ಕಳುಹಿಸು ವಳು. ಅತ್ತೆಯರಿಗೆಲ್ಲ ಕ್ರಮವಾಗಿ ನಮಸ್ಕಾರಗಳನ್ನು ಸಲ್ಲಿಸಿ ತನ್ನ ಗರ್ಭ ದಲ್ಲಿರುವ ಅವರ ಮಗನ ಸಂತತಿಯನ್ನು ಆಶೀರ್ವದಿಸಬೇಕೆಂದು ಬಿನ್ನವಿಸು ವಳು. "ಕಣ್ಣೆದುರಿಗೆ ಅಗ್ನಿಯಲ್ಲಿ ಶುದ್ಧಳಾಗಿದ್ದರೂ ಲೋಕಾಪವಾದಕ್ಕೆ ಹೆದರಿ ನನ್ನನ್ನು ಬಿಟ್ಟುದು ನಿನ್ನ ಜ್ಞಾನಕ್ಕೂ ಕುಲಕ್ಕೂ ತಕ್ಕುದೊ?........ ಒಂದು ವೇಳೆ ಸನ್ಮತಿಯಾದ ನಿನ್ನ ಈ ಕಾರ್ಯವನ್ನು ಕಾಮಚಾರವೆನ್ನ ಲಾಗದು. ಇದು ನನ್ನ ಪೂರ್ವಜನ್ಮದ ಪಾಪಗಳ ಫಲವಿರಬೇಕು........ ಹಿಂದೆ ನಿನ್ನನ್ನೆಳಸಿ ಬಂದ ರಾಜ್ಯಲಕ್ಷ್ಮಿಯನ್ನು ಬಿಟ್ಟು ನೀನು ನನ್ನೊಡನೆ ಕಾಡಿಗೆ ಬಂದೆ. ಅದಕ್ಕೆ ಈಗ ನಿನ್ನ ಮನೆಯಲ್ಲಿ ನಾನಿರುವುದನ್ನು ಅವಳು ಸಹಿಸಲಿಲ್ಲವೇನೋ! ........ರಾಕ್ಷಸರು ತಪಸ್ವಿಗಳನ್ನು ಪೀಡಿಸಿದಾಗ ಅವರ ಪತ್ನಿಯರಾದ ತಪಸ್ವಿನಿಯರಿಗೆಲ್ಲ ನಿನ್ನ ಪ್ರಸಾದದಿಂದ ಆಶ್ರಯವಾಗಿದ್ದು ಈಗ ನೀನೆ ಬದುಕಿರುವಾಗ ಮತ್ತಾರ ಶರಣು ಹೋಗಲಿ?........ ಜೀವವನ್ನೇ ತೊರೆಯೋಣವೆಂದರೆ ಈ ಸ್ಥಿತಿಯಲ್ಲಿ ಅದೂ ಆಗದು...........ಆದುದರಿಂದ ಪ್ರಸವವಾದಮೇಲೆ ಮುಂದಿನ ಜನ್ಮಕ್ಕೂ ನೀನೇ ಪತಿಯಾಗಿ ಈಗಾದಂತೆ ವಿಯೋಗವಾಗದಿರಲೆಂದು ತಪಸ್ಸುಮಾಡುವೆನು. ವರ್ಣಾಶ್ರಮಪಾಲನೆಯು ದೊರೆಗಳ ಧರ್ಮ. ಆದ್ದರಿಂದ ದೂರವಿದ್ದರೂ ನನ್ನನ್ನು ಸಾಮಾನ್ಯ ತಪಸ್ವಿನಿ ಯೆಂದಾದರೂ ಭಾವಿಸು." ಹೀಗೆಂದು ರಾಮನಿಗೆ ಸಂದೇಶ. ಲಕ್ಷ್ಮಣನು ಇದನ್ನು ಹೊತ್ತು ಕಣ್ಮರೆಯಾದಾಗ ಶೋಕಭಾರದಿಂದ ಸೀತೆಯು ಗಟ್ಟಿ ಯಾಗಿ ಅಳುವಳು. ಇವಳೊಡನೆ ನವಿಲುಗಳು, ಹರಿಣಿಗಳು, ವೃಕ್ಷಗಳು ಎಲ್ಲವೂ ಆಹಾರ ವಿಹಾರಗಳನ್ನು ಬಿಟ್ಟು ರೋದಿಸುವುವು. ಆ ವೇಳೆಗೆ ಬೇಡನು ಪಕ್ಷಿಯನ್ನು ಕೊಂದಾಗ ಮರುಕಗೊಂಡ ವಾಲ್ಮೀಕಿ ಮಹರ್ಷಿಯು ದರ್ಭೆ ಸಮಿತ್ತುಗಳನ್ನು ಹುಡುಕುತ್ತ ಸೀತೆಯ ಅಳುವನ್ನು ಕೇಳಿ ಇವಳಿದ್ದಲ್ಲಿಗೆ ಬರುವನು. ಸೀತೆಯು ಅಳುವನ್ನು ನಿಲ್ಲಿಸಿ ನಮಸ್ಕರಿಸಲಾಗಿ ಋಷಿಯು "ಸುಪುತ್ರನನ್ನು ಪಡೆ" ಎಂದು ಆಶೀರ್ವದಿಸಿ ಆಶ್ರಮಕ್ಕೆ ಕರೆದೊಯ್ಯುವನು. ಅಲ್ಲಿ ಅವಳನ್ನು ಉಚಿತ ರೀತಿಯಲ್ಲಿ ಸಮಾಧಾನಗೊಳಿಸಿ "ಸತ್ಯಪ್ರತಿಜ್ಞನೂ ವಿನೀತನೂ ಆದರೂ ನಿನ್ನ ವಿಷಯದಲ್ಲಿ ಕಾರಣವಿಲ್ಲದೆಯೇ ಪಾಪವನ್ನಾಚರಿ ಸಿದ ಭರತಾಗ್ರಜನಮೇಲೆ ನನಗೆ ಕೋಪವೇ ಸರಿ" ಎಂದು ತನ್ನ ಅಭಿಪ್ರಾಯ

ವನ್ನು ವ್ಯಕ್ತಗೊಳಿಸುವನು. ಅನಂತರ ಅವಳಿಗೊಂದು ಪರ್ಣಶಾಲೆಯನ್ನು ನಿರ್ಮಿಸಿ ಕೆಲವರು ತಾಪಸಿಯರನ್ನು ಕರೆತಂದು ಪರಿಚಯಮಾಡಿಸಿ ಅವಳ ಶುಶ್ರೂಷೆಗೆ ತಕ್ಕ ಏರ್ಪಾಡುಗಳನ್ನು ಮಾಡುವನು.

ಇತ್ತ ಲಕ್ಷ್ಮಣನು ಹಿಂದಿರುಗಿ ಸೀತಾವೃತ್ತಾಂತವನ್ನು ವಿಶದವಾಗಿ ಅಣ್ಣನಿಗೆ ತಿಳಿಸಲು ಅವನ ಕಣ್ಣುಗಳಲ್ಲಿ ನೀರು ತುಂಬಿಕೊಂಡು ದುಃಖವು ಉಕ್ಕಿಬರುವುದು. ಅಪವಾದಕ್ಕೆ ಹೆದರಿ ಸೀತೆಯನ್ನು ಮನೆಯಿಂದೋಡಿಸಿದ್ದರೂ ರಾಮನು ಮನದಿಂದವಳನ್ನು ದೂರಮಾಡಿರಲಿಲ್ಲ. ಶೋಕವನ್ನು ಕಷ್ಟದಿಂದ ತಡೆದುಕೊಂಡು ರಾಮನು ರಾಜ್ಯಭಾರವನ್ನು ನಡೆಸುವನು. ತನ್ನನ್ನು ಬಿಟ್ಟಮೇಲೆ ಬೇರಾವಳನ್ನೂ ರಾಮನು ವರಿಸಲಿಲ್ಲವೆಂದೂ ತನ್ನ ಪ್ರತಿಮೆಯನ್ನೇ ಇಟ್ಟುಕೊಂಡು ಯಾಗಗಳನ್ನು ನಡೆಸಿದನೆಂದೂ ಕೇಳಿ ಸೀತೆಯು ಅತಿ ತೀವ್ರವಾದ ದುಃಖವನ್ನೂ ಸಹಿಸುವಳು.

## ಹದಿನೈದನೆಯ ಸರ್ಗ

ಸ್ವಲ್ಪ ಕಾಲದನಂತರ ಲವಣಾಸುರನ ಹಾವಳಿಯನ್ನು ತಡೆಯಲಾರದೆ ಕೆಲವರು ಋಷಿಗಳು ರಾಮನ ಬಳಿಗೆ ಬಂದು ಅವನ ಸಹಾಯವನ್ನು ಕೋರುವರು. ರಾಮನು ಶತ್ರುಘ್ನನಿಗೆ ಈ ಕೆಲಸವನ್ನು ವಹಿಸುವನು. ಶತ್ರುಘ್ನನು ಋಷಿಗಳೊಡನೆ ಹೊರಟು ವಾಲ್ಮೀಕಿಯ ಆಶ್ರಮದಲ್ಲಿ ಒಂದು ರಾತ್ರಿ ಮಟ್ಟಿಗೆ ತಂಗುವನು. ಅದೇ ರಾತ್ರಿ ಸೀತೆಯು ಅವಳಿ ಗಂಡುಮಕ್ಕಳನ್ನು ಪ್ರಸವಿಸುವಳು. ಶತ್ರುಘ್ನನು ಇದನ್ನು ತಿಳಿದುಕೊಂಡು ಮಾರನೆಯ ದಿನ ಲವಣಾಸುರನ ರಾಜಧಾನಿಯನ್ನು ಸೇರುವನು. ಕೈಯಲ್ಲಿ ಶೂಲ ಧರಿಸಿದ್ದಾಗ ಲವಣನು ದುರ್ಜಯನೆಂದು ಶತ್ರುಘ್ನನು ಅರಿತಿದ್ದನು. ಆದುದರಿಂದ ನಿರಾಯುಧನಾಗಿದ್ದಾಗ ಅವನನ್ನು ಎದುರಿಸಿ ಬಹಳ ಹೊತ್ತು ಹೋರಾಡಿ ಶತ್ರುಘ್ನನು ವೈಷ್ಣವಾಸ್ತ್ರದಿಂದ ಅವನನ್ನು ಕೊಲ್ಲುವನು.

ಇತ್ತ ವಾಲ್ಮೀಕಿಯು ಸೀತಾತನಯರಿಗೆ ಜಾತಕರ್ಮಾದಿಗಳನ್ನು ನಡೆಸುವನು. ಕುಶ, ಲವ ಎಂದು ನಾಮಕರಣವಾಗುವುದು. ಇಬ್ಬರಿಗೂ ಸಾಂಗವಾಗಿ ವೇದಾಭ್ಯಾಸಮಾಡಿಸಿ ಬಾಲ್ಯವು ಕಳೆದಮೇಲೆ ತನ್ನ ಕಾವ್ಯವನ್ನು ವಾಲ್ಮೀಕಿಯು ಅವರಿಗೆ ಕಲಿಸುವನು. ಹುಡುಗರಿಬ್ಬರೂ ರಾಮಚರಿತವನ್ನು

ಹಾಡುತ್ತ ಸೀತೆಯನ್ನು ಸಂತೋಷಗೊಳಿಸುವರು. ಹೀಗೆಯೇ ಲಕ್ಷ್ಮಣ ಮತ್ತು ಇತರರ ಹೆಂಡತಿಯರೂ ಅವಳ ಗಂಡುಮಕ್ಕಳನ್ನು ಹೆರುವರು. ಶತ್ರುಘ್ನನು ಅಯೋಧ್ಯೆಗೆ ಹಿಂದಿರುಗಿದರೂ ವಾಲ್ಮೀಕಿಯ ಆಜ್ಞೆಯಾಗಿದ್ದುದರಿಂದ ಪುತ್ರೋತ್ಸವದ ವಿಚಾರವನ್ನು ಮಾತ್ರ ಅವನಿಗೆ ತಿಳಿಸುವುದಿಲ್ಲ. ಈ ಸಮಯದಲ್ಲಿ ಬ್ರಾಹ್ಮಣನೊಬ್ಬನ ಮಗನು ಅಕಾಲದಲ್ಲಿ ಸಾಯುವನು. ಆ ಬ್ರಾಹ್ಮಣನು ಶವಸಹಿತವಾಗಿ ಅರಮನೆಯ ಹತ್ತಿರಕ್ಕೆ ಬಂದು ತನ್ನ ಮಗನು ಹೀಗೆ ಸತ್ತುದಕ್ಕೆ ರಾಜನ ಅಪಚಾರವೇ ಕಾರಣವೆಂದು ರಾಮನನ್ನು ಜರೆಯುವನು. ರಾಮನಿಗೆ ನಾಚಿಕೆಯಾದಂತಾಗುವುದು. ಆಗ ರಾಜ್ಯದಲ್ಲಿ ಎಲ್ಲೋ ಧರ್ಮವ್ಯತಿರೇಕವಾಗಿರುವುದರಿಂದ ಈ ಅನ್ಯಾಯವು ನಡೆದಿದೆಯೆಂದೂ ಅದನ್ನು ಸರಿಪಡಿಸಿದರೆ ಹುಡುಗನ ಪ್ರಾಣವು ಉಳಿಯುವುದೆಂದೂ ಅಶರೀರ ವಾಕ್ಕು ನುಡಿಯುವುದು. ಈ ಧರ್ಮವ್ಯತಿರೇಕವನ್ನು ರಾಮನೇ ವಿಮಾನದಲ್ಲಿ ಹೊರಟು ಹುಡುಕಲಾಗಿ ಶಂಬುಕನೆಂಬ ಶೂದ್ರನು ಮರದ ಕೊಂಬೆಯಿಂದ ತಲೆಕೆಳಕಾಗಿ ಜೋಲಾಡುತ್ತ ತಪಸ್ಸನ್ನಾಚರಿಸುತ್ತಿದ್ದುದು ಇವನ ಗಮನಕ್ಕೆ ಬರುವುದು. ಕೂಡಲೆ ರಾಮನು ಇವನ ಶಿರಶ್ಛೇದನವನ್ನು ಮಾಡುವನು. ಶಂಬುಕನಿಗೆ ಸದ್ಗತಿ ಸಿಕ್ಕುವುದು. ಬ್ರಾಹ್ಮಣ ಕುಮಾರನ ಪ್ರಾಣವೂ ಹಿಂದಿರುಗುವುದು.

ರಾಮನು ಯಾಗಮಾಡುವನು. ಆಗ ವಾಲ್ಮೀಕಿಯ ಅಪ್ಪಣೆ ಮೇರೆಗೆ ಕುಶಲವರು ರಾಮಾಯಣದ ಕೆಲವು ಭಾಗಗಳನ್ನು ಹಾಡುವರು. ರಾಮನು ಕುತೂಹಲದಿಂದ ಅವರ ಗಾನವನ್ನು ಕೇಳಿ ಹರ್ಷಗೊಳ್ಳುವನು. ಬಾಲಕರು ತಮಗೆ ಅದನ್ನು ಕಲಿಸಿದ ಗುರುಗಳು ವಾಲ್ಮೀಕಿಗಳೆಂದು ಹೇಳುವರು. ರಾಮನು ವಾಲ್ಮೀಕಿಯ ಬಳಿಗೆ ಬಂದು ತನ್ನ ಶರೀರ ಹೊರತು ಉಳಿದದ್ದೆಲ್ಲವನ್ನೂ ಅವನಿಗೊಪ್ಪಿಸುವನು. ಕುಶಲವರು ಮೈಥಿಲಿಯಲ್ಲಿ ಜನಿಸಿದ ರಾಮಪುತ್ರರೆಂದು ವಾಲ್ಮೀಕಿಯು ತಿಳಿಸಿ ಸೀತೆಯನ್ನು ಪುನಃ ಸ್ವೀಕರಿಸುವಂತೆ ರಾಮನಿಗೆ ಅಪ್ಪಣೆಮಾಡುವನು. ತೃಪ್ತಿಕರವಾದ ಪ್ರಮಾಣಗಳಿಂದ ಪ್ರಜೆಗಳನ್ನು ಒಪ್ಪಿಸಿದರೆ ತಾನು ಅವಳನ್ನು ಸ್ವೀಕರಿಸುವುದಾಗಿ ರಾಮನು ಹೇಳುವನು. ಮರುದಿನ ಮುನಿಯು ಸೀತೆಯನ್ನೂ ಕುಮಾರರನ್ನೂ ಕರೆದು ಕೊಂಡು ರಾಜಧಾನಿಗೆ ಬರುವನು. ಪ್ರಜೆಗಳೆದುರಿಗೆ ಸೀತೆಯು ತನ್ನ

ನಡತೆಯು ಸರಿಯೆಂದು ತೋರಿಸಬೇಕೆಂದು ಋಷಿಯ ಆಜ್ಞೆಯಾಗುವುದು. ಸೀತೆಯು ಆಚಮನವಮಾಡಿ "ದೇವಿ, ವಿಶ್ವಂಭರೆ! ನಾನು ವಾಕ್ಕು, ಮನಸ್ಸು ಕರ್ಮಗಳಿಂದ ಪತಿಯನ್ನು ಮೀರದೆ ಇದ್ದುದಕ್ಕೆ ಸಾಕ್ಷಿಯಾಗಿ ನೀನು ನನ್ನನ್ನು ಒಳಗೊಳ್ಳು" ಎಂದು ಪ್ರಾರ್ಥಿಸುವಳು. ಒಡನೆ ಭೂರಂಧ್ರದಿಂದ ಮಿಂಚಿನಷ್ಟು ಪ್ರಕಾಶವಾದ ಜ್ಯೋತಿಯುದಯಿಸುವುದು. ಹಾವಿನ ಹೆಡೆಯ ಮೇಲೊಂದು ಸಿಂಹಾಸನ. ಅದರಲ್ಲಿ ಭೂದೇವಿ ಕುಳಿತು ಬರುವಳು. ಸೀತೆಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ರಾಮನು 'ಬೇಡ, ಬೇಡ'ವೆನ್ನುತ್ತಿದ್ದ ಹಾಗೆಯೇ ಅವಳು ಪಾತಾಳಕ್ಕೆ ಹೊರಡುವಳು. ರಾಮನು ಸೀತೆಯನ್ನು ಪುನಃ ಪಡೆಯಲು ಪ್ರಯತ್ನಿಸಿದಾಗ ಬ್ರಹ್ಮನು ಅದನ್ನು ತಪ್ಪಿಸುವನು.

ಯಜ್ಞವೆಲ್ಲ ಮುಗಿದು ಋಷಿಗಳು ತಮ್ಮ ಸ್ಥಳಗಳಿಗೆ ಹೊರಡುವರು. ಶತ್ರುಘ್ನನು ಶತ್ರುಘಾತಿ, ಸುಬಾಹುಗಳೆಂಬ ತನ್ನ ಇಬ್ಬರು ಮಕ್ಕಳಿಗೂ ವಿದಿಶಾ, ಮಧುರಾ ಪಟ್ಟಣಗಳನ್ನು ಆಳುವುದಕ್ಕಾಗಿ ಆಗಲೇ ಕೊಟ್ಟಿದ್ದನು. ಭರತನೂ ಇತ್ತ ಗಂಧರ್ವರನ್ನು ಗೆದ್ದು ಅವರ ಕೈಗಳಲ್ಲಿ ಆಯುಧಗಳಿಗೆ ಬದಲಾಗಿ ವೀಣೆಗಳನ್ನಿಟ್ಟಿದ್ದನು. ತಕ್ಷ ಪುಷ್ಕಲರೆಂಬ ತನ್ನ ಮಕ್ಕಳನ್ನೂ ಆ ಹೆಸರಿನ ರಾಜಧಾನಿಗಳಲ್ಲಿ ಸ್ಥಾಪಿಸುವನು. ಅದೇ ರೀತಿ ಲಕ್ಷ್ಮಣನೂ ರಾಮನ ಅಪ್ಪಣೆಯಂತೆ ತನ್ನ ಮಕ್ಕಳಾದ ಅಂಗದ, ಚಂದ್ರಕೇತುಗಳಿಗೆ ತನ್ನ ರಾಜ್ಯವನ್ನು ಹಂಚುವನು. ಕೌಸಲ್ಯೆ, ಸುಮಿತ್ರೆ, ಕೈಕೆ ಮೂವರೂ ಮೃತಿ ಹೊಂದುವರು.

ಕಡೆಗೆ ಒಂದು ದಿನ ಕಾಲನು ಮುನಿವೇಷ ಧರಿಸಿ ರಾಮನ ಬಳಿಗೆ ಬಂದು ಸ್ವರ್ಗಕ್ಕೆ ಬರಬೇಕೆಂಬ ಬ್ರಹ್ಮನ ಅಪ್ಪಣೆಯನ್ನು ಗುಟ್ಟಾಗಿ ತಿಳಿಸುವನು. ಲಕ್ಷ್ಮಣನು ಯೋಗಲಯವನ್ನಾಶ್ರಯಿಸಿ ಸರಯೂತೀರದಲ್ಲಿ ಶರೀರ ತ್ಯಾಗಮಾಡುವನು. ಲಕ್ಷ್ಮಣನು ಹೋಗಲಾಗಿ ಧರ್ಮದೇವತೆಯು ಮೂರೇ ಕಾಲುಗಳಿಂದ ನಿಂತಂತಾಗುವುದು. ರಾಮನು ಕುಶ, ಲವರನ್ನು ಕುಶಾವತಿ ಮತ್ತು ಶರಾವತಿ ಎಂಬ ಕಡೆಗಳಲ್ಲಿ ಸ್ಥಾಪಿಸಿ ಅಯೋಧ್ಯೆಯ ಜನರೊಡನೆ ಹೊರಡುವನು. ಕಪಿ, ರಾಕ್ಷಸರೂ ಹಿಂಬಾಲಿಸುವರು. ಜನರು ಶೋಕಿಸಿ ಕಣ್ಣೀರು ಸುರಿಸುವರು. ರಾಮನು ಸರಯೂ ನದಿಯನ್ನೇ ಸ್ವರ್ಗದ ಏಣಿಯನ್ನಾಗಿ ಮಾಡಿಕೊಳ್ಳುವನು. ದೇವತೆಗಳಾಗಿದ್ದ ಪೌರರಿಗಾಗಿ ಇನ್ನೊಂದು

ಸ್ವರ್ಗವನ್ನೂ ಸೃಷ್ಟಿಸುವನು. ಹೀಗೆ ರಾವಣವಧವೆಂಬ ಕಾರ್ಯವನ್ನು ನಿರ್ವಹಿಸಿ ವಿಷ್ವಕ್ಸೇನನು ದಕ್ಷಿಣೋತ್ತರ ಪರ್ವತಗಳಲ್ಲಿ ವಿಭೀಷಣ, ಹನುಮಂತರೆಂಬ ಕೀರ್ತಿಸ್ತಂಭಗಳನ್ನು ಸ್ಥಾಪಿಸಿ ಸರ್ವಲೋಕಾಶ್ರಯವಾದ ತನ್ನ ದೇಹವನ್ನು ಪ್ರವೇಶಿಸುವನು.

## ಹದಿನಾರನೆಯ ಸರ್ಗ

ರಘುವಂಶವು ಎಂಟು ಶಾಖೆಗಳಾಗುವುದು. ಆದರೂ ವಿಷ್ಣುವಿನ ಅಂಶದಿಂದ ಹುಟ್ಟಿ ನಿರಂತರ ದಾನಾಸಕ್ತರಾಗಿಯೂ ತಮ್ಮ ತಮ್ಮ ಎಲ್ಲೆಗಳನ್ನು ಮೀರದೆಯೂ ಇದ್ದುದರಿಂದ ಒಟ್ಟಿನಲ್ಲಿ ಇನ್ನೂ ವಿಸ್ತರಿಸಿತು. ಒಂದು ದಿನ ರಾತ್ರಿ ಕುಶನು ಕುಶಾವತಿಯ ತನ್ನ ಅರಮನೆಯಲ್ಲಿ ಮಲಗಿದ್ದಾಗ ಅಯೋಧ್ಯೆಯ ಅಧಿದೇವತೆಯು ಕರುಣಾಸ್ಪದವಾದ ವೇಷದಲ್ಲಿ ಬಂದು ತನ್ನ ದೀನಾವಸ್ಥೆಯನ್ನು ವ್ಯಕ್ತಪಡಿಸುವಳು. ಅಯೋಧ್ಯೆಯು ಈಗ 'ಅನಾಥೆ' ಉತ್ತಮ ರಾಜರಿದ್ದಾಗ ಅಲಕಾಪುರಿಯನ್ನು ಮೀರಿಸುತ್ತಿದ್ದು ಈಗ ಅದರ ಉಪ್ಪರಿಗೆಗಳೂ ಗೋಪುರಗಳೂ ಮುರಿದುಬಿದ್ದು ಕೋಟೆ ಕೊತ್ತಲುಗಳೆಲ್ಲ ಹಾಳಾಗಿವೆ. ಅಭಿಸಾರಿಕೆಯರು ಸಂಚರಿಸುತ್ತಿದ್ದ ಬೀದಿಗಳಲ್ಲಿ ನರಿಗಳು ಅರಚುತ್ತ ಮಾಂಸಕ್ಕಾಗಿ ಅಲೆಯುತ್ತಿವೆ. ಹೆಂಗಸರು ಕ್ರೀಡಿಸುತ್ತಿದ್ದ ಸರಸ್ಸುಗಳ ನೀರನ್ನು ಕಾಡುಕೋಣಗಳು ಕದಡುತ್ತಿವೆ. ಕ್ರೀಡಾಮಯೂರಗಳೆಲ್ಲ ಕಾಡುಕಿಚ್ಚಿನಿಂದ ಗರಿಗಳನ್ನು ಸುಟ್ಟುಕೊಂಡು ತಮ್ಮ ಲಾಸ್ಯವನ್ನೆಲ್ಲ ಮರೆತು ವನಮಯೂರಗಳಾಗಿವೆ. ರಮಣಿಯರು ಲಾಕ್ಷಾರಾಗದಿಂದ ಕೂಡಿದ ಹೆಜ್ಜೆಗಳನ್ನಿಟ್ಟು ಏರುತ್ತಿದ್ದ ಉಪ್ಪರಿಗೆಯ ಹಂತಗಳು ರಕ್ತದಿಂದ ತೊಯ್ದು ಹುಲಿಗಳ ಹೆಜ್ಜೆಗಳಿಗಾಗುತ್ತಿವೆ. ಉಪ್ಪರಿಗೆಗಳ ಸುಣ್ಣವು ಮಾಸಿ, ಅಲ್ಲಲ್ಲಿ ಹುಲ್ಲು ಬೆಳೆದು ಮೇಲೆ ಬಿದ್ದ ಬೆಳದಿಂಗಳುಕೂಡ ಮೊದಲಿನಂತೆ ಪ್ರತಿಫಲಿಸುವುದಿಲ್ಲ. ವಿಲಾಸಿಗಳು ಮೆಲ್ಲನೆ ಬಗ್ಗಿಸಿ ಹೂ ಕುಯ್ಯುತ್ತಿದ್ದ ಬಳ್ಳಿಗಳನ್ನು ಈಗ ಬೇಡರೂ ಕಪಿಗಳೂ ಕಿತ್ತೊಗೆಯುತ್ತಿದ್ದಾರೆ. ರಾತ್ರಿಯಲ್ಲಿ ದೀಪದ ಬೆಳಕಿಲ್ಲ; ಹಗಲಿನಲ್ಲಿ ಸುಂದರಿಯರ ಮುಖಕಾಂತಿಯಿಲ್ಲ. ಉಪ್ಪರಿಗೆಗಳ ಕಿಟಕಿಗಳಲ್ಲಿ ಸುವಾಸಿತವಾದ ಧೂಪವು ಹೊರಡುವುದಕ್ಕೆ ಬದಲು ಜೇಡರ ಹುಳುಗಳು ಬಲೆ ಕಟ್ಟಿವೆ. ಸರಯೂನದಿಯ ನೀರಿಗೆ ಸುವಾಸನೆಯುಳ್ಳ

ಸ್ನಾನೀಯದ ಸಂಪರ್ಕವೂ ಇಲ್ಲ. ತೀರದ ವಾನೀರಗೃಹಗಳು ಶೂನ್ಯವಾಗಿವೆ. ಇದನ್ನೆಲ್ಲ ಅಯೋಧ್ಯಾಧಿದೇವತೆಯು ಕುಶನಿಗೆ ವಿವರಿಸಿ ಕುಶಾವತಿಯನ್ನು ಬಿಟ್ಟು ರಾಜಧಾನಿಯನ್ನು ಸೇರುವಂತೆ ಆಹ್ವಾನಿಸುವುದು.

ಪ್ರಾತಃಕಾಲ ಮಂತ್ರಿಗಳಿಗೆ ಈ ಆಶ್ಚರ್ಯವನ್ನು ವಿವರಿಸಿ ಅವರೂ ಒಪ್ಪಲಾಗಿ ಕುಶನು ಅಯೋಧ್ಯೆಗೆ ಪ್ರಯಾಣಬೆಳಸುವನು. ಶಿಲ್ಪಿಗಳ ಕೈಯಲ್ಲಿ ಊರನ್ನು ಶುದ್ಧಿಮಾಡಿಸಿ ಪೂಜಾದಿಗಳನ್ನು ನೆರವೇರಿಸಿದಮೇಲೆ ಅಯೋಧ್ಯೆಯು ಮೊದಲಿನಂತೆ ರಮ್ಯವಾಗುವುದು. ಗ್ರೀಷ್ಮಋತು ಹುಟ್ಟಲಾಗಿ ಕುಶನು ವಿಲಾಸಿನಿಯರೊಡನೆ ಸರಯೂಜಲದಲ್ಲಿ ವಿಹರಿಸುವನು. ಆಗ ಇವನ ಜೈತ್ರಾಭರಣವು ಕಳಚಿಹೋಗಿ ನೀರಿನಲ್ಲಿ ಬೀಳುವುದು. ಮಡುವಿನಲ್ಲಿದ್ದ ಕುಮುದನೆಂಬ ನಾಗನು ಅದನ್ನು ಕದಿಯುವನು. ಎಷ್ಟು ಹುಡುಕಿದರೂ ಅದು ಸಿಕ್ಕದೆ ಹೋಗಲು ಕುಶನು ಗರುಡಾಸ್ತ್ರವನ್ನು ತೊಡುವನು. ಆಗ ಹೆದರಿದ ಕುಮುದನು ಆಭರಣವನ್ನೂ ಕುಮುದ್ವತಿಯೆಂಬ ಒಬ್ಬಳು ಕನ್ಯೆಯನ್ನೂ ತಂದು ಕುಶನಿಗೊಪ್ಪಿಸಿ ಕ್ಷಮೆ ಬೇಡುವನು. ಕುಶನು ನಾಗಕನ್ನೆಯನ್ನು ಮದುವೆಯಾಗುವನು.

## ಹದಿನೇಳನೆಯ ಸರ್ಗ

ಕುಶನಿಗೆ ಕುಮುದ್ವತಿಯಲ್ಲಿ ಅತಿಥಿಯೆಂಬ ಮಗನು ಹುಟ್ಟುವನು. ಇವನಿಗೆ ಸಕಾಲದಲ್ಲಿ ಕುಶನು ಕುಲವಿದ್ಯೆಗಳನ್ನು ಕಲಿಸಿ, ಮದುವೆಮಾಡಿಸುವನು. ಒಂದು ಸಲ ಇಂದ್ರನಿಗೆ ಸಹಾಯಮಾಡುವುದಕ್ಕಾಗಿ ಹೋಗಿದ್ದಾಗ ಕುಶನು ಯುದ್ಧದಲ್ಲಿ ಮಡಿಯುವನು. ಕುಮುದ್ವತಿಯು ಸಹಗಮನವನ್ನಾಚರಿಸುವಳು. ಅತಿಥಿಗೆ ಪಟ್ಟಾಭಿಷೇಕವಾಗುವುದು. ಇವನೂ ಕುಲೀನ, ಶೂರ, ಮತ್ತು ಜಿತೇಂದ್ರಿಯ. ಪಟ್ಟಾಭಿಷೇಕವಾದಮೇಲೆ ಪೂರ್ಣಬಿಂಬಾಕಾರವನ್ನು ಪಡೆದ ಚಂದ್ರನಂತೆ ಕಂಗೊಳಿಸುವನು. ಪ್ರಜೆಗಳು ಮೊದಲಿಗಿಂತ ವೃದ್ಧಿಹೊಂದುವರು. ಮತ್ತು ದೊರೆಯಲ್ಲಿ ರೂಢಮೂಲವಾದ ಅನುರಾಗವನ್ನು ಹೊಂದುವರು. ಹೊರಗಿನ ಶತ್ರುಗಳನ್ನಲ್ಲದೆ ಅತಿಥಿಯು ಒಳಗಿನ (ಅರಿಷಡ್ವರ್ಗ) ಶತ್ರುಗಳನ್ನೂ ಜಯಿಸುವನು. ಸಂಪತ್ತು ಸ್ಥಿರವಾಗುವುದು. ಧರ್ಮಾರ್ಥಕಾಮಗಳಿಗೆ ವಿರೋಧವಿಲ್ಲ............ಹೀಗೆ

ರಾಜ್ಯದಲ್ಲಿ ಸರ್ವತೋಮುಖವಾದ ಸುಖಶಾಂತಿಗಳು ನೆಲಸುವುವು. ಚಂದ್ರ ಸಮುದ್ರಗಳಂತೆ ಅತಿಥಿಯೂ ಅಭಿವೃದ್ಧಿಪಡೆದರೂ ಅವರಂತೆ ಇವನು ಕ್ಷಯಿಸುವುದಿಲ್ಲ.

## ಹದಿನೆಂಟನೆಯ ಸರ್ಗ

ಅತಿಥಿಗೆ ನಿಷಧರಾಜನ ಮಗಳಲ್ಲಿ ನಿಷಧನೆಂಬ ಮಗ ಹುಟ್ಟುವನು. ಕಾಲಕ್ರಮದಲ್ಲಿ ಮಗನು ಪ್ರಜಾರಕ್ಷಣ ಕಾರ್ಯದಲ್ಲಿ ಸಮರ್ಥನಾಗಲು ಅತಿಥಿಯು ರಾಜ್ಯವನ್ನು ಅವನಿಗೊಪ್ಪಿಸಿ ಸ್ವರ್ಗಕ್ಕೇರುವನು. ಅನಂತರ ನಿಷಧ, ನಲ, ನಭ, ಪುಂಡರೀಕ, ಕ್ಷೇಮಧನ್ವ, ದೇವಾನೀಕ, ಅಹೀನಗು, ಪಾರಿಯಾತ್ರ, ಶಿಲ, ಉನ್ನಾಭ, ವಜ್ರನಾಭ, ಶಂಖಣ, ಹೀಗೆ ರಘುವಂಶಪರಂಪರೆಯು ಬೆಳೆಯುವುದು. ಶಂಖಣನ ಅನಂತರ ವ್ಯುಷಿತಾಶ್ವ, ವಿಶ್ವಸಹ, ಹಿರಣ್ಯನಾಭ, ಕೌಶಲ್ಯರು ರಾಜ್ಯವಾಳುವರು. ಕೌಶಲ್ಯನ ಮಗ ಬ್ರಹ್ಮಿಷ್ಠನ ಕಾಲದಲ್ಲೂ ರಾಜ್ಯದಲ್ಲಿ ಎಂದಿನಂತೆ ಸುಖಶಾಂತಿಗಳು ನೆಲಸಿವೆ. ಅನಂತರ ಪುತ್ರ, ಪುಷ್ಯ, ಧ್ರುವಸಿದ್ಧಿ, ಇವರು ಪಟ್ಟಕ್ಕೆ ಬರುವರು. ಮಗನಾದ ಸುದರ್ಶನನು ಎಳಗೂಸಾಗಿದ್ದಾಗಲೇ ಧ್ರುವಸಿದ್ಧಿಯು ಸಿಂಹದ ಕೈಯಲ್ಲಿ ಸಾಯುವನು. ಅಮಾತ್ಯವರ್ಗವು ಸುದರ್ಶನನನ್ನು ರಾಜಪದವಿಗೇರಿಸಿ ಐಕಮತ್ಯದಿಂದ ರಾಜ್ಯಭಾರ ನಡೆಸುವುದು. ಕಾಲಕ್ರಮದಲ್ಲಿ ಸುದರ್ಶನನೂ ಶೂರನಾದ ದೊರೆಯಾಗುವನು. ಮಂತ್ರಿಗಳು ಇವನಿಗೆ ಮದುವೆಮಾಡಿಸುವರು.

## ಹತ್ತೊಂಬತ್ತನೆಯ ಸರ್ಗ

ಸುದರ್ಶನನು ವೃದ್ಧನಾದಮೇಲೆ ಮಗನಾದ ಅಗ್ನಿವರ್ಣನನ್ನು ತನ್ನ ಸ್ಥಾನದಲ್ಲಿ ಕುಳ್ಳಿರಿಸಿ ನೈಮಿಶಾರಣ್ಯದಲ್ಲಿ ತಪಸ್ಸನ್ನಾಚರಿಸುವನು. ರಾಜ್ಯವು ತನ್ನ ಉಪಭೋಗಕ್ಕಾಗಿ ಮಾತ್ರವೆಂದು ಭಾವಿಸಿದ ಅಗ್ನಿವರ್ಣನು ವಿಷಯೋಪಭೋಗದಲ್ಲಿ ಆಸಕ್ತನಾಗುವನು. ಸ್ವಲ್ಪಕಾಲ ರಾಜ್ಯಭಾರವನ್ನು ತಾನೇ ನಿರ್ವಹಿಸಿ ಅನಂತರ ಅದನ್ನು ಮಂತ್ರಿಗಳಿಗೊಪ್ಪಿಸುವನು. ತಾನು ಅನವರತ ರಾಣಿಯರೊಡನೆ ಮಾತ್ರವಲ್ಲದೆ ಇತರರೊಡನೆಯೂ ಕೂಡ ವಿಹರಿಸುತ್ತ ನೃತ್ಯಗೀತಾದಿಗಳಲ್ಲಿ ಆಸಕ್ತನಾಗಿ ಕಾಲಕಳೆಯುವನು. ಇದರ ಫಲವಾಗಿ ಇವನ ರಾಜ್ಯವನ್ನು ಶತ್ರುಗಳು ಆಕ್ರಮಿಸದಿದ್ದರೂ ಇವನನ್ನು ಕ್ಷಯರೋಗವು

ಹಿಡಿಯುವುದು. ರಘುಕುಲವು ಕಲೆ ಮಾತ್ರ ಉಳಿದ ಚಂದ್ರನಂತೆ, ಬದಿಯು ಳಿದ ಕುಂಟೆಯಂತೆ, ಬತ್ತಿಯು ಉರಿದು ಸಣ್ಣಗಾದ ದೀಪದಂತೆ ಅಳಿಯುವ ದಶೆಗೆ ಬರುವುದು. ದೊರೆಯು ಪುತ್ರಲಾಭಕ್ಕಾಗಿ ಪುಣ್ಯಕರ್ಮಗಳನ್ನಾಚರಿ ಸುತ್ತಿರುವನೆಂದು ಸುಳ್ಳು ಹೇಳಿ ಮಂತ್ರಿಗಳು ಇವನ ರೋಗವನ್ನು ಮರೆಮಾ ಚುವರು. ಕಡೆಗೂ ಪುತ್ರೋತ್ಸವವಾಗದೆಯೇ ಅಗ್ನಿವರ್ಣನು ಪ್ರಾಣಬಿಡು ವನು. ಮಂತ್ರಿಗಳು ಗುಟ್ಟಾಗಿ ಅಂತ್ಯಕ್ರಿಯೆಗಳನ್ನು ನಡೆಸುವರು. ಗರ್ಭಚಿಹ್ನೆ ಗಳಿಂದ ಕೂಡಿದ್ದ ಅಗ್ನಿವರ್ಣನ ಪಟ್ಟಮಹಿಷಿಗೆ ರಾಜ್ಯಾಭಿಷೇಕವಾಗುವುದು. ತನ್ನ ಪ್ರಸವವನ್ನು ಕುತೂಹಲದಿಂದ ನಿರೀಕ್ಷಿಸುತ್ತಿದ್ದ ಪ್ರಜೆಗಳನ್ನು ರಾಣಿಯೇ ಮಂತ್ರಿಗಳ ಸಹಾಯದಿಂದ ಪಾಲಿಸುವಳು.

ಇದು ರಘುವಂಶ ಮಹಾಕಾವ್ಯದ ಕತೆಯ ಸಂಗ್ರಹ. ವರ್ಣನಾಪ್ರಧಾನ ವಾದ ಮಹಾಕಾವ್ಯದ ಕತೆಯನ್ನು ಮಾತ್ರ ಗಮನಿಸುವ ಈ ಪ್ರಸಂಗ ಒಂದು ದೃಷ್ಟಿಯಿಂದ ವಿಚಿತ್ರವಾಗಿ ತೋರಬಹುದು. ಆದರೆ ವರ್ಣನೆಗಳನ್ನು ಬಿಡದೆ ರಘುವಂಶದ ಕಥೆಯನ್ನು ಅನುವಾದ ಮಾಡಹೊರಟರೆ ಅದೇ ಒಂದು ದೊಡ್ಡ ಗ್ರಂಥವಾಗಬೇಕಾಗುವುದು. ಪ್ರಕೃತ ಕಥಾಂಶವನ್ನು ಸಂಗ್ರಹಿಸು ವಾಗಲೂ ಕಾಳಿದಾಸನ ಮಾತುಗಳನ್ನೇ ಆದಷ್ಟು ಆರಿಸಿಕೊಂಡಿರುವುದರಿಂದ ಕತೆಯ ಈ ಸಂಗ್ರಹಾನುವಾದಕ್ಕೂ ಒಂದು ವಿಧವಾದ ವೈಶಿಷ್ಟ್ಯ ಬರಬಹು ದೆಂದು ಆಶಿಸಿದೆ. ಸಂಗ್ರಹದಲ್ಲೂ 'ಇದನ್ನು ಇನ್ನೂ ಸ್ವಲ್ಪ ಸೇರಿಸಿದ್ದರೆ ಚೆನ್ನಾಗಿತ್ತು;' 'ಇದನ್ನು ಬಿಟ್ಟೇಬಿಡಬಹುದಾಗಿತ್ತು' ಎಂದು ಮೊದಲಾಗಿ ರುಚಿಭೇದದಿಂದ ಲೋಪದೋಷಗಳು ಕಾಣಬಹುದು. ಆದರೆ ಇದು ಎಲ್ಲ ಕ್ಕಿಂತ ಹೆಚ್ಚಾಗಿ ರಘುವಂಶದ ಅಸಾಧಾರಣವಾದ ರಮ್ಯತೆಯನ್ನೇ ಸೂಚಿಸು ವುದು. ಕಾಳಿದಾಸನೇ ಹೇಳುವ ಒಂದು ವಾಕ್ಯವನ್ನು ಇಲ್ಲಿ ಸ್ಮರಿಸ ಬಹುದು.—"ಭಿನ್ನರುಚಿರ್ಹಿಲೋಕಃ" ಎಂಬ ಮಾತು ರಘುವಂಶಕ್ಕೂ ಬಹಳಮಟ್ಟಿಗೆ ಅನ್ವಯಿಸುವುದೆಂದರೆ ತಪ್ಪಾಗಲಾರದು. ಒಂದೊಂದು ಭಾಗ ಒಬ್ಬೊಬ್ಬರಿಗೆ ರಮ್ಯವಾಗಿ ಕಾಣುವುದೇ ಎಲ್ಲ ಭಾಗಗಳ ಸಾಮಾನ್ಯವಾದ ರಮ್ಯತೆಗೆ ಸಾಕ್ಷಿ.

ಮಹಾಕಾವ್ಯದ ವಿಮರ್ಶೆಯು ಬಹಳ ಕಷ್ಟವಾದ ಕೆಲಸ. ಪ್ರತ್ಯೇಕ ವಾಗಿ ಇಲ್ಲಿನ ಚಿತ್ರಗಳನ್ನು ಮೆಚ್ಚಬಹುದು; ಬಿಡಿಬಿಡಿಯಾಗಿ ಕೆಲವು ಶ್ಲೋಕ

ಗಳನ್ನು ಉತ್ತಮೋತ್ತಮವೆಂದೂ ಕೆಲವನ್ನು ಸಾಮಾನ್ಯವೆಂದೂ ಹೇಳಬಹುದು; ಪಾತ್ರರಚನೆಯಲ್ಲಿ ಕೆಲವನ್ನು ಪೂರ್ಣವೆಂದೂ ಅಸಂಪೂರ್ಣವೆಂದೂ ಬೇಕಾದರೆ ಭಾವಿಸಬಹುದು; ರಸಪರಿಪೋಷ ಕೆಲವೆಡೆಗಳಲ್ಲಿ ಇತರ ಕಡೆಗಳಿಗಿಂತ ಚೆನ್ನಾಗಿದೆಯೆನ್ನಿಸಬಹುದು. ಆದರೆ ಸಮಗ್ರಕಾವ್ಯವನ್ನು ವಿಮರ್ಶೆಮಾಡುವಾಗ ಇದಕ್ಕಿಂತ ಹೆಚ್ಚಾಗಿ ಕಾವ್ಯದ ಒಟ್ಟು ಸೌಂದರ್ಯವನ್ನು ಮನಗಾಣಬೇಕು. ಈ ದೃಷ್ಟಿಯಿಂದ ನೋಡಿದರೆ ರಘುವಂಶದಲ್ಲಿ ಮೂರು ಮುಖ್ಯವಾದ ಘಟ್ಟಗಳು ಕಂಡುಬರುವುವು. ಮೊದಲನೆಯದು ರಾಮನ ಪೂರ್ವಜರ ಕತೆ. ಇದಕ್ಕೆ ದಿಲೀಪನ ಕತೆ ಪೀಠಿಕೆ; ಅಜನ ಕತೆ ಉಪಸಂಹಾರ. ಎರಡನೆಯ ಘಟ್ಟ ರಾಮನ ಕತೆ. ಇದಕ್ಕೆ ಕುಶನ ಕತೆಯೆ ಉಪಸಂಹಾರ. ಮೂರನೆಯ ಘಟ್ಟದಲ್ಲಿ ಈಚಿನ ದೊರೆಗಳ ವಿಚಾರ ಬರುವುದು. ಎಲ್ಲ ಸೇರಿ ಸುಮಾರು ಮೂವತ್ತು ದೊರೆಗಳ ಚರಿತ್ರೆ ಕಾವ್ಯದಲ್ಲಿ ಸೇರಿಸಲ್ಪಟ್ಟಿದೆ. ಪ್ರಾಯಶಃ ಕಡೆಯ ದೊರೆಯಾದ ಅಗ್ನಿವರ್ಣನೊಬ್ಬನನ್ನು ಬಿಟ್ಟು ಉಳಿದ ದೊರೆಗಳೆಲ್ಲ ಗುಣವಂತರು, ಯೋಗ್ಯರು ಮತ್ತು ರಘುವಂಶದ ದೊರೆಗಳಾಗಲು ಅರ್ಹರೆಂದು ಹೇಳಬಹುದು. ಒಟ್ಟಿನಲ್ಲಿ ಹೀಗೆ ಎಲ್ಲರೂ ನಿರ್ದುಷ್ಟರಾದರೂ ಕೆಲವರಲ್ಲಿ ಒಂದೊಂದು ಅಂಶದಲ್ಲಿರುವ ನ್ಯೂನತೆಯನ್ನು ಕವಿಯು ಸೂಚಿಸದೆ ಬಿಟ್ಟಿಲ್ಲ. ಆದರೆ ಇದರಿಂದ ಅವರ ಲೋಕೋತ್ತರ ಗುಣಶಾಲಿತ್ವಕ್ಕೆ ಕುಂದುಬಂದಿಲ್ಲ. ಮಹತ್ವದಿಂದ ಕೂಡಿದವರೂ ರಜಸ್ತಮೋಗುಣಗಳ ಪ್ರಾಧಾನ್ಯದಿಂದ ನಿಯಮವನ್ನತಿಕ್ರಮಿಸುವುದು ಸ್ವಾಭಾವಿಕವೆಂಬ ಆಶಯದ ಹಿನ್ನೆಲೆಯಲ್ಲಿ ಈ ಮಹಾಪುರುಷರ ನ್ಯೂನತೆಗಳು ಚಿತ್ರಿತವಾಗಿವೆ. ಮತ್ತು ದೊರೆಗಳಲ್ಲಿ ಪ್ರತಿಯೊಬ್ಬರೂ ಆದರ್ಶಪ್ರಾಯರೆಂಬ ಭಾವನೆ ಬಂದರೂ ಅವರಲ್ಲಿ ವೈಶಿಷ್ಟ್ಯವಿಲ್ಲದೆ ಇಲ್ಲ. ಎಲ್ಲರೂ ಮಾನುಷವ್ಯಕ್ತಿಗಳೇ ಆದರೂ ಅನೇಕ ಅದ್ಭುತ ಸನ್ನಿವೇಶಗಳು ಒದಗಿ ಕಾವ್ಯವು ಅನೇಕ ವೇಳೆ ಮಾನುಷ ಜೀವನದ ಎಲ್ಲೆಯನ್ನು ಮೀರಿದೆ. ಕಾಳಿದಾಸನ ಮುಖ್ಯ ಆಶಯಗಳಲ್ಲಿ ಒಂದಾದ ದಿವ್ಯಮರ್ತ್ಯಸಂಮಿಲನವು ರಘುವಂಶದಲ್ಲೂ ಕಂಡುಬರುವುದು. ಒಟ್ಟಿನಲ್ಲಿ ರಘುವಂಶದ ದೊರೆಗಳೆಲ್ಲ ಮಹಿಮಾನ್ವಿತರಾಗಿದ್ದರೂ ರಘುವಂಶಕ್ಕೂ ಉನ್ನತಿ ಅವನತಿಗಳು ತಪ್ಪಲಿಲ್ಲವೆಂಬ ಅಮೂಲ್ಯಾರ್ಥವು ಕಾವ್ಯದಿಂದ ಹೊರಪಡುವುದು. ಮೊದಲನೆಯ ಘಟ್ಟ ಈ ವಂಶದ ಕತೆಗೆ ಪ್ರಾರಂಭ. ವಂಶದ

ಪ್ರಾರಂಭವು ಉಜ್ವಲವಾದುದೂ, ಭದ್ರವಾದ ತಳಹದಿಯಿಂದ ಕೂಡಿದುದೂ ಆಗಿತ್ತೆಂಬ ಭಾವನೆ ಬರುವುದು. ದಿಲೀಪ, ರಘು, ಅಜ ಮೂವರೂ ಶೂರರು, ಮಹಾತ್ಮರು ಮತ್ತು ವಂಶದ ಮುಂದಾಳುಗಳಾಗಲು ತಕ್ಕ ಯೋಗ್ಯತೆ ಯುಳ್ಳವರು. ದಿಲೀಪನ ಧಾರ್ಮಿಕ ಮನೋಭಾವಕ್ಕೂ ರಘುವಿನ ಆರ್ಥಿಕ ನೀತಿಗೂ ಅಜನ ಕಾಮ ಪ್ರವೃತ್ತಿಗೂ ಪ್ರಾಧಾನ್ಯವಿದೆ. ಇದರಿಂದಲೇ ಅವರನ್ನು ಧರ್ಮ, ಅರ್ಥ, ಕಾಮಗಳ ಪ್ರತಿನಿಧಿಗಳೆಂದು ಹೇಳುವುದು. ಆದರೆ ಮೂವ ರಲ್ಲೂ ಧರ್ಮ, ಅರ್ಥ, ಕಾಮಗಳ ಪರಿಶುದ್ಧಸ್ವರೂಪವು ಕಂಡುಬರುತ್ತದೆ. ಅಜನ ಕಾಮಾಸಕ್ತಿಯು ಅಧಿಕವಾಗಿ ಕಂಡರೂ ಅದು ಉಚ್ಛೃಂಖಲವೂ ಮಿತಿಮೀರಿದುದೂ ಅಲ್ಲ. ಪುನರ್ವಿವಾಹವಿಲ್ಲದೆ ಆದರ್ಶಏಕಪತ್ನೀವ್ರತ ಧಾರಿಯಾಗಿದ್ದುದೇ ಇದಕ್ಕೆ ಸಾಕ್ಷಿ. ಆದರ್ಶಪ್ರಾಯರಾದ ಪೂರ್ವಜರನ್ನು ಹೊಂದಿದ ರಘುವಂಶವು ಎರಡನೆಯ ಘಟ್ಟದಲ್ಲಿ ಪರಮೋನ್ನತಿ ಹೊಂದಿ ಕಂಗೊಳಿಸುವುದು. ರಾಮನ ಅವತಾರದಲ್ಲಿ ಅದಕ್ಕೆ ದೇವಾಂಶಸಂಪರ್ಕವು ಸಾಕ್ಷಾತ್ತಾಗಿಯೂ ಪೂರ್ಣವಾಗಿಯೂ ಆಗುವುದು. ದಶರಥ, ರಾಮ, ಲಕ್ಷ್ಮಣ ಮೊದಲಾದವರ ವಿಚಾರದಲ್ಲೆಲ್ಲ ಕಾಳಿದಾಸನು ಪವಿತ್ರತಮವಾದ ವಾಲ್ಮೀಕಿಯ ಕಥಾಸಂಪ್ರದಾಯವನ್ನೇ ಅನುಸರಿಸುವನು. ತನ್ನ ಕಲ್ಪನೆಗಳಿಂದ ಆ ಪವಿತ್ರವ್ಯಕ್ತಿಗಳ ಜೀವನಚರಿತೆಗೆ ಸ್ವಲ್ಪವೂ ಕುಂದು ಬರಕೂಡದೆಂದು ಕಾಳಿ ದಾಸನು ಹಿಂದಿನ ಮಹರ್ಷಿಗಳ ಮಾರ್ಗವನ್ನೇ ಅನುಸರಿಸಿ ರಾಮಾಯಣ ಕಥಾಭಾಗವನ್ನು ಹೆಚ್ಚು ಚಮತ್ಕಾರದಿಂದ ನಿರ್ವಹಿಸಿರುವನು. ಮೂರನೆಯ ಘಟ್ಟದಲ್ಲಿ ಅವನತಿಯು ಕ್ರಮವಾಗಿ ಚಿತ್ರಿತವಾಗಿದೆ. ಕಣ್ಣಿಗೆ ಕಾಣಿಸ ದಂತೆಯೇ ಕ್ಷೀಣತೆಯು ತಲೆದೋರುವುದು. ಇದಕ್ಕೆ ಕಾರಣ ಮೊದ ಮೊದಲು ಗೋಚರವಾಗುವುದೇ ಇಲ್ಲ. ಯಾರೂ ತಪ್ಪುಮಾಡಿದಂತೆ ತೋರುವುದಿಲ್ಲ. ದೊರೆಗಳಲ್ಲಿ ಅನೇಕರು ವಂಶಪಾರಂಪರ್ಯಗುಣಗಳನ್ನು ಹೊಂದಿದವರಂತೆಯೇ ಕಾಣುವರು. ಆದರೂ ಅಯೋಧ್ಯಾಧಿದೇವತೆ ಕುಶನನ್ನು ಕಂಡು ಗೋಳಿಡುವುದರಿಂದ ಮೊದಲು ಅವನತಿಯು ಕ್ರಮವಾಗಿ ರಘುವಂಶವನ್ನು ಆಕ್ರಮಿಸುವುದು. ಕಡೆಗೆ ಒದಗುವ ಹೃದಯವಿದ್ರಾವಕ ಸನ್ನಿವೇಶವು ತಿಳಿದೇ ಇದೆ. ಈ ರೀತಿ ಮಹಾಭಾರತ ರಾಮಾಯಣಗಳ ಪರ್ಯವಸಿತಾರ್ಥವಿರುವಂತೆ ರಘುವಂಶದ ಪರ್ಯವಸಿತಾರ್ಥವೂ ವೈರಾಗ್ಯ

ಪ್ರಯೋಜಕವಾಗಿದೆ. ಮಹಾಭಾರತ ರಾಮಾಯಣಗಳಲ್ಲಿರುವಂತೆ ರಘುವಂಶದಲ್ಲೂ ಶಾಂತ, ಕರುಣ ರಸಗಳ ಪ್ರಾಧಾನ್ಯವು ಕಂಡುಬರುತ್ತದೆ.

ಈ ಮುಖ್ಯಆಶಯವನ್ನು ಹೊರಪಡಿಸುವುದಕ್ಕೆ ಕವಿಯು ಅನುಸರಿಸಿರುವ ಮಾರ್ಗ ಶ್ಲಾಘ್ಯತಮವಾಗಿದೆ. ರಸಪರಿಪೋಷ, ಪಾತ್ರರಚನೆ, ವಸ್ತುವಿಕಾಸ ಸಂಕೋಚಗಳಲ್ಲಿ ಕವಿಯು ಉಪಯೋಗಿಸಿರುವ ಪ್ರತಿಭಾಕೌಶಲವು ಬಹಳ ಅದ್ಭುತವಾಗಿದೆ. ಆದುದರಿಂದ ಎಲ್ಲೆಲ್ಲಿ ಈ ಕೆಲವು ವಿಷಯಗಳಲ್ಲಿ ನ್ಯೂನತೆಯಿರುವಂತೆ ತೋರುವುದೋ ಅಲ್ಲಿ ಅಭಿಪ್ರಾಯಪೂರ್ವಕವಾಗಿ ಕವಿಯು ಹಾಗೆ ಮಾಡಿರುವನೆಂದು ಹೇಳಬಹುದು. ಯಾವ ಪಾತ್ರರಚನೆ ಅಸಂಪೂರ್ಣವಾಗಿ ತೋರುವುದೋ ಅದನ್ನು ಕವಿಯು ತನ್ನ ಆಶಯಕ್ಕೆ ಉಪಯೋಗವಿಲ್ಲವೆಂದೇ ಹಾಗೆ ಬಿಟ್ಟಿರುವನೆಂದು ಮನಗಾಣಬಹುದು. ಉದಾಹರಣೆಗೆ ರಸದ ವಿಚಾರ ಪರಿಶೀಲಿಸೋಣ. ಶೃಂಗಾರ ವೀರಾದಿ ಇತರ ರಸಗಳ ಪರಿಪೋಷಕ್ಕೆ ಇನ್ನೂ ಅನೇಕ ಕಡೆ ಅವಕಾಶವಿದ್ದರೂ ಕವಿಯು ಅವನ್ನು ಉಪಯೋಗಿಸಿಕೊಳ್ಳದೆ ಕರುಣಶಾಂತರಸಗಳಿಗೇ ಪ್ರಾಧಾನ್ಯ ಬರುವಂತೆ ನಿರ್ವಹಿಸಿರುವನು. ಎಂಟು, ಹದಿನಾಲ್ಕು, ಹದಿನಾರು ಈ ಸರ್ಗಗಳಲ್ಲಿ ಮುಖ್ಯವಾಗಿಯೂ ಇತರ ಕೆಲವು ಕಡೆಗಳಲ್ಲಿ ಸಂಗ್ರಹವಾಗಿಯೂ ಕರುಣರಸದ ಪರಿಪೋಷವು ನಡೆದಿದೆ. ಇದರಿಂದ ಒಟ್ಟಿನಲ್ಲಿ ಯಾವ ಮತ್ತು ಎಷ್ಟು ವಸ್ತುವನ್ನು ಎಲ್ಲಿ ಹೇಗೆ ಅಡಗಿಸಬೇಕೆಂಬ ವಿಚಾರದಲ್ಲಿ ಕವಿಯು ಪೂರ್ಣ ಸ್ವಾತಂತ್ರ್ಯವನ್ನು ಹೊಂದಿ ಎಲ್ಲವನ್ನೂ ತನ್ನ ಹಿಡಿತದಲ್ಲಿಟ್ಟುಕೊಂಡೇ ಮುಂದುವರಿದಿದ್ದಾನೆಂದು ಖಂಡಿತವಾಗಿ ಹೇಳಬಹುದು. ಇದೇ ಇಲ್ಲಿನ ರಚನಾಕೌಶಲ. ರಘುವಂಶವನ್ನು ಸಂಪೂರ್ಣವಾಗಿ ಪರಿಶೀಲಿಸಿದರೆ ಒಂದು ಉತ್ತಮವಾದ ಜೀವನ ತತ್ವವೂ ಧ್ಯೇಯವೂ ಅಲ್ಲಡಗಿದೆಯೆಂದೂ ಮನಗಾಣಬಹುದು.

ಕಾವ್ಯದ ಶೈಲಿಯು ಇತರ ಕಾವ್ಯ ನಾಟಕಗಳ ಶೈಲಿಯಂತೆ ಸರಳವೂ ಹೃದಯಂಗಮವೂ ಆಗಿದೆ. ಸಣ್ಣಸಣ್ಣ ಶ್ಲೋಕಗಳಲ್ಲಿ ಉದಾತ್ತವಾದ ಭಾವನೆಗಳು ಹೊರಪಡುವುವು. ಉಪಮಾಲಂಕಾರದ ಉಪಯೋಗ ಅದ್ವಿತೀಯವಾಗಿದೆ. "ಸಂಚಾರಿಣೀ ದೀಪಶಿಖೇವ" (VI–67) ಎಂಬ ಶ್ಲೋಕದ ಚಿತ್ರವನ್ನು ಅಲಂಕಾರ ಗ್ರಂಥಗಳಲ್ಲಿ ಬಹಳ ಹೊಗಳಿರುತ್ತಾರೆ. ಹಾಗೆಯೇ

ಉತ್ಪ್ರೇಕ್ಷೆ, ಅರ್ಥಾಂತರನ್ಯಾಸ, ಪ್ರತಿವಸ್ತೂಪಮಾ, ರೂಪಕ ಮೊದಲಾದ ಅಲಂಕಾರಗಳೂ ವಿಶೇಷವಾಗಿ ಉಪಯುಕ್ತವಾಗಿವೆ. ಕಾವ್ಯದಲ್ಲಿ ಒಟ್ಟು ಆರು ವೃತ್ತಗಳು (ಅನುಷ್ಟುಭ್, ಉಪಜಾತಿ, ವೈತಾಲೀಯ, ದ್ರುತವಿಲಂಬಿತ, ರಥೋದ್ಧತಾ, ಮತ್ತು ವಂಶಸ್ಥ) ಮುಖ್ಯವಾಗಿ ಉಪಯೋಗಿಸಲ್ಪಟ್ಟಿವೆ. ಅವುಗಳಲ್ಲೂ ಅನುಷ್ಟುಭ್, ಉಪಜಾತಿ ವೃತ್ತಗಳಿಗೇ ಹೆಚ್ಚು ಪ್ರಾಧಾನ್ಯ. ಎಂಟನೆಯ ಸರ್ಗದಲ್ಲಿ ಅಜವಿಲಾಪಕ್ಕೆ ಸರಿಯಾದ ವೈತಾಲೀಯ ವೃತ್ತವು ಉಪಯೋಗಿಸಲ್ಪಟ್ಟಿದೆ.

ರಘುವಂಶದಲ್ಲಿ ಬರುವ ವಂಶವೃಕ್ಷವು ರಾಮಾಯಣದ ವಂಶವೃಕ್ಷಕ್ಕಿಂತ ಭಿನ್ನವಾಗಿದೆ. ಸೂರ್ಯವಂಶವೃಕ್ಷವು ಸುಮಾರು ಹದಿನಾಲ್ಕು ಪುರಾಣಗಳಲ್ಲಿ ರೇಖಿತವಾಗಿದೆ. ಪದ್ಮಪುರಾಣವೊಂದರಲ್ಲೇ ದಿಲೀಪನ ಮಗ ರಘುವೆಂದೂ ರಘುವಿನ ಮಗ ಅಜನೆಂದೂ ಅಜನ ಮಗ ದಶರಥನೆಂದೂ ನಿರೂಪಿತವಾಗಿದೆ. ಇತರ ವಿಷಯಗಳನ್ನೂ ಪರಿಶೀಲಿಸಿ ಪದ್ಮಪುರಾಣದ ಬಂಗಾಳೀ ಪಾಠದ ಪಾತಾಳ ಖಂಡವೇ ರಘುವಂಶದ ಕತೆಗೆ ಮೂಲವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.[1] ಪುರಾಣಗಳ ಕಾಲವೂ ವಿಭಾಗವೂ ಸಂದಿಗ್ಧವಾಗಿರುವುದರಿಂದ ಕಾಳಿದಾಸನು ಪದ್ಮಪುರಾಣವನ್ನು ಅನುಸರಿಸಿರುವನೆಂದು ನಿರ್ಣಯಿಸಲು ಆಧಾರ ಸಾಲದೆಂದು ಇತರರ ಅಭಿಪ್ರಾಯ.[2] ಪದ್ಮ ಪುರಾಣದ ಲೇಖಕನೇ ಕಾಳಿದಾಸನ ರಘುವಂಶವನ್ನನುಸರಿಸಿರುವನೆಂದು ಇವರ ಊಹೆ.

ರಘುವಂಶದ ಪಾಠದಲ್ಲಿಯೂ ಒಂದು ವಿವಾದವಿದೆ. ಡಾ|| ಕುನ್ಹನ್ ರಾಜ ಅವರು ಇದರ ಎಂಟು ಸರ್ಗಗಳು ಮಾತ್ರ ಕಾಳಿದಾಸಕೃತವೆಂದೂ[3] ಡಾ|| ಹಿಲ್ಲೆಬ್ರಾಂಟ್ ಅವರು ಕೊನೆಯ ಎರಡು ಸರ್ಗಗಳು ಕಾಳಿದಾಸ ಕೃತ ವಲ್ಲವೆಂದೂ[4] ಅಭಿಪ್ರಾಯಪಡುತ್ತಾರೆ. ಕಡೆಯ ಎರಡು ಸರ್ಗಗಳಲ್ಲಿ ವಂಶಾನುಚರಿತ ಮಾತ್ರ ಇರುವುದರಿಂದ ಡಾ|| ಹಿಲ್ಲೆಬ್ರಾಂಟ್ ಅವರು ಹೀಗೆ

---

1. Winternitz, Gesh. Ind. Lit. I, p. 454.
   Har Dutt Sharma, 'Kālidāsa and Padma Purāna.'
2. Lachmidhar Kalla, 'Birth-place of Kālidāsa,' p. 75.
3. Festschrift, P. V. Kane, pp. 356—361
4. Kālidāsa, p .42.

ಭಾವಿಸಿರುವರು. ಇದು ಸರಿಯಲ್ಲ.[1] ಇವರ ವಿಚಾರವನ್ನು ವಿಸ್ತಾರವಾಗಿ ನಿರೂಪಿಸುವುದು ಕವಿಯ ಆಶಯದಲ್ಲಿ ಇರದಿದ್ದುದರಿಂದ ಈ ಭಾಗವು ಹೀಗೆ ತೋರುವುದೆಂದು ಹೇಳಬಹುದು. ಡಾ|| ರಾಜ ಅವರ ವಾದವು ಕುಮಾರ ಸಂಭವದ ವಿಷಯದಲ್ಲಿ ಬಂದ ಸಮಸ್ಯೆಯನ್ನನುಸರಿಸಿ ಕಲ್ಪಿತವಾಗಿರುವುದು. ಇದಕ್ಕೆ ಇವರು ಕೊಡುವ ಯುಕ್ತಿಗಳು ಬಲವಾಗಿಲ್ಲ. ಇವರು ಹೇಳುವಂತೆ ಎಂಟನೆಯ ಸರ್ಗಕ್ಕಿಂತ ಈಚಿನ ಗ್ರಂಥಭಾಗದ ಕಾವ್ಯಗುಣವು ಕಡಿಮೆಯಲ್ಲ. ಮತ್ತು ಎಂಟು ಸರ್ಗ ಮಾತ್ರ ಕಾಳಿದಾಸಕೃತವೆಂದು ಹೇಳಿದರೆ ಗ್ರಂಥದ ಹೆಸರು ಸಮಂಜಸವೂ ಉಚಿತವೂ ಆಗುವುದೆಂಬ ಭಾವನೆಗೂ ಆಧಾರವಿಲ್ಲ. ಇದಲ್ಲದೆ ಕಾಳಿದಾಸನಿಗೆ ರಾಮಾಯಣವು ಪರಿಚಿತವಾಗಿದ್ದಿರಲಾರದೆಂದೂ ಈಚಿನ ಸರ್ಗಗಳಲ್ಲಿ ರಾಮಾಯಣ ಕತೆಯ ಅನುವಾದ ಮಾತ್ರ ಇರುವುದರಿಂದ ಅವು ಅನ್ಯಕೃತವೆಂದೂ ಇವರ ಭಾವನೆ. ಎಂಟರಿಂದೀಚಿನ ಸರ್ಗಗಳಲ್ಲಿ ವರ್ಣನೆಗೆ ಹೆಚ್ಚು ಪ್ರಾಧಾನ್ಯವಿರುವುದೂ ಈ ವಾದದ ಸತ್ಯತೆಗೆ ಒಂದು ಆಧಾರವೆಂದು ಡಾ|| ರಾಜ ಅವರ ಭಾವನೆ. ಒಟ್ಟಿನಲ್ಲಿ ಇವರದು ಒಂದು ನಿರಾಧಾರಕಲ್ಪನೆಯೆಂದು ಖಂಡಿತವಾಗಿ ಹೇಳಬಹುದು. ಕಾಳಿದಾಸನಿಗೆ ರಾಮಾಯಣವು ಪರಿಚಿತವಾಗಿದ್ದಿರಲಾರದೆಂಬ ವಾದವನ್ನು ಹೇಗೆ ಒಪ್ಪಬೇಕೋ ಹೇಳಲಸಾಧ್ಯ.[2] ರಾಮಸರ್ಗಗಳು ವಾಲ್ಮೀಕಿಯನ್ನನುಸರಿಸಿದ ಮಾತ್ರಕ್ಕೆ ವಿಶೇಷವಾದ ಕಾವ್ಯಗುಣ ಅವುಗಳಲ್ಲಿಲ್ಲವೆಂದು ಹೇಳುವುದಕ್ಕೆ ಸಾಧ್ಯವೇ? ವರ್ಣನೆಗಳು ಹೆಚ್ಚಾಗಿರುವುದರಿಂದ ಕಾಳಿದಾಸ ಕೃತವಲ್ಲವೆಂದು ಹೇಳುವುದರಲ್ಲಿ ಯುಕ್ತಿಯೇನಿದೆ? ಬೇಕಾದಲ್ಲಿ ವರ್ಣನೆಯನ್ನು ಹೆಚ್ಚು ಮಾಡುವುದೂ, ಇತರ ಕಡೆಗಳಲ್ಲಿ ಕತೆಯನ್ನು ಮುಂದುವರಿಸುವುದೂ ಕವಿಯ

---

1. Keith, Hist. Skt. Lit. pp. 96-7. Gesh. Ind. Lit. III, p. 643.

2. ಇದನ್ನೊಪ್ಪಿದರೆ ಆಶಯ, ಶಬ್ದರೂಪಗಳ ವಿಚಾರದಲ್ಲಿ ಕಾಳಿದಾಸನಿಗೂ ವಾಲ್ಮೀಕಿಗೂ ಇರುವ ಸಾಮ್ಯಗಳಿಗೆ ಉಪಪತ್ತಿ ಹೇಳುವುದು ಕಷ್ಟವಾಗುವುದು. *Cf.* Dr. V. Raghavan—K. V. Rangaswamiengar Commemoration Volume, pp. 409—424, also S. P. Pandit's preface to Raghuvamsa.

ಸ್ವಾತಂತ್ರ್ಯಕ್ಕೆ ಸೇರಿದ್ದಲ್ಲವೆ? ಇಂತಹ ವಿಚಾರಗಳನ್ನು ಆಂತರ ಆಧಾರಗಳಿಂದು ಪರಿಗಣಿಸುವುದಕ್ಕೆ ಸಾಧ್ಯವೆ? ಈ ಎಲ್ಲ ಕಾರಣಗಳಿಂದ ಡಾ|| ರಾಜ ಅವರ ವಾದದ ನಿಸ್ಸಾರತೆಯು ಸ್ಪಷ್ಟಪಡುವುದು.

ರಘುವಂಶವು ಇಪ್ಪತ್ತೈದು ಸರ್ಗಗಳ ಕಾವ್ಯವೆಂದೂ ಆರು ಸರ್ಗಗಳು ಕಳೆದುಹೋಗಿವೆಯೆಂದೂ ಒಂದು ಅಭಿಪ್ರಾಯ.[1] ಕಾವ್ಯವು ಸ್ವಾಭಾವಿಕವಾದ ಉಪಸಂಹಾರ ಹೊಂದಿಲ್ಲವೆಂದು ಇದಕ್ಕೆ ಯುಕ್ತಿಯನ್ನು ಕೊಡಲಾಗಿದೆ. ಆದರೆ ಇದು ಸರಿಯಲ್ಲ. ಕಾವ್ಯವು ಸ್ವಾಭಾವಿಕವಾಗಿಯೇ ಕೊನೆಗಂಡಿದೆ. ಅದರ ಆಶಯಾದಿಗಳನ್ನು ಮೇಲೆ ವಿವರಿಸಿದೆ. ಆದುದರಿಂದ ಗ್ರಂಥದ ಯಾವ ಭಾಗವೂ ಕಳೆದುಹೋಗಿರಲಾರದೆಂದು ತೋರುವುದು.

---

1. S. P. Pandit, Preface to Raghuvamsa.

# ಉಪಸಂಹಾರ

ಕಾವ್ಯದ ಅನೇಕ ಭೇದಗಳಲ್ಲಿ ಒಂದೊಂದನ್ನು ಸ್ವಾಧೀನಪಡಿಸಿಕೊಂಡು ಪ್ರತಿಭೆಯನ್ನು ಆವಿಷ್ಕಾರಮಾಡಿ ಹೆಸರು ಪಡೆಯುವುದೂ ಕಷ್ಟ. ಹೀಗೆ ಪಡೆದವರು ವಿಶ್ವಸಾಹಿತ್ಯದಲ್ಲಿ ಅನೇಕರಿರುವರೆಂದರೂ ಎರಡು ಮೂರು ರೂಪಗಳಲ್ಲಿ ಕಾವ್ಯಗಳನ್ನು, ಅದರಲ್ಲೂ ಉತ್ತಮ ಕಾವ್ಯಗಳನ್ನು, ರಚಿಸಿದ ಕೀರ್ತಿಯು ಸ್ವಲ್ಪ ಜನಕ್ಕೆ ಮಾತ್ರ ಸಲ್ಲುವುದು. ಇವರಲ್ಲೂ ಅಗ್ರಪದವಿಗರ್ಹರಾಗುವವರು ಬಹಳ ವಿರಳ. ಹೀಗಿರುವಲ್ಲಿ ಕಾಳಿದಾಸನು ಇಂತಹ ಅಗ್ರುಗಣ್ಯರಲ್ಲಿ ಒಬ್ಬನೆನಿಸಿಕೊಂಡಿರುವುದು ಎಷ್ಟುಮಟ್ಟಿನ ಮಹತ್ವವನ್ನು ವ್ಯಕ್ತಪಡಿಸುವುದೆಂಬುದನ್ನು ಸುಲಭವಾಗಿ ಊಹಿಸಬಹುದು. ಇಂತಹ ಕವಿಗಳು ವಿಶ್ವಕವಿಗಳೆನಿಸಿಕೊಂಡು ಇಡಿಯ ಪ್ರಪಂಚದ ಅಮೂಲ್ಯ ಆಭರಣಗಳಾಗಿ ಎಣಿಸಲ್ಪಟ್ಟಿದ್ದರೂ ಇವರನ್ನು ಹೊಂದಿದ್ದ ದೇಶಗಳು ಇದಕ್ಕಾಗಿ ಹೆಮ್ಮೆಪಡುವುದು ತಪ್ಪಲ್ಲ. ಭಾರತೀಯರು ಕಾಳಿದಾಸನ ವಿಷಯದಲ್ಲಿ ಎಷ್ಟು ಹೆಮ್ಮೆಪಟ್ಟರೂ ಸಾಲದೆಂದೇ ತೋರುವುದು.* ನವೀನಯುಗದ ಅಂತರರಾಷ್ಟ್ರೀಯ ಮತ್ತು ವಿಶ್ವಪ್ರೇಮದ ಮನೋಭಾವಗಳು ಕಾಳಿದಾಸನ ಮಹತ್ವವಿಷಯಕವಾದ ಹೆಮ್ಮೆಗೆ ಅಡ್ಡಿ ಬರುವುದಿಲ್ಲ. ಇತರ ಕವಿಗಳ ವಿಚಾರದಲ್ಲಿ ಅಂತಹ ಹೆಮ್ಮೆಯು ತಪ್ಪಾದರೂ ಆಗಬಹುದು. ಕಾಳಿದಾಸನ ವಿಷಯದಲ್ಲಿ ಮಾತ್ರ ಯಾವ ದೃಷ್ಟಿಯಿಂದಲೂ 'ಅವನು ನಮ್ಮವನು' ಎಂಬ ಭಾರತೀಯರ ಹೆಮ್ಮೆಯು ತಪ್ಪಾಗಲಾರದು; ಅದು ಸಂಕುಚಿತದೃಷ್ಟಿಯ ಪರಿಣಾಮವಲ್ಲ.

ಕಾಳಿದಾಸನ ಜೀವನತತ್ವವನ್ನು ಸ್ವಲ್ಪ ಸೂಕ್ಷ್ಮವಾಗಿ ಪರಿಶೀಲಿಸಿದರೆ ದೇಶಪ್ರೇಮ, ವಿಶ್ವಪ್ರೇಮಗಳಿಗೆ ಸಂಘರ್ಷಬರದಂತೆ ಸಮಂಜಸಗೊಳಿಸಲು

---

* *Cf.* ಧ್ವನ್ಯಾಲೋಕ—I ಉದ್ಯೋತ 6ನೆ ಶ್ಲೋಕ—

ಸರಸ್ವತೀ ಸ್ವಾದು ತದರ್ಥವಸ್ತು ನಿಸ್ಯಂದಮಾನಾ ಮಹತಾಂ ಕವೀನಾಮ್ ।
ಅಲೋಕಸಾಮಾನ್ಯ ಮಭಿವ್ಯನಕ್ತಿ ಪರಿಸ್ಫುರನ್ತಂ ಪ್ರತಿಭಾವಿಶೇಷಂ ॥
ಯೇನಾಸ್ಮಿನ್ ಅತಿವಿಚಿತ್ರಕವಿಪರಂಪರಾವಾಹಿನಿ ಸಂಸಾರೆ ಕಾಳಿದಾಸ।
ಪ್ರಭೃತಯೊ ದ್ವಿತ್ರಾಃ ಪಂಚಷಾ ವಾ ಮಹಾಕವಯ ಇತಿ ಗಣ್ಯನ್ತೆ ॥

ಸಾಧ್ಯವೆಂಬ ಆಶಯವು ಹೊರಪಡುವುದು. ದಾಂಪತ್ಯಪ್ರೇಮವು ಅಳಿಯದೆ, ವಿಪರ್ಯಾಸ ಹೊಂದದೆ, ಪ್ರಕೃತಿಪ್ರೇಮ, ಧರ್ಮಪ್ರೇಮ ಮೊದಲಾದುವುಗಳೊಡನೆ ಬೆರೆತು ಶುದ್ಧಿಹೊಂದುವುದು ಸಾಧ್ಯವೆಂಬುದು ಶಾಕುಂತಲದಲ್ಲಿ ನಿರ್ದಿಷ್ಟವಾಗಿದೆ. ಹೀಗೆಯೇ ದೇಶಪ್ರೇಮ, ವಿಶ್ವಪ್ರೇಮಗಳನ್ನೂ ಸಮಂಜಸಗೊಳಿಸಿ ವಿಶ್ವಶಾಂತಿಯೆಂಬ ಪರಮಧ್ಯೇಯವನ್ನು ಸಾಧಿಸಬಹುದೆಂಬ ಅಂಶವನ್ನು ಕಾಳಿದಾಸನ ಜೀವನಾದರ್ಶದಿಂದ ಮನಗಾಣಬಹುದು.

ಇದುವರೆಗಿನ ಗ್ರಂಥಗಳ ವಿಮರ್ಶೆಯಿಂದ ಕಾಳಿದಾಸನ ವಿಷಯವಾಗಿ ಹೇಳಬಹುದಾದ ಕೆಲವು ಸಾಮಾನ್ಯ ವಿಚಾರಗಳನ್ನು ಇಲ್ಲಿ ಸಂಗ್ರಹಿಸಬಹುದು. ಅವೆಲ್ಲ ಅವನ ಮಹತ್ವಕ್ಕೆ ಕಾರಣಭೂತವಾದ ಅಂಶಗಳೆಂದು ತಾನಾಗಿಯೇ ಸ್ಪಷ್ಟಪಡುವುದು.

1. ಮೊದಲಾಗಿ, ಕಾಳಿದಾಸನು ಯಾವ ನಿರ್ಬಂಧಗಳಿಗೂ, ಲಕ್ಷಣಕಾರರ ಸಂಕೋಲೆಗಳಿಗೂ ಕಟ್ಟುಬಿದ್ದವನಂತೆ ತೋರುವುದಿಲ್ಲ. ತನ್ನ ಮನಸ್ಸಿನ ಒಪ್ಪಿಗೆಯಿಂದ ರಚಿಸಿದುದು ಲಕ್ಷಣಕ್ಕೂ ಸರಿಹೊಂದಿದರೆ ಹೊಂದಲಿ; ಅದು ಅವನಿಗೆ ಅಪ್ರಕೃತ. ಹಾಗೆ ಸರಿಹೊಂದದೆ ಹೋದರೆ ಅವನಿಗೆ ಕೊರತೆಯಿಲ್ಲ. ಲಕ್ಷಣಕ್ಕೆ ಸರಿಹೊಂದಬೇಕೆಂದು ಅವನು ಯಾವುದನ್ನೂ ಮಾಡಿದಂತೆ ತೋರುವುದಿಲ್ಲ. ಈ ವಿಚಾರವು ಛಂದಸ್ಸು, ಅಲಂಕಾರ, ಕಾವ್ಯವಿಭಾಗಕ್ಕೆ ಸಂಬಂಧಪಟ್ಟ ನಿಯಮಗಳು ಎಲ್ಲಕ್ಕೂ ಅನ್ವಯಿಸುವುದಿಲ್ಲ. ಕಾಳಿದಾಸನು ಕೇವಲ ನೂತನಮಾರ್ಗವನ್ನೇ ಆಶ್ರಯಿಸಿ ಹೊರಡಲಿಲ್ಲ. ಹಳೆಯದೆಂದು ಅವನಿಗೆ ಅನಾದರವಿಲ್ಲ. ಹೊಸತೆಂದು ಮೂಢವಿಶ್ವಾಸವಿಲ್ಲ. 'ಪುರಾಣಮಿತ್ಯೇವ ನ ಸಾಧು ಸರ್ವಂ' ಎಂಬುದು ಅವನ ಮುಖ್ಯವಾದ ಆಶಯಗಳಲ್ಲೊಂದೆಂದು ತೋರುವುದು. ಪಂಡಿತರು, ಸಹೃದಯರು ಒಪ್ಪಬಹುದಾದ ಕಾವ್ಯವೇ ಸರಿಯಾದ್ದೆಂದು ಅವನ ನಂಬಿಕೆ.

ತಂ ಸಂತಃ ಶ್ರೋತುಮರ್ಹಂತಿ ಸದಸದ್ವ್ಯಕ್ತಿಹೇತವಃ ।
ಹೇಮ್ನಃ ಸಂಲಕ್ಷ್ಯತೇ ಹ್ಯಗ್ನೌ ವಿಶುದ್ಧಿಃ ಶ್ಯಾಮಿಕಾಪಿ ವಾ ॥'
(ರ. ವಂ. I-10)

'ಆಪರಿತೋಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಮ್ ।
ಬಲವದಪಿ ಶಿಕ್ಷಿತಾನಾಮಾತ್ಮನ್ಯಪ್ರತ್ಯಯಂ ಚೇತಃ ॥

(ಶಾಕುಂತಲ. I-2)

ಈ ವಾಕ್ಯಗಳೆಲ್ಲ ಮೇಲ್ಕಂಡ ಅಭಿಪ್ರಾಯವನ್ನೇ ಬಲಗೊಳಿಸುವುವು. ಆದುದರಿಂದ ಕಾಳಿದಾಸನ ಆಶ್ರಯದಲ್ಲಿ ಸಹೃದಯಾಭಿಪ್ರಾಯಕ್ಕೂ ಅಲಂಕಾರ ಶಾಸ್ತ್ರಕ್ಕೂ ವಿರೋಧ ಬಂದಲ್ಲಿ ಮೊದಲಿನದಕ್ಕೇ ಬೆಲೆ ಹೆಚ್ಚೆಂದು ಧಾರಾಳವಾಗಿ ಭಾವಿಸಬಹುದು. ವಿರೋಧ ಬಂದರೆ ಮಾತ್ರ ! ಅಷ್ಟೆ. ವಿರೋಧ ಬರುವುದೇ ? ವಿಮರ್ಶಕರು ಸಹೃದಯರಲ್ಲವೆ ? ಮೊದಲಾದ ವಿಚಾರಗಳು ಮುಂದಿನವು.

2. ಭಾವವು ತೀವ್ರವಾಗಿ ತುಂಬಿ ತುಳುಕುತ್ತ ತಾನಾಗಿಯೇ ಹೃದಯವನ್ನು ದ್ರವೀಕರಿಸಿಕೊಂಡು ಹೊರಡುವ ಮಧುರ ಶಬ್ದರೂಪವೇ ಕಾವ್ಯವೆಂದು ಇವನ ಭಾವನೆ. 'ನಿಷಾದವಿದ್ಧಾಂಡಜದರ್ಶನೋತ್ಥಃ ಶ್ಲೋಕತ್ವಮಾಪದ್ಯತ ಯಸ್ಯ ಶೋಕಃ' (ರ. ವಂ. XIV, 70.) ಹೀಗೆಂದ ಮಾತ್ರಕ್ಕೆ ಕಾಳಿದಾಸನು ಶಬ್ದಸೌಷ್ಠವವನ್ನು ಗಮನಿಸಲೇ ಇಲ್ಲವೆಂದು ಭಾವಿಸಕೂಡದು. ಶಬ್ದಾರ್ಥಗಳಿಗೆ ಇರುವ ನಿಕಟವಾದ ಸಂಬಂಧವನ್ನು ರಮ್ಯವಾದ ಉಪಮೆಯ ಮೂಲಕ ಹೊರಗೆಡಹಿದ ಯಶಸ್ಸೂ ಇವನಿಗೇ ಸಲ್ಲಬೇಕು.

3. ಕಾವ್ಯನಾಟಕಗಳ ವಿಮರ್ಶೆಗೆ ಸಂಬಂಧಪಟ್ಟ ಅನೇಕ ಪಾರಿಭಾಷಿಕ ಸಂಗತಿಗಳು ಇವನಿಗೆ ಚೆನ್ನಾಗಿ ಪರಿಚಿತವಾಗಿದ್ದುವು. 'ದೇವಾನಾಮಿದಮಾಮನಂತಿ ಮುನಯಃ' (ಮಾ. I-7) 'ಅಂಗೈರಂತರ್ನಿಹಿತ ವಚನೈಃ (ಮಾ. II-8) ಮೊದಲಾದ ಕೆಲವು ಶ್ಲೋಕಗಳಿಂದ ಇವನಿಗಿದ್ದ ನಾಟ್ಯಶಾಸ್ತ್ರಪ್ರೀತಿ, ಪರಿಚಯಗಳು ವ್ಯಕ್ತವಾಗುವುವು. ರಸಗಳು ಎಂಟು ಅವುಗಳ ಅಭಿವ್ಯಂಜನವೇ ಕಾವ್ಯನಾಟಕಗಳ ಮುಖ್ಯಧ್ಯೇಯ.[1] ತನ್ಮಯರಾಗದಿದ್ದರೆ ಸಾಮಾಜಿಕರಿಗೆ ರಸಾಸ್ವಾದವು ದುರ್ಲಭವೆಂದೂ ಇದಕ್ಕಾಗಿ ಅವರು ಶ್ರಮಪಡಬೇಕೆಂಬ ಭಾವನೆಯೂ ಕೆಲವೆಡೆಗಳಲ್ಲಿ ಸೂಚಿಸಲ್ಪಟ್ಟಿವೆ.

1. *Cf* ಮುನಿನಾ ಭರತೇನ ಯಃ ಪ್ರಯೋಗೋ ಭವತೀಷ್ವಷ್ಟರಸಾಶ್ರಯೋ ನಿಯುಕ್ತಃ (ವಿಕ್ರ. II-18)

ಶಾಕುಂತಲದ 'ರಮ್ಯಾಣಿ ವೀಕ್ಷ್ಯ' (V-2) ಎಂಬ ಶ್ಲೋಕದಲ್ಲಿ ಕವಿಗಿದ್ದ ಮನಶ್ಶಾಸ್ತ್ರದ ಸೂಕ್ಷ್ಮಪರಿಚಯವು ವ್ಯಕ್ತವಾಗುವುದು. ರಸಗಳಲ್ಲಿ ಶೃಂಗಾರವೇ ಇವನಿಗೆ ಹೆಚ್ಚು ಪ್ರಿಯವಾಗಿತ್ತೆನ್ನಬಹುದು. ರಘುವಂಶವನ್ನು ಬಿಟ್ಟರೆ ಉಳಿದೆಲ್ಲ ಕಾವ್ಯನಾಟಕಗಳಲ್ಲಿಯೂ ಅದೇ ಪ್ರಧಾನವಾಗಿರುವಂತೆ ತೋರುವುದು. ಅದರಲ್ಲೂ ವಿಪ್ರಲಂಭ ಶೃಂಗಾರಕ್ಕೆ ಹೆಚ್ಚುಗಾರಿಕೆ.[1] ಒಟ್ಟಿನಲ್ಲಿ ಸ್ತ್ರೀಪುರುಷರ ಚಿತ್ತಗಳು ವಯಸ್ಸು, ಸ್ವಭಾವಗಳಿಗನುಗುಣವಾಗಿ ಕಾಮವೃತ್ತಾಂತದಲ್ಲನುಭವಿಸುವ ಸೂಕ್ಷ್ಮಾವಸ್ಥೆಗಳನ್ನು ಜಾಗರೂಕತೆಯಿಂದ ಗಮನಿಸಿ ಚಿತ್ರಿಸಿರುವುದು ಕಾಳಿದಾಸನ ಒಂದು ವೈಶಿಷ್ಟ್ಯ. ಉಳಿದ ರಸಗಳಲ್ಲಿ ಕರುಣ, ವೀರರಸಗಳಿಗೆ ಪ್ರಾಧಾನ್ಯವಿದೆ.[2] ರಘುವಂಶದಲ್ಲಿ ಕರುಣ ಹೆಚ್ಚು. ಅಲ್ಲಿನ ಸನ್ನಿವೇಶಗಳು ಬಹಳಮಟ್ಟಿಗೆ ಹೃದಯಾವರ್ಜಕವಾಗಿವೆ. ವೀರರಸವೂ ರಘುವಂಶದಲ್ಲಿ ಹೆಚ್ಚು ಆಸ್ವಾದಯೋಗ್ಯವಾಗಿದೆ. ಉಳಿದ ಕಡೆಗಳಲ್ಲಿ ಅದು ಶೃಂಗಾರಕ್ಕೆ ಹಿನ್ನೆಲೆಯಾಗಿರುವುದು. ಹಾಸ್ಯರಸವು ಸ್ವಲ್ಪವಿದ್ದರೂ[3] ಗಂಭೀರವಾಗಿದೆ. ಮಾಲವಿಕಾಗ್ನಿಮಿತ್ರದ ಐದನೆಯ ಅಂಕದಲ್ಲೂ

---

1. ಯದೇವೋಪನತಂ ದುಃಖಾತ್ ಸುಖಂ ತದ್ರಸವತ್ತರಮ್ ।
ನಿರ್ವಾಣಾಯ ತರುಚ್ಛಾಯಾ ತಪ್ತಸ್ಯ ಹಿ ವಿಶೇಷತಃ ॥ (ವಿಕ್ರ. III-21)
ಸ್ನೇಹಾನಾಹುಃ ಕಿಮಪಿ ವಿರಹೇ ಧ್ವಂಸಿನಸ್ತೇತ್ವಭೋಗಾ-
ದಿಷ್ಟೇ ವಸ್ತುನ್ಯುಪಚಿತರಸಾಃ ಪ್ರೇಮರಾಶೀಭವಂತಿ ॥
(ಮೇ. ಸಂ. II-45)
ಅನಾತುರೋತ್ಕಂಠಿತಯೋಃಪ್ರಸಿಧ್ಯತಾ ಸಮಾಗಮೇನಾಪಿ ರತಿರ್ನಮಾಂ ಪ್ರತಿ
ಪರಸ್ಪರಪ್ರಾಪ್ತಿ ನಿರಾಶಯೋರ್ವರಂ ಶರೀರನಾಶೋಽಪಿ ಸಮಾನುರಾಗಯೋಃ ॥ (ಮಾ. III).
ಈ ಶ್ಲೋಕಗಳನ್ನು ಗಮನಿಸಬೇಕು.

2. ಶಾಕುಂತಲದ ಆರನೆಯ ಅಂಕ, ರಘುವಂಶದ ಹದಿನಾಲ್ಕು, ಎಂಟು, ಹದಿನಾರನೆಯ ಸರ್ಗಗಳು, ಮತ್ತು ವಿಕ್ರಮೋರ್ವಶೀಯದ ನಾಲ್ಕನೆಯ ಅಂಕದಲ್ಲಿ ಕರುಣವೂ ರಘುವಂಶದ ನಾಲ್ಕನೆಯ ಸರ್ಗ, ಶಾಕುಂತಲ, ಮಾಲವಿಕಾಗ್ನಿಮಿತ್ರಗಳಲ್ಲಿ ಅಲ್ಲಲ್ಲಿ ವೀರರಸವೂ ಕಂಡುಬರುತ್ತವೆ.

3. ರಘುವಂಶದ ಆರನೆಯ ಸರ್ಗದಲ್ಲಿ ಸ್ವಲ್ಪ ಹಾಸ್ಯರಸ ಕಾಣುವುದು. ಕುಮಾರಸಂಭವದಲ್ಲಿ ಶಂಭುವಿನ 'ದ್ವಿಜಾತಿಭಾವ' ದ 'ಚಾಪಲ' ವೂ ಹಾಸ್ಯರಸದ ಉದಾಹರಣೆ. ಇದಲ್ಲದೆ ವಿದೂಷಕರ ಮಾತುಕತೆಗಳಲ್ಲಿ ಸ್ಪಷ್ಟವಾಗಿ ಹಾಸ್ಯರಸ ಕಾಣುವುದು.

ಶಾಕುಂತಲದ ಮೊದಲನೆಯ ಅಂಕದಲ್ಲೂ ಭಯಾನಕದ ಚಿಹ್ನೆ ಮಾತ್ರ ಬರುವುದು. ಬೀಭತ್ಸವು ರಘುವಂಶದ ಹದಿನಾರನೆಯ ಸರ್ಗದಲ್ಲಿ ಸ್ವಲ್ಪ ಬಂದಿದೆ. ಕುಮಾರಸಂಭವದಲ್ಲಿ ಬ್ರಹ್ಮಚಾರಿಯ ಹರವರ್ಣನೆಯಲ್ಲೂ ಸ್ವಲ್ಪ ಛಾಯೆಯಿದೆ. ರಘುವಂಶದ ಪರಶುರಾಮವೃತ್ತಾಂತದಲ್ಲಿ ರೌದ್ರದ ಛಾಯೆ ಯಿದೆ. ಅದ್ಭುತಕ್ಕೆ ಇವನ ಕಾವ್ಯಗಳಲ್ಲಿ ಬರುವ ಅತಿಮಾನುಷ ಘಟನೆಗಳೇ ನಿದರ್ಶನವನ್ನೊದಗಿಸುವುವು.

ವಾಚ್ಯವಾಗಿ ಶಾಂತವನ್ನು ರಸವೆಂದು ಅಂಗೀಕರಿಸದಿದ್ದರೂ ಕಾಳಿ ದಾಸನು ಅದನ್ನು ಅವಕಾಶವಿದ್ದೆಡೆಗಳಲ್ಲಿ ಚಿತ್ರಿಸಿಯೇ ಇರುವನು. ರಘು ವಂಶದ ಕೆಲವು ದೊರೆಗಳ ಮುನಿವೃತ್ತಿಯ ವರ್ಣನೆಯಲ್ಲೂ ಶಾಕುಂತಲದ ಮಾರೀಚಾಶ್ರಮದ ಸನ್ನಿವೇಶದಲ್ಲಿಯೂ ಶಾಂತರಸದ ಸೂಚನೆಗಳಿವೆ.

4. ಪಾತ್ರರಚನೆಯಲ್ಲಿ ಕಾಳಿದಾಸನಿಗಿರುವ ಕೌಶಲವನ್ನು ಈಗಾಗಲೇ ಮನಗಂಡಿದೆ. ಒಟ್ಟಿನಲ್ಲಿ ಇವನು ಚಿತ್ರಿಸಿರುವ ಪಾತ್ರಗಳು ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿ ಸಜೀವವಾಗಿವೆ. ಸಖಿಯರು, ಕನ್ಯೆಯರು ಮದುವೆಗೆ ಸಹಕರಿಸುವ ಸ್ತ್ರೀ ಮತ್ತು ಪುರುಷ ವಿಟರು, ತಾಪಸರು (ಅನೇಕ ವಿಧ), ಬ್ರಹ್ಮಚಾರಿಗಳು, ವಿದೂಷಕರು, ಸಾಮಾನ್ಯ ಪುರಜನರು, ದೊರೆಯ ಅಧಿಕಾರಿಗಳು, ದೊರೆಗಳು, ಸಣ್ಣಮಕ್ಕಳು, ಹೀಗೆ ಅನೇಕ ಮಟ್ಟದ, ಅನೇಕ ವಿಧವಾದ ಜನರ ಸ್ವಭಾವಗಳನ್ನು ತಿಳಿದು ಸರಿಯಾಗಿ ಉಪಯೋಗಿಸಿ ಕೊಂಡಿರುವುದು ಕಾಳಿದಾಸನ ಪಾತ್ರರಚನಾಕೌಶಲದ ಒಂದು ಮುಖ್ಯವಾದ ಅಂಶ. ಇದರಿಂದ ಅವನಿಗಿದ್ದ ಸೂಕ್ಷ್ಮವಾದ ಜೀವನಪರಿಚಯವು ವ್ಯಕ್ತ ವಾಗುವುದು. ಕಾಳಿದಾಸನ ನಾಯಿಕೆಯರು ವಿಶೇಷವಾದ ಆದರಕ್ಕೆ ಪಾತ್ರ ರಾಗುವರು. ಇವರು ಅವರವರ ನಾಯಕರ ಮನಸ್ಸುಗಳನ್ನು ಮಾತ್ರವಲ್ಲದೆ ಎಲ್ಲರ ಮನಸ್ಸನ್ನೂ ಸೂರೆಗೊಳ್ಳುವ ಗುಣವುಳ್ಳವರು.

5. ಜೀವನ ಪರಿಚಯವಿದ್ದಂತೆ ಪ್ರಕೃತಿ ಪರಿಚಯವೂ ಕಾಳಿದಾಸ ನಿಗೆ ವಿಶೇಷವಾಗಿತ್ತು. ಅವನ ಪ್ರಕೃತಿಪ್ರೇಮವು ಬಹಳ ಮೇಲ್ಮಟ್ಟದ್ದು. ಪ್ರಕೃತಿಯು ಮಾನವನ ಉಸಿರು. ಅವನೊಡನೆ ಬೆರತು ಬೇರೆ ಮಾಡಲಸಾಧ್ಯ ವಾದ ಸ್ವರೂಪವನ್ನು ಅದು ಹೊಂದಿದೆ. ಮಾನವನಿಗೂ ಪ್ರಕೃತಿಗೂ

ಇರುವ ಸಂಬಂಧದ ವಿಚಾರವನ್ನೆಲ್ಲ ಶಾಕುಂತಲದ ವಿಮರ್ಶೆಯಲ್ಲಿ ಮುಖ್ಯ ವಾಗಿಯೂ ಇತರ ಕಡೆಗಳಲ್ಲಿಯೂ ಗಮನಿಸಿದೆ.

6. ಕಾಳಿದಾಸನನ್ನು ಕುರಿತ ಕೆಲವು ಪ್ರಶಂಸೆಗಳಲ್ಲಿ ಅವನು ವೈದರ್ಭೀ ರೀತಿಯ ಮುಖ್ಯೋಪಾಧ್ಯಾಯನೆಂದು ನಿರೂಪಿತವಾಗಿರುವುದು. ವೈದರ್ಭೀ ರೀತಿಯು ರೀತಿಗಳಲ್ಲಿ ಶ್ರೇಷ್ಠವಾದದ್ದು. ಕಾವ್ಯಕ್ಕೆ ಪ್ರಾಣಭೂತವಾದ ಹತ್ತು ಗುಣಗಳನ್ನೂ ಉಳ್ಳ ಪದರಚನೆಯೇ ವೈದರ್ಭೀರೀತಿಯ ಲಕ್ಷಣ. "ವಾಲ್ಮೀಕಿಯಲ್ಲಿ ಇದು ಹುಟ್ಟಿತು. ವ್ಯಾಸನಲ್ಲಿ ಸೌಂದರ್ಯ ಯೌವನಗಳಿಗನು ಗುಣವಾದ ರೂಪವನ್ನು ತಾಳಿತು. ಅನಂತರ ಈ 'ವೈದರ್ಭೀ ರಮಣಿ'ಯು ಕಾಳಿದಾಸನನ್ನು ತಾನಾಗಿಯೇ ವರಿಸಿವಳೆಂದು" ಒಂದು ಶ್ಲೋಕದಲ್ಲಿ[1] ನಿರೂಪಿಸಿದೆ. ರಸಿಕರಿಗೆ ಪರಮಗ್ರಾಹ್ಯವಾದ ವೈದರ್ಭೀರೀತಿಯ ಸ್ವಯಂವರ ಪತಿಯೆನಿಸಿಕೊಂಡಿರುವುದು ಕಾಳಿದಾಸನ ಮೇಲ್ಮೆಗೆ ಕಾರಣ. ಆಶಯಗಳಿ ಗನುಗುಣವಾಗಿ ಲಲಿತಪದಗಳು ಶ್ರಮವಿಲ್ಲದೆ ಬರುವುವು. ಭಾಷೆಯು ಪಾರ್ವತೀಪರಮೇಶ್ವರರ ದಯೆಯಿಂದಲೊ ಏನೊ ಸರ್ವಥಾ ಇವನ ಅಧೀನ. ಉದ್ದವಾದ ವಾಕ್ಯಗಳೂ ಸಮಸ್ತಪದಗಳೂ ಆಶಯಗಳಿಗೆ ವಕ್ರತೆಯನ್ನು ತರುವುದಿಲ್ಲ. ನಾಟಕಗಳಲ್ಲಂತು ಪಾತ್ರಗಳ ಮಟ್ಟ ಯೋಗ್ಯತೆಗಳಿಗನುಸಾರ ವಾಗಿಯೇ ಮಾತುಗಳೂ ಹೊರಡುವುವು. ಇದರಿಂದಲೇ ಅಷ್ಟು ಸ್ವಾಭಾವಿಕತೆ, ಸಜೀವತೆಗಳು ಬಂದಿರುವುವೆನ್ನಬಹುದು.

7. ಕಾಳಿದಾಸನು ಉಪಮಾಲೋಲರಲ್ಲಿ ಅಗ್ರಗಣ್ಯನು. ಇವನ ಉಪಮೆಗಳಿಗೆ ಸಂಸ್ಕೃತ ಸಾಹಿತ್ಯದಲ್ಲಿ ಅದ್ವಿತೀಯ ಸ್ಥಾನವಿದೆ. ಕಾಳಿ ದಾಸನ ಉಪಮೆಗಳಿಗಿರುವ ಪ್ರಾಶಸ್ತ್ಯಕ್ಕೆ ಕಾರಣ ಅವುಗಳ ವೈಚಿತ್ರ್ಯವಲ್ಲ, ಔಚಿತ್ಯ. ಉಪಮೆಗಳಲ್ಲೂ ಪ್ರಕೃತಿಗೂ ತತ್ತ್ವಶಾಸ್ತ್ರಕ್ಕೂ ಸಂಬಂಧಪಟ್ಟವು ಹೆಚ್ಚಾಗಿ ಉಪಯೋಗ ಹೊಂದಿವೆ. ಕಾಳಿದಾಸನ ಶೈಲಿಯ ಸೊಬಗಿಗೆ ಉಪಮೆಯಂತೆ ಉತ್ಪ್ರೇಕ್ಷೆ, ಪ್ರತಿವಸ್ತೂಪಮಾ, ದೃಷ್ಟಾಂತ, ಅರ್ಥಾಂತರ ನ್ಯಾಸ ಮೊದಲಾದ ಅಲಂಕಾರಗಳೂ ನೆರವಾಗಿವೆ. ಅರ್ಥಾಂತರನ್ಯಾಸವು

---

1. ಅನುಬಂಧ, ಶ್ಲೋಕ ೧೨ ನೋಡಿ.

ಹೆಚ್ಚು ಕಡಿಮೆ ಉಪಮೆಯಷ್ಟೇ ಪ್ರಧಾನವಾಗಿರುವಂತೆ ತೋರುವುದು. ಇವನ ಅರ್ಥಾಂತರನ್ಯಾಸಗಳು ಸಾಮಾನ್ಯವ್ಯವಹಾರದಲ್ಲೂ ಬಳಕೆಗೆ ಬಂದಿವೆ.

8. ಅನೇಕವೇಳೆ ಸನ್ನಿವೇಶಾನುಗುಣವಾದ ಛಂದಸ್ಸುಗಳನ್ನುಪಯೋಗಿಸಿರುವುದೂ ಕಾಳಿದಾಸನ ವೈಶಿಷ್ಟ್ಯ. ಮೇಘಸಂದೇಶ, ರಘುವಂಶದ ಎಂಟನೆಯ ಸರ್ಗ ಈ ಕೆಲವು ಕಡೆಗಳಲ್ಲಿ ಛಂದಸ್ಸಿನ ಔಚಿತ್ಯವು ಹೆಚ್ಚುಗಾರಿಕೆಯನ್ನೊದಗಿಸುವುದು.

9. ಮುಖ್ಯವಾಗಿ ಕಾಳಿದಾಸನು ಮಿತಭಾಷಿ. ಆಶಯವನ್ನೂ ರಸ ಭಾವಗಳನ್ನೂ ಹೊರಪಡಿಸುವುದಕ್ಕೆ ಬೇಕಾದಷ್ಟೇ ಶಬ್ದಗಳು ಉಪಯೋಗಿಸಲ್ಪಟ್ಟಿವೆ. ಸಾಮಾನ್ಯವಾಗಿ ರಮ್ಯವಾದ ಭಾವಗಳೆಲ್ಲ ವ್ಯಂಜನಾವೃತ್ತಿಯಿಂದಲೇ ಹೊರಪಡುತ್ತವೆ. ಈ ವಿಷಯದಲ್ಲಿ ಭವಭೂತಿಯ ಮಾರ್ಗ ಕಾಳಿದಾಸನ ಮಾರ್ಗಕ್ಕೆ ವಿರುದ್ಧ. ಇದನ್ನು ಸರ್ ಆರ್. ಜಿ. ಭಂಡಾರ್ಕರ್ ಅವರು ಚೆನ್ನಾಗಿ ನಿರೂಪಿಸಿರುವರು—"ಭವಭೂತಿಯ ಪಾತ್ರಗಳು ಭಾವೌತ್ಸುಕ್ಯದಿಂದ ಗಟ್ಟಿಯಾಗಿ ಗೋಳಾಡುತ್ತ ಅಳುವರು. ಕಾಳಿದಾಸನ ಪಾತ್ರಗಳು ಕೆಲವು ತೊಟ್ಟು ಕಣ್ಣೀರನ್ನು ಮಾತ್ರ ಸುರಿಸಬಹುದು." ಹೀಗೆ 'ಮಾತು ಬೆಳ್ಳಿ, ಮೌನ ಬಂಗಾರ' ಎಂಬ ನೀತಿಯು ಕಾಳಿದಾಸನಿಗೆ ಅಚ್ಚುಮೆಚ್ಚಾಗಿದೆ. ಹೀಗೆ ಲಲಿತವಾದ ವೈದರ್ಭೀರೀತಿಯಲ್ಲಿ ಪದ್ಯಗಳು, ತಿಳಿಯಾಗಿದ್ದರೂ ಅರ್ಥಗರ್ಭಿತವಾದ ಗದ್ಯ, ಸಾರವತ್ತಾದ ಐತಿಹಾಸಿಕ ಶೈಲಿ, ರಸೌಚಿತ್ಯ ಶಬ್ದೌಚಿತ್ಯಗಳು ಎಲ್ಲವೂ ಶ್ರವ್ಯತೆಗೆ ಅನುಕೂಲವಾಗುವಂತೆ ಹೊಂದಿಕೊಂಡಿವೆ. ಸಂಸ್ಕೃತ ಭಾಷೆಯ ಅಪಾರವಾದ ಪ್ರಪಂಚದಲ್ಲಿ ಗಂಭೀರ, ತೀವ್ರ, ಮತ್ತು ಸ್ಪಷ್ಟವಾದ ಶೈಲಿ ಪದ್ಯರೀತಿಗಳನ್ನು ಸೃಷ್ಟಿಸಿ ಮಾನುಷಭಾಷೆಗೆ ಇದ್ದ ದೇವಭಾಷೆಯೆಂಬ ಬಿರುದನ್ನು ಕಾಳಿದಾಸನು ಸಾರ್ಥಕಗೊಳಿಸಿದನು. ಮರ್ತ್ಯಕ್ಕೆ ದಿವ್ಯತೆಯನ್ನುಂಟುಮಾಡುವುದಲ್ಲವೆ ಅವನ ಧ್ಯೇಯ !

ಕಡೆಯದಾಗಿ, ಕಾಳಿದಾಸನ ಜೀವನ ತತ್ತ್ವದ ವಿಚಾರವಾಗಿ ನಾಲ್ಕು ಮಾತುಗಳನ್ನು ಹೇಳಬೇಕಾಗಿದೆ. ಜೀವನದ ದೊಡ್ಡ ಸಮಸ್ಯೆಗಳಿಗೆ ಅವನು ಕೈಹಾಕಿಲ್ಲವೆಂದೂ ಅವನನ್ನು ಭಾರತದ ಷೇಕ್ಸ್‌ಪಿಯರ್ ಎನ್ನುವವರು ಈ ಮುಖ್ಯವಾದ ನ್ಯೂನತೆಯನ್ನು ಗಮನಿಸುವುದು ಆವಶ್ಯಕವೆಂದೂ ಕೆಲವರು

ಪಾಶ್ಚಾತ್ಯರು ಅಭಿಪ್ರಾಯಪಡುತ್ತಾರೆ.[1] ಇವರ ತಾತ್ಪರ್ಯವನ್ನು ವಿಶದವಾಗಿ ತಿಳಿಯಬೇಕು. ಷೇಕ್ಸ್‌ಪಿಯರ್ ಕವಿಯು ಚಿತ್ರಿಸಿರುವಂತೆ ಕಾಳಿದಾಸನು ಮಾನವಜೀವನದ ದುಷ್ಟ ಅಂಶಗಳನ್ನು ಚಿತ್ರಿಸಿಲ್ಲವೆಂದು ಭಾವವಿರಬಹುದು. ಹೀಗಿದ್ದರೆ ಇದನ್ನು ಒಪ್ಪಬೇಕು. ಕಾಳಿದಾಸನು ಒಂದು ಆದರ್ಶಧ್ಯೇಯವನ್ನು ಮುಂದಿಟ್ಟಿರುವನೇ ಹೊರತು ಕಲುಷಿತ ಜೀವನದ ಚಿತ್ರವನ್ನಲ್ಲ. ಅವನ ಕಾವ್ಯ ನಾಟಕಗಳಲ್ಲಿ ಅಯಾಗೊ, ಬ್ರೂಟಸ್, ಲೇಡಿ ಮ್ಯಾಕ್‌ಬೆತ್, ಷೈಲಾಕ್ ಮೊದಲಾದ ಸ್ವಭಾವಗಳ ಸೂಕ್ಷ್ಮ ಚಿತ್ರಗಳಿಲ್ಲದಿದ್ದರೂ ಜೀವನದ ಸಮಸ್ಯೆಗಳ ಪರಿಚಯ ಕಾಳಿದಾಸನಿಗಿರಲಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಪ್ರಪಂಚದ ಸಾಮಾನ್ಯ ನೀಚಜೀವನವನ್ನು ಜುಗುಪ್ಸೆ ಹುಟ್ಟಿಸುವಷ್ಟು ತೀವ್ರವಾಗಿ ಚಿತ್ರಿಸಿ ಪರಿಹಾರವನ್ನು ಸೂಚಿಸುವುದು ಒಂದು ಮಾರ್ಗ. 'ಇದು ತಪ್ಪು', "ಇದನ್ನು ಬಿಡಬೇಕು" ಎಂಬ ಭಾವನೆ ಇಂತಹ ಚಿತ್ರಗಳಿಂದ ಬರುವುದು. ಇದಕ್ಕೆ ಬದಲು ಒಂದು ಉನ್ನತ ಆದರ್ಶವನ್ನು ಪ್ರದರ್ಶಿಸಿ ಅದರ ಅನುಕರಣಕ್ಕಾಗಿ ಸರ್ವರೂ ಪ್ರಯತ್ನಪಡುವಂತೆ ಪ್ರಚೋದಿಸುವ ಮಾರ್ಗ ಮತ್ತೊಂದು. ಇದು ನೇರವಾದ (Positive) ಮಾರ್ಗ. ಉತ್ತಮಜೀವನವನ್ನು ನಡೆಸುವುದಕ್ಕೆ ದುಷ್ಟಜೀವನದ ತ್ಯಾಗವು ಎಷ್ಟು ಆವಶ್ಯಕವೋ ಆದರ್ಶಜೀವನದ ಅನುಕರಣ, ಅಭ್ಯಾಸ ಅಷ್ಟೇ ಆವಶ್ಯಕವೆಂದು ಹೇಳಬಹುದು. ಆದುದರಿಂದ ಕಾಳಿದಾಸನು ಈ ವಿಚಾರದಲ್ಲಿ ಅನುಸರಿಸಿರುವ ಮಾರ್ಗ ಬೇರೆಯೇ ಹೊರತು ತತ್ತ್ವ ಬೇರೆಯಲ್ಲ. ಬಹಳ ಉತ್ತಮವಾದ ಜೀವನಧ್ಯೇಯ ಅವನಲ್ಲಿದೆ. ಅವನು ಕೇವಲ ಶೃಂಗಾರಲೋಲನಲ್ಲ. ಜ್ಞಾನಯೋಗದಲ್ಲಿ, ಮುನಿವೃತ್ತಿಯಲ್ಲಿ, ಯೋಗಾಭ್ಯಾಸದಲ್ಲಿ ಅವನಿಗೆ ಪ್ರತಿಪತ್ತಿಯಿದೆ. ಆದರ್ಶಜೀವನವನ್ನು ಅವನು ಬಹಳ ಆದರದಿಂದ ಕಾಮಿಸಿದವನು. ಸೌಂದರ್ಯೋಪಾಸನೆಯೊಡನೆ ಸತ್ಯ, ಧರ್ಮೋಪಾಸನೆಯನ್ನೂ ಮಾಡಿದವನು. ಮಾನವನ ಶಕ್ತಿ ಉತ್ಸಾಹಗಳಲ್ಲಿ ಅತಿವಿಶ್ವಾಸ ಅವನಿಗಿಲ್ಲ. ಭಾರತೀಯ ಮನೋಭಾವಕ್ಕನುಸಾರವಾಗಿ ಅತಿಮಾನುಷಶಕ್ತಿಯಲ್ಲಿ ಅವನಿಗೆ ನಂಬಿಕೆಯಿರುವುದು. ಅದೃಷ್ಟದೊಡನೆ ಕೈ ಮಸೆದು ಸೋಲುಗೆಲುವುಗಳನ್ನು ತನ್ನದೆಂದು ಭಾವಿಸುವ ಅಹಂಭಾವವಿಲ್ಲ. ಎಲ್ಲಕ್ಕೂ ಅದೃಷ್ಟವೇ ಕಾರಣ, ಮಾನವಜೀವನ ಅಸ್ವ

---

1. ಡಾ|| ಕೀತ್ ಅವರ ಅಭಿಪ್ರಾಯವಿದು.

ತಂತ್ರ, ಇವನು ಆದರ ಕೈ ಗೊಂಬೆಯೆಂಬ ಅದೃಷ್ಟವಾದವೂ ಅವನದಲ್ಲ. ಇವೆರಡಕ್ಕೂ ಮಧ್ಯದ ಸ್ವರ್ಣಮಧ್ಯಮ (Golden mean) ಅವನದೆಂದು ತೋರುವುದು. ಲೋಕಾಯತ ಸಂಸ್ಕೃತಿಯ ಪ್ರತಿನಿಧಿಯಾದರೂ ಅವನಲ್ಲಿ ನಾಸ್ತಿಕ ಭಾವನೆಯಿಲ್ಲ. ಆಸ್ತಿಕ ಭಾವನೆಯ ಅತಿರೇಕಗಳಾದ ವೈಷ್ಣವ, ಶೈವ ಭೇದಭಾವವೂ ಇಲ್ಲ. ಪರಮಾದ್ವೈತ, ಪರಮದ್ವೈತ ಇವುಗಳ ಚರ್ಚೆ ಅವನಿಗಷ್ಟು ಪ್ರಸಕ್ತವಲ್ಲ. ಹೀಗೆ ಮಿತವಾದ, ಹಿತವಾದ ಆಧ್ಯಾತ್ಮಿಕ ಭಾವನೆಯನ್ನು ಕಾಳಿದಾಸನು ಹೊಂದಿದ್ದನೆಂದು ತೋರುವುದು.

ಏಕೈವ ಮೂರ್ತಿರ್ಬಿಭಿದೇ ತ್ರಿಧಾ ಸಾ
ಸಾಮಾನ್ಯಮೇಷಾಂ ಪ್ರಥಮಾವರತ್ವಮ್ ।
ವಿಷ್ಣೋರ್ಹರಸ್ತಸ್ಯ ಹರಿಃ ಕದಾಚಿ
ದ್ವೇಧಾಸ್ತಯೋಸ್ತಾವಪಿ ಧಾತುರಾದ್ಯೌ ॥

ಕು. ಸಂ. (VII-44)

'ಮಹೇಶ್ವರೇ ವಾ ಜಗತಾಮಧೀಶ್ವರೇ
ಜನಾರ್ದನೇ ವಾ ಜಗದಂತರಾತ್ಮನಿ ।
ತಯೋರ್ನಭೇದಪ್ರತಿಪತ್ತಿರಸ್ತಿ ಮೇ
ತಥಾಪಿ ಭಕ್ತಿಸ್ತರುಣೇಂದುಶೇಖರೇ ॥'

ಇವು ಕಾಳಿದಾಸನ ಆಧ್ಯಾತ್ಮಿಕ ಭಾವನೆಯನ್ನು ಸಂಗ್ರಹಿಸುತ್ತವೆ.

"ಪ್ರವರ್ತತಾಂ ಪ್ರಕೃತಿಹಿತಾಯ ಪಾರ್ಥಿವಸ್ಸರಸ್ವತೀ ಶ್ರುತಮಹತಾಂ ಮಹೀಯತಾಮ್ ।

ಮಮಾಪಿ ಚ ಕ್ಷಪಯತು ನೀಲಲೋಹಿತಃ ಪುನರ್ಭವಂ ಪರಿಣತ-ಶಕ್ತಿರಾತ್ಮಭೂಃ ॥

---

# ತಪ್ಪು ಒಪ್ಪು ಸೂಚಿಕೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೪ | ೫ | ಬೇಕೆಂದುದನ್ನೆ | ಬೇಕೆಂಬುದನ್ನೆ |
| ೪ | ೧೧ | ——— | ೨ |
| ೧೦ | ೧೦ | ಜಲ್ಪತೋರಕ್ರಮೇ | ಜಲ್ಪತೋರಕ್ರಮೇಣ |
| ೨೧ | ೧೩ | ನಿರ್ಯಯಿಸಬಹುದು | ನಿರ್ಣಯಿಸಬಹುದು |
| ೨೨ | ೬ | ನಿರ್ಣಹಿಸಬಹುದಾದರೆ | ನಿರ್ಣಯಿಸಬಹುದಾದರೆ |
| ,, | ೨೨ | ದೊದಲೇ | ಮೊದಲೇ |
| ೨೪ | ೧೪ | ಸಮರ್ಪಕ | ಸಮರ್ಥಕ |
| ೪೧ | ೯ | ಶಾಮುಲದಂಡಕ | ಶ್ಯಾಮುಲಾದಂಡಕ |
| ೪೪ | ೭ | ಆ ಜಸ್ಕ | ಆ ಜಸ್ಕ |
| ೬೧ | ೧೯ | ವಿಲ್ಸಲ್ | ವಿಲ್ಸನ್ |
| ೬೫ | ೪ | ಪ್ರಬಲಕರವೆಂದು | ಪ್ರಬಲತರವೆಂದು |
| ೭೪ | ೨೩ | ವರ ಸಲ್ಲದುದರಿಂದ | ವರನಲ್ಲದುದರಿಂದ |
| ೭೮ | ೮ | ರಾಜಸ | ರಾಜನ |
| ,, | ೨೪ | ಉಪೋದ | ಉಪೋದ್ಬಲಕ |
| ೮೨ | ೬ | ಸುರತಾಭಿಲಾಕ್ಷಿಣಿ | ಸುರತಾಭಿಲಾಷಿಣಿ |
| ೮೪ | ೮ | ತಿಳಿದಿದ್ದ | ತಿಳಿಯದಿದ್ದ |
| ೯೧ | ೧ | ಬಡಾಕ್ಯಣವಿಲ್ಲ | ಒಡಾಕ್ಯಣವಿಲ್ಲ |
| ,, | ೧೮ | ಶಿಶಿವಿರುತುವೂ | ಶಿಶಿರಋತುವೂ |
| ೯೪ | ೨೫ | ಕೃತಿಗಳಲ್ಲೊಂದೊಂದು | ಕೃತಿಗಳಲ್ಲೊಂದೆಂದು |
| ೯೯ | ೬ | ಕಾಮುದಿಯು | ಕೌಮುದಿಯ |
| ,, | ೨೦ | ,, | ,, |
| ೧೦೨ | ೯ | ಕೌಶಿಕಿಯು | ಕೌಶಿಕಿಯನ್ನು |
| ೧೨೨ | ೧೭ | ಅಕರ್ಷಕವಾಗಿದೆ | ಆಕರ್ಷಕವಾಗಿದೆ |
| ೧೨೬ | ೭ | ಬ್ರಾರ್ಹಣರೊಡನೆ | ಬ್ರಾಹ್ಮಣರೊಡನೆ |
| ೧೨೯ | ೫ | ಪ್ರಾಧಾನವಾದ | ಪ್ರಧಾನವಾದ |
| ೧೬೪ | ೨೧ | ಶಾಂತಿಯುಕ್ತಹಾದ | ಶಾಂತಿಯುಕ್ತವಾದ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨೧೭ | ೨೫ | ಕಾತ್ಪರ್ಯಾರ್ತ್ | ತಾತ್ಪರ್ಯಾರ್ತ್ |
| ೨೩೦ | ೨೬ | ತರುಣೆಯರ | ತರುಣಿಯರ |
| ೨೪೬ | ೧೯ | ತಕುಂತಲೆಯ | ಶಕುಂತಲೆಯ |
| ೨೬೮ | ೫ | ಆಕ್ರಮಿಸುತ್ತವೆ | ಆಕ್ರಮಿಸುತ್ತದೆ. |
| ೨೭೨ | ೧೦ | ಅರೆತಂತಾಗುವುದು | ಅರಿತಂತಾಗುವುದು. |
| ೨೮೦ | ೨ | ಅವ್ಯಾಜವನೋಹರ | ಅವ್ಯಾಜಮನೋಹರ |
| ೨೮೪ | ೨೬ | ಮುಂದಿನ | ಮುದ್ದಿನ |
| ೨೯೪ | ೧೬ | ತರುಣೆಯು | ತರುಣಿಯು |
| ೩೫೬ | ೫ | ಆಶ್ರಯದಲ್ಲಿ | ಆಶಯದಲ್ಲಿ |
| ೩೬೨ | ೧೧ | ಧಾತುರಾದ್ಯಾ | ಧಾತುರಾದ್ಯೌ |